ಮೈಸೂರು ವಿಶ್ವವಿದ್ಯಾನಿಲಯ ಪಠ್ಯಪುಸ್ತಕಮಾಲೆ—೪.

ಪ್ರಧಾನ ಸಂಪಾದಕ

ಡಾ|| ಕೆ. ವಿ. ಪುಟ್ಟಪ್ಪ ಎಂ.ಎ., ಡಿ.ಲಿಟ್.

# ಗ್ರೇಟ್ ಬ್ರಿಟನ್ನಿನ ಚರಿತ್ರೆ




ಲೇಖಕ :

ಡಾ|| ಎಂ. ಶೇಷಾದ್ರಿ ಎಂ.ಎ., ಪಿ.ಹೆಚ್.ಡಿ.(ಲಂಡನ್)

ಮೈಸೂರು
ಮೈಸೂರು ವಿಶ್ವವಿದ್ಯಾನಿಲಯ
೧೯೫೭

ಮೊದಲನೆಯ ಮುದ್ರಣ ೧೯೫೭

ಎಲ್ಲಾ ಹಕ್ಕುಗಳನ್ನೂ ಕಾದಿರಿಸಿದೆ.





ಬೆಲೆ :

ಸಾದಾ ಪ್ರತಿ ರೂ. ೨-೧೨-೦.      ಉತ್ತಮ ಪ್ರತಿ ರೂ. ೩-೧೨-೦-

ಆರ್. ಕೃಷ್ಣಶೆಟ್ಟಿ, ಪ್ರಿಂಟರ್,
ಶ್ರೀ ಶಾರದಾ ಪ್ರೆಸ್,
ಮೈಸೂರು.

# ಮುನ್ನುಡಿ

ಕಳೆದ ಒಂದು ತಲೆಮಾರಿನಿಂದ ನಮ್ಮ ಜನ ಕಾಣುತ್ತಿದ್ದ ಕನಸು ಈ ಪುಸ್ತಕಗಳ ಪ್ರಕಟಣೆಯಿಂದ ನನಸಾದಂತಾಗಿದೆ. ನಾವು ಈಗತಾನೆ ಭಾಷಾವಾರು ಪ್ರಾಂತರಚನೆಯ ಫಲವಾಗಿ ವಿಶಾಲ ಮೈಸೂರು ಪ್ರಾಂತವನ್ನು ಗಳಿಸಿಕೊಂಡಿದ್ದೇವೆ. ಜನತೆ ಈ ಏಕೀಕರಣವನ್ನು ಬಯಸಿದ್ದುದು ನಮ್ಮ ಸಂಸ್ಕೃತಿಯ ಏಳಿಗೆಗೆ ತಳಹದಿಯಾಗಬಲ್ಲ ಲೌಕಿಕದ ಚೌಕಟ್ಟಿನ ಸಾಧನೆಗಾಗಿಯೇ. ಈ ಚೌಕಟ್ಟಿನ ಪರಿಮಿತಿಯಲ್ಲಿ ನಮ್ಮ ದೇಶಭಾಷೆಯಾದ ಕನ್ನಡ ತನ್ನೆಲ್ಲ ವ್ಯವಹಾರವನ್ನು ನಡಸಬೇಕಾಗಿದೆ. ಹಾಗೆ ಮಾಡಿದಾಗ ಮಾತ್ರ ನಮ್ಮ ಸಾಮಾನ್ಯ ಜನತೆಯ ದೈನಂದಿನ ವ್ಯವಹಾರ, ಬುದ್ಧಿಪುಷ್ಟಿ ಮತ್ತು ಸಾಂಸ್ಕೃತಿಕ ವಿಕಾಸ ಸಾಧ್ಯವಾಗುತ್ತದೆ. ಆದ್ದರಿಂದ ನಮ್ಮ ಭಾಷೆಯ ವಿಷಯದಲ್ಲಿ ನಾವು ಎಷ್ಟು ಶ್ರಮಿಸಿದರೂ ಸಾಲದು; ಎಷ್ಟು ಪ್ರೋತ್ಸಾಹ ನೀಡಿದರೂ ಅತಿರೇಕವಾಗದು. ಈ ದಿಕ್ಕಿನಲ್ಲಿ ಮಾಡುತ್ತಿರುವ ಪ್ರಯಾಣದ ಮೊದಲ ಮೈಲಿಗಲ್ಲು. ವಿಶ್ವವಿದ್ಯಾನಿಲಯ ಪ್ರಕಟಿಸುತ್ತಿರುವ ಈ ಪಠ್ಯಪುಸ್ತಕಮಾಲೆ.

ಪೂಜ್ಯ ಬಾಪೂಜಿಯವರು ಇದುರಿಗೆ ಇದ್ದ ನಮ್ಮ ಶಿಕ್ಷಣ ಮಾಧ್ಯಮದ ಕೃತಕತೆಯನ್ನು ಸ್ವಾತಂತ್ರ್ಯ ಪೂರ್ವದಲ್ಲಿಯೇ ಕಟುವಾಗಿ ಟೀಕಿಸಿ "ದೇಶಭಾಷೆಗೆ ಪ್ರಥಮಸ್ಥಾನ ದೊರೆಯಬೇಕು; ದೇಶಭಾಷೆ ಶಿಕ್ಷಣ ಮಾಧ್ಯಮವಾಗಬೇಕು" ಎಂದು ಸ್ಪಷ್ಟವಾಗಿ ನುಡಿದರು. "ಈ ದೇಶ ಸ್ವತಂತ್ರವಾದಕೂಡಲೆ ಶಿಕ್ಷಣಮಾಧ್ಯಮದ ಪ್ರಶ್ನೆ ಪ್ರಶ್ನೆಯಾಗಿ ಉಳಿಯುವುದಿಲ್ಲ" ಎಂದು ಘೋಷಿಸಿದರು. ಇಪ್ಪತ್ತು ವರ್ಷಗಳ ಕೆಳಗೆ ಅವರು ಈ ಮಾತು ಆಡಿದಾಗ ದೇಶಭಾಷೆಗಳ ಸ್ಥಿತಿ ಇಂದಿನಷ್ಟು ಮುಂದುವರಿದಿರಲಿಲ್ಲ. ಬುದ್ಧಿಸಾಹಿತ್ಯ, ಭಾವಸಾಹಿತ್ಯ, ವಿಜ್ಞಾನ ಸಾಹಿತ್ಯಾದಿ ನಾನಾ ಪ್ರಕಾರಗಳಲ್ಲಿ ಈಗ ನಮ್ಮಲ್ಲಿ ಸಾಕಷ್ಟು ಸಾಹಿತ್ಯ ಬೆಳೆದಿದೆ. ಆದ್ದರಿಂದ ಇದುವರೆಗೆ ಆಂಗ್ಲಭಾಷೆ ಆಕ್ರಮಿಸಿದ್ದ ಸಿಂಹಾಸನಕ್ಕೆ ಏರಲು ಕನ್ನಡಭಾಷೆ ಅರ್ಹವಾಗಿದೆ, ಸಿದ್ಧವಾಗಿದೆ ಎಂದು ಘಂಟಾಘೋಷವಾಗಿ ಹೇಳಬಹುದು. ವೈಜ್ಞಾನಿಕವಾದ ಯಾವ ಹಳೆಯ ಮತ್ತು ಹೊಸ ವಿಷಯವನ್ನೇ ಆಗಲಿ,

ಶಾಸ್ತ್ರೀಯವಾದ ಎಂತಹ ಗಹನ ಅಥವಾ ಸೂಕ್ಷ್ಮ ವಿಚಾರವನ್ನೇ ಆಗಲಿ ಅಭಿವ್ಯಕ್ತಪಡಿಸಲು ನಮ್ಮ ಭಾಷೆ ಸಂಪೂರ್ಣ ಸಮರ್ಥವಾಗಿದೆ.

ವಿದ್ಯಾಭ್ಯಾಸದ ಎಲ್ಲ ಮಟ್ಟಗಳಲ್ಲಿಯೂ ದೇಶಭಾಷೆಯೇ ಶಿಕ್ಷಣ ಮಾಧ್ಯಮವಾಗಬೇಕಾದುದು ಅಗತ್ಯ, ಅನಿವಾರ್ಯ. ಇದು ಕೇವಲ ಸ್ವಭಾಷಾವ್ಯಾಮೋಹದಿಂದ ಆಡುವ ಮಾತಲ್ಲ. ಅಮರನಾಥಝಾ, ಸರ್ ಚಾರ್ಲ್ಸ್‌ವುಡ್ ಮೊದಲಾದ ಸ್ವದೇಶ ಪರದೇಶಗಳ ಶಿಕ್ಷಣ ತಜ್ಞರು ಈ ತತ್ತ್ವವನ್ನು ಸ್ಪಷ್ಟವಾದ ನುಡಿಗಳಿಂದ ಪ್ರತಿಪಾದಿಸಿದ್ದಾರೆ. ನಾಗಪುರ, ಅಲಹಾಬಾದ್, ಕಾಶಿ ಮೊದಲಾದ ವಿಶ್ವವಿದ್ಯಾನಿಲಯಗಳಲ್ಲಿ ಈ ಕಾರ್ಯ ಆಗಲೆ ಆರಂಭವಾಗಿ ಉತ್ತಮ ಫಲಿತಾಂಶಗಳು ದೊರೆತಿವೆ. ಮೈಸೂರು ವಿಶ್ವವಿದ್ಯಾನಿಲಯವೂ ಈ ಕಾರ್ಯದಲ್ಲಿ ಈಗ ಹೆಜ್ಜೆಯನ್ನಿಡಹೊರಟಿದೆ. ಅದರ ಅಂಗವಾಗಿ ಪ್ರಾರಂಭವಾಗಿರುವ ಈ ಪಠ್ಯಪುಸ್ತಕಮಾಲೆಯಲ್ಲಿ 'ಗ್ರೇಟ್ ಬ್ರಿಟನ್ನಿನ ಚರಿತ್ರೆ'ಯನ್ನು ಹೊರತರುತ್ತಿರುವುದು ನನಗೆ ಸಂತೋಷವನ್ನುಂಟುಮಾಡುತ್ತಿದೆ. ಇದರ ಕರ್ತೃಗಳಾದ ಡಾ|| ಎಂ. ಶೇಷಾದ್ರಿಯವರು ಇತಿಹಾಸದಲ್ಲಿ ಉನ್ನತ ವ್ಯಾಸಂಗವನ್ನು ಮಾಡಿರುವ ಪಂಡಿತರಾಗಿದ್ದಾರೆ; ಹತ್ತಾರು ವರ್ಷಗಳು ವಿಶ್ವವಿದ್ಯಾನಿಲಯದಲ್ಲಿ ಪಾಠ ಹೇಳಿ ನುರಿತ ಉಪಾಧ್ಯಾಯರಾಗಿದ್ದಾರೆ. ಅವರ ಪಾಂಡಿತ್ಯ ಮತ್ತು ಅನುಭವಗಳನ್ನು ಒಳಗೊಂಡ ಈ ಗ್ರಂಥದಿಂದ ವಿದ್ಯಾರ್ಥಿಗಳಿಗೆ ಅಪಾರ ವಾದ ಉಪಕಾರವಾಗುವುದರಲ್ಲಿ ಸಂದೇಹವಿಲ್ಲ.

೨೮—೮—೫೭ ಮೈಸೂರು

ಕೆ. ವಿ. ಪುಟ್ಟಪ್ಪ,
ವೈಸ್ ಛಾನ್ಸಲರ್.

# ಅರಿಕೆ

ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರಿಗಳು ಇಂಟರ್‌ಮಿಾಡಿಯೆಟ್ ತರಗತಿಯ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಗ್ರೇಟ್‌ಬ್ರಿಟನ್ನಿನ ಚರಿತ್ರೆಯನ್ನು ಕನ್ನಡದಲ್ಲಿ ಬರೆದುಕೊಡಬೇಕೆಂದು ನನಗೆ ಅಪ್ಪಣೆ ಮಾಡಿದಾಗ ನಾನು ಆ ಕೆಲಸವನ್ನು ಸಂತೋಷದಿಂದ ಒಪ್ಪಿಕೊಂಡೆ. ಪುಸ್ತಕವನ್ನು ಬರೆಯುವಾಗ, ಇಂಟರ್‌ಮಿಾಡಿಯೆಟ್ ತರಗತಿಯ ಪಠ್ಯ ವಿಷಯಗಳನ್ನು ಮಾತ್ರವೇ ನನ್ನ ಮುಖ್ಯ ಗುರಿಯನ್ನಾಗಿ ಇಟ್ಟುಕೊಂಡರೂ, ಪ್ರತಿಯೊಂದು ಶತಮಾನದಲ್ಲಿ ಇಂಗ್ಲೆಂಡಿನ ಸಾಮಾಜಿಕ ಮತ್ತು ಆರ್ಥಿಕ ಜೀವನದಲ್ಲಿ ಉಂಟಾದ ಕೆಲವು ಮಹತ್ತರ ಬದಲಾವಣೆಗಳನ್ನು ಕೂಡ ತೋರಿಸಲು ಪ್ರಯತ್ನಿಸಿದ್ದೇನೆ. ಚರಿತ್ರೆ ಜನಗಳ ಜೀವನವನ್ನು ಪ್ರತಿಬಿಂಬಿಸಬೇಕು; ರಾಜರ, ಯುದ್ಧಗಳ, ಶ್ರೀಮಂತರ ಆಗುಹೋಗುಗಳನ್ನು ಮಾತ್ರ ಚಿತ್ರಿಸಬಾರದೆಂಬ ಅಂಶವನ್ನು ಗಮನದಲ್ಲಿಟ್ಟುಕೊಂಡು ಈ ಪುಸ್ತಕವನ್ನು ಬರೆಯಲಾಗಿದೆ. ಇದರಿಂದ ಈ ಪುಸ್ತಕವು ಜನಸಾಮಾನ್ಯರಿಗೂ ಉಪಯುಕ್ತವಾಗಬಹುದೆಂಬ ನಂಬಿಕೆ ನನಗಿದೆ. ಪುಸ್ತಕದಲ್ಲಿ ಅನಿವಾರ್ಯವಾಗಿ ಹಲವು ಮುದ್ರಣ ದೋಷಗಳು ಉಳಿದುಕೊಂಡಿರುವುದಕ್ಕಾಗಿ ನಾನು ವಿಷಾದಿಸುತ್ತೇನೆ.

ಈ ಪುಸ್ತಕವನ್ನು ಬರೆಯಲು ನನಗೆ ಅವಕಾಶವಿತ್ತ ಮೈಸೂರು ವಿಶ್ವವಿದ್ಯಾನಿಲಯದ ಅಧಿಕಾರಿಗಳಿಗೆ ನನ್ನ ವಂದನೆಗಳನ್ನು ಅರ್ಪಿಸುತ್ತೇನೆ.

ಮಹಾರಾಜ ಕಾಲೇಜು,
ಮೈಸೂರು ೨೮–೮–೫೭.

**ಎಂ. ಶೇಷಾದ್ರಿ.**

# ಗ್ರೇಟ್ ಬ್ರಿಟನ್ನಿನ ಚರಿತ್ರೆ

## ವಿಷಯಾನುಕ್ರಮಣಿಕೆ

# ಗ್ರೇಟ್ ಬ್ರಿಟನ್ನಿನ ಚರಿತ್ರೆ

---

## ರೋಮನ್ ಆಕ್ರಮಣ

ಬ್ರಿಟಿಷ್ ದ್ವೀಪಗಳಲ್ಲಿ ಚರಿತ್ರೆಗಿಂತ ಮುನ್ನ ಶಿಲಾಯುಗಗಳಲ್ಲಿ ಆದಿ ಮಾನವನು ಜೀವಿಸುತ್ತಿದ್ದನು. ಅನೇಕ ಸ್ಥಳಗಳಲ್ಲಿ ಈ ಆದಿ ಮಾನವನು ಉಪಯೋಗಿಸಿ ಹಿಂದೆ ಬಿಟ್ಟುಹೋದ ಹಳೆಯ ಶಿಲಾಯುಧಗಳು (Palaeolithic Tools), ಹೊಸ ಶಿಲಾಯುಧಗಳು (Neolithic) ಮತ್ತು ಕಂಚಿನ ಆಯುಧಗಳು ಸಿಕ್ಕಿವೆ. ಶಿಲಾಯುಗದಲ್ಲಿ ಬ್ರಿಟಿಷ್ ದ್ವೀಪಗಳು ಹಿಮದಿಂದ ಮುಚ್ಚಲ್ಪಟ್ಟು ಇಂಗ್ಲಿಷ್ ಕಡಲ್ಗಾಲುವೆಯು ನಿರ್ಮಿತವಾಗದೆ, ಯೂರೋಪ್ ಮತ್ತು ಬ್ರಿಟಿಷ್ ದ್ವೀಪಗಳು ಒಂದೇ ಭೂಭಾಗಕ್ಕೆ ಸೇರಿದ್ದುವು. ಈ ಪುರಾತನ ಮಾನವನು ಪ್ರಾಣಿಗಳನ್ನು ಕೊಂದು ಅವುಗಳ ಚರ್ಮಗಳನ್ನೇ ಉಡಿಗೆ ತೊಡಿಗೆಗಳಾಗಿ ಉಪಯೋಗಿಸಿಕೊಂಡು ಜೀವಿಸುತ್ತಿದ್ದನು.

ಸುಮಾರು ಕ್ರಿ. ಪೂ. ೬೦೦ ರ ವೇಳೆಗೆ ಕಬ್ಬಿಣದ ಆಯುಧಗಳನ್ನು ಬಳಸುತ್ತಿದ್ದ ಕೆಲ್ಟ್(Celt) ಜನಾಂಗ ಬ್ರಿಟಿಷ್ ದ್ವೀಪಗಳಲ್ಲಿ ನೆಲಸಿತ್ತು. ಇವರಲ್ಲಿ ಗೇಲ್ (Gael), ಬ್ರಿಟನ್ (Briton) ಮತ್ತು ಬೆಲ್‌ಜೆ (Belgae) ಎಂಬ ಮೂರು ಪಂಗಡಗಳಿದ್ದುವು (Clan). ಇವರು ಬಲವಾಗಿಯೂ ಉದ್ದವಾಗಿಯೂ ಇದ್ದರು. ಯುದ್ಧದಲ್ಲಿ ಇವರಿಗೆ ತುಂಬಾ ಆಸಕ್ತಿ; ಆದರೆ ಪಶುಪಾಲನೆ, ನೆಯ್ಗೆ, ಬುಟ್ಟಿಗಳನ್ನು ಹೆಣೆಯುವುದು ಮತ್ತು ಲೋಹ ಪದಾರ್ಥಗಳ ತಯಾರಿಕೆ— ಇವುಗಳು ಇವರಿಗೆ ಚೆನ್ನಾಗಿ ಗೊತ್ತಿದ್ದುವು. ಇವರು ಹಾಡುಗಳನ್ನು ಹೇಳುವುದರಲ್ಲಿಯೂ ಮತ್ತು ಪದ್ಯಗಳನ್ನು ರಚಿಸುವುದರಲ್ಲಿಯೂ ಪ್ರವೀಣರಾಗಿದ್ದರು. ಇವರ ಪುರೋಹಿತರಿಗೆ (Priests) ಡ್ರೂಯಿಡ್ಸ್ (Druids) ಎಂದು ಹೆಸರು. ಇವರ ಮುಖ್ಯ ಊರು ಕಾಲ್‌ಚೆಸ್ಟರ್ (Colchester). ಸುಮಾರು ಕ್ರಿ. ಪೂ. ೩೨೫ ರಲ್ಲಿ ಬ್ರಿಟಿಷ್ ದ್ವೀಪಕ್ಕೆ ಆಗಮಿಸಿದ ಪಿಥಿಯಸ್ (Pytheas) ಎಂಬ ಗ್ರೀಕ್

ಮತ್ತು ಕ್ರಿ. ಪೂ. ೫೫ ಮತ್ತು ೫೪ ರಲ್ಲಿ ದಾಳಿ ಮಾಡಿದ ಜೂಲಿಯಸ್ ಸೀಸರ್ ಇವರುಗಳಿಂದ ಈ ಕೆಲ್ಟ್ ಜನಾಂಗದ ನಾಗರಿಕತೆಯ ಅನೇಕ ವಿಷಯಗಳು ಗೊತ್ತಾಗಿವೆ.

ಜೂಲಿಯಸ್‌ಸೀಸರ್ ರೋಮನ್ ಗಣರಾಜ್ಯದ ಬಲವನ್ನು ಬ್ರಿಟಿಷ್ ದ್ವೀಪಗಳ ಮೇಲೆ ಬೀರಿದವರಲ್ಲಿ ಮೊದಲನೆಯವನು. ಸೀಸರನ ಆಕ್ರಮಣ ದಿಂದ ಬ್ರಿಟಿಷ್ ದ್ವೀಪಗಳು ರೋಮನರ ಆಳ್ವಿಕೆಗೆ ಚಿರಕಾಲ ಒಳಪಡದಿದ್ದರೂ ರೋಮನ್ ನಾಗರಿಕತೆಯ ಪ್ರಭಾವವು ಬ್ರಿಟನ್ನಿನ ಮೇಲೆ ಸ್ವಲ್ಪ ಮಟ್ಟಿಗೆ ಉಂಟಾಯಿತು. ಅವನ ಆಕ್ರಮಣದಿಂದ ರಾಜಕೀಯದಲ್ಲಿ ಹೆಚ್ಚು ಬದಲಾವಣೆಯಾಗಲಿಲ್ಲ. ವೆನಿ (Veni), ವಿಡಿ (Vidi), ವಿಸಿ (Vici) ಅಂದರೆ "ನಾನು ಬಂದೆನು, ನಾನು ನೋಡಿದೆನು, ನಾನು ಗೆದ್ದೆನು" ಎಂಬುದಾಗಿ ಸೀಸರನೇ ಹೇಳಿಕೊಂಡಿದ್ದಾನೆ. ಅವನು ಹೊರಟುಹೋದಮೇಲೆ ಬ್ರಿಟನ್ ಮೊದಲಿನಂತೆಯೇ ಉಳಿಯಿತು.

ಸೀಸರನ ಕೊಲೆಯಾದಮೇಲೆ ಅಗಸ್ಟಸ್ (Augustus) ಎಂಬುವನು ರೋಮನ್ ಚಕ್ರಾಧಿಪತ್ಯವನ್ನು (Empire) ಸ್ಥಾಪಿಸಿದನು. ನಾಲ್ಕನೇ ಚಕ್ರವರ್ತಿಯಾದ ಕ್ಲಾಡಿಯಸ್ (Claudius, ೪೧–೫೪ ಕ್ರಿ. ಶ.) ಎಂಬುವನು ಬ್ರಿಟನ್ನನ್ನು ಗೆಲ್ಲಲು ಔಲಸ್ ಪ್ಲಾಟಿಯಸ್ (Oulus plautius, ೪೩ ಕ್ರಿ. ಶ.) ಎಂಬ ಸೈನ್ಯಾಧಿಪತಿಯನ್ನು ಕಳುಹಿಸಿದನು. ರೋಮನ್ ಸೈನ್ಯವು ಶಿಬಿರಗಳನ್ನು ಮತ್ತು ರಸ್ತೆಗಳನ್ನು ಬ್ರಿಟನ್ನಿನಲ್ಲಿ ನಿರ್ಮಿಸಿ ಅನೇಕ ಭಾಗಗಳನ್ನು ತಮ್ಮ ವಶಪಡಿಸಿಕೊಂಡಿತು. ಆದರೆ ಕ್ಯಾರಕ್ಟಕಸ್ (Caractacus) ಎಂಬುವನ ಮುಖಂಡತ್ವದಲ್ಲಿ ಬ್ರಿಟನ್ನಿನ ನಿವಾಸಿಗಳು ಯುದ್ಧವನ್ನು ಹೂಡಿದರು. ಅವನ ಊರಾದ ಕಾಲ್‌ಚೆಸ್ಟರನ್ನು ರೋಮನರು ಹಿಡಿದ ಮೇಲೆ ಅವನು ದಕ್ಷಿಣ ವೇಲ್ಸಿಗೆ ಓಡಿದನು. ಕ್ರಿ. ಶ. ೪೭ ರಲ್ಲಿ ಪ್ಲಾಟಿಯಸ್‌ನ ಬದಲು ಬಂದ ಸೈನ್ಯಾಧಿಕಾರಿ ಸ್ಕಾಪುಲನು (Scapula) ಕ್ಯಾರಕ್ಟಕಸ್ಸನನ್ನು ಸೆರೆಹಿಡಿದು ರೋಮಿಗೆ ಕಳುಹಿಸಿದನು. ಚೆಸ್ಟರ್ (Chester), ರಾಕ್ಸೆಟರ್ (Wroxeter) ಮೊದಲಾದ ಸೈನಿಕ ಶಿಬಿರಗಳನ್ನು, ರೋಮನರು ಗೆದ್ದ ಜನಗಳನ್ನು ಹತೋಟಿಯಲ್ಲಿಟ್ಟುಕೊಳ್ಳಲು ಸ್ಥಾಪಿಸಿದರು. ಸುಟೋನಿ

ಯಸ್ ಪಾಲಿನಸ್ (Suetonius Paulinus, ೫೯–೬೨ ಕ್ರಿ. ಶ.) ಎಂಬುವನು ಆಂಗಲ್ ಸೀ (Angle sey) ಎಂಬಲ್ಲಿ ಡ್ರೂಯಿಡ್ಸ್ ಎಂಬ ಪುರೋಹಿತರಿಂದ ಉತ್ತೇಜಿತರಾದ ಬ್ರಿಟನ್ನಿನ ನಿವಾಸಿಗಳನ್ನು ಎದುರಿಸಿ ಅನೇಕರನ್ನು ಕೊಂದುಹಾಕಿದನು. ಇಷ್ಟರಲ್ಲಿ ಬ್ರಿಟನ್ನಿನ ಪೂರ್ವದಲ್ಲಿ ಬೊಡೀಷಿಯಾ (Boadicea) ಎಂಬ ರಾಣಿಯ ಕೈಕೆಳಗೆ ಕೆಲವು ರೋಮನ್ ಅಧಿಕಾರಿಗಳ ದುರಾಡಳಿತವನ್ನು ವಿರೋಧಿಸಲು ದಂಗೆಯೆದ್ದಿತು. ಬಹಳ ಕಷ್ಟಪಟ್ಟು ಸುಟೋನಿಯಸ್ ದಂಗೆಯನ್ನು ಅಡಗಿಸಿದನು. ದಂಗೆಗೆ ಕಾರಣವಾದ ದುರಾಡಳಿತವನ್ನು ತಪ್ಪಿಸಿದನು.

ಜೂಲಿಯಸ್ ಅಗ್ರಿಕೋಲ (Julius Agricola, ಕ್ರಿ. ಶ. ೭೮–೮೫) ಎಂಬುವನ ಕಾಲದಲ್ಲಿ ಬ್ರಿಟನ್ ರೋಮನ್ನರಿಂದ ಸಂಪೂರ್ಣವಾಗಿ ವಶಪಡಿಸಿಕೊಳ್ಳಲ್ಪಟ್ಟಿತು. ಇವನ ಕಾಲದಲ್ಲಿ ಬ್ರಿಟನ್ನಿನ ನಿವಾಸಿಗಳು ರೋಮನರ ನಾಗರಿಕತೆಯನ್ನು ಹೆಚ್ಚು ಹೆಚ್ಚು ಅನುಕರಿಸಲು ಪ್ರಾರಂಭಿಸಿದರು. ಅವರು ಲಾಟಿನ್ (Latin) ಭಾಷೆಯನ್ನು ಕಲಿತರು. ವ್ಯವಸಾಯದ ಅನೇಕ ಹೊಸ ಪದ್ಧತಿಗಳನ್ನು ರೋಮನರಿಂದ ಕಲಿತು ರೋಮನರ ಚಕ್ರಾಧಿಪತ್ಯದ ಇತರ ಭಾಗಗಳೊಂದಿಗೆ ಅವರು ವ್ಯಾಪಾರವನ್ನು ಪ್ರಾರಂಭಿಸಿದರು. ರೋಮನರ ನಾಗರಿಕತೆಯನ್ನು ಹೀಗೆ ಅನುಕರಣೆಮಾಡಿದ ಬ್ರಿಟನ್ನಿನ ಚಕ್ರವರ್ತಿಗಳಲ್ಲಿ ಕಾಲ್‌ಚೆಸ್ಟರಿನ ಕುನೊಬೆಲಿನ್ (Cuno belin) ಎಂಬುವನು ಪ್ರಸಿದ್ಧನಾದವನು. ಇವನನ್ನೇ ಷೇಕ್ಸ್‌ಪಿಯರ್ ಕವಿಯು ಸಿಂಬಲೈನ್ (Cymbeline) ಎಂದು ಕರೆದಿದ್ದಾನೆ. ಇವನ ನಾಣ್ಯಗಳ ಮೇಲೆ ರೆಕ್ಸ್ (Rex) ಎಂಬ ಪದವನ್ನು ಉಪಯೋಗಿಸಿರುವುದು ಕಂಡುಬಂದಿದೆ. ಹೇಡ್ರಿಯನ್ ಎಂಬ ಚಕ್ರವರ್ತಿಯು ಸುಮಾರು ಕ್ರಿ. ಶ. ೧೨೦ ರಲ್ಲಿ ಉತ್ತರ ಬ್ರಿಟನ್ನಿನಲ್ಲಿ ರಕ್ಷಣಾರ್ಥವಾಗಿ ಒಂದು ದೊಡ್ಡ ಗೋಡೆಯನ್ನು ಕಟ್ಟಿ ಯಾರ್ಕ್ ಎಂಬಲ್ಲಿ ಸೈನ್ಯವನ್ನು ಇಡಿಸಿದನು.

ಹೀಗೆ ಬ್ರಿಟನ್ ರೋಮನ್ ಪ್ರಾಂತ್ಯವಾಗಿ ತುಂಬಾ ಮುಂದುವರಿಯಿತು. ಒಳ್ಳೆಯ ಸರ್ಕಾರ, ದಕ್ಷತೆಯಿಂದ ಕೂಡಿದ ಆಡಳಿತ, ಕೃಷಿ ವ್ಯಾಪಾರಗಳ ಅಭಿವೃದ್ಧಿ. ದೊಡ್ಡ ದೊಡ್ಡ ರಸ್ತೆಗಳ ನಿರ್ಮಾಣ ಇವುಗಳೆಲ್ಲಾ ರೋಮನರ ಆಡಳಿತದಿಂದ ಬ್ರಿಟನ್ನಿಗೆ ಲಭಿಸಿದುವು. ಅನೇಕ

ಪಟ್ಟಣಗಳು ಮತ್ತು ಶ್ರೀಮಂತರ ಮನೆಗಳು ಉದ್ಭವಿಸಿದುವು. ಕಲ್ಟ್ ಜನಾಂಗವು ಸೀಸ, ತವರ ಮೊದಲಾದುವುಗಳನ್ನು ರೋಂ ಪಟ್ಟಣಕ್ಕೆ




ಮಾರಿ ಅಲ್ಲಿಂದ ಅನೇಕ ಭೋಗ್ಯ ವಸ್ತುಗಳನ್ನು (Luxury goods) ತರಿಸಿಕೊಳ್ಳುತ್ತಿತ್ತು. ರೋಮನರ ಕಾಲದಲ್ಲೇ ಲಂಡನ್ ಬ್ರಿಟನ್ನಿನ ಮುಖ್ಯ ಪಟ್ಟಣವಾಗಿ ಪರಿಣಮಿಸಿತ್ತು.

## ಆಂಗ್ಲೋ ಸ್ಯಾಕ್ಸನರು

ರೋಮನರ ಆಳ್ವಿಕೆ ಯೂರೋಪಿನಲ್ಲಿ ಚಿರಸ್ಥಾಯಿಯಾಗಿ ಉಳಿಯಲಿಲ್ಲ. ರೋಮನ್ ಆಧಿಪತ್ಯದ ಗಡಿಯಲ್ಲಿದ್ದ ಜನಾಂಗಗಳು ಪ್ರಬಲರಾಗಿ ರೋಮಿನ ಪ್ರಾಬಲ್ಯವನ್ನೇ ಮುರಿದರು. ಕ್ರಿ. ಶ. ೪೧೦ ರಲ್ಲಿ ರೋಮ್ ಈ ಜನಾಂಗಗಳ ಕಿರುಕುಳವನ್ನು ಎದುರಿಸಲು ಬ್ರಿಟನ್ನಿನಲ್ಲಿದ್ದ ಸೈನ್ಯವನ್ನು

ವಾಪಸ್ ಕರೆಯಿಸಿತು. ಜೂಟ್ಸ್ (Jutes), ಆಂಗಲ್ಸ್ (Angles) ಮತ್ತು ಸಾಕ್ಸನ್ (Saxon) ಎಂಬ ಜನಾಂಗಗಳು ಇದೇ ಸಮಯದಲ್ಲೇ



ರೋಮನ್ ಚಕ್ರಾಧಿಪತ್ಯವನ್ನು ಹಾಳುಮಾಡಿದ ಅನಾಗರಿಕ ತಂಡಗಳ ಧಾಳಿ ಕ್ರಿ ಶ ೫ನೇ ಶತಮಾನ

ಬ್ರಿಟನ್ನಿಗೆ ನುಗ್ಗಿ ಮೊದಮೊದಲು ಕೊಳ್ಳೆಹೊಡೆಯುತ್ತಾ ತಮ್ಮ ಸ್ವಸ್ಥಾನಗಳಿಗೆ ಹಿಂದಿರುಗುತ್ತಿದ್ದರು. ಸ್ವಲ್ಪ ಕಾಲವಾದಮೇಲೆ ಅವರು ಅದನ್ನು ಬಿಟ್ಟು ಬ್ರಿಟನ್ನಿನಲ್ಲೇ ನೆಲಸಿದರು. ಬ್ರಿಟನ್ನಿನ ಸಂಸ್ಕೃತಿಗೂ ಮತ್ತು ಆಂಗ್ಲೇಯ ಭಾಷೆಗೂ ಇವರೇ ಅಡಿಗಲ್ಲನ್ನು ಹಾಕಿದವರೆಂದರೆ ತಪ್ಪಾಗಲಾರದು. ಕ್ರಮೇಣ ಇವರು ಕ್ರಿಶ್ಚಿಯನ್ ಮತವನ್ನು ಅನುಸರಿಸಿದರು. ಬ್ರಿಟನ್ನಿನಲ್ಲಿ ಎರಡು ಕ್ರಿಶ್ಚಿಯನ್ ಪಂಗಡಗಳಿದ್ದುವು. ಮೊದಲನೆಯದು "ಕೆಲ್ಟಿಕ್ ಕ್ರಿಶ್ಚಿಯನ್" ಪಂಗಡ. ಎರಡನೆಯದು ಅಗಸ್ಟೈನ್ ಎಂಬ ಕ್ರೈಸ್ತ ಬೋಧಕನ ಪ್ರಭಾವಕ್ಕೆ ಒಳಗಾದವರದು. ಈ ಎರಡು ಪಂಗಡಗಳಿಗೂ ತಿಕ್ಕಾಟವಾಗದಂತೆ ನಾರ್ದಂಬರ್‌ಲೆಂಡ್ ಎಂಬ ಪ್ರದೇಶದ ದೊರೆ

ಯಾದ ಆಸ್ವಿ (Oswy) ಎಂಬುವನು ಕ್ರಿ. ಶ. ೬೬೪ ರಲ್ಲಿ ವ್ಹಿಟ್‌ಬಿ (Whitby) ಎಂಬಲ್ಲಿ ಸಭೆ ಸೇರಿಸಿ, ಬ್ರಿಟನ್ ಕೆಲ್ಟಿಕ್ ಕ್ರಿಶ್ಚಿಯನ್ ಪದ್ಧತಿಗಳನ್ನು ತ್ಯಜಿಸಿ ರೋಮನ್ ಕ್ಯಾಥೋಲಿಕ್ ಪದ್ಧತಿಯನ್ನು ಅನುಸರಿಸುವಂತೆ ಮಾಡಿ, ಬ್ರಿಟನ್ ಕ್ರೈಸ್ತ ಮಹಾಗುರು ಪೋಪನ ಪ್ರಭಾವಕ್ಕೊಳಗಾಗುವಂತೆ ನಿರ್ಧರಿಸಿದನು.

ಕ್ರಿ. ಶ. ೬೦೦–೮೦೦ ಎಂದರೆ ಎರಡುನೂರು ವರ್ಷಗಳ ಆಳ್ವಿಕೆಯ ಕಾಲದಲ್ಲಿ ಬ್ರಿಟನ್ನಿನಲ್ಲಿ ಐದು ಆರು ಬಲಯುತವಾದ ಆಂಗ್ಲೊ ಸಾಕ್ಸನ್ ರಾಜ್ಯಗಳು ಪ್ರಾಬಲ್ಯಕ್ಕೆ ಬಂದುವು. ಕೆಂಟ್, ನಾರ್ತಂಬ್ರಿಯ, ಈಸ್ಟ್ ಆಂಗ್ಲಿಯ, ಮರ್ಸಿಯ ಮತ್ತು ವೆಸೆಕ್ಸ್ ಇವು ಅವುಗಳಲ್ಲಿ ಮುಖ್ಯವಾದುವು. ಈ ಕಾಲವನ್ನು ಹೆಪ್ ಟಾರ್ಕಿ (Heptarchy) ಎಂದು ಕರೆಯುತ್ತಾರೆ. ಹೆಪ್‌ಟಾರ್ಕಿ ಎಂದರೆ ಏಳು ರಾಜ್ಯಗಳೆಂದರ್ಥ. ಆದರೆ ಬ್ರಿಟನ್ನಿನಲ್ಲಿ ಆ ಕಾಲದಲ್ಲಿ ಏಳು ಸ್ವಾತಂತ್ರ್ಯ ರಾಜ್ಯಗಳು ಇದ್ದುವೋ ಇಲ್ಲವೋ ನಮಗೆ ಗೊತ್ತಿಲ್ಲ. ಈ ರಾಜ್ಯಗಳು ಒಂದಕ್ಕೊಂದು ಹೋರಾಡಿ ಅತ್ಯುನ್ನತಸ್ಥಿತಿಗೆ ಬರಲು ಹವಣಿಸುತ್ತಿದ್ದುವು. ಏಳನೇ ಶತಮಾನದಲ್ಲಿ ನಾರ್ತಂಬ್ರಿಯ ಎಥೆಲ್ ಫ್ರಿಕ್ ಎಂಬ ರಾಜನ ಕೈಕೆಳಗೆ ತುಂಬಾ ಪ್ರಾಮುಖ್ಯತೆಯನ್ನು ಪಡೆಯಿತು. ಅವನ ನಂತರ ಬಂದ ಎಡ್ವಿನ್ (Edwin) ಕ್ರೈಸ್ತಮತವನ್ನು ಪಾಲಿನಸ್ ಎಂಬ ಮತಬೋಧಕನಿಂದ ಸ್ವೀಕರಿಸಿದನು. ಇವನು ಸ್ಕಾಟ್ಲೆಂಡ್ ದೇಶದ ಪಿಕ್ಟ್ (Pict) ಎಂಬ ಜನಾಂಗವನ್ನು ಹತೋಟಿಯಲ್ಲಿರಿಸಲು ಎಡಿನ್‌ಬರ್ಗ್‌ನ್ನು ಸ್ಥಾಪಿಸಿದನು. ಇವನ ತರುವಾಯ ಬಂದ ಆಸ್‌ವಾಲ್ಡ್‌ನ ಕಾಲದಲ್ಲಿ (Oswald) ಮರ್ಸಿಯ ರಾಜ್ಯಕ್ಕೂ ಮತ್ತು ನಾರ್ತೆಂಬರ್‌ಲ್ಯಾಂಡ್ ರಾಜ್ಯಕ್ಕೂ ಜಗಳವಾಯಿತು. ಕ್ರಿಶ್ಚಿಯನ್ ರಾಜ್ಯಗಳಿಗೆ ತುಂಬಾ ಹಿಂಸೆ ಕೊಡುತ್ತಿದ್ದ ಮರ್ಸಿಯದ ರಾಜ ಪೆಂಡ (Penda) ಎಂಬುವನನ್ನು ಆಸ್‌ವಾಲ್ಡ್ ನಂತರ ಬಂದ ಆಸ್ವಿ (Oswy) ಯು ಸೋಲಿಸಿದನು. ಈ ಆಸ್ವಿಯ ಕಾಲದಲ್ಲೇ ಜರುಗಿದ ವ್ಹಿಟ್‌ಬಿ ಸಭೆಯಲ್ಲಿ ಬ್ರಿಟನ್ನಿನ ಎರಡು ಕ್ರಿಶ್ಚಿಯನ್ ಪಂಗಡಗಳ ನಡುವೆ ಇದ್ದ ಬಿಕ್ಕಟ್ಟು ಪರಿಹಾರವಾಯಿತು. ಸುಮಾರು ಕ್ರಿ. ಶ. ೬೮೫ ರವೇಳೆಗೆ ನಾರ್ತಂಬ್ರಿಯದ ಪ್ರಾಬಲ್ಯವು ಮುರಿದುಹೋಯಿತು.

ಮರ್ಸಿಯವು (Mercia) ಎಂಟನೆ ಶತಮಾನದಲ್ಲಿ ಪೆಂಡ ಎಂಬುವನ ಕೈಕೆಳಗೆ ತುಂಬಾ ಅಭಿವೃದ್ಧಿಗೆ ಬಂದಿತು. ಓಫಾ (Offa, ೭೫೭–೭೯೬ ಕ್ರಿ. ಶ.) ಎಂಬುವನು ಕೆಂಟ್, ವೆಸೆಕ್ಸ್, ಈಸ್ಟ್ ಆಂಗ್ಲಿಯ ಮೊದಲಾದ ರಾಜ್ಯಗಳನ್ನು ಗೆದ್ದು ವೆಲ್ಷ್ ಜನಾಂಗವನ್ನು ಹತೋಟಿಯಲ್ಲಿಡಲು ಓಫಾಸ್ ಡೈಕ್ ಎಂಬ ದೊಡ್ಡ ಗೋಡೆಯನ್ನು ಕಟ್ಟಿಸಿದನು. ಓಫನನ್ನು ಚಕ್ರವರ್ತಿ ಷಾರ್ಲೆಮ್ಯಾನ್ (Charlemagne) ಮರ್ಯಾದೆಯಿಂದಲೂ ಸಮಭಾವನೆಯಿಂದಲೂ ಕಾಣುತ್ತಿದ್ದನು.

ಒಂಬತ್ತನೆ ಶತಮಾನದಲ್ಲಿ ವೆಸೆಕ್ಸ್ ತುಂಬಾ ಏಳಿಗೆಗೆ ಬಂದಿತು. ಎಗ್‌ಬರ್ಟ್ (Egbert 802–839, A.D.) ಬಹಳ ಪ್ರಖ್ಯಾತನಾದವನು. ಇವನನ್ನೇ 'ಇಂಗ್ಲೇಂಡಿನ ಮೊದಲನೆಯ ರಾಜ' ಎಂದು ಹೇಳಬಹುದು. ಈ ವೇಳೆಗೆ ಮರ್ಸಿಯ ಮತ್ತು ನಾರ್ತಂಬ್ರಿಯ ರಾಜ್ಯಗಳು ಡೇನರ (Danes) ಹಾವಳಿಯಿಂದ ನಾಶವಾಗಿ ಹೋಗಿದ್ದುವು. ಎಗ್‌ಬರ್ಟನು ಈ ಡೇನರ ಹಾವಳಿಯನ್ನು ತಪ್ಪಿಸಿ ಇಂಗ್ಲೆಂಡಿನ ಸಂರಕ್ಷಣೆಗೆ ಟೊಂಕಕಟ್ಟಿ ನಿಂತನು. ಇವನ ಮೊಮ್ಮಗನೇ ಪ್ರಖ್ಯಾತನಾದ ಅಲ್‌ಫ್ರೆಡ್ (Alfred).

ಆಂಗ್ಲೋ ಸಾಕ್ಸನ್ ರಾಜರುಗಳ ಕಾಲದಲ್ಲಿ ಗ್ರಾಮಜೀವನದ ಬೆಳವಣಿಗೆ ಬಹಳ ಮುಖ್ಯವಾದುದು. ಆಂಗ್ಲೋ ಸಾಕ್ಸನರು (ಜ್ಯೂಟ್ಸ್, Jutes, ಆಂಗಲ್ಸ್ Angles ಮತ್ತು ಸಾಕ್ಸನ್ಸ್ Saxsons) ರೋಮನರಂತೆ ಪಟ್ಟಣಗಳ ಜೀವನವನ್ನು ಸಾಗಿಸಲು ಇಷ್ಟವುಳ್ಳವರಾಗಿರಲಿಲ್ಲ. ಹಳ್ಳಿಗಳಲ್ಲೇ ಜೀವಿಸಿ ವ್ಯವಸಾಯವನ್ನೇ ಹೆಚ್ಚು ಹೆಚ್ಚು ಅಭಿವೃದ್ಧಿಪಡಿಸಿಕೊಂಡರು. ಹಳ್ಳಿಯ ಸಭೆಗೆ (Village-moot) ಹಳ್ಳಿಯ ಜಮಿಾನಿನ ನಿರ್ವಹಣೆ ಸೇರಿತ್ತು. ಉಳುಮೆಯ ನೆಲವು ಮೂರು ತರಹ ವಿಭಾಗವಾಗಿತ್ತು. ಗೋಧಿ ಮತ್ತು ಓಟ್ಸ್ ಮೊದಲಾದ ಬೆಳೆಗಳನ್ನು ಬೆಳೆಯಲು ಒಂದು ಭಾಗ. ಎರಡನೆಯದರಲ್ಲಿ ಪಾನೀಯ ತಯಾರಿಸಲು ಬಾರ್ಲಿ ಬೆಳೆಯುತ್ತಿದ್ದರು. ಮೂರನೆಯದು ಮಾತ್ರ ಬಂಜರಾಗಿ ಬಿಡಲ್ಪಡುತ್ತಿತ್ತು. ಇದಕ್ಕೆ 'ಓಪನ್ ಫೀಲ್ಡ್ ಸಿಸ್ಟಮ್' (Open Field System) ಎಂದು ಹೆಸರು. ಈ ಮೂರು ರೀತಿಯ ಜಮಿಾನುಗಳನ್ನು

ಸಣ್ಣ ಸಣ್ಣ ಭಾಗಗಳನ್ನಾಗಿ ಮಾಡಿ, ಹಂಚಿಕೊಳ್ಳುತ್ತಿದ್ದರು. ಈ ಜಮೀನಿನ ಹಂಚಿಕೆಯು ಹೆಚ್ಚು ಹೆಚ್ಚು ಅಂತಸ್ತಿನ ಆಧಾರದ ಮೇಲೆ ನಿರ್ಧರವಾಗುತ್ತಿತ್ತು. 'ಲಾರ್ಡ್' (Lord) ಅಥವಾ 'ಸ್ಕೈರ್' (Squire) ಎಂಬುವನು ಹಳ್ಳಿಯ ಮುಖ್ಯಸ್ಥನಾದ್ದರಿಂದ ಅವನಿಗೆ ಈ ಮೂರು ತರಹ ಜಮೀನುಗಳ ಹೆಚ್ಚು ಪಾಲು ಸಿಕ್ಕುತ್ತಿತ್ತು. ಇದಲ್ಲದೆ ಹಳ್ಳಿಗೆ ಸೇರಿದಂತೆ ಗೋಮಾಳವಿತ್ತು.

ಅನೇಕ ಹಳ್ಳಿಗಳು ಒಟ್ಟುಗೂಡಿ ತಮ್ಮ ಆಡಳಿತವನ್ನು ತಾವೇ ನಡೆಸಿಕೊಳ್ಳಲು ಅನುಕೂಲವಾಗುವಂತೆ "ಹಂಡ್ರೆಡ್ ಮೂಟ್" (Hundred-moot) ಎಂಬ ಸಭೆ ಇತ್ತು. ಹಳ್ಳಿಗಳಿಗಿಂತ ದೊಡ್ಡ ದೊಡ್ಡ ಊರುಗಳ ಆಡಳಿತವನ್ನು ನೋಡಿಕೊಳ್ಳಲು "ಷೈರ್‌ಮೂಟ್" (Shire-moot) ಎಂಬ ಸಭೆ ಇರುತ್ತಿತ್ತು. ಹಳ್ಳಿಯ ಸಭೆಯು (Village-moot) ತನ್ನ ಕಾರ್ಯಕ್ರಮದಲ್ಲಿ ಹೇಗೆ ಕೃಷಿಗೆ ಹೆಚ್ಚು ಗಮನ ಕೊಡುತ್ತಿತ್ತೋ ಹಾಗೆಯೇ ಪಟ್ಟಣದ ಸಭೆಯು (Shire-moot) ಯುದ್ಧ ವಿಚಾರದಲ್ಲಿ ಹೆಚ್ಚು ಗಮನ ಕೊಡುತ್ತಿತ್ತು. ಯುದ್ಧಕಾಲದಲ್ಲಿ ಹಳ್ಳಿಯ ಶ್ರೀಮಂತ (Squire) ರಾಜನಿಗೆ ಬೆಂಬಲ ಕೊಡಬೇಕಾಗಿತ್ತು. ಅನೇಕ ವೇಳೆ ಹಳ್ಳಿಯವರನ್ನು ಯುದ್ಧಕ್ಕಾಗಿ ಸೈನ್ಯಕ್ಕೆ ಸೇರಿಸಬೇಕಾಗುತ್ತಿತ್ತು. ಈ ಹಳ್ಳಿಯ ಸೈನ್ಯಕ್ಕೆ "ಫಿಯರ್ಡ್" (Fyrd) ಎಂದು ಹೆಸರು.

ಹಳ್ಳಿಯ ಸಭೆಗಳಲ್ಲಿ ಆಗಾಗ ನ್ಯಾಯ ತೀರ್ಪು ಕೂಡಾ ಆಗುತ್ತಿತ್ತು. ಸಾಕ್ಷಿಗಳಾಗಲಿ, ರುಜುವಾತಾಗಲಿ, ಜ್ಯೂರಿಯಾಗಲಿ, ಲಾಯರಾಗಲಿ ಅವರ ನ್ಯಾಯ ತೀರ್ಪಿಗೆ ಅಷ್ಟು ಅವಶ್ಯಕವಾಗಿರಲಿಲ್ಲ. ಅಪರಾಧಿಯನ್ನು ಹನ್ನೆರಡು ಜನ ಅವನ ಅಕ್ಕಪಕ್ಕದವರು (Compurgators) ನಿರ್ದೋಷಿ ಎಂದು ಪ್ರಮಾಣ ಮಾಡಿದರೆ ಆಗ ಅವನಿಗೆ ಶಿಕ್ಷೆ ತಪ್ಪುತ್ತಿತ್ತು. ಹನ್ನೆರಡು ಜನಕ್ಕಿಂತ ಕಮ್ಮಿಯಾದ ಪಕ್ಷದಲ್ಲಿ ತಪ್ಪಿತಸ್ಥನು ನಿರ್ದೋಷಿ ಎಂದು ತೋರಿಸಲು ಅಗ್ನಿಪರೀಕ್ಷೆ, ವಿಷಪರೀಕ್ಷೆ (Ordeal) ಮೊದಲಾದ ಕಠಿಣ ಪರೀಕ್ಷೆಗಳು ನಡೆಯುತ್ತಿದ್ದುವು. ಅಪರಾಧಿಯು ಕುದಿಯುವ ನೀರಿನ ಕಡಾಯಿಯ ಒಳಗಡೆ ಇದ್ದ ಬೆಣಚು ಕಲ್ಲೊಂದನ್ನು ತೆಗೆಯಬೇಕಾಗಿತ್ತು. ಇಲ್ಲದಿದ್ದರೆ ಅವನು ಕಾಯಿಸಿದ ಗುಳವನ್ನು ಕೈಯಲ್ಲಿ ಹಿಡಿದು

ಮೂರು ಹೆಜ್ಜೆ ನಡೆದುಹೋಗಬೇಕಾಗಿತ್ತು. ಇದರಿಂದಾದ ಗಾಯ ಮೂರು ದಿನಗಳಲ್ಲಿ ವಾಸಿಯಾದರೆ ಆಗ ಅವನನ್ನು ನಿರ್ದೋಷಿಯೆಂದು ಪರಿಗಣಿಸುತ್ತಿದ್ದರು. ಒಬ್ಬ ಮನುಷ್ಯನನ್ನು ಮತ್ತೊಬ್ಬನು ಕೊಲೆ ಮಾಡಿದರೆ ಕೊಲೆಪಾತಕನು ಸತ್ತವನ ಮನೆಯವರಿಗೆ ಹಣ ತೆರಬೇಕಾಗಿತ್ತು. ಹೀಗೆ ಕೊಡಬೇಕಾಗಿದ್ದ ಹಣದ ಪ್ರಮಾಣ ಸತ್ತವನ ಅಂತಸ್ತಿನ ಮೇಲೆ ನಿರ್ಧರಿಸಲ್ಪಡುತ್ತಿತ್ತು. ಈ ವಿಧವಾದ ದಂಡಕ್ಕೆ ವರ್‌ಗಿಲ್ಡ್ (Wergild) ಎಂದು ಹೆಸರು. ಹಂಡ್ರೆಡ್ ಮೂಟ್ (Hundred-moot) ಮತ್ತು ಷೈರ್ ಮೂಟ್ (Shire-moot) ಗಳು ನ್ಯಾಯ ತೀರ್ಪನ್ನು ಕೊಡುವಾಗ ರಾಜನಾಗಲಿ, ಅವನ ಪ್ರತಿನಿಧಿಯಾಗಲಿ ಅಧ್ಯಕ್ಷತೆ ವಹಿಸುತ್ತಿದ್ದರು. ಇದಕ್ಕಾಗಿ ಕಕ್ಷಿಗಳು, ಪ್ರತಿಕಕ್ಷಿಗಳು ಸ್ವಲ್ಪ ಹಣವನ್ನು ಸರ್ಕಾರಕ್ಕೆ ಕೊಡಬೇಕಾಗಿತ್ತು.

## ಡೇನರು (Danes)

ವೆಸೆಕ್ಸಿನ ಎಗ್‌ಬರ್ಟನು (Egbert) ಕಾಲವಾದ ಮೇಲೆ ಡೇನರ ಹಾವಳಿ ತುಂಬಾ ಹೆಚ್ಚಾಯಿತು. ಇವರ ದೇಶ ಸ್ಕಾಂಡಿನೇವಿಯ (Scandinavia). ಡೇನರು ತುಂಬಾ ಜಾಣರಾದ ನಾವಿಕರು. ಒಂಬತ್ತನೇ ಶತಮಾನದಲ್ಲಿ ಅವರು ತಮ್ಮ ಹಡಗುಗಳಲ್ಲಿ ಪ್ರಯಾಣ ಮಾಡಿ ಸ್ಕಾಟ್ಲೆಂಡ್ ಮೊದಲಾದ ಪ್ರದೇಶಗಳಿಗೆ ನುಗ್ಗಿ ಕೊಳ್ಳೆಹೊಡೆಯುತ್ತಿದ್ದರು. ಮೊದ ಮೊದಲು ಕೊಳ್ಳೆಹೊಡೆದು ತಮ್ಮ ದೇಶಕ್ಕೆ ಹಿಂದಿರುಗುತ್ತಿದ್ದರು. ಸ್ವಲ್ಪ ಕಾಲವಾದಮೇಲೆ ಇವರು ಇಂಗ್ಲೆಂಡಿನಲ್ಲೇ ನೆಲಸಲು ಪ್ರಾರಂಭಿಸಿದರು. ಕೊನೆ ಕೊನೆಗೆ ಥೇಮ್ಸ್ ನದಿಯ ಉತ್ತರದ ಭಾಗವೆಲ್ಲಾ ಇವರ ಆಕ್ರಮಣಕ್ಕೆ ಒಳಗಾಯಿತು. ಒಂದೊಂದಾಗಿ ಆಂಗ್ಲೋ ಸಾಕ್ಸನ್ ರಾಜ್ಯಗಳನ್ನು ಇವರು ಮುರಿದರು. ಕೊನೆಗೆ ವೆಸೆಕ್ಸ್ ರಾಜರು (Wessex) ಮತ್ತು ಡೇನರು ಒಬ್ಬರಿಗೊಬ್ಬರು ಪ್ರತಿಭಟಿಸಬೇಕಾಯಿತು.

ಕ್ರಿ. ಶ. ೮೪೮ ರಲ್ಲಿ ಆಲ್‌ಫ್ರೆಡ್ (Alfred) ಹುಟ್ಟಿದನು. ಇವನ ತಂದೆಯ ಹೆಸರು ಎಥೆಲ್‌ಉಲ್ಫ್ (Ethel wolf). ಇವನಿಗೆ ಹದಿನೆಂಟು

ವರ್ಷವಾದಾಗಿನಿಂದಲೇ ರಾಜನಾಗಿದ್ದ ಇವನ ಅಣ್ಣನಾದ ಎಥೆಲ್‌ರೆಡ್ (Ethelred) ಎಂಬುವನಿಗೆ ಇವನು ಸಹಾಯಕನಾಗಿದ್ದನು. ಕ್ರಿ. ಶ. ೮೭೧ ರಲ್ಲಿ ಇವನು ರಾಜನಾದನು. ಅಷ್ಟು ಹೊತ್ತಿಗೆ ಡೇನರು ನಾರ್ತಂಬ್ರಿಯ ಮತ್ತು ಮರ್ಸಿಯ ಮೊದಲಾದ ರಾಜ್ಯಗಳನ್ನು ನುಂಗಿ ಎಸೆಕ್ಸಿನ ಮೇಲೆ ಬಿದ್ದಿದ್ದರು. ಆಲ್‌ಫ್ರೆಡನು ಡೇನರೊಂದಿಗೆ ಒಂಬತ್ತು ಕದನಗಳನ್ನು ಮಾಡಬೇಕಾಯಿತು. ಕ್ರಿ. ಶ. ೮೭೮ ಈತನ ಜೀವನದಲ್ಲಿ ಬಹಳ ಮುಖ್ಯವಾದುದು. ಆ ವರ್ಷ ಡೇನರು ಆಲ್‌ಫ್ರೆಡನನ್ನು ಸೋಲಿಸಿ ಅಥೆಲ್‌ನೆ (Athelney) ಎಂಬ ಸಣ್ಣ ದ್ವೀಪಕ್ಕೆ ಅಟ್ಟಿದರು. ಆದರೆ ಆಲ್‌ಫ್ರೆಡನು ಧೈರ್ಯಗೆಡಲಿಲ್ಲ. ಬಲವಾದ ಮತ್ತೊಂದು ಸೈನ್ಯವನ್ನು ಕಟ್ಟಿ ಆಲ್‌ಫ್ರೆಡನು ಡೇನರ ಮುಖಂಡನಾದ ಗುತ್ರಮ್ (Guthrum) ಎಂಬುವನನ್ನು ಎಥನ್ಡೂನ್ (Ethandune) ಎಂಬ ಕದನದಲ್ಲಿ ಸೋಲಿಸಿದನು. ಈ ಸೋಲಿನಿಂದ ಡೇನರು ಕೌಲು ಮಾಡಿಕೊಳ್ಳಬೇಕಾಯಿತು. ವೆಡ್‌ಮೋರ್ (wedmore) ಕರಾರಿನ ಪ್ರಕಾರ ಡೇನರು ವೆಸೆಕ್ಸಿನ ಗೋಜಿಗೆ ಹೋಗುವುದನ್ನು ನಿಲ್ಲಿಸಬೇಕಾಯಿತು. ಅವರು ತಮ್ಮ ರಾಜ್ಯವಾದ ಪೂರ್ವ ಮತ್ತು ಉತ್ತರ ಇಂಗ್ಲೆಂಡಿನ ಪ್ರದೇಶಕ್ಕೂ (ಅದಕ್ಕೆ ಡೇನ್‌ಗೆಲ್ಡ್ ಎಂದು ಹೆಸರು) ಮತ್ತು ಆಲ್‌ಫ್ರೆಡನ ರಾಜ್ಯಕ್ಕೂ ನಡುವೆ ಲಂಡನ್ ಮತ್ತು ಚೆಸ್ಟರ್ ಇವುಗಳಿಗೆ ಹೋಗುವ ರೋಮನರ ಕಾಲದ ವಾಟ್‌ಲಿಂಗ್ ರಸ್ತೆಯೇ (Watling street) ಗಡಿಯಾಗಿರಬೇಕೆಂಬ ನಿರ್ಧಾರವನ್ನು ಒಪ್ಪಿದರು. ಮೂರನೆಯದಾಗಿ ಗುತ್ರಮ್ ಮತ್ತು ಅವನ ಅನುಯಾಯಿಗಳು ಕ್ರಿಶ್ಚಿಯನ್ ಮತವನ್ನು ಸ್ವೀಕರಿಸಬೇಕಾಯಿತು.

ಕ್ರಿ. ಶ. ೮೯೨ ರಲ್ಲಿ ಮತ್ತೊಂದು ಡೇನರ ಗುಂಪು ಅವರ ರಾಜನಾದ ಹೇಸ್ಟಿಂಗ್ (Hasting) ಎಂಬುವನ ಮುಖಂಡತ್ವದಲ್ಲಿ ಕೆಂಟ್‌ಗೆ ನುಗ್ಗಿತು. ಆದರೆ ಆಲ್‌ಫ್ರೆಡನ ಮುಂದೆ ಅವರ ಆಟ ಸಾಗಲಿಲ್ಲ. ಆಲ್‌ಫ್ರೆಡನು ಡೇನರ ಹಾವಳಿಯನ್ನು ಶಾಶ್ವತವಾಗಿ ತಪ್ಪಿಸಲು ಕೆಲವು ಏರ್ಪಾಟುಗಳನ್ನು ಮಾಡಿದನು. ಮೊದಲನೆಯದಾಗಿ ಅನೇಕ ಮಣ್ಣಿನ ಕೋಟೆಗಳು ನಿರ್ಮಿತವಾದುವು. ಈ ಕೋಟೆಗಳಲ್ಲಿ ಬಲವಾದ ಸೈನ್ಯವನ್ನು ಇಡಿಸಿದನು. ಫಿಯರ್ಡ್ (Fyrd) ಅಥವಾ ಹಳ್ಳಿಯ ಸೈನ್ಯವನ್ನು

ಮತ್ತಷ್ಟು ಬಲಪಡಿಸಿದನು. ಕೊನೆಯದಾಗಿ ಇಂಗ್ಲೆಂಡಿನ ಸಮುದ್ರ ತೀರದ ರಕ್ಷಣೆಗಾಗಿ ನೌಕಾದಳವನ್ನು ಕೂಡಾ ನೇಮಿಸಿದನು.

ಆಲ್‌ಫ್ರೆಡನ ಕೀರ್ತಿಯು ಇಂಗ್ಲೆಂಡಿನ ಚರಿತ್ರೆಯಲ್ಲಿ ಡೇನರನ್ನು ಸೋಲಿಸಿದ್ದಕ್ಕಾಗಲೀ ಅಥವಾ ಅವರು ಇಂಗ್ಲೆಂಡನ್ನು ಮುತ್ತದಂತೆ ರಕ್ಷಣೋಪಾಯಗಳನ್ನು ಕಲ್ಪಿಸಿದ್ದುದಕ್ಕಾಗಲೀ ಲಭಿಸಲಿಲ್ಲವೆಂದರೆ ತಪ್ಪಲ್ಲ. ಅವನು ಇಂಗ್ಲೆಂಡಿಗೆ ಮಾಡಿದ ಉಪಕಾರ ಸಾಂಸ್ಕೃತಿಯ ಕ್ಷೇತ್ರಕ್ಕೆ ಸೇರಿದುದು. ಯೂರೋಪಿನಿಂದ ಅವನು ಇಂಗ್ಲೆಂಡಿಗೆ ಅನೇಕ ವಿದ್ವಾಂಸರನ್ನು ಕರೆಸಿಕೊಂಡು ತನ್ನ ಜನರಲ್ಲಿ ವಿದ್ಯೆ ಹೆಚ್ಚುವಂತೆ ಮಾಡಿ ದನು. ಸ್ವತಃ ತಾನೇ ವಿದ್ವಾಂಸನಾಗಿದ್ದ ಆಲ್‌ಫ್ರೆಡನು ಅನೇಕ ಪುಸ್ತಕ ಗಳನ್ನು ಲಾಟಿನ್ (Latin) ಭಾಷೆಯಿಂದ ಆಂಗ್ಲೇಯ (English) ಭಾಷೆಗೆ ತರ್ಜುಮೆಮಾಡಿದನು. ಇದರಲ್ಲಿ ಬೀಡ್ (Bede) ಎಂಬ ಪಾದ್ರಿಯು ಬರೆದ ಇಂಗ್ಲೆಂಡಿನ ಚರಿತ್ರೆಯು ಅತಿ ಮುಖ್ಯವಾದುದು. ತನ್ನ ಮತ್ತು ಇತರ ಕಾಲದ ಮುಖ್ಯ ಸಂಗತಿಗಳು ತಿಳಿಯಲು ಆಂಗ್ಲೋ ಸಾಕ್ಸನ್ ಕ್ರಾನಿಕಲ್ (Anglo Saxon Chronicle) ಅಥವಾ ಆಂಗ್ಲೊ ಸಾಕ್ಸನ್ ಐತಿಹಾಸಿಕ ಪಟ್ಟಿಯನ್ನು ಮಠಗಳು ತಯಾ ರಿಸುವಂತೆ ಆಲ್‌ಫ್ರೆಡ್ ಏರ್ಪಡಿಸಿದನು. ನಲವತ್ತು ವರ್ಷವೂ ತುಂಬದ ಯೋಧನೂ, ಪಂಡಿತನೂ, ರಾಜತಂತ್ರ ನಿಪುಣನೂ (Statesman) ಆದ ಆಲ್‌ಫ್ರೆಡ್ ಕಾಲವಾದನು.

ಇವನ ಮಗನಾದ ಹಿರಿಯ ಎಡ್ವರ್ಡ್ ಎಂಬುವನ (Edward the Elder) ಕಾಲದಲ್ಲಿ (ಕ್ರಿ. ಶ. ೯೦೦–೯೨೪) ಡೇನರು ಕಟ್ಟಿದ್ದ (ಡೇನ್‌ಲಾ Denelaw) ರಾಜ್ಯವು ಪುಡಿಪುಡಿಯಾಯಿತು. ಅಲ್ಲಿ ನೆಲ ಸಿದ್ದ ಡೇನರು ವೆಸೆಕ್ಸ್ ರಾಜ್ಯಕ್ಕೆ ಅಧೀನರಾಗಿ ಕೃಷಿ ಮತ್ತು ವ್ಯಾಪಾರ ದಲ್ಲಿ ತೊಡಗಿದರು. ಹಿರಿಯ ಎಡ್ವರ್ಡ್ ಈ ರೀತಿಯಲ್ಲಿ ಡೇನರನ್ನೂ ಆಂಗ್ಲೋ ಸಾಕ್ಸನರನ್ನೂ ಒಟ್ಟುಗೂಡಿಸಿದನು. ಇಂಗ್ಲೆಂಡ್ ಡೇನರಿಂದ ಅನೇಕ ವಿಷಯಗಳನ್ನು ಕಲಿತುಕೊಂಡಿತು. ವಾಣಿಜ್ಯದ ಅನೇಕ ರಹಸ್ಯ ಗಳು ಡೇನರಿಂದ ಇಂಗ್ಲಿಷರಿಗೆ ಗೊತ್ತಾದುವು. ಡೇನರಿಂದ ಇಂಗ್ಲೆಂಡಿನ 'ಬರೋ ಪದ್ಧತಿ'ಗೆ (Borough System) ಅಸ್ತಿಭಾರ ಹಾಕಲ್ಪಟ್ಟಿತು.

ಎಡ್ವರ್ಡನ ಮಗ ಎಥಲ್‌ಸ್ಟನ್ (Athelstan) ಕ್ರಿ. ಶ. ೯೨೫ ರಿಂದ ೯೪೦ ರವರೆಗೆ ಆಳಿದನು. ಕ್ರಿ. ಶ. ೯೫೯ ರಿಂದ ೯೭೫ ರತನಕ ಎಡ್‌ಗರ್ (Edgar) ಎಂಬುವನು ಆಳಿದನು. ಇವನ ಕಾಲದಲ್ಲಿ ಶಾಂತಿ, ಒಳ್ಳೆಯ ಸರ್ಕಾರ ಮತ್ತು ದೇಶದ ಐಶ್ವರ್ಯ ಹೆಚ್ಚಿದುವು. ಸೇಂಟ್ ಡನ್‌ಸ್ಟನ್ (Saint Dunstan) ಎಂಬುವನು (೯೨೪–೯೮೮) ಈ ರಾಜನಿಗೆ ಶಾಂತಿಯ ಕಾರ್ಯಕಲಾಪಗಳಲ್ಲಿ ಬಹಳ ಬೆಂಬಲ ಕೊಟ್ಟನು. ಸಂಗೀತ, ಕಲೆ, ಸಾಹಿತ್ಯ ಇವುಗಳಿಗೆ ತುಂಬಾ ಉತ್ತೇಜನವು ಸಿಕ್ಕಿತು. ಮೊದಮೊದಲು ಕೇವಲ ಸಣ್ಣ ಪಾದ್ರಿಯಾಗಿದ್ದ ಸೇಂಟ್ ಡನ್ ಸ್ಟನ್ ಎಡ್‌ಗರನ ಕಾಲದಲ್ಲಿ ಕ್ಯಾಂಟರ್‌ಬರಿಯ ಮಠಾಧಿಪತಿಯಾದನು. ಸರ್ಕಾರದ ಆಡಳಿತದಲ್ಲಿ ಸೇಂಟ್ ಡನ್ ಸ್ಟನ್ ಎಡ್‌ಗರನಿಗೆ ಬಲಗೈ ಆಗಿದ್ದನು. ಮತೀಯ ಮತ್ತು ಸರ್ಕಾರಿ ಆಡಳಿತದ ವ್ಯವಸ್ಥೆಗಾಗಿ Eccelesiastical Statesman) ದುಡಿದ ವ್ಯಕ್ತಿಗಳಲ್ಲಿ ಡನ್‌ಸ್ಟನ್ ಮೊದಲನೆಯವನು. ಕೊನೆಯವನು ವೂಲ್ಸೀ (Wolsey). ಡೇನರ ಹಾವಳಿಯಿಂದ ನಾಶವಾಗಿದ್ದ ಮಠಗಳನ್ನು (Monastery) ಪುನರುಜ್ಜೀವನಗೊಳಿಸಿ, ಮಠಸ್ಥರಾದ ಸನ್ಯಾಸಿಗಳು (Monks) ಪರಿಶುದ್ಧವಾದ ಮತ್ತು ಶಿಸ್ತಿನಿಂದ ಕೂಡಿದ ಜೀವನವನ್ನು ನಡಸುವಂತೆ ಮಾಡಿದನು.

ಎಡ್‌ಗರನು ಸತ್ತ ನಾಲ್ಕುವರ್ಷ ಕಳೆಯುವುದರೊಳಗಾಗಿ ಡೇನರ ಹಾವಳಿ ಪುನಃ ಪ್ರಾರಂಭವಾಯಿತು. ಇವನ ಕಿರಿಯ ಮಗ ಎಥಲ್‌ರೆಡ್ (Athelred) ಡೇನರೊಂದಿಗೆ ಹೋರಾಡಿ ಅವರನ್ನು ಸೋಲಿಸುವುದನ್ನು ಬಿಟ್ಟು, ಅದಕ್ಕೆ ಬದಲಾಗಿ ಅವರಿಗೆ ಹಣ ತೆರಲು ಪ್ರಾರಂಭಿಸಿದನು. ಇದನ್ನು ತೆರಲು ಹಾಕಿದ ತೆರಿಗೆಗೆ ಡೇನ್‌ಗೆಲ್ಡ್ (Danegeld) ಎಂದು ಹೆಸರು. ಕ್ರಿ. ಶ. ೧೦೧೩ ರಲ್ಲಿ ಡೇನರ ದೊರೆ ಎಥಲ್‌ರೆಡ್‌ನನ್ನು ಇಂಗ್ಲೆಂಡಿನಿಂದಲೇ ಓಡಿಸಿದನು. ಅವನು ದೇಶಭ್ರಷ್ಟನಾಗಿ ಫ್ರಾನ್ಸಿನಲ್ಲಿದ್ದ ತನ್ನ ಹೆಂಡತಿಯ ತೌರುಮನೆಯಾದ ನಾರ್ಮಂಡಿಗೆ ಹೋಗಿ ಸೇರಿಕೊಂಡನು. ಈ ಹೊಸ ಡೇನರ ದೊರೆಯ ಮಗನ ಹೆಸರೇ ಕೆನ್ಯೂಟ್ ಎಂದು. ಎಥಲ್‌ರೆಡ್‌ನ ಮಗನಾದ ಎಡ್ಮಂಡ್ ಎಂಬುವನು ಕೆನ್ಯೂಟನು ರಾಜ್ಯವನ್ನಾಳಲು ಅವಕಾಶ ಕೊಡಲಿಲ್ಲ. ಶೂರನಾದ ಅವನು

ಕೆನ್ಯೂಟನೊಂದಿಗೆ ಯುದ್ಧಮಾಡಿ "ಐರನ್‌ಸೈಡ್" ಎಂಬ ಬಿರುದನ್ನು ಸಂಪಾದಿಸಿದನು. ಆದರೆ ಕ್ರಿ. ಶ. ೧೦೧೬ ರಲ್ಲಿ ನಡೆದ ಅಸೆನ್‌ಡನ್ (Assendun) ಎಂಬ ಕದನದಲ್ಲಿ ಅವನು ಸೋತನು. ಸ್ವಲ್ಪ ಕಾಲದಲ್ಲೆ ಕೊಲೆಯಾದನು. ಇದರಿಂದ ಕೆನ್ಯೂಟನೇ ಇಂಗ್ಲೆಂಡಿಗೆಲ್ಲಾ ರಾಜನಾದನು. ಹೀಗೆ ಇಂಗ್ಲೆಂಡ್ ಡೇನರ ಚಕ್ರಾಧಿಪತ್ಯದ ಒಂದು ಭಾಗವಾಗಿ ಪರಿಣಮಿಸಿತು. ಕೆನ್ಯೂಟನು ತನ್ನ ತಂದೆಯ ದರೋಡೆ ಮಾರ್ಗ



ಕೆನ್ಯೂಟನ ಚಕ್ರಾಧಿಪತ್ಯ

ವನ್ನು ತ್ಯಜಿಸಿ ಒಳ್ಳೆಯ ರಾಜನಾಗಿ ಆಳಿದನು. ಅವನು ಡೇನರಿಗೂ ಮತ್ತು ಆಂಗ್ಲೊ ಸಾಕ್ಸನರಿಗೂ ಯಾವ ವಿಧವಾದ ಪಕ್ಷಪಾತವನ್ನೂ ತೋರಿ

ಷದ ಸಮತ್ವಭಾವನೆಯಿಂದ ಆಳಿದನು. ಕ್ರೈಸ್ತಮತವನ್ನು ಸ್ವೀಕರಿಸಿ ಮಠಗಳನ್ನು ಮತ್ತು ಪಾದ್ರಿಗಳನ್ನು ಬಹುವಾಗಿ ಪುರಸ್ಕರಿಸಿದನು. ಇವನು ದೇಶವನ್ನು ನಾಲ್ಕು ಭಾಗಗಳನ್ನಾಗಿ ಮಾಡಿ ಒಂದೊಂದು ಭಾಗವನ್ನೂ ಒಬ್ಬೊಬ್ಬ 'ಶ್ರೀಮಂತ'ನ (Earl) ಅಧಿಕಾರಕ್ಕೊಳಪಡಿಸಿದನು. ವೆಸೆಕ್ಸ್ ಭಾಗವು ಆಂಗ್ಲೋಸಾಕ್ಸನ್ನನಾದ ಗುಡ್‌ವಿನ್ ಎಂಬುವನಿಗೆ ವಹಿಸಲ್ಪಟ್ಟಿತ್ತು. ಹೀಗೆ ರಾಜ್ಯವು ಭಾಗಗಳಾಗಿ ಹೋದುದರಿಂದ ರಾಜ ಕೀಯ ಐಕಮತ್ಯ ನಷ್ಟವಾಗಿ ಇಂಗ್ಲೆಂಡ್ ನಾರ್ಮನ್ ಜನಾಂಗದ ವಶ ವಾಗಲು ಅವಕಾಶವಾಯಿತು.

ಕೆನ್ಯೂಟನ ಮಕ್ಕಳಾದ ಹಾರ್ಡಿಕೆನ್ಯೂಟ್ ಮತ್ತು ಹೆರಾಲ್ಡ್ ಇವರುಗಳಲ್ಲಿ ಜಗಳವು ಪ್ರಾರಂಭವಾಯಿತು. ಕ್ರಿ. ಶ. ೧೦೪೨ ರ ವೇಳೆಗೆ ಅವರಿಬ್ಬರೂ ಮಡಿದು ಎಥಲ್‌ರೆಡ್‌ನ ಮಗನಾದ ಎಡ್ವರ್ಡ್ ಎಂಬುವನು ನಾರ್ಮಂಡಿಯಿಂದ ಇಂಗ್ಲೆಂಡಿಗೆ ಆಗಮಿಸಿದನು. ಚರಿತ್ರೆಯಲ್ಲಿ ಇವ ನನ್ನೇ ಎಡ್ವರ್ಡ್ ದಿ ಕನ್‌ಫೆಸರ್ ಎಂದು ಕರೆಯುವ ವಾಡಿಕೆಯಿದೆ. ಎಡ್ವರ್ಡನು ರಾಜನಾಗುವುದಕ್ಕಿಂತ ಪಾದ್ರಿಯಾಗಿದ್ದರೆ ಎಷ್ಟೋ ಚೆನ್ನಾ ಗಿತ್ತು! ಇವನು ತನ್ನ ಹೆಚ್ಚಿನ ಜೀವಮಾನವನ್ನು ಫ್ರಾನ್ಸಿನಲ್ಲಿಯೇ ಕಳೆದಿದ್ದನು. ಇವನ ಕಾಲದಲ್ಲಿ ಆಂಗ್ಲೋಸಾಕ್ಸನ್ನರಿಗೂ ಮತ್ತು ನಾರ್ಮನ್ನರಿಗೂ ಜಗಳವು ಪ್ರಾರಂಭವಾಯಿತು. ನಾರ್ಮನ್ನರೂ ಡೇನರ ಜನಾಂಗಕ್ಕೆ ಸೇರಿದವರೇ. ಡೇನರು ಇಂಗ್ಲೆಂಡನ್ನು ಆಕ್ರಮಿಸಿದಂತೆಯೇ ಫ್ರಾನ್ಸಿಗೂ ಕೂಡ ಅನೇಕ ಸಲ ಮುತ್ತಿಗೆ ಹಾಕಿದರು. ಆದರೆ ಅವರು ಫ್ರಾನ್ಸಿನ ರಾಜನೊಂದಿಗೆ ಒಪ್ಪಂದ ಮಾಡಿಕೊಂಡು ಕ್ರೈಸ್ತಮತವನ್ನು ಅನುಸರಿಸಿ ಫ್ರಾನ್ಸಿನ ಒಂದು ಭಾಗವಾದ ನಾರ್ಮಂಡಿಯನ್ನು ತಮ್ಮದೇ ಆಗಿ ಮಾಡಿಕೊಂಡಿದ್ದರು. ಅವರು ಫ್ರೆಂಚರ ರೀತಿ ನೀತಿಗಳನ್ನು ಅನು ಸರಿಸಿ, ಫ್ರೆಂಚ್ ಭಾಷೆಯನ್ನೇ ತಮ್ಮ ಭಾಷೆಯನ್ನಾಗಿ ಮಾಡಿಕೊಂಡು ಯೂರೋಪಿನಲ್ಲೆಲ್ಲಾ ಅತ್ಯಂತ ಮುಂದುವರಿದ ಮತ್ತು ಕುಶಲರಾದ ಜನಾಂಗವಾಗಿ ಪರಿಣಮಿಸಿದರು. ಅವರು ಕಲ್ಲಿನ ಕಟ್ಟಡಗಳನ್ನು ಕಟ್ಟು ವುದರಲ್ಲಿ ನಿಸ್ಸೀಮರು ಆಡಳಿತದಲ್ಲಿಯೂ ಕಾನೂನು ರಚಿಸುವುದರ ಲ್ಲಿಯೂ ದಕ್ಷರು.

ಎಡ್ವರ್ಡನ ಕಾಲದಲ್ಲಿ ಹೆಚ್ಚು ಹೆಚ್ಚಾಗಿ ನಾರ್ಮನ್ನರು ಇಂಗ್ಲೆಂಡಿನಲ್ಲಿ ಅಧಿಕಾರ ಮಾಡತೊಡಗಿದರು. ರಾಜನು ಬಲಹೀನನಾಗಿದ್ದುದರಿಂದ ಶ್ರೀಮಂತರು (Earls) ರಾಜ್ಯದ ಸೂತ್ರಗಳನ್ನು ತಮ್ಮ ಕೈಯಲ್ಲಿಟ್ಟುಕೊಳ್ಳಲು ಪ್ರಯತ್ನಿಸುತ್ತಿದ್ದರು. ಎಡ್ವರ್ಡನು ವೆಸ್ಟ್-ಮಿನಿಸ್ಟರ್-ಅಬೆಯನ್ನು ಮೊಟ್ಟಮೊದಲು ಕಟ್ಟಿಸಿದನು. ಕ್ರಿ. ಶ. ೧೦೬೬ ರಲ್ಲಿ ಎಡ್ವರ್ಡ್ ಸತ್ತುಹೋದನು. ಅವನಿಗೆ ಮಕ್ಕಳಿಲ್ಲದಿದ್ದುದರಿಂದ ರಾಜ್ಯಕ್ಕಾಗಿ ಗುಡ್ವಿನ್ನನ ಮಗನಾದ ಹೆರಾಲ್ಡ್ ಎಂಬುವನಿಗೂ ಮತ್ತು ಎಡ್ವರ್ಡನ ಬಂಧುವಾದ ನಾರ್ಮಂಡಿಯ ವಿಲಿಯಂ ಎಂಬುವನಿಗೂ ಬಲವಾದ ಯುದ್ಧ ಸಂಭವಿಸಿತು.

ಹೇಸ್ಟಿಂಗ್ಸ್ ಕದನವು ಬ್ರಿಟನ್ನಿನ ಚರಿತ್ರೆಯಲ್ಲಿ ಅತಿ ಮುಖ್ಯವಾದುದು. ವಿಲಿಯಂನ ಸೈನ್ಯವು ಸುಸಜ್ಜಿತರಾದ ಅಶ್ವಾರೋಹಿಗಳಿಂದ ಮತ್ತು ಬಿಲ್ಲುಗಾರರಿಂದ ಕೂಡಿತ್ತು. ಆಂಗ್ಲೋಸಾಕ್ಸನ್ ಸೈನ್ಯದಲ್ಲಿ ಒಗ್ಗಟ್ಟು ಕಡಮೆಯಾಗಿತ್ತು. ಉತ್ತರದಲ್ಲಿ ಹೆರಾಲ್ಡ್ ಹಾರ್ಡ್ರೈಡ ಎಂಬ ನಾರ್ವೆಯ ರಾಜನು ಮುತ್ತಿಗೆ ಹಾಕಿದ್ದನು. ದಕ್ಷಿಣದಲ್ಲಿ ವಿಲಿಯಂ ಮುತ್ತಿಗೆ ಹಾಕಿದನು. ಹೆರಾಲ್ಡನಿಗೆ ಈ ಎರಡು ಮುತ್ತಿಗೆಗಳನ್ನೂ ಎದುರಿಸಬೇಕಾದ ಸಂದರ್ಭ ಒದಗಿತು. ಸ್ಟಾಂಫರ್ಡ್ ಬ್ರಿಡ್ಜ್ ಎಂಬಲ್ಲಿ ಹೆರಾಲ್ಡನು ಹಾರ್ಡ್ರೈಡನ ಸೈನ್ಯವನ್ನು ಸೋಲಿಸಿದನು. ಈ ಕದನದಲ್ಲಿ ಹಾರ್ಡ್ರೈಡನು ಸತ್ತನು. ಅಲ್ಲಿಂದ ಹೆರಾಲ್ಡನು ದಕ್ಷಿಣಕ್ಕೆ ಬರುವುದರೊಳಗೆ ವಿಲಿಯಂ ಇಂಗ್ಲೆಂಡಿನೊಳಗೆ ಯಾವ ಅಡ್ಡಿಯೂ ಇಲ್ಲದೆ ನುಗ್ಗಿದ್ದನು. ಹೇಸ್ಟಿಂಗ್ಸ್ ಕದನವು ಬಹಳ ಬಿರುಸಾಗಿ ನಡೆಯಿತು. ಹೆರಾಲ್ಡನಿಗೆ ಬಾಣದ ಪೆಟ್ಟುಬಿದ್ದು ಮೃತನಾದನು. ಆಂಗ್ಲೊಸಾಕ್ಸನ್ ಸೈನ್ಯವು ಹೆರಾಲ್ಡನ ಮರಣದಿಂದ ಹಿಮ್ಮೆಟ್ಟಿತು. ಅವನ ಅನೇಕ ಅನುಯಾಯಿಗಳು ಈ ಕದನದಲ್ಲಿ ಮಡಿದರು. ರಾಜ್ಯವು ವಿಲಿಯಂ ಕೈಸೇರಿತು. ಕ್ರಿ. ಶ. ೧೦೬೬ ರಲ್ಲಿ ವಿಲಿಯಂ ಲಂಡನ್ನಿನಲ್ಲಿ ಪಟ್ಟಾಭಿಷಕ್ತನಾದನು.

## ಬ್ರಿಟನ್ನಿನಲ್ಲಿ ನಾರ್ಮನ್ನರ ಪ್ರಭುತ್ವ

ಲಂಡರ್ಕ ಕೈಸೇರಿದ ಸ್ವಲ್ಪ ಕಾಲದಲ್ಲೆ ಅಲ್ಲಲ್ಲೆ ಸ್ವಲ್ಪಮಟ್ಟಿಗೆ ಅಶಾಂತಿ ಮತ್ತು ಪ್ರತಿಭಟನೆ ತಲೆದೋರಿದವು. ಆದರೆ ವಿಲಿಯಂ ಬಹಳ ಶಕ್ತನಾದ

ರಾಜನಾಗಿದ್ದುದರಿಂದ ಅವುಗಳನ್ನು ಸುಲಭವಾಗಿ ನಿವಾರಿಸಿದನು. ಈ ದಂಗೆಗಳಲ್ಲೆಲ್ಲಾ ಬಹಳ ಮುಖ್ಯವಾದುದು ಹೆರಿವರ್ಡ್ ದಿ ವೇಕ್ (Hereward the Wake) ಎಂಬುವನದು. ಆಂಗ್ಲೋಸಾಕ್ಸನ್ ಮುಖಂಡರು ಈ ದಂಗೆಗಳಲ್ಲಿ ಭಾಗವಹಿಸಿದುದರ ಪ್ರಯುಕ್ತ ಅವರು ತಮ್ಮ ಭೂಮಿಗಳನ್ನೆಲ್ಲಾ ಕಳೆದುಕೊಂಡರು. ಇವುಗಳನ್ನು ವಿಲಿಯಂ ತನ್ನ ಅನುಯಾಯಿಗಳಾದ ನಾರ್ಮನರಿಗೆ ಕೊಟ್ಟನು.

ಕ್ರಿ. ಶ. ೧೦೬೬ರಿಂದ ೧೦೮೭ ರವರೆಗೆ ವಿಲಿಯಂ ರಾಜ್ಯವಾಳಿದನು. ಇವನು ಚರಿತ್ರೆಯಲ್ಲಿ 'ವಿಲಿಯಂ ದಿ ಕಾನ್‌ಕರರ್' (William the Conqueror) ಎಂಬ ಹೆಸರಿನಿಂದ ಪ್ರಸಿದ್ಧನಾಗಿದ್ದಾನೆ. ಫ್ಯೂಡಲ್ ಪದ್ಧತಿಯನ್ನು (Eeudal System) ಇಂಗ್ಲೆಂಡಿನಲ್ಲಿ ಹೆಚ್ಚು ಬಳಕೆಗೆ ತಂದವನು ಇವನೇ. ಈ ಪದ್ಧತಿಯಿಂದ ಭೂಮಿಯೇ ಸಮಾಜದ ಅಂತಸ್ತಿನ ಅಡಿಗಲ್ಲಾಯಿತೆಂದರೆ ತಪ್ಪಾಗಲಾರದು. ರಾಜನೇ ·ಭೂಮಿಗೆಲ್ಲಾ ಒಡೆಯ. ಅವನು ಭೂಮಿಯನ್ನು ತನ್ನ ಅನುಯಾಯಿಗಳಿಗೂ ಮತ್ತು ಶ್ರೀಮಂತರಿಗೂ ಹಂಚಿಕೆ ಮಾಡಿಕೊಡುವುದು ಈ ಫ್ಯೂಡಲ್ ಪದ್ಧತಿಯ ಮುಖ್ಯ ಅಂಶ. ಹೀಗೆ ಇವರೇ ಮುಖ್ಯ ಹಿಡುವಳಿದಾರರಾದರು (Fenants–in–chief). ಇದಕ್ಕೆ ಪ್ರತಿಫಲವಾಗಿ ಇವರು ತಮ್ಮ ರಾಜನಿಗಾಗಿ ಯುದ್ಧಕಾಲದಲ್ಲಿ ಸೈನಿಕಬಲವನ್ನೊದಗಿಸಿ, ತಾವೂ ಯುದ್ಧದಲ್ಲಿ ಭಾಗವಹಿಸಬೇಕಾಗಿತ್ತು. ಈ ಮುಖ್ಯ ಹಿಡುವಳಿದಾರರಿಂದ ಭೂಮಿಯು ಮಿಕ್ಕ ಇತರರಿಗೆ ಹಂಚಲ್ಪಡುತ್ತಿತ್ತು. ಸಣ್ಣ ಹಿಡುವಳಿದಾರರು (Tenants) ಮುಖ್ಯ ಹಿಡುವಳಿದಾರರ ಆಶ್ರಯದಲ್ಲಿದ್ದರೂ ಸ್ವತಂತ್ರರಾಗಿದ್ದರು (Free). ಜಮೀನನ್ನು ಮುಖ್ಯ ಹಿಡುವಳಿದಾರನಿಂದ ಹೊಂದಿದಾಗ ಅವರು ಮಂಡಿಯೂರಿ ತಮ್ಮ ಕೈಗಳೆರಡನ್ನೂ ತಮ್ಮ ಒಡೆಯನಾದ ಮುಖ್ಯ ಹಿಡುವಳಿದಾರನ ಕೈಯೊಳಗಿಡಬೇಕಾಗಿತ್ತು. ಈ ಪದ್ಧತಿಗೆ 'ಹಾಮೇಜ್' (Homage) ಎಂದು ಹೆಸರು. ಇವರಿಗೆ 'ಮಸ್ನೆ ಟೆನೆಂಟ್ಸ್' (Mesne Tenants) ಎಂದು ಹೆಸರು. ಎಲ್ಲರಿಗಿಂತ ಕೀಳು ದರ್ಜೆಯವನಿಗೆ 'ವಿಲೀನ್ಸ್' (Velleins) ಎಂದು ಹೆಸರು. ಜನಸಂಖ್ಯೆಯಲ್ಲಿ ಇವರೇ ಹೆಚ್ಚು. ಇವರು ತಮ್ಮ ಹಳ್ಳಿಯ ಜಮೀನನ್ನು

ಬಿಟ್ಟುಹೋಗುವಂತಿರಲಿಲ್ಲ (bound to the Soil). ತನ್ನ ಒಡೆಯನಿಗೆ ಇವರು ಅನೇಕ ತರಹ ಸೇವೆಗಳನ್ನು ಸಲ್ಲಿಸಬೇಕಾಗಿತ್ತು. ಶ್ರೀಮಂತನ ಜಮೀನಿನಲ್ಲಿ ಒತ್ತಾಯಿಕ ಕೂಲಿ ಇವರ ಪಾಲಿನದಾಗಿತ್ತು. ವಾರದ ಕೂಲಿಯಲ್ಲದೆ ಸುಗ್ಗಿ ಮೊದಲಾದ ಕಾಲಗಳಲ್ಲೂ ಕೆಲಸಮಾಡಬೇಕಾಗಿತ್ತು. ಮೂವತ್ತು ಎಕರೆ ಹಳ್ಳಿಯ ಜಮೀನಲ್ಲದೆ (Virgate) ಇವರ ಸೇವೆಗೆ ಪ್ರತಿಫಲ ರಕ್ಷಣೆಯೊಂದೆ. ಹದಿನಾಲ್ಕನೆಯ ಶತಮಾನದಲ್ಲಿ ಜೀವಿಸಿದ್ದ ಲ್ಯಾಂಗ್ ಲ್ಯಾಂಡ್ (Lang land) ಎಂಬ ಕವಿಯು ಬರೆದ 'ಪಿಯರ್ಸ್ ದಿ ಪ್ಲೊಮನ್' (Piers the plowman) ಎಂಬ ಪದ್ಯದಲ್ಲಿ ಈ ಅಂಶವನ್ನು ಎತ್ತಿತೋರಿಸಿದ್ದಾನೆ.

ಈಗಿನ ವ್ಯವಸಾಯಿಕ ಕೂಲಿಗಾರರಷ್ಟು ಸ್ವಾತಂತ್ರ್ಯವೂ ವಿಲೀನ್ಸ್ ಎಂಬುವರಿಗೆ ಇರಲಿಲ್ಲ. ಅವರು ಅಪ್ಪಣೆಯಿಲ್ಲದೆ ತಮ್ಮ ಉದ್ಯೋಗವನ್ನಾಗಲೀ ತಮ್ಮ ಹಳ್ಳಿಯನ್ನಾಗಲೀ ಬಿಟ್ಟು ಹೋಗುವಂತಿರಲಿಲ್ಲ. ವಿವಾಹವಾಗಲೂ ಕೂಡ ಒಡೆಯನ ಅಪ್ಪಣೆ ಆವಶ್ಯಕವಾಗಿತ್ತು.

ಫ್ಯೂಡಲ್ ಪದ್ಧತಿಗೆ ಸೇರಿದಂತೆ ಅನೇಕ ತೆರಿಗೆಗಳು ಇದ್ದುವು. ಒಡೆಯನ ಹಿರಿಯ ಮಗಳ ಮದುವೆ ಅಥವಾ ಹಿರಿಯ ಮಗನು ತಂದೆಯ ಪಟ್ಟಕ್ಕೆ (Knight hood) ಏರುವ ಸಂದರ್ಭಗಳಲ್ಲಿ 'ಏಡ್ಸ್' (Aids) ಎಂಬ ತೆರಿಗೆಯನ್ನು ಕೊಡಬೇಕಾಗಿತ್ತು. ರಾಜನ ಮಗಳಿಗೆ ಲಗ್ನವಾದಾಗಂತೂ ಈ ಹೊರೆ ಸ್ವಲ್ಪ ಹೆಚ್ಚಾಗಿಯೇ ಆಗುತ್ತಿತ್ತು. ಮೊದಲನೇ ಹೆನ್ರಿಯು (Henry I) ತನ್ನ ಮಗಳಾದ ಮ್ಯಾಟಿಲ್ಡಳ (Matilda) ಮದುವೆಗಾಗಿ ತಲಾ ಒಂದು ನೂರ ಇಪ್ಪತ್ತು ಎಕರೆ ಜಮೀನಿನ ಮೇಲೆ (Hide) ಮೂರು ಷಿಲಿಂಗಿನಂತೆ ತೆಗೆದುಕೊಂಡನು. ತಂದೆಯು ಸತ್ತಾಗ ಮಗನ ವಶಕ್ಕೆ ಭೂಮಿಕಾಣಿ (Estate) ಬಂದಾಗ ಒಡೆಯನಿಗೆ ಕೊಡುತ್ತಿದ್ದ ತೆರಿಗೆಗೆ 'ರಿಲೀಫ್' (Relief) ಎಂದು ಹೆಸರು. ಸುಮಾರು ಕ್ರಿ. ಶ. ೧೧೫೦ ರಿಂದಾಚೆಗೆ ಸಾಮಾನ್ಯ ಹಿಡುವಳಿದಾರನು (Tenant) ಸೈನಿಕ ಸೇವೆಯಿಂದ (Military Service) ತೆರಿಗೆಯನ್ನು ಕೊಡುವುದರ ಮೂಲಕ ತಪ್ಪಿಸಿಕೊಳ್ಳುವ ಪದ್ಧತಿ ಪ್ರಾರಂಭವಾಯಿತು. ಈ ತೆರಿಗೆಗೆ 'ಸ್ಕ್ಯೂಟೇಜ್' (Scutage) ಎಂದು ಹೆಸರು.

ಈ ಫ್ಯೂಡಲ್ ಕಾಲದ ವಿಚಾರವನ್ನು ತಿಳಿಯಲು ವಿಲಿಯಂ ಕಾಲದಲ್ಲಿ ಬರೆದ ' ಡ್ಯೂಮ್ಸ್‌ಡೇ ಬುಕ್ ' (Domes Day Book) ಎಂಬುದು ನಮಗೆ ತುಂಬಾ ಸಹಾಯಕವಾಗಿದೆ. ಜಮೀನು, ತೆರಿಗೆ, ಆದಾಯ ಮತ್ತು ಕ್ರಿ. ಶ. ೧೦೮೫ ರಲ್ಲಿ ಇಂಗ್ಲೆಂಡಿನಲ್ಲಿದ್ದ ಶ್ರೀಮಂತರ ಮನೆಗಳು (Castle) ಇವುಗಳ ಲೆಕ್ಕವೆಲ್ಲವನ್ನೂ ಅದರಲ್ಲಿ ನಮೂದಿಸಿದೆ. ರಾಜನಿಂದ ಸ್ವಂತವಾಗಿ ಜಮೀನುಗಳನ್ನು ಹೊಂದಿದ ಶ್ರೀಮಂತರ ಸಂಖ್ಯೆ (Tenants-in-chief) ೧೪೦೦ ಎಂದು ಕಾಣಿಸಿದೆ. ಈ ಶ್ರೀಮಂತರಿಂದ ಜಮೀನುಗಳನ್ನು ತೆಗೆದುಕೊಂಡ ಸಾಮಾನ್ಯ ಹಿಡುವಳಿದಾರರ ಸಂಖ್ಯೆ (Sub-Tenants) ೮೦೦೦.

ವಿಲಿಯಂ ತನ್ನ ಅನುಯಾಯಿಗಳಿಗೆ ತುಂಬಾ ಭೂಮಿ ಕಾಣಿಗಳನ್ನು ಕೊಟ್ಟನು. ಆದರೆ ಇವೆಲ್ಲವೂ ಒಂದೇ ಕಡೆ ಇರದಂತೆ ನೋಡಿಕೊಂಡನು. ತನ್ನ ಬಂಧುವಾದ ರಾಬರ್ಟ್ (Robert) ಎಂಬುವನಿಗೆ ೭೯೦ ಎಸ್ಟೇಟುಗಳನ್ನು ಕೊಟ್ಟನು. ಆದರೆ ಅವು ಬೇರೆಬೇರೆ ಇಪ್ಪತ್ತು ಪ್ರದೇಶಗಳಲ್ಲಿದ್ದುವು. ಎರಡನೆಯದಾಗಿ ವಿಲಿಯಂ ಎಲ್ಲಾ ಶ್ರೀಮಂತರನ್ನೂ ಮತ್ತು ಇತರ ಜಮೀನುದಾರರುಗಳನ್ನೂ ಸಾಲಿಸ್‌ಬರಿ (Salisbury) ಎಂಬಲ್ಲಿಗೆ ಬರಮಾಡಿಕೊಂಡು, ಎಲ್ಲರೂ ಸ್ವಾಮಿಭಕ್ತಿಯುಳ್ಳವರಾಗಿರಬೇಕೆಂದು ಕ್ರಿ. ಶ. ೧೦೮೬ ರಲ್ಲಿ ಪ್ರತಿಜ್ಞೆಮಾಡಿಸಿಕೊಂಡನು. ಇದಕ್ಕೆ ' ಸಾಲಿಸ್ ಬರಿ ವಚನ ' (Salisbury Oath) ಎಂದು ಹೆಸರು.

ವಿಲಿಯಂ ಮತೀಯ ವಿಚಾರಗಳಲ್ಲಿ ಲಾನ್ ಫ್ರಾಂಕ್ (Lan Franc) ಎಂಬ ಇಟಲಿಯ ವಿದ್ವಾಂಸನ ಮುಖಂಡತ್ವದಲ್ಲಿ ಅನೇಕ ಸುಧಾರಣೆಗಳನ್ನು ಜಾರಿಗೆ ತಂದನು. ಇವರ ಹೊಂದಾಣಿಕೆಯು ನಮಗೆ ಎಡ್ಗರ್ ಮತ್ತು ಡನ್‌ಸ್ಟನ್‌ರ ನೆನಪನ್ನು ತರುತ್ತದೆ. ಇದೇ ಕಾಲದಲ್ಲಿ ಯೂರೋಪಿನಲ್ಲಿ ಪ್ರಖ್ಯಾತನಾದ ಪೋಪ್ (ಕ್ರೈಸ್ತ ಮಹಾಗುರು) ಏಳನೇ ಗ್ರಿಗರಿ (Gregory VII) ಎಂಬುವನು ಅನೇಕ ಸುಧಾರಣೆಗಳನ್ನು ಮಾಡಿದ್ದನು. ಇವರು ಅದೇ ಮೇಲ್ಪಂಕ್ತಿಯನ್ನು ಅನುಸರಿಸಿದರು. ಪಾದ್ರಿಗಳು ಖಚಿತವಾಗಿ ಬ್ರಹ್ಮಚಾರಿಗಳಾಗಿರಬೇಕೆಂಬ ನಿಬಂಧನೆಯಾಯಿತು. ಮತೀಯ ನ್ಯಾಯಾಲಯಗಳೇ (Church

Courts) ವಿವಾಹ, ಉಯಿಲು (Will) ಮತ್ತು ಪಾದ್ರಿಗಳ ನಡತೆ ಮೊದಲಾದ ವಿಷಯಗಳಲ್ಲಿ ತೀರ್ಪು ಕೊಡುವ ಹಕ್ಕನ್ನು ಪಡೆದವು. ಇದರಿಂದಲೇ ಎರಡನೇ ಹೆನ್ರಿಯ (Henry II) ಕಾಲದಲ್ಲಿ ರಾಜನ ನ್ಯಾಯಾಲಯಗಳಿಗೂ ಮತೀಯ ನ್ಯಾಯಾಲಯಗಳಿಗೂ ದೊಡ್ಡ ತಿಕ್ಕಾಟವು ಪ್ರಾರಂಭವಾಗಲು ಕಾರಣವಾಯಿತು.

ಇಂಗ್ಲೆಂಡಿನ ಚರಿತ್ರೆಯಲ್ಲಿ ವಿಲಿಯಂನ ಸ್ಥಾನ ಮಹತ್ತರವಾದುದು. ಅವನು ಇಂಗ್ಲೆಂಡಿನಲ್ಲಿ ಒಳ್ಳೆಯ ಆಡಳಿತವನ್ನು ಮತ್ತು ರಕ್ಷಣೆಯನ್ನು ಏರ್ಪಡಿಸಿದನು. ಅವನ ರಾಜ್ಯದಲ್ಲಿ ಭೀತಿಯಿಲ್ಲದೆ ಜೇಬಿನ ತುಂಬಾ ಹಣವಿದ್ದ ಮನುಷ್ಯನೂ ಕೂಡ ಒಂದೆಡೆಯಿಂದ ಮತ್ತೊಂದೆಡೆಗೆ ಸಂಚರಿಸಬಹುದಾಗಿತ್ತೆಂದು ನಮಗೆ 'ಆಂಗ್ಲೋಸಾಕ್ಸನ್ ಕ್ರಾನಿಕಲ್' ಎಂಬುದರ ಗ್ರಂಥಕರ್ತನಾದ ಬೀಡ್ (Bede) ಹೇಳಿದ್ದಾನೆ. ಇವನು ಬಹಳ ಬಲಶಾಲಿಯಾದ ರಾಜನಾಗಿದ್ದುದರಿಂದ ಇಂಗ್ಲೆಂಡಿನಲ್ಲಿ ಫ್ಯೂಡಲ್ ಪದ್ಧತಿಯ ಪರಿಣಾಮವಾಗಿ ಒದಗಿದ ಶ್ರೀಮಂತರ (Barons) ಪ್ರಾಬಲ್ಯವನ್ನು ಹತೋಟಿಯಲ್ಲಿಟ್ಟಿದ್ದನು. ಕ್ರಿ. ಶ. ೧೦೮೭ ರಲ್ಲಿ ವಿಲಿಯಂ ಕಾಲವಾದನು.

ಇವನ ಮಗನಾದ ಎರಡನೆ ವಿಲಿಯಂ (ವಿಲಿಯಂ ರೂಫಸ್) ಕ್ರಿ. ಶ. ೧೧೦೦ ರ ವರೆಗೆ ಆಳಿದನು. ಇವನು ಶೂರನಾದರೂ ಆಡಳಿತವನ್ನರಿಯದವನು. ಅವನ ಮಂತ್ರಿಯಾದ ರ್‍ಯಾನ್ ಉಲ್ಫ್ ಫ್ಲೆಂಬರ್ಡ್ (Ran wolf Flembard) ಎಂಬುವನು ತೆರಿಗೆ ಮುಂತಾದುವನ್ನು ಹೆಚ್ಚಿಸಿ ದಬ್ಬಾಳಿಕೆಯನ್ನು ನಡೆಸಿದನು.

ಮೊದಲನೆ ಹೆನ್ರಿಯು (ಕ್ರಿ. ಶ. ೧೧೦೦—೧೧೩೫) ಎರಡನೆ ವಿಲಿಯಂನ ಕಿರಿಯ ಸಹೋದರ. ಇವನು ಆಡಳಿತ ಕ್ರಮವನ್ನು ಚೆನ್ನಾಗಿ ತಿಳಿದಿದ್ದನು. ಪಟ್ಟಕ್ಕೆ ಬಂದ ಸ್ವಲ್ಪ ಕಾಲದಲ್ಲಿ ರ್‍ಯಾನ್ ಉಲ್ಫ್ ಫ್ಲೆಂಬರ್ಡ್‌ನನ್ನು ಓಡಿಸಿ, ಒಳ್ಳೆಯ ಸರ್ಕಾರವನ್ನು ಸ್ಥಾಪಿಸಿದನು. ಇವನು ಹೊರಡಿಸಿದ ರಾಜಶಾಸನವು (Charter) ಬಹಳ ಮುಖ್ಯವಾದುದು. ಸಾಕ್ಸನ್ ಮನೆತನಕ್ಕೆ ಸೇರಿದ ಮ್ಯಾಟಿಲ್ಡಳ ವಿವಾಹದಿಂದ ನಾರ್ಮನರಿಗೂ ಮತ್ತು ಸಾಕ್ಸನರಿಗೂ ಇದ್ದ ಮನಸ್ತಾಪವು ಕಡಿಮೆಯಾಯಿತು. ಇವನ

ಕಾಲದಲ್ಲಿ 'ಕ್ಯೂರಿಯಾ ರಿಜಿಸ್' (Curia Regis) ಎಂಬ ರಾಜನ ಆಡಳಿತ ಸಭೆಯು ಅಭಿವೃದ್ಧಿ ಹೊಂದಿತು. ಆಂಗ್ಲೋಸಾಕ್ಸನರ 'ವಿಟಾನ್' (Witan) ಎಂಬ ಸಭೆಯು ನಾರ್ಮನರ ಕಾಲದಲ್ಲಿ 'ಕ್ಯೂರಿಯಾರಿಜಿಸ್' ಎಂಬುದಾಗಿ ಪರಿವರ್ತನೆಯಾಯಿತು. ಇದರಲ್ಲಿ ರಾಜನ ಪ್ರತಿನಿಧಿ (Vice gerent), ಕೋಶಾಧ್ಯಕ್ಷ (Treasurer), ಕಾರ್ಯದರ್ಶಿ (Chancellor), ಅರಮನೆ ಬಕ್ಷಿ (Chamberlain), ಬಲಾಧ್ಯಕ್ಷ (Marshal) ಮೊದಲಾದವರೆಲ್ಲಾ ಇದ್ದರು. ಹೆನ್ರಿಯು ಕ್ಯೂರಿಯಾರಿಜಿಸ್ಸನ್ನು ಇನ್ನೂ ವಿಸ್ತರಗೊಳಿಸಿದನು. ರಾಜನ ನ್ಯಾಯಾಲಯಕ್ಕೆ ಸೇರಿದ (King's Court) ನ್ಯಾಯಾಧಿಪತಿಗಳು ರಾಜನಿಗೆ ಸಂಬಂಧಪಟ್ಟ ಹಣಕಾಸಿನ ವ್ಯವಹಾರಗಳೇ ಮೊದಲಾದ ವಿಷಯಗಳನ್ನು ನಿಷ್ಕರ್ಷಿಸಲು ಆಗಾಗ್ಗೆ ಊರುಗಳ ನ್ಯಾಯಾಲಯಕ್ಕೆ ಭೇಟಿಕೊಡುತ್ತಿದ್ದರು. ಹೆನ್ರಿಯು ಕ್ಯೂರಿಯಾ ರಿಜಿಸ್‌ನಲ್ಲಿ ಇವರನ್ನೂ ಸೇರಿಸಿದನು. ಹೀಗೆ ಹೆನ್ರಿಯು ಸೈನಿಕವೃತ್ತಿಯಲ್ಲೇ ಪ್ರಬಲರಾಗಿದ್ದ (Military barons) ಶ್ರೀಮಂತರ ಪ್ರಾಮುಖ್ಯತೆಯನ್ನು ನೀಗಿ ಆಡಳಿತದಲ್ಲಿ ನುರಿತ ಶ್ರೀಮಂತರ (Administrative barons) ಗುಂಪೊಂದನ್ನು ನಿರ್ಮಿಸಿದನು.

ಹೆನ್ರಿಯ ಕಾಲದಲ್ಲಿ ಸರ್ಕಾರಕ್ಕೂ ಮತ್ತು ಕ್ರಿಶ್ಚಿಯನ್ ಚರ್ಚಿಗೂ ಬಿಕ್ಕಟ್ಟು ಪ್ರಾರಂಭವಾಯಿತು. ಇವನ ಸಹೋದರನಾದ ವಿಲಿಯಮ್ ರೂಫಸನ ಕಾಲದಲ್ಲಿ ಅನ್‌ಸ್ಲೇಮ್ (Anselm) ಎಂಬ ಪಾದ್ರಿಯು ಕ್ಯಾಂಟರ್‌ಬರಿಯ ಮಹಾ ಮಠಾಧಿಪತಿಯನ್ನಾಗಿ ನಿಯಮಿಸಲ್ಪಟ್ಟಿದ್ದನು (Archibishop of Canterbury). ಮಠಾಧಿಪತಿಯನ್ನು ಕ್ರಿಶ್ಚಿಯನ್ ಮತದ ಗುರುವಾದ ಪೋಪ್ ನಿಯಮಿಸಬೇಕೇ ಅಥವಾ ರಾಜನು ನಿಯಮಿಸಬೇಕೇ ಎಂಬ ವಿಚಾರದಲ್ಲಿ ಸರ್ಕಾರಕ್ಕೂ ಮತ್ತು ಚರ್ಚಿಗೂ ವಾದ ವಿವಾದಗಳು ನಡೆಯುತ್ತಿದ್ದುವು. ಇದು ಬಗೆಹರಿಯದೆ ಆನ್‌ಸ್ಲೇಮ್ ರೋಮಿಗೆ ಓಡಿಹೋಗಿದ್ದನು. ಒಂದನೇ ಹೆನ್ರಿಯ ಕಾಲದಲ್ಲಿ ಅವನು ಪುನಃ ಇಂಗ್ಲೆಂಡಿಗೆ ಹಿಂತಿರುಗಿ ಬಂದನು. ಕ್ರಿ. ಶ. ೧೧೦೬ ರಲ್ಲಿ ಬೆಕ್ (Bec) ಎಂಬಲ್ಲಿ ಹೆನ್ರಿ ಮತ್ತು ಅನ್‌ಸ್ಲೇಮ್ ರಾಜಿಗೆ ಬಂದರು. ಮಠಾಧಿಪತಿಗಳನ್ನು (Bishops) ನಿಯಮಿಸುವುದರಲ್ಲಿ

## ನಾರ್ಮನ್ ರಾಜರು.

ವಿಲಿಯಂ I (೧೦೬೬—೧೦೮೭ ಕ್ರಿ. ಶ.)

- ರಾಬರ್ಟ್ (ನಾರ್ಮಂಡಿ)
- ವಿಲಿಯಂ (ರೂಫಸ್) II (ಕ್ರಿ. ಶ. ೧೦೮೭–೧೧೦೦)
- ಹೆನ್ರಿ I (ಕ್ರಿ. ಶ. ೧೧೦೦-೧೧೩೫)
    - ವಿಲಿಯಂ
    - ಮ್ಯಾಟಿಲ್ಡ =1 ಐದನೇ ಹೆನ್ರಿ (ಚಕ್ರವರ್ತಿ) =2 ಜೊಫ್ರೆ ಆಂಜು
        - ಎರಡನೆ ಹೆನ್ರಿ ಆಂಜು [1152—1189) ಕ್ರಿ. ಶ.
- ಅಡೆಲ
    - ಸ್ಟೀಫನ್ (೧೧೩೫–೧೧೫೪)

ಪ್ರೋಪ್ ಗುರುವಿನದೇ ಹಕ್ಕೆಂದೂ ಮತ್ತು ಮಠಾಧಿಪತಿಗಳು ತಮ್ಮ ಜಮೀನುಗಳಿಗಾಗಿ ರಾಜನಿಗೆ ಅಧೀನರಾಗಿರಬೇಕೆಂದೂ ತೀರ್ಮಾನ ನಾಯಿತು.

'ನ್ಯಾಯಸಿಂಹ' (Lion of Justice) ನೆಂದು ಹೆಸರುಗೊಂಡ ಒಂದನೇ ಹೆನ್ರಿಯು ಕ್ರಿ. ಶ. ೧೧೩೫ ರಲ್ಲಿ ಕಾಲವಾದನು. ಅವನ ನಂತರ ಹತ್ತೊಂಭತ್ತು ವರ್ಷಗಳ ಕಾಲ ಅನಾಯಕತೆಯು ತಲೆದೋರಿತು. ಒಂದನೇ ವಿಲಿಯಂ ಮಗಳಾದ ಅಡೆಲಳ (Adela) ಮಗನಾದ ಸ್ಟೀಫನ್ (Stephen) ಎಂಬುವನು ಪಟ್ಟಕ್ಕೆ ಬಂದನು. ಇವನು ಬಹಳ ದುರ್ಬಲನಾಗಿದ್ದುದರಿಂದ ಶ್ರೀಮಂತರ ಪ್ರಾಬಲ್ಯವು ಪುನಃ ತಲೆದೋರಿತು. ಅವರಿಂದ ದಬ್ಬಾಳಿಕೆಯು ಹೆಚ್ಚಿ ಜನಗಳಿಗೆ ತುಂಬಾ ಹಿಂಸೆಯಾಯಿತು. ಶ್ರೀಮಂತರ ಹಾವಳಿಯಿಂದ ಇಂಗ್ಲೆಂಡನ್ನು ರಕ್ಷಿಸಿದವನು ಎರಡನೇ ಹೆನ್ರಿ.

## ಎರಡನೆ ಹೆನ್ರಿ (೧೧೫೪–೧೧೮೯)

೧೧೫೪ ರಲ್ಲಿ ಇವನು ಪಟ್ಟಕ್ಕೆ ಬಂದನು. ಇವನಿಗೆ ಫ್ರಾನ್ಸಿನಲ್ಲಿದ್ದ ನಾರ್ಮಂಡಿ ಮತ್ತು ಆಂಜು ಇವುಗಳಲ್ಲದೆ ಅಕ್ವೆಟೈನ್ ಎಂಬ ಪ್ರದೇಶವೂ ಮದುವೆಯ ಬಳುವಳಿಯಾಗಿ ಸೇರಿತ್ತು. ಎರಡನೇ ಹೆನ್ರಿಯು ದೇಶದಲ್ಲಿ ಶಾಂತಿಯನ್ನೂ ಮತ್ತು ಭದ್ರತೆಯನ್ನೂ ಸ್ಥಾಪಿಸಿದನು. ಇವನ ಕಾಲದಲ್ಲಿ ಸರ್ಕಾರಕ್ಕೂ ಮತ್ತು ಚರ್ಚಿಗೂ ಜಗಳ ಹೆಚ್ಚಾಯಿತು. ಸರ್ಕಾರದ ನ್ಯಾಯಾಲಯಗಳಿಗೂ (Courts) ಮತ್ತು ಮತೀಯ ನ್ಯಾಯಾಲಯಗಳಿಗೂ (Church Courts) ನ್ಯಾಯತೀರ್ಪಿನ ವಿಚಾರಗಳಲ್ಲಿ ಬಹಳ ಬಿಕ್ಕಟ್ಟು ಉಂಟಾಯಿತು. ಹೆನ್ರಿಯು ಪ್ರತಿಯೊಬ್ಬರಿಗೂ ಒಂದೇ ತರಹ ನ್ಯಾಯ ಸಿಕ್ಕುವಂತೆ ಮಾಡಲು ಇಷ್ಟವುಳ್ಳವನಾಗಿದ್ದನು. ಮತೀಯ ನ್ಯಾಯಾಲಯಗಳು ಬೇರೆ ಇರಲು ಇವನಿಗೆ ಇಷ್ಟವಿರಲಿಲ್ಲ. ಇದರಿಂದ ಮೊದಲನೆಯದಾಗಿ ರಾಜನ ಅಧಿಕಾರಕ್ಕೆ ಧಕ್ಕೆ ತಗುಲಿತು. ಎರಡನೆಯದಾಗಿ ಪಾದ್ರಿಗಳು ಎಂತಹ ತಪ್ಪುಗಳನ್ನು (Crime) ಮಾಡಿದರೂ ಮತೀಯ ನ್ಯಾಯಾಲಯಗಳಲ್ಲಿ ಅವರಿಗೆ ಲಘು ಶಿಕ್ಷೆಗಳು ವಿಧಿಸಲ್ಪಡು

ತ್ತಿದ್ದುವು. ಕೊಲೆಯನ್ನು ಮಾಡಿದ ಪಾದ್ರಿಯೂ ಕೂಡಾ ಸುಲಭವಾಗಿ ಶಿಕ್ಷೆಯನ್ನು ತಪ್ಪಿಸಿಕೊಳ್ಳಬಹುದಾಗಿತ್ತು. ಅಂತಹವನಿಗೆ ದೇಹದಂಡನೆ, ಅವನನ್ನು ಮತೀಯಸ್ಥಾನದಿಂದ ಉಚ್ಚಾಟನೆ ಮಾಡುವುದು ಇವೇ ಮೊದಲಾದ ಶಿಕ್ಷೆಗಳು ಸಮರ್ಪಕವಾಗಿರಲಿಲ್ಲ. ಹೀಗೆ ತಪ್ಪಿತಸ್ಥರಾದ ಪಾದ್ರಿಗಳು ಮತ್ತು ಓದು ಬರಹ ಕಲಿತು ಪಾದ್ರಿಗಳೊಂದಿಗೆ ಸಂಪರ್ಕವನ್ನಿಟ್ಟುಕೊಂಡಿದ್ದವರು ಮರಣದಂಡನೆಯ ಶಿಕ್ಷೆಯಿಂದ ಪಾರಾಗುತ್ತಿದ್ದರು.

ಹೆನ್ರಿಯ ಆಡಳಿತದಲ್ಲಿ ತುಂಬಾ ಸಹಾಯಕನಾಗಿದ್ದವನು ಥಾಮಸ್ ಬೆಕೆಟ್(Thomas Becket)ಎಂಬುವನು (ಕ್ರಿ.ಶ. ೧೧೧೮-೧೧೭೦). ಅವನು ಲಂಡನ್ನಿನ ವ್ಯಾಪಾರಿಯೊಬ್ಬನ ಮಗನು. ವ್ಯಾಪಾರ, ವ್ಯವಹಾರ ಮತ್ತು ಹಣಕಾಸು ಇವುಗಳಲ್ಲಿ ಅವನಿಗೆ ತುಂಬಾ ಪರಿಶ್ರಮವಿತ್ತು. ದಕ್ಷನಾದ ಇವನನ್ನು ಹೆನ್ರಿಯು ೧೧೫೫ ರಲ್ಲಿ ಚಾನ್ಸೆಲರ್ (Chancellor) ಪದವಿಗೆ ಏರಿಸಿದನು. ಇವರಿಬ್ಬರೂ ತುಂಬಾ ಸ್ನೇಹಿತರಾದರು. ಬೆಕೆಟ್ ತುಂಬಾ ಐಶ್ವರ್ಯವಂತನಾಗಿ ಸುಖಮಯವಾದ ಜೀವನವನ್ನು ಸಾಗಿಸುತ್ತಿದ್ದನು. ಅವನು ಆಗಾಗ್ಗೆ ಏರ್ಪಡಿಸುತ್ತಿದ್ದ ಭೋಜನಕೂಟದ ವೆಚ್ಚವು ಆಗಿನ ಕಾಲದ ಅನೇಕ ಶ್ರೀಮಂತರಿಗೆ ಆಶ್ಚರ್ಯವನ್ನುಂಟುಮಾಡುತ್ತಿತ್ತು. ಕ್ರಿ. ಶ. ೧೧೬೨ ರಲ್ಲಿ ಇವನು ಕ್ಯಾಂಟರ್‌ಬರಿಯ ಮಹಾಮಠಾಧಿಪತಿಯಾದನು. ಅಲ್ಲಿಂದ ಅವನ ಜೀವನವೇ ಬದಲಾಯಿಸಿತು. ಅವನಿಗೆ ಮತೀಯ ಜೀವನದಲ್ಲಿ ತುಂಬಾ ಆಸಕ್ತಿ ಹುಟ್ಟಿ ತನ್ನ ಹಿಂದಿನ ಭೋಗಮಯ ಜೀವನವನ್ನು ತ್ಯಜಿಸಿದನು. ಹೆನ್ರಿಯು ಸರ್ಕಾರದ ಮತ್ತು ರಾಜನ ಪ್ರತಿಷ್ಠೆಯನ್ನು ಹೇಗೆ ಪ್ರತಿಪಾದಿಸುತ್ತಿದ್ದನೋ ಹಾಗೆ ಬೆಕೆಟ್ ಚರ್ಚಿನ ಪರಾಕಾಷ್ಠೆಯನ್ನು ಎತ್ತಿ ಹಿಡಿಯಲು ಉದ್ಯುಕ್ತನಾದನು. ಬೆಕೆಟ್ಟನು ಮಹಾಮಠಾಧಿಪತಿಯಾದ ಮೂರನೆಯ ವರ್ಷವೇ ಕೊಲೆಪಾತಕನಾದ ಪಾದ್ರಿಯೊಬ್ಬನನ್ನು ಲಘು ಶಿಕ್ಷೆಗೆ ಒಳಪಡಿಸಲಾಯಿತು. ಹೆನ್ರಿಗೆ ಇದನ್ನು ಸಹಿಸಲಾಗಲಿಲ್ಲ. ಅವನು ಕ್ರಿ. ಶ. ೧೧೬೪ ರಲ್ಲಿ "ಕ್ಲಾರೆಂಡನ್ನಿನ ಕಾನೂನನ್ನು" (Constitution of Clarendon) ಹೊರಡಿಸಿದನು. ಇದರಿಂದ ಮಹಾ ಮಠಾಧಿಪತಿಯ ನ್ಯಾಯಾಲಯದಲ್ಲಿ ನಡೆದ ತೀರ್ಪುಗಳು ರಾಜನ ಅಪ್ಪಣೆ ಇಲ್ಲದೆ ರೋಮಿಗೆ

(Rome) ತಿಳಿಸಕೂಡದೆಂದೂ ಮತ್ತು ತಪ್ಪಿತಸ್ಥರಾದ ಪಾದ್ರಿಗಳನ್ನು ಮತೀಯ ನ್ಯಾಯಾಲಯವು ಲಘು ಶಿಕ್ಷೆಗೆ ಒಳಪಡಿಸಿದನಂತರ ರಾಜನ ನ್ಯಾಯಾಲಯಕ್ಕೆ ಸರಿಯಾದ ಶಿಕ್ಷೆಗೆ ಒಳಪಡಿಸಬೇಕೆಂದೂ ಗೊತ್ತಾಯಿತು. ಆದರೆ ಬೆಕೆಟ್ ಒಪ್ಪಲಿಲ್ಲ. ಇದರಿಂದ ಶಿಕ್ಷೆಯು ಎರಡು ಸಲ ಆಗುವುದೆಂದು ಅವನು ವಾದಿಸಿದನು. ಕುಪಿತನಾದ ಹೆನ್ರಿಯು ಅವನನ್ನು ಮತ್ತೊಮ್ಮೆ ನಾರ್ತ್‌ಆಂಪ್ಟನ್ (Northampton) ಎಂಬಲ್ಲಿ ಸಮಾಲೋಚನೆಗೆ ಬರಮಾಡಿಕೊಂಡನು. ಅದೂ ಸಹ ಫಲಕಾರಿಯಾಗಲಿಲ್ಲ. ಸರ್ಕಾರಕ್ಕೂ ಚರ್ಚಿಗೂ ಇದ್ದ ಬಿಕ್ಕಟ್ಟು ಮುಗಿಲು ಮುಟ್ಟಿತು. ಬೆಕೆಟ್ ಇಂಗ್ಲೆಂಡನ್ನು ಬಿಟ್ಟು ಓಡಿಹೋದನು. ಹೆನ್ರಿಯು ಕ್ಯಾಂಟರ್‌ಬರಿ ಮಠದ ಆದಾಯವನ್ನೆಲ್ಲಾ ತಾನೇ ತೆಗೆದುಕೊಂಡನು. ಹೆನ್ರಿ ಮತ್ತು ಅವನ ಮಂತ್ರಿಗಳಿಗೆ ಬೆಕೆಟ್ ಬಹಿಷ್ಕಾರ ಹಾಕಿದನು. ಆರು ವರ್ಷಗಳ ನಂತರ ಇವರ ಜಗಳವು ಸ್ವಲ್ಪಮಟ್ಟಿಗೆ ಶಾಂತವಾಗಿ ಬೆಕೆಟ್ ಇಂಗ್ಲೆಂಡಿಗೆ ಮರಳಿದನು. ಆದರೆ ಹೆನ್ರಿಯು ತಾನು ಫ್ರಾನ್ಸಿಗೆ ಹೋಗುವಾಗ ತನ್ನ ಮಗನ ಕಿರೀಟಧಾರಣೋತ್ಸವವನ್ನು ಯಾರ್ಕ್ (York) ಮಹಾಮಠಾಧಿಪತಿಯು ತನ್ನ ಗೈರುಹಾಜರಿಯಲ್ಲಿ ನೆರವೇರಿಸದನೆಂದು ಬೆಕೆಟ್ ಪುನಃ ಜಗಳವನ್ನು ಆರಂಭಿಸಿದನು. ಅಷ್ಟೆ ಅಲ್ಲದೆ ಅದರಲ್ಲಿ ಭಾಗವಹಿಸಿದ್ದ ಮಠಾಧಿಪತಿಗಳಿಂದ ತಮ್ಮ ತಪ್ಪನ್ನು ಒಪ್ಪಿಕೊಳ್ಳುವಂತೆ ಮಾಡಿದನು. ಇದನ್ನು ಕೇಳಿ ಫ್ರಾನ್ಸಿನಲ್ಲಿದ್ದ ಹೆನ್ರಿಗೆ ಬಹಳ ಕೋಪ ಬಂದಿತು. "ನನ್ನನ್ನು ಪುಂಡನಾದ ಈ ಪಾದ್ರಿಯಿಂದ ರಕ್ಷಿಸುವವರು ಯಾರೂ ಇಲ್ಲವೇ" ಎಂದು ಕೂಗಿಕೊಂಡನು. ಇದನ್ನು ಕೇಳಿದ ನಾಲ್ಕು ಜನ ರಾಜನ ಅನುಯಾಯಿಗಳು ಫ್ರಾನ್ಸಿನಿಂದ ಹೊರಟು ಕ್ಯಾಂಟರ್‌ಬರಿ ಮಠಕ್ಕೆ ನುಗ್ಗಿ ಅವನನ್ನು ಕೊಂದರು. ಆದರೆ ಇದರಿಂದ ಹೆನ್ರಿಗೆ ಪ್ರಯೋಜನಕ್ಕಿಂತ ಹೆಚ್ಚಾಗಿ ಅಪಾಯವೇ ಉಂಟಾಯಿತು. ಬದುಕಿದ ಬೆಕೆಟ್‌ಗಿಂತ ಸತ್ತ ಬೆಕೆಟ್ಟಿನ ಪ್ರಭಾವವೇ ತುಂಬಾ ಪರಿಣಾಮಕಾರಿಯಾಯಿತು. ಅನೇಕರು ಅವನನ್ನು ದೈವತ್ವಕ್ಕೆ ಏರಿಸಿದರು. ಹೆನ್ರಿಗೆ ಅವಮಾನವಾಯಿತು. ಆದರೆ ಈ ವಾದ ವಿವಾದಗಳಲ್ಲಿ ಹೆನ್ರಿಯದು ಸರಿ ಮತ್ತು ಬೆಕೆಟ್ಟಿನದು ತಪ್ಪು ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ.

ಎರಡನೆ ಹೆನ್ರಿಯು ನ್ಯಾಯಾಡಳಿತದಲ್ಲಿ ಅನೇಕ ಸುಧಾರಣೆಗಳನ್ನು ಮಾಡಿದನು. ಇವನು 'ಜ್ಯೂರಿ' ಪದ್ಧತಿಯನ್ನು ಆಚರಣೆಗೆ ತಂದನು. ಈಗಿನ ಕಾಲದ ಜ್ಯೂರಿ ಪದ್ಧತಿಗೂ ಮತ್ತು ಹೆನ್ರಿಯ ಕಾಲದ ಜ್ಯೂರಿ ಪದ್ಧತಿಗೂ ತುಂಬಾ ವ್ಯತ್ಯಾಸವಿದೆ. ಜ್ಯೂರಿ ಪದ್ಧತಿಯು ಆಧುನಿಕ ಕಾಲದಲ್ಲಿ ನ್ಯಾಯ ತೀರ್ಪುಗಳಿಗೆ ಮಾತ್ರ ಅನ್ವಯಿಸುತ್ತದೆ. ಆದರೆ, ಹೆನ್ರಿಯು ಈ ಪದ್ಧತಿಯನ್ನು ಆಡಳಿತಕ್ಕೂ ಮತ್ತು ಆರ್ಥಿಕ ವ್ಯವಹಾರಕ್ಕೂ ಉಪಯೋಗಿಸಿಕೊಂಡನು. ಕ್ರಿ. ಶ. ೧೧೬೬ ರಲ್ಲಿ ಜಾರಿಗೆ ಬಂದ ಕ್ಲಾರೆಂಡನ್ ರಾಜಾಜ್ಞೆಯಿಂದ (Assize of Clarendon) ಪ್ರತಿ ಹಂಡ್ರೆಡ್‌ಗೂ (ಹಂಡ್ರೆಡ್ ಅಂದರೆ ಹಳ್ಳಿ ಮತ್ತು ಪಟ್ಟಣ ಇವುಗಳಿಗೆ ಮಧ್ಯಸ್ಥವಾದುದು) ಹನ್ನೆರಡು ನ್ಯಾಯಬದ್ಧರಾದ ಜನರೂ ಮತ್ತು ಪ್ರತಿಯೊಂದು ಹಳ್ಳಿಗೂ ನಾಲ್ಕು ನ್ಯಾಯಬದ್ಧರಾದ ಜನರೂ ತಮ್ಮ ತಮ್ಮ ಪ್ರದೇಶಗಳಲ್ಲಿ ಹೆನ್ರಿಯ ಕಾಲದಿಂದಾಚೆಗೆ ಯಾರು ಯಾರು ಕಳ್ಳರು, ಕೊಲೆಪಾತಕರು ಎಂಬುದಾಗಿ ಸಂದೇಹಿಸಲ್ಪಟ್ಟಿದ್ದರೋ ಅಂಥವರುಗಳ ಹೆಸರನ್ನು ಸೂಚಿಸಬೇಕಾಗಿತ್ತು. ಅಷ್ಟೆ ಅಲ್ಲದೆ ರಾಜನ, ನ್ಯಾಯಾಧಿಪತಿಗಳ ಮುಂದೆ ಅವರನ್ನು ಹಾಜರ್ಮಾಡಬೇಕಾಗಿತ್ತು. ಪರ್ಯಟನ ನ್ಯಾಯಾಧಿಪತಿಗಳು (Touring Judges) ಕೇಳಿದ ಪ್ರಶ್ನೆಗಳಿಗೆ ಪ್ರಮಾಣಪೂರ್ವಕವಾದ ಉತ್ತರಗಳನ್ನು ಅವರು (ನ್ಯಾಯಬದ್ಧರಾದ ಹನ್ನೆರಡು ಜನರು ಮತ್ತು ನಾಲ್ಕು ಜನರು) ಹೇಳಬೇಕಾಗಿತ್ತು. ಇವರೇ ಜ್ಯೂರಿಗಳು.

ಈ ತರಹ ಜ್ಯೂರಿ ಪದ್ಧತಿ ಹೊಸದೇನು ಅಲ್ಲ. ಒಂದನೇ ವಿಲಿಯಂ ಕಾಲದಲ್ಲೆ ಡೂಮ್ಸ್ ಡೇ ಪುಸ್ತಕದ ವಿಷಯಸಂಗ್ರಹಣಕ್ಕಾಗಿ ಈ ಪದ್ಧತಿಯನ್ನು ಬಳಕೆಗೆ ತರಲಾಗಿತ್ತು, ಎರಡನೆ ಹೆನ್ರಿಯು ಇದನ್ನು ವಿಸ್ತರಿಸಿದನು. ಈ ಜ್ಯೂರಿಗಳಲ್ಲಿ ಎರಡು ತರಹವಿತ್ತು. ಹಿರಿಯ ಜ್ಯೂರಿ (Grand Jury) ಅಕೃತ್ಯದ (Crimes) ಸಂದೇಹಕ್ಕೊಳಗಾದವರನ್ನು ಹಾಜರ್ಪಡಿಸುತ್ತಿತ್ತು. ಕಿರಿಯ ಜ್ಯೂರಿ (Petty Jury) ಯ ಕೆಲಸವು ಅಪರಾಧಿಯು ತಪ್ಪಿತಸ್ಥನೇ ಅಲ್ಲವೇ ಎಂದು (Verdict) ತೀರ್ಮಾನಿಸುವುದೇ ಆಗಿತ್ತು.

ಹೆನ್ರಿಯು ಸ್ಟೀಫನನ ಕಾಲದಲ್ಲಿ ತುಂಬಾ ಪ್ರಾಬಲ್ಯಕ್ಕೆ ಬಂದಿದ್ದ ಶ್ರೀಮಂತರ ಶಕ್ತಿಯನ್ನು ಕಡಿಮೆ ಮಾಡಲು ಕೆಲವು ಹಂಚಿಕೆಗಳನ್ನು ಹೂಡಿದನು. ಕ್ರಿ. ಶ. ೧೧೫೯ ರಲ್ಲಿ ಸ್ಕ್ಯೂಟೇಜ್ (Scutage) ಎಂಬ ತೆರಿಗೆಯನ್ನು ಶ್ರೀಮಂತರ ಮೇಲೆ ವಿಧಿಸಿದನು. ಇದರಿಂದ ಹಿಂದಿನಕಾಲ ದಲ್ಲಿದ್ದಂತೆ ಶ್ರೀಮಂತರು ಯುದ್ಧ ಸಮಯದಲ್ಲಿ ಸೈನ್ಯವನ್ನು ಒದಗಿಸಬೇ ಕಾಗಿರಲಿಲ್ಲ. ಅದಕ್ಕಾಗಿ ಅವರು ಈ ತೆರಿಗೆಯನ್ನು ತೆರಬೇಕಾ ಯಿತು. ಇದರಿಂದ ಹೆನ್ರಿಯು ಹೆಚ್ಚು ಸ್ವಾಮಿಭಕ್ತಿಯಿಂದ ಕೂಡಿದ ಸೈನ್ಯವನ್ನು ತಾನೇ ಶೇಖರಿಸಿಕೊಳ್ಳಲು ಅನುಕೂಲವಾಯಿತು. ಕ್ರಿ. ಶ. ೧೧೮೧ ರಲ್ಲಿ ಹೆನ್ರಿಯು ಆಯುಧಗಳ ರಾಜಶಾಸನವನ್ನು ಹೊರಡಿಸಿದನು (Assize of Arms). ಇದರಿಂದ ಪ್ರತಿಯೊಬ್ಬ ಸ್ವತಂತ್ರನಾದ ವ್ಯಕ್ತಿಯೂ ಯುದ್ಧಕ್ಕಾಗಿ ಆಯುಧಗಳನ್ನು ಇಟ್ಟುಕೊಳ್ಳಬಹುದಾದ ಅವ ಕಾಶವು ದೊರಕಿತು. ಹೀಗೆ ಹೆನ್ರಿಯು ಶ್ರೀಮಂತರ (Barons) ಪ್ರಭಾವಕ್ಕೊಳಗಾದ ಸೈನ್ಯದ ಬದಲು ಆಂಗ್ಲೋಸಾಕ್ಸನ್ ಕಾಲದಲ್ಲಿದ್ದಂತೆ ಫೀರ್ಡ್ (Fyrd) ಅಥವಾ ರಾಷ್ಟ್ರೀಯಸೈನ್ಯ (National Army) ವನ್ನು ಪುನರುಜ್ಜೀವನಗೊಳಿಸಿದನು.

ಹೆನ್ರಿಯ ಮೂವತ್ತೈದು ವರ್ಷಗಳ ಆಳ್ವಿಕೆಯು ಬ್ರಿಟನ್ನಿನ ಚರಿತ್ರೆಯಲ್ಲಿ ಅತಿ ಮುಖ್ಯವಾದುದು. ಅವನನ್ನು ಇಂಗ್ಲೆಂಡಿನ 'ಜ್ಯೂರಿ ಪದ್ಧತಿಯ ಮತ್ತು ನ್ಯಾಯಾಸ್ಥಾನಗಳ ತಂದೆ' ಎಂದು ಹೇಳಬಹುದು. ಅವನ ಕಾಲದಲ್ಲಿ ಎಲ್ಲರಿಗೂ ನ್ಯಾಯವು ಸುಲಭವಾಗಿಯೂ ಹೆಚ್ಚು ವೆಚ್ಚ ವಿಲ್ಲದೆಯೂ ದೊರಕುವಂತಾಯಿತು. ಹಿಂದೆ ಹೇಳಿದಂತೆ ಈ ಉದ್ದೇಶ ದಿಂದಲೇ ಪರ್ಯಟನ ನ್ಯಾಯಾಧಿಪತಿಗಳು ನಿಯಮಿಸಲ್ಪಟ್ಟಿದ್ದರು. ಮೊದಲನೆಯದಾಗಿ ರಾಜನ ನ್ಯಾಯಾಲಯವು (Kings Court) ನ್ಯಾಯವಿಚಾರಗಳಿಗೆಲ್ಲಾ ಮೂಲವಾಯಿತು (Fountain of Justice). ಎರಡನೆಯದಾಗಿ ರಾಜನ ನ್ಯಾಯಾಧಿಪತಿಗಳು ಆಗಾಗ್ಗೆ ಬರೆಯುತ್ತಿದ್ದ ತೀರ್ಪುಗಳು ಇಂಗ್ಲೆಂಡಿನ "ಕಾಮನ್ ಶಾಸನ" (Common Law) ಗಳಿಗೆ ಅಡಿಗಲ್ಲಾಯಿತು.

## ಒಂದನೇ ರಿಚರ್ಡ್, (ಕ್ರಿ. ಶ ೧೧೮೯–೧೧೯೯)

ಹೆನ್ರಿಯ ನಂತರ ಬಂದ ಒಂದನೇ ರಿಚರ್ಡನು ಧರ್ಮಯುದ್ಧದಲ್ಲಿ (Crusade) ಹೆಚ್ಚು ಆಸಕ್ತಿಯುಳ್ಳವನಾಗಿದ್ದನು. ಈ ಧರ್ಮಯುದ್ಧವು ಪಾಲಿಸ್ಟೈನಿನಲ್ಲಿ ಮುಸಲ್ಮಾನರಿಗೂ ಮತ್ತು ಕ್ರಿಶ್ಚಿಯನ್ನರಿಗೂ ನಡೆಯುತ್ತಿತ್ತು. ಅವನ ಹತ್ತು ವರ್ಷಗಳ ಆಳ್ವಿಕೆಯಲ್ಲಿ ಅವನು ಇಂಗ್ಲೆಂಡಿನಲ್ಲಿ ಕೆಲವು ತಿಂಗಳುಗಳು ಮಾತ್ರ ಇದ್ದನು. ಇವನ ಬದಲು ರಾಜ್ಯವನ್ನು ಬಹಳ ದಕ್ಷನಾದ ಇವನ ಪ್ರತಿನಿಧಿ (Justiciar) ಹ್ಯೂಬರ್ಟ್‌ವಾಲ್ಟರನು ನೋಡಿಕೊಳ್ಳುತ್ತಿದ್ದನು. ಹ್ಯೂಬರ್ಟ್‌ವಾಲ್ಟರನ ಕಾಲದಲ್ಲಿ ಶ್ರೀಮಂತರ (Barons) ಬದಲು ಲಂಡನ್ ಮೊದಲಾದ ಪಟ್ಟಣಗಳ ನಿವಾಸಿಗಳು ಮತ್ತು ಮಧ್ಯಮ ದರ್ಜೆಯ ನೈಟ್ಸ್ (Knights) ತುಂಬಾ ಪ್ರಾಮುಖ್ಯತೆಗೆ ಬಂದರು. ಇವರ ಪೀಳಿಗೆಯೇ ಟ್ಯೂಡರ್ ಮತ್ತು ಸ್ಟುವರ್ಟ್ ರಾಜರುಗಳ ಕಾಲದಲ್ಲಿ ಪಾರ್ಲಿಮೆಂಟಿನಲ್ಲಿ ಉನ್ನತವಾದ ಪಾತ್ರವನ್ನು ಪಡೆದವರು.

## ಜಾನ್ (John), (ಕ್ರಿ. ಶ. ೧೧೯೯–೧೨೧೬)

ಒಂದನೇ ರಿಚರ್ಡನ ನಂತರ ಜಾನ್ ಪಟ್ಟಕ್ಕೆ ಬಂದನು. ಇವನು ಕ್ರೂರಿಯೂ, ಅಶಕ್ತನೂ ಆಗಿದ್ದನು. ಇಂಗ್ಲೆಂಡ್ ಇವನ ಕಾಲದಲ್ಲಿ ಫ್ರಾನ್ಸಿನಲ್ಲಿದ್ದ ಚಕ್ರಾಧಿಪತ್ಯದ ಬಹುಭಾಗವನ್ನು ಕಳೆದುಕೊಂಡಿತು. ಜಾನನ ಕಾಲದಲ್ಲಿ ಎರಡು ಮುಖ್ಯವಾದ ಘಟನೆಗಳು ನಡೆದುವು. ಮೊದಲನೆಯದು ಇಂಗ್ಲೆಂಡ್ ಮತ್ತು ಕ್ರೈಸ್ತರ ಮಹಾಗುರು ಪೋಪ್ ಇವರ ಜಗಳ. ಎರಡನೆಯದು ಜಾನ್ ಮತ್ತು ಶ್ರೀಮಂತರ ಜಗಳ. ಜಾನ್ ಮತ್ತು ಶ್ರೀಮಂತರ ಜಗಳದ ಪರಿಣಾಮವೇ ಮಾಗ್ನಕಾರ್ಟ (Magnacarta).

ಮಾಗ್ನಿಕಾರ್ಟದಲ್ಲಿ ಅರವತ್ತಮೂರು ವಿಧಿಗಳಿವೆ (clause). ಇವು ಲಾಟಿನ್ ಭಾಷೆಯಲ್ಲಿವೆ. ಒಂದು ತರಹದಲ್ಲಿ ಮ್ಯಾಗ್ನಿಕಾರ್ಟವು ಮೊದಲನೇ ಹೆನ್ರಿಯ ರಾಜಶಾಸನದ (Charter) ವಿಸ್ತರಣೆ ಎಂದು ಹೇಳಬಹುದು (amplification). ಇದರಿಂದ ಹೊಸ ಕಾನೂನು

ಏನೂ ಏರ್ಪಾಡಾಗಲಿಲ್ಲ. ಅದು ಬಳಕೆಯಲ್ಲಿದ್ದ ಕಾನೂನನ್ನೇ ಒತ್ತಿ ಒತ್ತಿ ತೋರಿಸಿತು. ಮ್ಯಾಗ್ನಕಾರ್ಟದ ನಿರ್ಮಾಪಕತ್ವದಲ್ಲಿ ಅನೇಕ ಗುಂಪುಗಳು ಸೇರಿದ್ದುವು. ಮೊದಲನೆಯದು ಶ್ರೀಮಂತರ ಗುಂಪು (Barons). ಜಾನನು ಫ್ಯೂಡಲ್ ಪದ್ಧತಿಯ ನಿಬಂಧನೆಗಳನ್ನು ಮುರಿದಿದ್ದದಕ್ಕಾಗಿ ಇವರು ಕೋಪಗೊಂಡಿದ್ದರು. ಎರಡನೆಯ ಗುಂಪು ಎರಡನೆ ಹೆನ್ರಿಯಕಾಲದಲ್ಲಿ ಆಡಳಿತದಲ್ಲಿ ಭಾಗವಹಿಸಿ, ಫ್ಯೂಡಲ್ ಪದ್ಧತಿಯ ಹುಳುಕುಗಳನ್ನು ಪರಿಹರಿಸಿ, ಯಶಸ್ವಿಯಾದ ಆಡಳಿತ ಕ್ರಮವನ್ನು ಸ್ಥಾಪಿಸಿದವರು (Administrative Barons).

ಅನೇಕ ಆಧುನಿಕ ಇತಿಹಾಸಕಾರರು ಮ್ಯಾಗ್ನಕಾರ್ಟವು ಪ್ರಭುತ್ವದ ಎರಡು ಮಹಾ ತತ್ವಗಳ ತಳಹದಿಯನ್ನು ಹಾಕಿತೆಂದು ವಾದಿಸಿದ್ದಾರೆ. ಮೊದಲನೆಯದು ಪ್ರತಿನಿಧಿಗಳಿಲ್ಲದೆ ತೆರಿಗೆ ಇಲ್ಲವೆಂಬುದು (No Taxation without Representation). ಎರಡನೆಯದು ವಿಚಾರಣೆ ಇಲ್ಲದೆ ಸೆರೆಮನೆಗೊಯ್ಯುವುದು (No Imprisonment without trial). ಆದರೆ ಮ್ಯಾಗ್ನಕಾರ್ಟದಲ್ಲಿ ಪ್ರಜಾಪ್ರಭುತ್ವಕ್ಕೆ ಸಂಬಂಧಿಸಿದ ಯಾವ ಅಂಶವೂ ಇಲ್ಲ. ಹನ್ನೆರಡನೆ ವಿಧಿಯು ಸ್ಕೂಟೇಜ್ ಮತ್ತು ಏಡ್ ಎಂಬ ತೆರಿಗೆಗಳ ವಿಚಾರವನ್ನು ವಿಸ್ತರಿಸಿ ಹೇಳುತ್ತಾ ಅವುಗಳನ್ನು ತೆರುವುದು ಸಭೆಯಲ್ಲಿ ತೀರ್ಮಾನವಾಗಬೇಕೆಂದು ಸೂಚಿಸುತ್ತದೆ. ಈ ಎರಡು ತೆರಿಗೆಗಳೂ ಫ್ಯೂಡಲ್ ಪದ್ಧತಿಗೆ ಸೇರಿದವು ಮತ್ತು ಸಭೆಯೂ ಕೂಡಾ ಶ್ರೀಮಂತರ ಸಭೆಗೇ ಅನ್ವಯಿಸುವುದು (Council of the Barons). ಮೂವತ್ತೊಂಬತ್ತನೇ ವಿಧಿ ಎಲ್ಲಾ ಜನಗಳ ಪಂಗಡಗಳಿಗೂ ಅನ್ವಯಿಸುವುದಿಲ್ಲ. ಶ್ರೀಮಂತರಾಗಲಿ ಅಥವಾ ಅವರಿಗಿಂತ ಸ್ವಲ್ಪ ಕೆಳದರ್ಜೆಯಲ್ಲಿದ್ದ ನೈಟ್‌ಗಳಾಗಲಿ ಅವರವರ ದರ್ಜೆಯ ಜ್ಯೂರಿಗಳ ಅನುಮತಿ ಇಲ್ಲದೆ ಶಿಕ್ಷೆಗೆ ಗುರಿಯಾಗಕೂಡದು ಎಂದು ಸೂಚಿಸುತ್ತದೆ. ಈ ವಿಧಿಗಳು ಹೀಗೆ ಸಾಮಾನ್ಯ ಜನರಿಗೆ ಅನ್ವಯಿಸುವದಿಲ್ಲ. ಹದಿನೇಳನೇ ಶತಮಾನದಲ್ಲಿ ಸ್ಟುವರ್ಟ್ ರಾಜರಿಗೂ ಮತ್ತು ಇಂಗ್ಲಿಷ್ ಪಾರ್ಲಿಮೆಂಟಿಗೂ ತಿಕ್ಕಾಟವು ಪ್ರಾರಂಭವಾದಾಗ ಮ್ಯಾಗ್ನಕಾರ್ಟವು ಇಂಗ್ಲಿಷ್ ಜನಾಂಗದ ಸ್ವಾತಂತ್ರ್ಯದ ಅಡಿಗಲ್ಲೆಂಬ ಅಂಶವು ಮೂಡಿತು.

ಇದಕ್ಕೆ ಆಗಿನ ಕಾಲದ ಸರ್ ಎಡ್ವರ್ಡ್ ಕೋರ್‌ರಂತಹ ಕೆಲವು ಚತುರರಾದ ವಕೀಲರು ಕಾರಣರಾದರು. ಮ್ಯಾಗ್ನಕಾರ್ಟವು ಇಂಗ್ಲೆಂಡಿನಲ್ಲಿ ಕಾನೂನು ಬದ್ಧ ಆಳ್ವಿಕೆಯನ್ನೂ (Rule of Law) ಮತ್ತು ದೇಶದ ವಾಡಿಕೆಯನ್ನೂ ಮಾತ್ರ (Customs of the land) ಸ್ಥಾಪಿಸಿತು.

ಅರವತ್ತೊಂದನೇ ವಿಧಿಯು ಮ್ಯಾಗ್ನಕಾರ್ಟದಲ್ಲಿ ಹೇಳಿರತಕ್ಕ ವಿಧಿಗಳನ್ನು ಆಚರಣೆಗೆ ತರಲು ಮತ್ತು ಅವುಗಳನ್ನು ಜಾನನು ಮುರಿದುಹಾಕದಂತೆ ನೋಡಿಕೊಳ್ಳಲು ಇಪ್ಪತ್ತೈದು ಶ್ರೀಮಂತರ ಪ್ರತಿನಿಧಿಗಳನ್ನುಳ್ಳ ಒಂದು ಸಮಿತಿ ಇರಬೇಕೆಂದು ಸೂಚಿಸುತ್ತದೆ. ಇದರಿಂದ ಮ್ಯಾಗ್ನಕಾರ್ಟವು ರಾಜನಾದ ಜಾನ್ ಮತ್ತು ಶ್ರೀಮಂತರ (Barons) ನಡುವೆ ಆದ ಒಪ್ಪಂದವೆಂಬ ಅಂಶವು ಚೆನ್ನಾಗಿ ವ್ಯಕ್ತವಾಗುತ್ತದೆ. ಈ ಸಂದರ್ಭದಲ್ಲಿ ಜಾನ್ ರುನ್ನಿಮೀಡ್ (Runnymede) ಎಂಬಲ್ಲಿ ಯುದ್ಧದಲ್ಲಿ ಸೋತು ಮ್ಯಾಗ್ನಕಾರ್ಟಕ್ಕೆ ಸಹಿ ಹಾಕಿದ ಸಂದರ್ಭವನ್ನು ಮರೆಯಬಾರದು.

ಜಾನನಿಗೆ ಅತ್ಯಂತ ಪ್ರಬಲರಾಗಿದ್ದ ಇಬ್ಬರು ಸಮಕಾಲೀನರಿದ್ದರು. ಇವರಲ್ಲಿ ಫ್ರಾನ್ಸಿನ ರಾಜನಾದ ಫಿಲಿಪ್ ಅಗಸ್ಟಸ್ (Philip Augus-tus) ಒಬ್ಬನು. ಮತ್ತೊಬ್ಬನು ಕ್ರೈಸ್ತ ಮಹಾಗುರುವಾದ (Pope) ಮೂರನೆಯ ಇನ್ನೊಸೆಂಟ್ (Innocent III). ಜಾನನು ಇವರಿಬ್ಬರೊಂದಿಗೂ ಜಗಳವನ್ನು ಕಟ್ಟಿಕೊಂಡು ಕೊನೆಗೆ ಸೋತನು.

ಫ್ರಾನ್ಸಿನ ಶ್ರೀಮಂತರು ಜಾನನ ಸಹೋದರನ ಮಗನಾದ ಆರ್ಥರ್ (Arthur) ಎಂಬ ಬಾಲಕನ ಪರವಾಗಿ ದಂಗೆ ಎದ್ದರು. ಅವರು ತಮ್ಮ ದಬ್ಬಾಳಿಕೆಯನ್ನು ಮುಂದುವರಿಸಿಕೊಂಡು ಹೋಗಲು ಪ್ರಬಲನಾಗಿದ್ದ ಜಾನನಿಗಿಂತ ಹುಡುಗನಾಗಿದ್ದ ಆರ್ಥರನೇ ಸರಿ ಎಂದು ಪರಿಗಣಿಸಿದ್ದರು. ಅವರಿಗೆ ಫಿಲಿಫ್ ಅಗಸ್ಟಸ್ ಸಹಾಯಕನಾಗಿದ್ದನು. ಫ್ರಾನ್ಸಿನ ಯುದ್ಧದಲ್ಲಿ ಜಾನನ ಕೈಗೆ ಆರ್ಥರನು ಸಿಕ್ಕಿಬಿದ್ದನು. ಆ ಚಿಕ್ಕ ಹುಡುಗನ ಕೊಲೆಯಿಂದ ಜಾನನಿಗೆ ತೊಂದರೆ ತಪ್ಪುವುದರ ಬದಲು ಮತ್ತಷ್ಟು ಅಪಾಯವು ಒದಗಿತು. ಕ್ರಿ. ಶ. ೧೨೦೪ ರಲ್ಲಿ ಅವನು ಫ್ರಾನ್ಸಿನಿಂದ ಓಡಿಬರಬೇಕಾಯಿತು.

ಖಾಲಿಯಾದ ಕ್ಯಾಂಟರ್‌ಬರಿಯ ಮಹಾಮಠಾಧಿಪತಿಸ್ಥಾನಕ್ಕೆ ಜಾನನು ಕ್ರಿ. ಶ. ೧೨೦೮ ರಲ್ಲಿ ಡಿಗ್ರೇ (Degrey) ಎಂಬುವನನ್ನು ನೇಮಿಸಿದನು. ಆದರೆ ಪೋಪ್ ಇದನ್ನು ಅನುಮೋದಿಸಲಿಲ್ಲ. ಅವನು ಇದಕ್ಕೆ ಬದಲಾಗಿ ಶಕ್ತನೂ ಮತ್ತು ವಿದ್ವಾಂಸನೂ ಆಗಿದ್ದ ಸ್ಟೀಫನ್ ಲಾಂಗ್‌ಟನ್ (Stephen Langton) ಎಂಬುವನನ್ನು ನೇಮಿಸಿದನು. ಆದರೆ ಜಾನನು ಪರದೇಶದಲ್ಲಿ ಸಂಚಾರಕ್ಕೆ ಹೋಗಿದ್ದ ಲಾಂಗ್‌ಟನ್ನನು ಇಂಗ್ಲೆಂಡಿಗೆ ಬರಲು ಅವಕಾಶ ಕೊಡಲಿಲ್ಲ. ಜಾನನಿಗೆ ಬುದ್ಧಿ ಕಲಿಸಲು ಪೋಪ್ ಇಂಗ್ಲೆಂಡಿಗೂ, ಜಾನನಿಗೂ ಬಹಿಷ್ಕಾರ ಹಾಕಿದನು. ಇಂಗ್ಲೆಂಡಿನಲ್ಲಿ ಮತೀಯ ಮತ್ತು ಧಾರ್ಮಿಕ ಜೀವನವು ಇದರಿಂದ ನಿಂತು ಹೋಯಿತು. ಐದು ವರ್ಷಗಳು ಹೀಗೆ ಜಗಳದಲ್ಲಿ ಕಳೆದಮೇಲೆ ಜಾನನು ಲಾಂಗ್‌ಟನ್ನನನ್ನು ಕ್ಯಾಂಟರ್‌ಬರಿಯ ಮಹಾಮಠಾಧಿಪತಿಯನ್ನಾಗಿ ಸ್ವೀಕರಿಸಿದುದಲ್ಲದೆ ಪೋಪಿಗೂ ಶರಣಾಗತನಾದನು.

## (ಮೂರನೆ ಹೆನ್ರಿ ಕ್ರಿ. ಶ. ೧೨೧೬–೧೨೭೨)

ಕ್ರಿ. ಶ. ೧೨೧೬ ರಲ್ಲಿ ಜಾನನು ಮಡಿದನು. ಒಂಬತ್ತು ವರ್ಷದ ಅವನ ಮಗನಾದ ಮೂರನೆ ಹೆನ್ರಿಯು ಪಟ್ಟಕ್ಕೆ ಬಂದನು. ಹದಿನೈದು ವರ್ಷಗಳಕಾಲ ಹ್ಯೂಬರ್ಟ್ ಡಿಬರ್ಗ್ (Huburt de Burgh) ರಾಜ್ಯವನ್ನು ತನ್ನ ವಶದಲ್ಲೇ ಇಟ್ಟುಕೊಂಡು ಆಳಿದನು. ಹೆನ್ರಿಯು ವಿದೇಶೀಯರನ್ನು ಹೆಚ್ಚಾಗಿ ಪ್ರೋತ್ಸಾಹಿಸಿದ್ದುದ್ದರಿಂದ ಅನೇಕ ಶ್ರೀಮಂತರು (Barons) ಅವನ ಮೇಲೆ ತಿರುಗಿಬಿದ್ದರು. ಇವರಲ್ಲಿ ಚರ್ಚಿನ ಮುಖಂಡನಾದ ಗ್ರಾಸ್‌ಟೆಸ್ಟ್ (Grosseteste), ರಿಚರ್ಡ್ ಮಾರ್ಸಲ್ (Richered Marshall), ವಿಲಿಯಂ ಮಾರ್ಷಲ್ (William Marshall) ಮತ್ತು ಸೈಮಂಡಿ ಮಾಂಟ್‌ಫರ್ಟ್ (Simonde Mont fort) ಮೊದಲಾದವರೇ ಮುಖ್ಯಸ್ಥರು. ಕ್ರಿ. ಶ. ೧೨೫೮ ರಲ್ಲಿ ಆಕ್ಸ್‌ಫರ್ಡ್ (Oxford) ನಲ್ಲಿ ಸೇರಿದ ಸಭೆಯು ಕೆಲವು ಸುಧಾರಣೆಗಳನ್ನು ಆಚರಣೆಗೆ ತಂದಿತು. ಆಕ್ಸ್‌ಫರ್ಡಿನ ಸಮಿತಿಯ ಒಪ್ಪಂದವು (Provisions of Oxford) ಒಂದು ರೀತಿಯಲ್ಲಿ ಮ್ಯಾಗ್ನಕಾರ್ಟ್

ಗಿಂತ ಮುಖ್ಯವಾದುದೆಂದರೆ ತಪ್ಪಲ್ಲ. ಮ್ಯಾಗ್ನಕಾರ್ಟವು ರಾಜನು ಫ್ಯೂಡಲ್ ಪದ್ಧತಿಗೆ ಸೇರಿದ ನಿಬಂಧನೆಗಳನ್ನು ಉಲ್ಲಂಘಿಸಕೂಡದೆಂದೂ ಮತ್ತು ಅವುಗಳನ್ನು ಪರಿಪಾಲಿಸಬೇಕೆಂದೂ ವಿಧಿಸಿತ್ತು. ಆದರೆ ಆಕ್ಸ್ ಫರ್ಡ್ ಸಮಿತಿಯ ಒಪ್ಪಂದವು ಸರ್ಕಾರದ ಹತೋಟಿಯೆಲ್ಲವೂ ಒಂದು ಸಣ್ಣ ಶ್ರೀಮಂತರ ಸಮಿತಿಗೆ ಒಪ್ಪಿಸಲ್ಪಡಬೇಕೆಂದು ವಿಧಾಯಕ ಮಾಡಿತು. ಆದರೆ ಕ್ರಿ. ಶ. ೧೨೬೧ ರಲ್ಲಿ ಹೆನ್ರಿಯು ಈ ಒಪ್ಪಂದವನ್ನು ಮುರಿದುದರಿಂದ ಇಂಗ್ಲೆಂಡಿನಲ್ಲಿ ಯುದ್ಧ ಪ್ರಾರಂಭವಾಯಿತು. ಹೆನ್ರಿ ಮತ್ತು ಅವನ ಮಗ ಎಡ್ವರ್ಡ್ ಸೈಮನ್ ಡಿಮಾಂಟ್ ಫರ್ಡ್ ಎಂಬುವನಿಗೆ ಕೈಸೆರೆ ಸಿಕ್ಕಿದರು.

ಸೈಮನ್ ಡಿ ಮಾಂಟ್ ಫರ್ಡ್ ಆಲಿವರ್ ಕ್ರಾಮ್ ವೆಲ್ಲಿನಂತೆ (Oliver Cromwell) ಶೂರನಾದ ಯೋಧನು ಅಷ್ಟೇ ಅಲ್ಲದೆ ಅವನು ಇಂಗ್ಲೆಂಡಿನ ಪಾರ್ಲಿಮೆಂಟಿನ ಸ್ಥಾಪಕನೆಂದೂ ಚರಿತ್ರೆಯಲ್ಲಿ ಪ್ರಸಿದ್ಧನಾಗಿದ್ದಾನೆ. ಇವನು ಹೆನ್ರಿಯ ಸಹೋದರಿಯನ್ನು ಮದುವೆಯಾಗಿ ಫ್ರಾನ್ಸಿನ ಗ್ಯಾಸ್‌ಗನಿ (Gascony) ಎಂಬ ಪ್ರದೇಶದ ಪ್ರಾಂತ್ಯಾಧಿಕಾರಿಯಾಗಿದ್ದನು. ಕ್ರಿ. ಶ. ೧೨೫೩ ರಲ್ಲಿ ಹೆನ್ರಿಯು ಅವನನ್ನು ಆ ಕೆಲಸದಿಂದ ವಜಾಮಾಡಿದ್ದುದರಿಂದ ಸೈಮನ್ ಡಿ ಮಾಂಟ್ ಫರ್ಡ್ ಹೆನ್ರಿಯ ಶತ್ರುಗಳ ಜೊತೆ ಸೇರಿಕೊಂಡನು. ಇವನು ತನ್ನ ಅಧಿಕಾರತ್ವದಲ್ಲಿ ಶ್ರೀಮಂತರ ಪ್ರತಿನಿಧಿಗಳಲ್ಲದೆ ಸಾಮಾನ್ಯರ ಪ್ರತಿನಿಧಿಗಳು, ಪಟ್ಟಣಗಳ ಪ್ರತಿನಿಧಿಗಳು ಇವರೇ ಮೊದಲಾದವರನ್ನು ರಾಜ್ಯಾಡಳಿತದ ವಿಚಾರದಲ್ಲಿ ಸಲಹೆಗಾಗಿ ಸಭೆ ಸೇರಿಸುವ ಪದ್ಧತಿಯನ್ನು ಜಾರಿಗೆ ತಂದನು. ಇದೇ ಇಂಗ್ಲೆಂಡಿನ ಮೊದಲನೆ ಪಾರ್ಲಿಮೆಂಟ್ ಎಂದು ಹೇಳಬಹುದು. ಕ್ರಿ. ಶ. ೧೨೬೫ ರಲ್ಲಿ ಇವನು ಎಡ್ವರ್ಡ್‌ನೊಂದಿಗೆ ನಡೆದ ಕದನದಲ್ಲಿ ಮಡಿದನು.

**(ಮೊದಲನೆ ಎಡ್ವರ್ಡ್ ಕ್ರಿ. ಶ. ೧೨೭೨–೧೩೦೭)**

ಎಡ್ವರ್ಡನ ಶಾಸನಗಳು :— ಮೊದಲನೆ ವಿಲಿಯಂ ಕಾಲದಿಂದ ಇಂಗ್ಲೆಂಡಿನಲ್ಲಿ ಯೆಹೂದ್ಯರು (Jews) ಹಣಕಾಸಿನ ವ್ಯವಹಾರ ಮತ್ತು ಲೇವಾದೇವಿ ಇವುಗಳನ್ನು ನಡೆಸುತ್ತಿದ್ದರು. ಇವರು ಬಡ್ಡಿ ತೆಗೆದುಕೊ

ಳ್ಳುವುದನ್ನು ಕ್ರಿಶ್ಚಿಯನ್ ಚರ್ಚ್ ಖಂಡಿಸಿತ್ತು. ಚರ್ಚಿನ ದೃಷ್ಟಿಯಲ್ಲಿ ಇದು ಪಾಪಕರವಾದುದೆಂದು ಪರಿಗಣಿಸಲ್ಪಟ್ಟಿತ್ತು. ಯೆಹೂದ್ಯರು ಹಣ ಶೇಖರಿಸುವುದನ್ನು ನೋಡಿ ಅನೇಕರಿಗೆ ಅಸೂಯೆಯೂ ಹುಟ್ಟಿತ್ತು. ತನ್ನ ಪ್ರಜೆಗಳಂತೆಯೇ ಮೊದಲನೆ ಎಡ್ವರ್ಡನಿಗೂ ಯೆಹೂದ್ಯರನ್ನು ಕಂಡರೆ ಆಗುತ್ತಿರಲಿಲ್ಲ. ಕ್ರಿ. ಶ. ೧೨೯೦ ರಲ್ಲಿ ಜಾರಿಗೆ ಬಂದ ಶಾಸನ ವೊಂದರಿಂದ ಅವನು ಅವರನ್ನು ದೇಶದಿಂದ ಓಡಿಸಿದನು. ಯೆಹೂದ್ಯರ ಬದಲು ಇಟಲಿಯ ಸರಾಫರನ್ನು ಲೇವಾದೇವಿಗೋಸ್ಕರ ಉಪಯೋಗಿಸಿ ಕೊಂಡನು.

ಎಡ್ವರ್ಡನ ಕಾಲದಲ್ಲಿ ಅನೇಕ ಶಾಸನಗಳು ಬಳಕೆಗೆ ಬಂದಿದ್ದರಿಂದ ಅವನಿಗೆ "ಇಂಗ್ಲೆಂಡಿನ ಜಸ್ಟೀನಿಯನ್" ಎಂದು ಚರಿತ್ರೆಕಾರರು ಕರೆದಿರು ವುದು ಸಹಜವಾಗಿದೆ. ಕ್ರಿ. ಶ. ೧೨೭೫ ರಲ್ಲಿ ಅವನ ಕಾಲದಲ್ಲಿ ಮೊಟ್ಟ ಮೊದಲು ಸೇರಿದ ಪಾರ್ಲಿಮೆಂಟ್ ಮೊದಲನೆಯ ವೆಸ್ಟ್‌ಮಿನ್‌ಸ್ಟರ್ ಶಾಸನವನ್ನು(1st Statute of Westminster) ಜಾರಿಗೆ ತಂದಿತು. ಉಣ್ಣೆ ಮುತ್ತ ಚರ್ಮ ಇವುಗಳ ರಫ್ತಿನ ಮೇಲೆ (Export) ತೆರಿಗೆ ಯನ್ನು ವಿಧಿಸುವುದರ ಮೂಲಕ ಸರಕಾರಕ್ಕೆ ಆದಾಯ ಬರುವಂತೆ ಮಾಡಿತು.

ಕ್ರಿ. ಶ. ೧೨೭೮ ರ ಗ್ಲಾಸ್ಟರ್ ಶಾಸನದಿಂದ (Statute of Gloucester) ಒಂದೇ ತರಹದ ನ್ಯಾಯವು ರಾಜ್ಯದಲ್ಲಿ ಇರಬೇಕೆಂಬ ಅಭಿಪ್ರಾಯದಿಂದ ಮೊದಲನೆ ಎಡ್ವರ್ಡನ ನ್ಯಾಯಾಧಿಪತಿಗಳು ತಮ್ಮ ಪ್ರವಾಸದಲ್ಲಿ (Tour) ಯಾವ ಯಾವ ಶ್ರೀಮಂತರು ಯಾವ ಯಾವ ಕಾಲದಲ್ಲಿ ತಮ್ಮತಮ್ಮ ನ್ಯಾಯಾಸ್ಥಾನಗಳನ್ನು ಯಾವ ವಿಧವಾದ ಹಕ್ಕಿ ನಿಂದ ಸ್ಥಾಪಿಸಿಕೊಂಡಿದ್ದರೆಂಬ ಅಂಶವನ್ನು ಪರಿಶೀಲಿಸಿದರು. ಇದಕ್ಕೆ "ಕೊವಾರೆಂಟೊ" (Quowarranto) ಎಂದು ಹೆಸರು. ಎಡ್ವರ್ಡನು ಈ ಶಾಸನದಿಂದ ಶ್ರೀಮಂತರ ಪ್ರಾಬಲ್ಯವನ್ನು ಸ್ವಲ್ಪಮಟ್ಟಿಗೆ ಕಡಿಮೆಮಾ ಡಲು ಪ್ರಯತ್ನಿಸಿದನು. ಆದರೆ ಅಷ್ಟು ಫಲಕಾರಿಯಾಗಲಿಲ್ಲ. ಎಡ್ವರ್ಡನ ನ್ಯಾಯಾಧಿಪತಿಗಳು ತಮ್ಮ ಪ್ರವಾಸದಲ್ಲಿ ಹೀಗೆ ವಿಮರ್ಶೆ ಮಾಡಲು

ಹೋದಾಗ ಒಬ್ಬ ಶ್ರೀಮಂತನು 'ತನ್ನ ಅಧಿಕಾರ ಪತ್ರವು ಇದೆಂದು ತನ್ನ ಖಡ್ಗವನ್ನು ಒರೆಯಿಂದ ಎಳೆದು ತೋರಿಸಿದನು.'

ಕ್ರಿ. ಶ. ೧೨೭೯ ರಲ್ಲಿ ಮಾರ್ಟಿಮೇನ್ ಶಾಸನವನ್ನು (Statute of Mortmain) ಎಡ್ವರ್ಡನು ಜಾರಿಗೆ ತಂದನು. ಇದರಿಂದ ಜಮೀನು ಚರ್ಚಿಗೂ ಮತ್ತು ಇತರ ಮತೀಯ ಸಂಸ್ಥೆಗಳಿಗೆ ಸೇರಿದವರಿಗೂ ರಾಜಾಜ್ಞೆಯಿಲ್ಲದೆ ಸೇರಕೂಡದೆಂದು ವಿಧಾಯಕವಾಯಿತು.

ಕ್ರಿ. ಶ. ೧೨೮೩ ರಲ್ಲಿ ಆಕ್ಟನ್ ಬರ್ನೆಲ್ ಎಂಬ ಶಾಸನವು (Statute of Acton Burnell) ವರ್ತಕರ ಮೇಲ್ಮೆಗಾಗಿ ಜಾರಿಗೆ ಬಂದಿತು. ಇದು ಸಾಲಗಾರನು ಸೆರೆಮನೆಗೆ ಹೋಗುವುದಲ್ಲದೆ ತನ್ನ ಸಾಮಾನುಗಳನ್ನೂ ಕಳೆದುಕೊಳ್ಳುವಂತೆ ಗೊತ್ತುಪಡಿಸಿತು.

ಕ್ರಿ. ಶ. ೧೨೮೫ ನೆಯ ಮೊದಲನೆ ವಿಂಚೆಸ್ಟರ್ ಶಾಸನವು (Statute of Winchester 1) ಕಳ್ಳರು, ಕೊಲೆಪಾತಕರು ಮೊದಲಾದವರನ್ನು ಯಾರು ಅವಿತಿಡುವರೋ ಅಥವಾ ರಕ್ಷಿಸುವರೋ ಅಂಥವರಿಗೆ ಶಿಕ್ಷೆಯನ್ನು ವಿಧಿಸುವಂತೆ ಮಾಡಿತು. ಅದೇ ವರ್ಷದಲ್ಲಿ ಜಾರಿಗೆ ಬಂದ ೨ನೇ ವಿಂಚೆಸ್ಟರ್ ಶಾಸನವು ಬ್ರಿಟನ್ನಿನ ಆರ್ಥಿಕ ಚರಿತ್ರೆಯಲ್ಲಿ ಮುಖ್ಯವಾದುದು. ಈ ಶಾಸನದಿಂದ ಇಂಗ್ಲೆಂಡಿನಲ್ಲಿ ದೊಡ್ಡ ದೊಡ್ಡ ಭೂಸ್ವಾಮಿತ್ವವು (Estate) ಉಳಿಯುವಂತೆ ಮಾಡಿತು. ಜಮೀನು ತಂದೆಯ ಕಾಲಾನಂತರ ಹಿರಿಯ ಮಗನೊಬ್ಬನಿಗೆ ಮಾತ್ರ ಅವಿಭಕ್ತವಾಗಿ (Undivided) ಸೇರಬೇಕೆಂದು ಇದು ಗೊತ್ತುಪಡಿಸಿತು.

ಪಾರ್ಲಿಮೆಂಟಿನ ಬೆಳವಣಿಗೆ:—ಮೊದಲನೆ ಎಡ್ವರ್ಡನ ಕಾಲದಲ್ಲಿ ಪಾರ್ಲಿಮೆಂಟ್ ಸ್ವಲ್ಪಮಟ್ಟಿಗೆ ಅಭಿವೃದ್ಧಿ ಹೊಂದಿತು. ಪಾರ್ಲಿಮೆಂಟ್ ಅನೇಕ ಸಂಸ್ಥೆಗಳಂತೆ ಮೊಟ್ಟಮೊದಲು ಸಣ್ಣ ಮೊಳಕೆಯಂತೆ ಪ್ರಾರಂಭವಾಯಿತು. 'ಪಾರ್ಲಿಮೆಂಟ್' ಎಂಬ ಪದ ಫ್ರೆಂಚ್ ಭಾಷೆಯಿಂದ ಬಂದಿದೆ. 'ಪಾರ್ಲಿಮೆಂಟ್' ಎಂದರೆ ಮಾತನಾಡುವುದು ಎಂದರ್ಥ. ಮೊದಮೊದಲು ಪಾರ್ಲಿಮೆಂಟಿನ ಸಭೆಯಲ್ಲಿ ಜರುಗುತ್ತಿದ್ದ ಮಾತನಾಡುವಿಕೆಗೆ ಈ ಪದವು ಅನ್ವಯವಾಗುತ್ತಿತ್ತು. ಸಭೆಗಲ್ಲ. ಇದರ ಬೆಳವಣಿಗೆಯ ವಿಚಾರವನ್ನು ಚರ್ಚಿಸುವಾಗ ಆಂಗ್ಲೋಸಾಕ್ಸನ್ ಕಾಲದ ವಿಟೀ

(Witan) ಮೊಟ್ಟಮೊದಲಿನ ಹೆಜ್ಜೆ ನಾರ್ಮನರ ಕಾಲದಲ್ಲಿ ಸ್ಥಾಪಿತವಾದ ಕ್ಯೂರಿಯಾ ರಿಜಿಸ್ (Curia Regis) ಅಥವಾ ಮಹಾ ಸಮಿತಿ (Great Council). ಇದರಲ್ಲಿ ರಾಜ, ಶ್ರೀಮಂತರು, ಮಹಾ ಮಠಾಧಿಪತಿಗಳು ಇವರುಗಳಿದ್ದರು. ಮೂರನೆಯ ಹೆನ್ರಿಯ ಕಾಲದಲ್ಲಿ ಇಬ್ಬಿಬ್ಬರು ಪಟ್ಟಣಗಳ ಪ್ರತಿನಿಧಿಗಳು ಮತ್ತು ಇಬ್ಬಿಬ್ಬರು ಶ್ರೀಮಂತರಿಗಿಂತ ಕೆಳದರ್ಜೆಯ ಜಮೀನುದಾರರ (Knights) ಪ್ರತಿನಿಧಿಗಳು ಈ ಮಹಾ ಸಮಿತಿಗೆ ಸೇರಿಸಲ್ಪಟ್ಟರು. ಇದು ಸೈಮನ್ ಡಿ ಮಾಂಟ್ ಫರ್ಟ್ ಕ್ರಿ. ಶ. ೧೨೬೫ ರಲ್ಲಿ ಮಾಡಿದ ಸುಧಾರಣೆಯ ಫಲಿತಾಂಶ.

ಕ್ರಿ. ಶ. ೧೨೯೫ ರಲ್ಲಿ ಸೇರಿದ ಪಾರ್ಲಿಮೆಂಟಿಗೆ ಚರಿತ್ರೆಕಾರರು 'ಮಾದರಿಯ ಪಾರ್ಲಿಮೆಂಟ್' ಎಂದು ಕರೆದಿದ್ದಾರೆ. ಯಾವುದು ಎಲ್ಲರಿಗೂ ಅನ್ವಯಿಸುವುದೋ ಅದು ಎಲ್ಲರ ಒಪ್ಪಿಗೆಯನ್ನೂ ಪಡೆಯಬೇಕು ಎಂಬ ತತ್ವವು ಅನುಮೋದಿಸಲ್ಪಟ್ಟಿತು. ಶ್ರೀಮಂತರು (Barons) ಮತ್ತು ನೈಟುಗಳು (Knights) ಹನ್ನೊಂದನೆಯ ಒಂದುಭಾಗ, ಮತೀಯ ವರ್ಗದವರು (Clergy) ಹತ್ತನೆಯ ಒಂದು ಭಾಗ ಮತ್ತು ಪಟ್ಟಣಿಗರು ಏಳನೇ ಒಂದು ಭಾಗವನ್ನು ತೆರಿಗೆಯ ರೂಪದಲ್ಲಿ ಒಂದನೆಯ ಎಡ್ವರ್ಡನಿಗೆ ಫ್ರಾನ್ಸಿನೊಡನೆ ಯುದ್ಧಕ್ಕಾಗಿ ಕೊಡಲು ಸಮ್ಮತಿಸಿದರು.

ಕ್ರಿ. ಶ. ೧೨೯೭ ರಲ್ಲಿ ಮತ್ತೊಂದು ಪಾರ್ಲಿಮೆಂಟ್ ಸಭೆ ಸೇರಿತು. ಶ್ರೀಮಂತರ ಮುಖ್ಯಸ್ಥರಾದ ಬೋಹನ್ (Bohun) ಮತ್ತು ಬಿಗಾಡ್ (Bigod) ಎಂಬುವರು ಸಾಲಿಸ್‌ಬರಿ ಎಂಬಲ್ಲಿ ಅಕ್ರಮವಾದ ಹೊಸ ತೆರಿಗೆಗಳನ್ನು ಕೊಡಲು ಮತ್ತು ಫ್ರಾನ್ಸಿನ ಯುದ್ಧಕ್ಕೆ ಹೋಗಲು ಅಸಮ್ಮತಿಸಿ ಎಡ್ವರ್ಡನ ದಬ್ಬಾಳಿಕೆಯನ್ನು ಪ್ರತಿಭಟಿಸಿದರು. ಸುಪ್ರಸಿದ್ಧ ಚರಿತ್ರೆಕಾರರಾದ ಟ್ರಿವಿಲಿಯಾನ್ (Trevelyan) ಹೇಳುವಂತೆ ಈ ಶ್ರೀಮಂತರು ಒಂದನೆ ಚಾರ್ಲ್ಸ್‌ನ ಕಾಲದಲ್ಲಿ ಪಾರ್ಲಿಮೆಂಟಿನ ಹಕ್ಕುಬಾಧ್ಯತೆಗಾಗಿ ಹೋರಾಡಿದ ಸರ್ ಜಾನ್ ಇಲಿಯಟ್ (Sir John Elliot) ಮತ್ತು ಪಿಮ್ (Pym) ಇವರಂತೆ ನಿರಾಯುಧರಾಗಿರಲಿಲ್ಲ. ಅವರು ಯೋಧರಾಗಿದ್ದುದರಿಂದ ಎಡ್ವರ್ಡನ ಬೆದರಿಕೆಗೆ ಲಕ್ಷ್ಯ ಕೊಡಲಿಲ್ಲ. ಈ ಪಾರ್ಲಿಮೆಂಟ್ ಒಪ್ಪಿಗೆ ಇಲ್ಲದ ತೆರಿಗೆಗಳನ್ನು ವಸೂಲ್ಮಾಡಿದುದು ಸರಿಯಲ್ಲ

ವೆಂಬ ತತ್ವಕ್ಕೆ ತಳಹದಿಯನ್ನು ಹಾಕಿಕೊಟ್ಟಿತು. ಎಡ್ವರ್ಡನ ಮಗನಾದ ಹದಿಮೂರು ವರ್ಷದ ಎರಡನೆ ಎಡ್ವರ್ಡ್ ತನ್ನ ತಂದೆ ಊರಿನಲ್ಲಿ ಇಲ್ಲದಿದ್ದಾಗ ಶ್ರೀಮಂತರ ಒತ್ತಾಯದ ಮೇಲೆ ಮ್ಯಾಗ್ನಕಾರ್ಟದ ತತ್ವಗಳನ್ನು ಖಚಿತಪಡಿಸಬೇಕಾಯಿತು. ಒಂದನೆ ಎಡ್ವರ್ಡನು ಈ ಏರ್ಪಾಟನ್ನು ಒಪ್ಪಿಕೊಳ್ಳಬೇಕಾಯಿತು. ಇದಕ್ಕೆ ಕನ್‌ಫರ್‌ಮೇಷಿಯೊ ಕ್ಯಾರ್ಟರಮ್ (Confirmatio Cartarum) ಎಂದು ಹೆಸರು.

**ಶ್ರೀಮಂತರಿಗೂ ಮತ್ತು ರಾಜರಿಗೂ ಯುದ್ಧ: ೧೩ ನೇ ಶತಮಾನ. ಫಲಿತಾಂಶಗಳು.**

| ಜಾನ್ | ಹೆನ್ರಿ III | ಎಡ್ವರ್ಡ್ I |
|---|---|---|
| ಮ್ಯಾಗ್ನಕಾರ್ಟ (ಫ್ಯೂಡಲ್ ಪದ್ಧತಿಯ ನಿಬಂಧನೆಗಳನ್ನು ಮುರಿದುದ್ದರ ಪರಿಣಾಮವಾಗಿ) | ಪ್ರೊವಿಷನ್ಸ್ ಆಫ್ ಆಕ್ಸ್‌ಫರ್ಡ್ (ಆಕ್ಸ್‌ಫರ್ಡ್ ಒಪ್ಪಂದ) ಸರಕಾರದ ಹತೋಟಿ ಮತ್ತು ಆಡಳಿತದಲ್ಲಿ ಸುಧಾರಣೆಗಳು. ೨೪ ಶ್ರೀಮಂತರ ಪ್ರತಿನಿಧಿಗಳುಳ್ಳ ಸಮಿತಿಗೆ ಸೇರಿದ್ದು. | ಕನ್‌ಫರ್ ಮೇಷಿಯೋ ಕ್ಯಾರ್‌ಟರಮ್ ಹೊಸ ತೆರಿಗೆಗಳನ್ನು ಶ್ರೀಮಂತರ ಒಪ್ಪಿಗೆ ಇಲ್ಲದೆ ಹಾಕಕೂಡದು. |
| ೧೨೧೫ | ೧೨೫೮ | ೧೨೯೭ |

ಎರಡನೇ ಎಡ್ವರ್ಡನ ಕಾಲದಲ್ಲಿ ಲಾರ್ಡ್ಸ್ ಆರ್ಡೀನರ್ಸ್ (Lords Ordainers) ಎಂಬ ಸಣ್ಣ ಶ್ರೀಮಂತರ ಗುಂಪೊಂದು ರಾಜ್ಯದ ಸೂತ್ರಗಳನ್ನು ತಮ್ಮ ಕೈಯಲ್ಲಿಟ್ಟುಕೊಂಡಿತು. ರಾಜನು ಮ್ಯಾಗ್ನಕಾರ್ಟದ ಷರತ್ತುಗಳನ್ನು ಪರಿಪಾಲಿಸುವುದಲ್ಲದೆ, ಅವನು ದೇಶಬಿಟ್ಟು ಹೋಗುವು

ದಕ್ಕೂ ಮತ್ತು ಮಂತ್ರಿಗಳನ್ನು ನಿಯಮಿಸಿಕೊಳ್ಳುವದಕ್ಕೂ ಪಾರ್ಲಿಮೆಂಟಿನ ಮುಖಂಡರಾದ ಶ್ರೀಮಂತರ ಗುಂಪಿನ ಅನುಮತಿ ಪಡೆಯಬೇಕಾಗಿತ್ತು. ಈ ಕಾನೂನುಗಳನ್ನು ಆರ್ಡಿನೆನ್‌ಸಸ್ (Ordinances) ಜಾರಿಗೆ ಬರುವಂತೆ ಮಾಡಿದುದರಿಂದ ಈ ಗುಂಪಿನ ಶ್ರೀಮಂತರಿಗೆ ಆರ್ಡೈನರ್ಸ್ ಎಂದು ಹೆಸರಾಯಿತು. ಅವರು ಇದನ್ನು ಕ್ರಿ. ಶ. ೧೩೧೦ ರಲ್ಲಿ ಸೇರಿದ ಪಾರ್ಲಿಮೆಂಟಿನ ಒಪ್ಪಿಗೆ ಮೇಲೆಯೇ ಕೈಗೊಂಡರು. ಕ್ರಿ.ಶ. ೧೩೨೨ ರಲ್ಲಿ ಪಾರ್ಲಿಮೆಂಟ್ ಪುನಃ ಈ ಶ್ರೀಮಂತರ ಗುಂಪನ್ನು ತೆಗೆದುಹಾಕಿತು. ಅಂದರೆ ಶ್ರೀಮಂತರಾಗಲಿ, ಇಂಗ್ಲೆಂಡಿನ ರಾಜನಾಗಲಿ ತಾವು ಮಾಡಬೇಕೆಂದಿದ್ದ ಮತ್ತು ಮಾಡಿದ ಕಾರ್ಯಗಳನ್ನು ಪಾರ್ಲಿಮೆಂಟಿನ ಮೂಲಕವೇ ನಡೆಸಬೇಕಾಗಿತ್ತು. ಎರಡನೇ ಎಡ್ವರ್ಡನ ಕಾಲದ ಚರಿತ್ರೆಯಲ್ಲಿ ಮೋಸ, ಘಾತುಕತನ, ಕೊಲೆ ಇವುಗಳನ್ನು ನಾವು ಹೇರಳವಾಗಿ ಕಾಣಬಹುದು. ಆದರೆ ಅವುಗಳ ಮಧ್ಯೆ ಪಾರ್ಲಿಮೆಂಟಿನ ಪ್ರಾಮುಖ್ಯತೆಯು ಬೆಳೆಯಿತೆಂಬ ಅಂಶವನ್ನು ಮರೆಯಬಾರದು.

ಮೂರನೇ ಎಡ್ವರ್ಡ್ ಫ್ರಾನ್ಸಿನೊಂದಿಗೆ ಯುದ್ಧ ಹೂಡಿದಾಗ ಅವನಿಗೆ ಹಣದ ಆವಶ್ಯಕತೆ ಒದಗಿತು. ಹೊಸ ತೆರಿಗೆಗಳನ್ನು ಇದಕ್ಕಾಗಿ ಹಾಕಬೇಕಾದಾಗ ಪಾರ್ಲಿಮೆಂಟ್ ಯುದ್ಧಮಾಡುವುದಕ್ಕೂ ಮತ್ತು ಶಾಂತಿಯನ್ನು ಸ್ಥಾಪಿಸುವುದಕ್ಕೂ ಹಕ್ಕನ್ನು ಪಡೆಯಿತು. ಕ್ರಿ. ಶ. ೧೩೭೬ ರಲ್ಲಿ ಪಾರ್ಲಿಮೆಂಟ್ ಮತ್ತೊಂದು ಅಧಿಕಾರವನ್ನು ಪಡೆಯಿತು. ರಾಜನ ಮಂತ್ರಿಗಳ ವರ್ತನೆಯನ್ನು ಖಂಡಿಸುವ ಹಕ್ಕು (Right of impeachment) ಇಲ್ಲಿಂದ ಪ್ರಾರಂಭವಾಯಿತು. ಎಡ್ವರ್ಡನ ಮೂರನೆಯ ಮಗನಾದ ಜಾರ್ಜ್ ಆಫ್ ಗಾಂಟ್ ಎಂಬುವನ ಮಂತ್ರಿಗಳಾದ ಲಾಟಿಮರ್ (Latimer) ಮತ್ತು ಲಯನ್ಸ್ (Lyons) ಎಂಬ ಇಬ್ಬರನ್ನು ಪಾರ್ಲಿಮೆಂಟ್ ಅವರ ದಬ್ಬಾಳಿಕೆಗಾಗಿ ಖಂಡಿಸಿ ಅವರನ್ನು ಕೆಲಸದಿಂದ ತೆಗೆದುಹಾಕಿತು. ಇದಕ್ಕೆ (ಕ್ರಿ. ಶ. ೧೩೭೬ ರ ಪಾರ್ಲಿಮೆಂಟ್) "ಒಳ್ಳೆಯ ಪಾರ್ಲಿಮೆಂಟ್" ಎಂದು ಹೆಸರು. ಆರು ತಿಂಗಳಲ್ಲೇ "ಒಳ್ಳೆಯ ಪಾರ್ಲಿಮೆಂಟ್" ಮಾಡಿದ ಕೆಲಸವನ್ನು ಜಾರ್ಜ್ ಆಫ್ ಗಾಂಟ್ ಅಳಿಸಿಹೋಗುವಂತೆ ಮತ್ತೊಂದು ಪಾರ್ಲಿಮೆಂಟಿನಿಂದ ಮಾಡಿಸಿದ

ನಾದರೂ ವರ್ತನೆಯನ್ನು ಖಂಡಿಸುವ ಅಧಿಕಾರ (Power of impeachment) ಪಾರ್ಲಿಮೆಂಟಿಗೆ ಉಳಿಯಿತು. ಆದರೆ ಈ ಅಧಿಕಾರವು ಮಧ್ಯಮ ಯುಗದ ಬ್ರಿಟನ್ನಿನ ಚರಿತ್ರೆಯಲ್ಲಿ ಅಷ್ಟು ಬಳಕೆಗೆ ಬರಲಿಲ್ಲ. ಸ್ಟುವರ್ಟ್ ರಾಜರ ಕಾಲದಲ್ಲಿ (೧೭ ನೆಯ ಶತಮಾನ) ಇದನ್ನು ಹೆಚ್ಚು ಹೆಚ್ಚು ಉಪಯೋಗಕ್ಕೆ ತರಲಾಯಿತು.

ಮೂರನೆಯ ಎಡ್ವರ್ಡನ ಆಳ್ವಿಕೆಯ ಕಾಲದಲ್ಲಿ ಪಾರ್ಲಿಮೆಂಟಿನಲ್ಲಿ ಹೌಸ್ ಆಫ್ ಕಾಮನ್ಸ್ (House of Commons) ಮತ್ತು ಹೌಸ್ ಆಫ್ ಲಾರ್ಡ್ಸ್ (House of Lords) ಎಂದು ಎರಡು ಭಾಗಗಳಾದುವೆಂದು ಹೇಳಬಹುದು. ಏಕೆಂದರೆ ಮಂತ್ರಿಗಳ ಮತ್ತು ಅಧಿಕಾರಿಗಳ ವರ್ತನೆಯನ್ನು ಖಂಡಿಸುವಾಗ ಹೌಸ್ ಆಪ್ ಕಾಮನ್ಸ್ ಇದರಲ್ಲಿ ಮುಖ್ಯ ಪಾತ್ರ ವಹಿಸುತ್ತಿತ್ತು. ಖಂಡನೆಯು ಹೌಸ್ ಆಫ್ ಲಾರ್ಡ್ಸ್ ಮುಂದೆ ಜರುಗುತ್ತಿತ್ತು.

**(ಎರಡನೇ ಎಡ್ವರ್ಡ್, ಕ್ರಿ. ಶ. ೧೩೦೭–೧೩೨೭.)**

ಎರಡನೆ ಎಡ್ವರ್ಡನ ಆಳ್ವಿಕೆಯಲ್ಲಿ ಇಂಗ್ಲೆಂಡಿನಲ್ಲಿ ಅಶಾಂತಿ ಮತ್ತು ದಂಗೆ ಇವು ತಲೆದೋರಿದುವು. ಬಲಿಷ್ಠರಾಗಿದ್ದ ಶ್ರೀಮಂತರು ಈ ಇಪ್ಪತ್ತು ವರ್ಷಗಳ ಕಾಲ ತಮ್ಮ ಪ್ರಾಬಲ್ಯವನ್ನು ಮುಂದುವರಿಸಿಕೊಂಡು ಹೋದರು. ಇವನ ಕಾಲದಲ್ಲಿ ಸ್ಕಾಟ್ಲೆಂಡಿನೊಂದಿಗೂ ಯುದ್ಧ ಒದಗಿತು. ಸ್ಕಾಟ್ಲೆಂಡ್ ಹನ್ನೊಂದನೆಯ ಶತಮಾನದಲ್ಲಿ ಡಂಕನ್ (Duncan) ಎಂಬ ರಾಜನ (೧೦೩೪–೪೦) ಆಳ್ವಿಕೆಗೆ ಒಳಪಟ್ಟಿತ್ತು. ಇವನನ್ನು ಕೊಲೆಮಾಡಿದ ಮ್ಯಾಕ್‌ಬೆತ್ (Macbeth) ಕ್ರಿ. ಶ. ೧೦೪೦ ರಿಂದ ೧೦೫೭ ರ ವರೆಗೆ ಆಳಿದನು. ಡಂಕನ್ನನ ಮಗ ಮಾಲ್‌ಕಮ್ (Malcolm) ಕ್ರಿ. ಶ. ೧೦೫೭–೯೩ರ ವರೆಗೆ ಆಳಿದನು. ಮ್ಯಾಕ್‌ಬೆತ್‌ನನ್ನು ಸೋಲಿಸಿ ಪಟ್ಟಕ್ಕೆ ಬಂದನು. ಇವನು ತನ್ನ ಆಳ್ವಿಕೆಯಲ್ಲಿ ಸ್ಕಾಟರನ್ನು ಒಂದು ಜನಾಂಗವನ್ನಾಗಿ (Nation) ಮಾರ್ಪಡಿಸಿದನು. ಇವನು ಮತ್ತು ರಾಣಿ ಮಾರ್ಗರೆಟ್ (Margeret) ಇಂಗ್ಲಿಷರ ನಡೆನುಡಿಗಳನ್ನು ಸ್ಕಾಟರಲ್ಲಿ ಆಚರಣೆಗೆ ತಂದರು. ಇವನ ಮಗ ಡೇವಿಡ್, ಸ್ಟೀಫನ್

ಇಂಗ್ಲೆಂಡಿನಲ್ಲಿ ಆಳುತ್ತಿದ್ದಾಗ ಸ್ಕಾಟ್ಲೆಂಡಿನ ದಕ್ಷಿಣ ಎಲ್ಲೆಯನ್ನು ವಿಸ್ತರಿಸತೊಡಗಿದನು. ಆದರೆ ಡೇವಿಡ್ಡನ ಮೊಮ್ಮಗ ವಿಲಿಯಮ್ ದಿ ಲಯನ್ ಎಂಬುವನು ಇಂಗ್ಲೆಂಡಿನ ಎರಡನೆಯ ಹೆನ್ರಿಯ ಕೈಸೆರೆ ಸಿಕ್ಕಿ ಅವನ ಅಧೀನನಾದನು. ಅಲ್ಲಿಂದಾಚೆಗೆ ಇಂಗ್ಲೆಂಡಿನ ರಾಜರು ಸ್ಕಾಟ್ಲೆಂಡ್ ಮೇಲೆ ತಮ್ಮ ಸಾರ್ವಭೌಮತ್ವವನ್ನು ಆಗಾಗ್ಗೆ ತೋರಿಸಲು ಪ್ರಯತ್ನಿಸುತ್ತಿದ್ದರು. ಹದಿಮೂರನೆಯ ಶತಮಾನದ ಕೊನೆಯಲ್ಲಿ ಸ್ಕಾಟ್ಲೆಂಡ್ ಮೂರನೇ ಅಲೆಕ್ಸಾಂಡರನ ಕೈಕೆಳಗೆ ತುಂಬಾ ಅಭಿವೃದ್ಧಿ ಹೊಂದಿತು. ಕ್ರಿ. ಶ. ೧೨೮೬ ರಲ್ಲಿ ಒದಗಿದ ಅವನ ಸಾವು ಸ್ಕಾಟ್ಲೆಂಡಿಗೆ ತುಂಬಾ ಅನಾನುಕೂಲವನ್ನು ತಂದಿತು. ಅವನಿಗೆ ಗಂಡುಮಕ್ಕಳಿಲ್ಲದಿದ್ದುದರಿಂದ ಅವನ ಮಗಳಾದ ಮಾರ್ಗರೆಟ್ (ನಾರ್ವೆ ಕುಮಾರಿ) ಸ್ಕಾಟ್ಲೆಂಡಿನ ರಾಣಿಯಾದಳು. ಇಂಗ್ಲೆಂಡಿನ ರಾಜನಾದ ಮೊದಲನೆ ಎಡ್ವರ್ಡನು ತನ್ನ ಮಗನಿಗೆ ಅವಳೊಡನೆ ವಿವಾಹವನ್ನು ಏರ್ಪಡಿಸಿ ಇಂಗ್ಲೆಂಡ್ ಮತ್ತು ಸ್ಕಾಟ್ಲೆಂಡ್ ರಾಜ್ಯಗಳು ಒಂದಾಗುವಂತೆ ಕ್ರಿ. ಶ. ೧೨೯೦ ರಲ್ಲಿ ಒಪ್ಪಂದವನ್ನು ಏರ್ಪಡಿಸಿದನು. ಆದರೆ ಅವಳ ಸಾವು ಸ್ಕಾಟ್ಲೆಂಡ್ ಮತ್ತು ಇಂಗ್ಲೆಂಡಿನ ಐಕ್ಯತೆಗೆ ಭಂಗತಂದಿತು. ಪುನಃ ಈ ಐಕ್ಯತೆ ಬರಲು ಇನ್ನೂ ೩೦೦ ವರ್ಷ ಮುಂದೆ ಬೇಕಾಯಿತು.

ಸ್ಕಾಟ್ಲೆಂಡಿನ ಸಿಂಹಾಸನಕ್ಕೆ ಬರಲು ಹದಿಮೂರು ಜನ ಹಕ್ಕುದಾರರು ಇದ್ದರು. ಇದರಿಂದ ದೇಶದಲ್ಲಿ ಅಂತಃಕಲಹ ತಲೆದೋರುವ ಸ್ಥಿತಿ ಒದಗಿತು. ಇವರಲ್ಲಿ ಸರಿಯಾದ ಹಕ್ಕುದಾರರನ್ನು ಪಟ್ಟಕ್ಕೆ ತರಬೇಕೆಂದು ಸ್ಕಾಟ್ಲೆಂಡಿನ ಕೆಲವು ಶ್ರೀಮಂತರು ಇಂಗ್ಲೆಂಡಿನ ಮೊದಲನೆ ಎಡ್ವರ್ಡನನ್ನು ಕೇಳಿಕೊಂಡರು. ತನ್ನ ಸಾರ್ವಭೌಮತ್ವವನ್ನು ಸ್ಥಾಪಿಸಲು ಕಾದಿದ್ದ ಮೊದಲನೆ ಎಡ್ವರ್ಡನಿಗೆ ಸುಸಮಯ ಒದಗಿತು. ಇದರ ಫಲವಾಗಿ ಕ್ರಿ.ಶ. ೧೨೯೦ರಲ್ಲಿ ಜಾನ್ ಬ್ಯಾಲಿಯಲ್ (John Balliol) ಪಟ್ಟಕ್ಕೆ ಆರಿಸಲ್ಪಟ್ಟನು. ಆದರೆ ಬ್ಯಾಲಿಯಲ್ ಎಡ್ವರ್ಡನ ಕೈಗೊಂಬೆಯಾಗಲಿಲ್ಲ. ಎಡ್ವರ್ಡನು ಕ್ರಿ. ಶ. ೧೨೯೬ ರಲ್ಲಿ ಡನ್‌ಬಾರ್ (Dunbar) ಎಂಬಲ್ಲಿ ಬ್ಯಾಲಿಯಲ್‌ನನ್ನು ಸೋಲಿಸಿ ಸ್ಕಾಟ್ಲೆಂಡನ್ನು ಇಂಗ್ಲೆಂಡಿಗೆ ಸೇರಿಸಿಕೊಂಡನು. ಆದರೆ ಸ್ಕಾಟ್ಲೆಂಡಿನ ದೇಶಪ್ರೇಮಿಗಳು ದಂಗೆಯೆದ್ದರು.

ಇವರಲ್ಲಿ ವ್ಯಾಲೆಸ್ (Wallace) ಎಂಬುವನು ಬಹಳ ಪ್ರಮುಖನಾದವನು. ವ್ಯಾಲೆಸನು ಸ್ಕಾಟ್ಲೆಂಡಿನ ಕಷ್ಟಕಾಲದಲ್ಲಿ ಸಹಾಯಕ್ಕೆ ಒದಗಿದವನು. ಅದಕ್ಕೆ ಮೊದಲು ಅವನ ಹೆಸರು ಯಾರಿಗೂ ಗೊತ್ತಿರಲಿಲ್ಲ. ಫ್ರಾನ್ಸಿನಲ್ಲಿ ಜೋನ್ ಆಫ್ ಆರ್ಕ್ (Joan of Arc) ಯಾವ ಕೆಲಸವನ್ನು ಮಾಡಿದಳೋ ಅದೇ ಕೆಲಸವನ್ನು ವ್ಯಾಲೆಸ್ ಸ್ಕಾಟ್ಲೆಂಡಿನಲ್ಲಿ ಮಾಡಿದನು. ಅವಳಂತೆಯೇ ಅವನೂ ಸ್ವಾತಂತ್ರ್ಯದ ಯುದ್ಧದ ಮಧ್ಯದಲ್ಲಿ ಜನರಿಂದ ಕೆಳಕ್ಕೆ ದೂಡಲ್ಪಟ್ಟು ಪ್ರಾಣವನ್ನೂ ಮತ್ತು ಕೀರ್ತಿಯನ್ನೂ ಕಳೆದುಕೊಂಡನು. ಕ್ರಿ. ಶ. ೧೨೯೭ ರಲ್ಲಿ ಅವನು ಸ್ಟರ್ಲಿಂಗ್ ಬ್ರಿಡ್ಜ್ (Stirling Bridge) ಎಂಬಲ್ಲಿ ಇಂಗ್ಲಿಷರನ್ನು ಸೋಲಿಸಿ ಸ್ಕಾಟ್ಲೆಂಡಿಗೆ ಜಯವನ್ನು ತಂದನು. ಆದರೆ ಮಾರನೆಯ ವರ್ಷ ಎಡ್ವರ್ಡನು ಸ್ಕಾಟರನ್ನು ಫಾಲ್‌ಕಿರ್ಕ್ (Falkirk) ಎಂಬಲ್ಲಿ ಸೋಲಿಸಿ ಸ್ಕಾಟ್ಲೆಂಡನ್ನು ವಶಪಡಿಸಿಕೊಂಡನು. ವ್ಯಾಲೆಸ್ ದೇಶಭ್ರಷ್ಟನಾದನು. ಏಳು ವರ್ಷಗಳನಂತರ ಅವನು ವಿಶ್ವಾಸಘಾತುಕತನದಿಂದ ಕಂಡುಹಿಡಿಯಲ್ಪಟ್ಟು ಕ್ರಿ. ಶ. ೧೩೦೫ ರಲ್ಲಿ ಎಡ್ವರ್ಡನಿಗೆ ಒಪ್ಪಿಸಲ್ಪಟ್ಟನು. ದೇಶದ್ರೋಹಿಯೆಂದು ಅವನನ್ನು ಗಲ್ಲಿಗೇರಿಸಲಾಯಿತು. ಆದರೆ ವ್ಯಾಲೆಸ್ ದೇಶದಲ್ಲಿ ಹರಡಿದ್ದ ದೇಶಪ್ರೇಮ ಅವನು ಹೋದ ಮೇಲೂ ಉಳಿದು ಸ್ಕಾಟರಿಗೆ ಮೇಲ್ಪಙ್ಕ್ತಿ ಹಾಕಿಕೊಟ್ಟಿತು. ಇದನ್ನು ಅನುಸರಿಸಿದವನು ರಾಬರ್ಟ್ ಬ್ರೂಸ್ (Robert Bruce). ಅನೇಕ ವೇಳೆ ಎಡ್ವರ್ಡನಿಗೆ ಸೋತಿದ್ದರೂ ಇವನು ಸ್ಕಾಟ್ಲೆಂಡಿನ ವಿಮೋಚನೆಗೆ ಕಂಕಣಬದ್ಧನಾದನು.

ಕ್ರಿ. ಶ. ೧೩೦೬ ರಲ್ಲಿ ರಾಬರ್ಟ್ ಬ್ರೂಸ್ ಸ್ಕಾಟ್ಲೆಂಡಿಗೆ ರಾಜನಾದನು. ಮೊದಲನೆ ಎಡ್ವರ್ಡ್ ಸ್ಕಾಟ್ಲೆಂಡನ್ನು ಗೆಲ್ಲಲು ತನ್ನ ಸೈನ್ಯದೊಡನೆ ಹೊರಟನು. ಆದರೆ ಸ್ಕಾಟ್ಲೆಂಡ್ ತಲಪುವುದರಲ್ಲಿಯೇ ಕಾಲವಾದನು. ಎರಡನೆ ಎಡ್ವರ್ಡನು ಮತ್ತೊಂದು ಸೈನ್ಯದೊಡನೆ ಸ್ಕಾಟ್ಲೆಂಡಿಗೆ ಮುತ್ತಿಗೆ ಹಾಕಿದನು. ಬ್ಯಾನಕ್ ಬರ್ನ್ (Bannock Burn) ಎಂಬಲ್ಲಿ ಕ್ರಿ. ಶ. ೧೩೧೪ ರಲ್ಲಿ ಬಿರುಸಾಗಿ ಕದನ ನಡೆಯಿತು. ರಾಬರ್ಟ್ ಬ್ರೂಸ್ ವಿಜಯಿಯಾದನು. ಅವನು ಕ್ರಿ. ಶ. ೧೩೨೯ ರ ವರೆಗೂ ಸ್ಕಾಟ್ಲೆಂಡನ್ನು ಸ್ವತಂತ್ರವಾಗಿ ಆಳಿ, ರಾಜ್ಯವನ್ನು ತನ್ನ ಸಣ್ಣ ಮಗನಾದ

ಎರಡನೆ ಡೇವಿಡ್‌ಗೆ ವಹಿಸಿದನು. ಈ ಕಾಲದಲ್ಲಿ ಜಾನ್ ಬ್ಯಾಲಿಯಲ್‌ನ ಮಗನಾದ ಎಡ್ವರ್ಡ್ ಬ್ಯಾಲಿಯಲ್ (Edward Balliol) ಇಂಗ್ಲಿಷ್ ಸೈನ್ಯದ ಸಹಾಯದಿಂದ ಸ್ಕಾಟ್ಲೆಂಡಿಗೆ ಮುತ್ತಿಗೆ ಹಾಕಿದನು. ಸ್ಕಾಟರು ಡೇವಿಡ್‌ನನ್ನು ರಕ್ಷಣೆಗಾಗಿ ಫ್ರಾನ್ಸಿಗೆ ಕಳುಹಿಸಿದರು. ಫ್ರಾನ್ಸಿಗೂ ಮತ್ತು ಇಂಗ್ಲೆಂಡಿಗೂ ನೂರು ವರ್ಷಗಳ ಯುದ್ಧ (100 Years War) ಪ್ರಾರಂಭವಾದುದ್ದರಿಂದ ಸ್ಕಾಟ್ಲೆಂಡಿಗೆ ಉಸಿರಾಡಲು ಅವಕಾಶ ಸಿಕ್ಕಿತು. ಕ್ರೆಸಿ (Crecy) ಕದನವಾಗುತ್ತಿದ್ದಾಗ ಫ್ರೆಂಚರ ಪರವಾಗಿ ಸ್ಕಾಟ್ಲೆಂಡ್ ಇಂಗ್ಲಿಷರ ಮೇಲೆ ಬಿದ್ದಿತು. ಆದರೆ ನೆವಿಲೀಸ್ ಕ್ರಾಸ್ (Nevilles Cross) ಎಂಬಲ್ಲಿ ಡೇವಿಡ್ ಸೋತು ಇಂಗ್ಲಿಷರ ಕೈಸೆರೆಯಾದನು. ಡೇವಿಡ್ಡನ ನಂತರ ಅವನ ಸಹೋದರಿಯ ಮಗ ರಾಬರ್ಟ್ ಸ್ಟುವರ್ಟ್ (Robert Stuvert) ಸ್ಕಾಟ್ಲೆಂಡಿನ ರಾಜನಾದನು. ಈ ಸ್ಟುವರ್ಟ್ ಸಂತತಿಯವರೇ ಸ್ಕಾಟ್ಲೆಂಡನ್ನು ಮೂರು ನೂರು ವರ್ಷಗಳ ಕಾಲ ಆಳಿದರು.

## ಒಂದನೆ ವಿಲಿಯಂ ಕಾಲದಿಂದ ಒಂದನೆ ಎಡ್ವರ್ಡ್ ಕಾಲದವರೆಗೆ ಜನಜೀವನ

ಒಂದನೆ ವಿಲಿಯಂ ಇಂಗ್ಲೆಂಡಿಗೆ ಬಂದ ನೂರು ವರ್ಷದೊಳಗೆ ನಾರ್ಮನರು, ಸಾಕ್ಸನರು, ಗೆದ್ದವರು, ಗೆಲ್ಲಲ್ಪಟ್ಟವರು (Conqueror and Conquered) ಎಂಬ ಭೇದಭಾವವು ಅಳಿಸಿಹೋಗಿತ್ತಾದರೂ ಫ್ರೆಂಚ್ ಪ್ರತಿಭೆಯು ಮೇಲ್ತರಗತಿಯ ಜನಗಳ ಉಡಿಗೆ ತೊಡಿಗೆ ಆಚಾರ ವ್ಯವಹಾರ ಮೊದಲಾದವುಗಳಲ್ಲಿ ಹೆಚ್ಚಾಗಿ ಮೂಡಿತ್ತು. ಒಂದನೆ ಹೆನ್ರಿಯು ಸ್ವಲ್ಪ ಮಟ್ಟಿಗೆ ಇಂಗ್ಲಿಷ್ ಬಲ್ಲವನಾಗಿದ್ದನು. ಆದರೆ ಎರಡನೆ ಹೆನ್ರಿಗೆ ಒಂದು ಪದವೂ ಗೊತ್ತಿರಲಿಲ್ಲ. ಮೂರನೆ ಹೆನ್ರಿಗೆ ಸ್ವಲ್ಪಮಟ್ಟಿಗೆ ಇಂಗ್ಲಿಷಿನ ಪರಿಚಯವಿತ್ತು. ಇಂಗ್ಲಿಷ್ ನ್ಯಾಯಾಸ್ಥಾನಗಳ ಭಾಷೆಯೇನೋ ಆಗಿತ್ತು. ಆದರೆ ಹದಿಮೂರನೆ ಶತಮಾನದ ಕೊನೆಯ ಹೊತ್ತಿಗೆ ಇಂಗ್ಲಿಷ್ ಸಾಹಿತ್ಯದ ಭಾಷೆಯಾಗಿಯೂ ಮಾರ್ಪಾಟಾಯಿತು. ಜಾನನ ಕಾಲದ ಲಯಮನ್ (Layamon) ಮತ್ತು

ಮತ್ತೊಬ್ಬ ಓರಮ್ (Orm) ಇಂಗ್ಲಿಷಿನಲ್ಲಿ ಪದ್ಯಗಳನ್ನು ಬರೆದರು. ಇವರು ಚಾಸರ್ (Chaucer) ಕವಿಯ ಕಾಲಕ್ಕಿಂತ ನೂರೈವತ್ತು ವರ್ಷ ಮುಂಚೆಯೂ, ಆಂಗ್ಲೋ ಸಾಕ್ಸನ್ ಕ್ರಾನಿಕಲ್ ನಿಂತುಹೋದ ಐವತ್ತು ವರ್ಷದ ಮೇಲೆಯೂ ಇದ್ದವರು.

ಈ ಕಾಲವು ಸಾಹಿತ್ಯದ ಯುಗವಲ್ಲ; ವಾಸ್ತುಶಿಲ್ಪದ ಯುಗ. ವಾಸ್ತುಶಿಲ್ಪದಲ್ಲಿ ನಾರ್ಮನರಿಗೂ ಮತ್ತು ಸಾಕ್ಸನರಿಗೂ ಅಪಾರವಾದ ಅಂತರವಿದೆ. ಸಾಕ್ಸನರು ಕಟ್ಟಿದ ಕಟ್ಟಡಗಳು ಮರದಿಂದ ನಿರ್ಮಿತವಾಗಿದ್ದುದರಿಂದ ಅಷ್ಟೇನೂ ಉಳಿದು ಬಂದಿಲ್ಲ. ಆದರೆ ನಾರ್ಮನರು ಕಲ್ಲಿನ ಸೊಗಸಾದ ಚರ್ಚ್ ಕಟ್ಟಡಗಳನ್ನೂ ರಕ್ಷಣಾರ್ಥವಾದ ಅರಮನೆಗಳನ್ನೂ (Cathedrals and Castles) ಇಂಗ್ಲೆಂಡಿನಲ್ಲಿ ಹೇರಳವಾಗಿ ಕಟ್ಟಿಸಿದರು.

ಈ ಕಾಲದಲ್ಲಿ ಚರ್ಚಿನ ಕಟ್ಟಡವು ಪುರಾತನ ಭಾರತದ ದೇವಾಲಯಗಳಂತೆ ಮತಧರ್ಮಕ್ಕೆ ಮಾತ್ರವಲ್ಲದೆ ಪಾಠಶಾಲೆ (Schools) ಮತ್ತು ಹಳ್ಳಿಯ ಇತರ ವ್ಯವಹಾರಗಳಿಗೂ ಉಪಯೋಗಿಸಲ್ಪಡುತ್ತಿತ್ತು.

ಜಾನ್ ದೊರೆ ಮತ್ತು ಅವನ ಸಮಕಾಲೀನ ಕ್ರೈಸ್ತ ಜಗದ್ಗುರು ಮೂರನೆ ಇನ್ನೊಸೆಂಟ್ (Innocent) ಇವರುಗಳ ಸಮಕಾಲೀನರಾದ ಸೇಂಟ್ ಫ್ರಾನ್ಸಿಸ್ (Saint Frances) ಮತ್ತು ಸೇಂಟ್ ಡಾಮಿನಿಕ್ (Saint Dominic) ಎರಡು ಭಿಕ್ಷುಕ ಸಂನ್ಯಾಸಿ (Friars) ವರ್ಗಗಳನ್ನು ಸ್ಥಾಪಿಸಿದರು. ಫ್ರಾನ್ಸಿಸ್ ಗುಂಪಿಗೆ ಸೇರಿದವರು ಬೂದು ಬಣ್ಣದ ವಸ್ತ್ರವನ್ನೂ, ಡಾಮಿನಿಕ್ ಗುಂಪಿನವರು ಕರೀವಸ್ತ್ರವನ್ನೂ ಧರಿಸುತ್ತಿದ್ದರು. ಮೊದಮೊದಲು ಡಾಮಿನಿಕನ್‌ನರು ವಿದ್ಯೋತ್ಸಾಹಿಗಳೂ ಮತ್ತು ಫ್ರಾನ್ಸಿಸ್‌ಕನ್‌ಸನರು ಬಡತನದ ಸೇವೆಗೆ ಟೊಂಕ ಕಟ್ಟಿದವರಾದರೂ ಕಾಲಕ್ರಮೇಣ ಒಬ್ಬರು ಮತ್ತೊಬ್ಬರ ಧ್ಯೇಯಗಳನ್ನು ಅನುಸರಿಸಿ ಹದಿಮೂರನೆಯ ಶತಮಾನದಲ್ಲಿ ಒಟ್ಟಿನಲ್ಲಿ ಇಂಗ್ಲೆಂಡಿಗೆ ಹೆಚ್ಚು ಸೇವೆಯನ್ನು ಸಲ್ಲಿಸಿದರು.

ಹನ್ನೆರಡನೆ ಶತಮಾನದಲ್ಲಿ ಅನೇಕ ವಿಶ್ವವಿದ್ಯಾನಿಲಯುಗಳು ಸ್ಥಾಪಿಸಲ್ಪಟ್ಟವು. ಪ್ಯಾರಿಸ್ ತತ್ವಶಾಸ್ತ್ರಕ್ಕೂ, ಬೊಲೋನ (Bolo-

gna) ನ್ಯಾಯಶಾಸ್ತ್ರಕ್ಕೂ ಮತ್ತು ಸ್ಯಾಲರ್‌ನೊ (Salerno) ವೈದ್ಯ ಶಾಸ್ತ್ರಕ್ಕೂ ಹೆಸರುವಾಸಿಯಾಗಿದ್ದವು.

ಒಂದನೆ ಹೆನ್ರಿಯ ಕಾಲದಿಂದಲೇ ಆಕ್ಸ್‌ಫರ್ಡಿನಲ್ಲಿ (Oxford) ವಿದ್ಯಾಭ್ಯಾಸದ ಚಟುವಟಿಕೆಯು ಪ್ರಾರಂಭವಾಗಿತ್ತು. ಆದರೆ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯವು ಎರಡನೆ ಹೆನ್ರಿಯ ಕಾಲದಲ್ಲಿ ಬೆಕೆಟ್ಟನೊಡನೆ ಜಗಳದ ಪ್ರಯುಕ್ತ ಸ್ಥಾಪಿತವಾಯಿತು. ಆಗ್ಗೆ ಯೂರೋಪಿನಲ್ಲಿ ಪ್ಯಾರಿಸ್ಸಿನ ವಿಶ್ವವಿದ್ಯಾನಿಲಯವೇ ತುಂಬಾ ಹೆಸರುವಾಸಿಯಾಗಿತ್ತು. ಅನೇಕ ಇಂಗ್ಲಿಷ್ ವಿದ್ಯಾರ್ಥಿಗಳು ಅಂದರೆ ಹೆಚ್ಚಾಗಿ ಪಾದ್ರಿಗಳು ಮತ್ತು ಚರ್ಚಿಗೆ ಸೇರಿದ ಇತರರು ಅಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದರು. ಕ್ರಿ. ಶ. ೧೧೬೭ ರಲ್ಲಿ ಫ್ರಾನ್ಸಿನ ರಾಜನಾದ ಏಳನೆ ಲೂಯಿಯು ಬೆಕೆಟ್ಟನಿಗೆ ಬೆಂಬಲಕೊಟ್ಟದ್ದರಿಂದ ಹೆನ್ರಿಯು ಪ್ಯಾರಿಸ್ಸಿನಲ್ಲಿದ್ದ ಇಂಗ್ಲಿಷ್ ವಿದ್ಯಾರ್ಥಿಗಳೆಲ್ಲಾ ಹಿಂದಿರುಗುವಂತೆ ಅಪ್ಪಣೆ ಮಾಡಿದನು. ಹೀಗೆ ಹಿಂದಿರುಗಿ ಬಂದವರೇ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯಕ್ಕೆ ಅಡಿಗಲ್ಲನ್ನು ಹಾಕಿದವರು. ನಲವತ್ತು ವರ್ಷಗಳಾದಮೇಲೆ (ಕ್ರಿ. ಶ. ೧೨೦೯) ಆಕ್ಸ್‌ಫರ್ಡಿನ ಪಾದ್ರಿಯೊಬ್ಬನು (Clerk) ಪಟ್ಟಣಿಗನೊಬ್ಬನನ್ನು ಕೊಂದುದರಿಂದ ಪಟ್ಟಣಿಗರು ಪ್ರತೀಕಾರಕ್ಕೆ ತೊಡಗಲು, ಅಧೈರ್ಯದಿಂದ ಕೂಡಿದ ಕೆಲವು ವಿದ್ಯಾರ್ಥಿಗಳು ರೆಡಿಂಗ್ (Reading) ಮತ್ತು ಕೇಂಬ್ರಿಡ್ಜ್ (Cambridge) ಮೊದಲಾದ ಕಡೆಗಳಿಗೆ ಚದುರಿದರು. ಆಗಿನ ಆಕ್ಸ್‌ಫರ್ಡ್ ವಿದ್ವಾಂಸರಲ್ಲಿ ಸೈಮುಂಡಿಮಾಂಟ್‌ಫರ್ಡನ ಸ್ನೇಹಿತನಾದ ಗ್ರಾಸ್‌ಟೆಸ್ಟ್ (Grosseteste) ಅಗ್ರಗಣ್ಯನು. ಅವನು ಗ್ರೀಕ್ ಮತ್ತು ಗಣಿತ ಶಾಸ್ತ್ರದಲ್ಲಿ ಅದ್ವಿತೀಯ ಪಂಡಿತನಾಗಿದ್ದನು. ಅಷ್ಟೆ ಅಲ್ಲದೆ ಅವನು ಅಸಾಧಾರಣ ಉಪಾಧ್ಯಾಯನೂ ಆಗಿದ್ದನು. ಅವನ ಅನೇಕ ಶಿಷ್ಯರು ಜರ್ಮನಿ, ಫ್ರಾನ್ಸ್, ಇಟಲಿ ಮೊದಲಾದ ಪ್ರದೇಶಗಳಿಂದ ಆಹ್ವಾನಿಸಲ್ಪಡುತ್ತಿದ್ದರು. ಲಾಟಿನ್ ಭಾಷೆಯಲ್ಲೇ ವಿದ್ಯಾಭ್ಯಾಸವು ಜರುಗುತ್ತಿದ್ದುದರಿಂದ ಉಪಾಧ್ಯಾಯರು ಒಂದು ವಿಶ್ವವಿದ್ಯಾನಿಲಯದಿಂದ ಇನ್ನೊಂದು ವಿಶ್ವವಿದ್ಯಾನಿಲಯಕ್ಕೆ ಹೋಗಲು ಅವಕಾಶವಿತ್ತು. ಉದ್ದಾಮ ಗಣಿತ ಶಾಸ್ತ್ರಜ್ಞ ರೋಜರ್ ಬೇಕನ್ (Roger Bacon) ಗ್ರಾಸ್‌ಟೆಸ್ಟಿನ

ಪಟ್ಟಶಿಷ್ಯ. ಅವನಿಗೆ ಇತರರು ಹೇಳಿದುದೆ ವೇದವಾಕ್ಯವಾಗಲಿಲ್ಲ. ಪ್ರಯೋಗಗಳಲ್ಲಿ ತುಂಬಾ ನಂಬಿಕೆ. (Challenge to accepted authority and value of experiment) ಈ ಕಾರಣಗಳಿಗಾಗಿ ಅವನನ್ನು ವಿಜ್ಞಾನದ ತಂದೆ ಎಂದು ಕರೆಯುವುದು ವಾಡಿಕೆಯಾಗಿದೆ. ಅವನು ಕನ್ನಡಕಗಳನ್ನೂ ಒಂದು ತರಹ ಟೆಲಿಸ್ಕೊಪನ್ನೂ (ದೂರದರ್ಶಕ ಯಂತ್ರ) ಕಂಡು ಹಿಡಿದನೆಂದು ಹೇಳಲಾಗಿದೆ. ಇವನಿಗೆ ಬಂದೂಕದ ಮದ್ದಿನ ಉಪಯೋಗವೂ ತಿಳಿದಿತ್ತು. ಈ ಗುರು ಶಿಷ್ಯರಿಬ್ಬರು ತಮ್ಮ ವಿಮರ್ಶಾತ್ಮಕ ದೃಷ್ಟಿಯಿಂದ ನವೋದಯದ (Renaissance) ಬೀಜವನ್ನು ಬಿತ್ತಿದರು.

ಗ್ರಾಸ್‌ಟೆಸ್ಟನ ಕಾಲದಲ್ಲಿ ಕಾಲೇಜುಗಳಿರಲಿಲ್ಲ. ಉದಾರಿಗಳು ವಿದ್ಯಾರ್ಥಿಗಳ ಉಪಯೋಗಕ್ಕಾಗಿ “ ಹಾಲ್ (Hall) ” ಗಳಿಗೆ ಹಣ ಮತ್ತು ಆಸ್ತಿ ಮೊದಲಾದುವುಗಳನ್ನು ದತ್ತಿಯಾಗಿ ಬಿಟ್ಟದ್ದುದರ ಪ್ರಯುಕ್ತ ಕಾಲೇಜುಗಳು ಪ್ರಾರಂಭವಾದುವು. ಕ್ರಿ. ಶ. ೧೩೦೦ ರ ವೇಳೆಗೆ ಆಕ್ಸ್‌ಫರ್ಡಿನಲ್ಲಿ ನಾಲ್ಕು ಕಾಲೇಜುಗಳೂ, ಕೇಂಬ್ರಿಡ್ಜಿನಲ್ಲಿ ಒಂದೂ ಸ್ಥಾಪಿತವಾದುವು.

ಈ ಕಾಲದಲ್ಲಿ ಜನಸಂಖ್ಯೆಯಲ್ಲಿ ನಾಲ್ಕರಲ್ಲಿ ಮೂರು ಭಾಗ ಜಮೀನಿನಿಂದ ಬಂಧಿಸಲ್ಪಟ್ಟ (Tied to Soil) ರೈತಾಪಿ ಜನಗಳೇ (Vell-eins) ಆಗಿದ್ದರು. ಹನ್ನೆರಡು ಮತ್ತು ಹದಿಮೂರನೇ ಶತಮಾನದ ಸಮಾಜದಲ್ಲಿ ಈ ಜನರು ತೃಪ್ತರಾಗಿ ಜೀವನ ಸಾಗಿಸಿದರು. ಆದರೆ, ಹದಿನಾಲ್ಕನೆಯ ಶತಮಾನದಲ್ಲಿ ಅವರ ಶಾಂತಿಗೂ ಮತ್ತು ತೃಪ್ತಿಗೂ ಭಂಗವುಂಟಾಯಿತು.

### **ಮೂರನೇ ಎಡ್ವರ್ಡ್,** (ಕ್ರಿ. ಶ. ೧೩೨೭–೧೩೭೭)

ಮೂರನೆ ಎಡ್ವರ್ಡನ ಕಾಲದಲ್ಲಿ ಫ್ರಾನ್ಸಿನೊಂದಿಗೆ ನೂರು ವರ್ಷಗಳ ಯುದ್ಧ ಪ್ರಾರಂಭವಾಯಿತು. ಈ ಯುದ್ಧವು ಒಂದೇ ಸಮನಾಗಿ ನೂರು ವರ್ಷಗಳ ಕಾಲ ನಡೆಯಲಿಲ್ಲ. ಆಗಾಗ್ಗೆ ನಿಂತು ನಿಂತು ನಡೆಯುತ್ತಿತ್ತು.

ಕಾರಣಗಳು : 1. ಇಂಗ್ಲೆಂಡಿಗೆ ಫ್ರಾನ್ಸಿನಲ್ಲಿ ಗ್ಯಾಸ್‌ಕನಿ (Gascony) ಎಂಬ ಪ್ರದೇಶವು ಸೇರಿತ್ತು. ಇದಕ್ಕಾಗಿ ಇಂಗ್ಲಿಷ್ ರಾಜರು ಫ್ರೆಂಚ್ ರಾಜರಿಗೆ ಮರ್ಯಾದೆಯನ್ನು (Homage) ತೋರಿಸ ಬೇಕಾಗಿತ್ತು. ಈ ಗ್ಯಾಸ್‌ಕನಿ ಪ್ರದೇಶವನ್ನು ಫ್ರೆಂಚರು ಇಂಗ್ಲಿಷರಿಂದ ಕಿತ್ತುಕೊಳ್ಳಲು ಹವಣಿಸುತ್ತಿದ್ದರು. ಆದರೆ ಇಂಗ್ಲಿಷರು ಅದನ್ನು ಬಿಟ್ಟು ಕೊಡಲು ತಯಾರಾಗಿರಲಿಲ್ಲ.

2. ಫ್ರೆಂಚ್ ರಾಜರು, ಇಂಗ್ಲೆಂಡಿಗೆ ವಿರೋಧವಾಗಿದ್ದ ಸ್ಕಾಟ್ಲೆಂಡಿಗೆ ಸಹಾಯ ನೀಡುತ್ತಿದ್ದರು. ಮೂರನೇ ಎಡ್ವರ್ಡ್ ಸ್ಕಾಟರನ್ನು ಕ್ರಿ. ಶ. ೧೩೩೩ ರಲ್ಲಿ ಹ್ಯಾಲಿಡನ್ ಹಿಲ್ (Halidon Hill) ಎಂಬಲ್ಲಿ ಸೋಲಿಸಿದ ಬಳಿಕ ಡೇವಿಡ್ ಬ್ರೂಸನನ್ನು ಸ್ಕಾಟರು ಫ್ರಾನ್ಸಿಗೆ ಕಳುಹಿಸಿದರು. ಫ್ರಾನ್ಸ್ ಅವನಿಗೆ ಪುನಃ ರಾಜ್ಯ ಕೊಡಿಸಲು ಹವಣಿಸುತ್ತಿತ್ತು.

3. ಫ್ಲಾಂಡರ್ಸ್‌ನಲ್ಲಿದ್ದ (Flnaders) ಘೆಂಟ್ (Ghent) ಬ್ರೂಗ್ಸ್ (Bruges) ಮೊದಲಾದ ಬಟ್ಟೆಯನ್ನು ತಯಾರಿಸುತ್ತಿದ್ದ ಪಟ್ಟಣಗಳು ಫ್ರಾನ್ಸಿನ ಮೇಲೆ ದಂಗೆಯೆದ್ದಿದ್ದವು. ಇಂಗ್ಲಿಷರು ಈ ಪಟ್ಟಣಗಳಿಗೆ ಉಣ್ಣೆಯನ್ನು ರಫ್ತು ಮಾಡುತ್ತಿದ್ದುದ್ದರಿಂದ ಅವುಗಳ ಪಕ್ಷವನ್ನು ವಹಿಸಿದರು.

ಯುದ್ಧವು ಪ್ರಾರಂಭವಾದಾಗ ಮೂರನೇ ಎಡ್ವರ್ಡನು ತಾನೇ ಫ್ರೆಂಚ್ ರಾಜ್ಯಕ್ಕೆ ಹಕ್ಕುದಾರನೆಂದು ವಾದಿಸಿದನು. ಏಕೆಂದರೆ ಎರಡನೆ ಎಡ್ವರ್ಡನ ಹೆಂಡತಿಯಾದ ಇಸಬೆಲ್ಲಳು (Isabella) ಫ್ರೆಂಚ್‌ರಾಜನ ಸಹೋದರಿಯಾಗಿದ್ದಳು.

**ನೂರುವರ್ಷಗಳ ಯುದ್ಧ – ಕ್ರಿ. ಶ. ೧೩೪೦-೧೪೫೩.**

**ನಾಲ್ಕು ಹಂತಗಳು (Four stages).**

3 ನೇ ಎಡ್ವರ್ಡ್ } (೧) ೧೩೪೦–೧೩೬೦ : ಇಂಗ್ಲೆಂಡಿಗೆ ತುಂಬಾ ವಿಜಯ.
(೨) ೧೩೬೦–೧೩೭೧: ಇಂಗ್ಲೆಂಡಿಗೆ ತುಂಬಾ ಅಪಜಯ ಮತ್ತು ಫ್ರಾನ್ಸಿನಲ್ಲಿ ಇಂಗ್ಲಿಷರಿಗೆ ಸೇರಿದ್ದ ಪ್ರದೇಶಗಳ ನಷ್ಟ.

5 ನೆ ಹೆನ್ರಿ: (೩) ೧೪೧೫–೧೪೨೦ : ಐದನೆ ಹೆನ್ರಿಯ ಅದ್ಭುತ ವಿಜಯಗಳು.

6 ನೆ ಹೆನ್ರಿ: (೪) ೧೪೨೨–೧೪೫೩ : ಇಂಗ್ಲೆಂಡಿಗೆ ಅಪಜಯ. ಫ್ರಾನ್ಸಿನಲ್ಲಿದ್ದ ಎಲ್ಲಾ ಪ್ರದೇಶವೂ ಇಂಗ್ಲೆಂಡಿನ ಕೈಬಿಟ್ಟು ಕೆಲೆ (Calais) ಮಾತ್ರ ಉಳಿಯಿತು.

ಕ್ರಿ. ಶ. ೧೩೪೦ ರಲ್ಲಿ ನಡೆದ ಸಮುದ್ರದ ಮೇಲಿನ (Naval) ಸ್ಲೂಯಿಸ್ (Sluys) ಎಂಬ ಕದನವು ಇಂಗ್ಲಿಷರಿಗೆ ವಿಜಯವನ್ನು ಗಳಿಸಿಕೊಟ್ಟಿತು. ಇದರಿಂದ ಮೂವತ್ತು ವರ್ಷಗಳಕಾಲ ಇಂಗ್ಲಿಷರಿಗೆ ಸಮುದ್ರದ ಮೇಲಿನ ಹತೋಟಿ ಸಿಕ್ಕಿತು. ಕ್ರಿ. ಶ. ೧೩೪೬ ರಲ್ಲಿ ಇಂಗ್ಲಿಷರು ಕ್ರೆಸಿ (Crecy) ಎಂಬ ಕದನದಲ್ಲಿ ಫ್ರೆಂಚರನ್ನು ಸಂಪೂರ್ಣವಾಗಿ ಸೋಲಿಸಿದರು. ಇದರಿಂದ ಅವರಿಗೆ ಕೆಲೆ ಪಟ್ಟಣವು ಕೈವಶವಾಯಿತು. ಇದು ಇಂಗ್ಲಿಷ್ ಸೈನ್ಯದ ನೆಲೆಯಾಗಿ ಪರಿಣಮಿಸಿದ್ದುದಲ್ಲದೆ ಉಣ್ಣೆಯ ವ್ಯಾಪಾರದ ಕೇಂದ್ರವೂ ಆಯಿತು. ಕ್ರಿ. ಶ. ೧೩೫೬ ರಲ್ಲಿ ಮೂರನೆ ಎಡ್ವರ್ಡನ ಮಗ ಬ್ಲಾಕ್‌ಪ್ರಿನ್ಸ್ (Black Prince) ಎಂಬುವನು ಪಾಯಿಟಿಯರ್ಸ್ (Poitiers) ಎಂಬಲ್ಲಿ ಫ್ರೆಂಚರನ್ನು ಸೋಲಿಸಿ ಫ್ರೆಂಚ್ ರಾಜನಾದ ಜಾನ್ ಎಂಬುವನನ್ನು ಸೆರೆಹಿಡಿದನು. ಈ ವಿಜಯಗಳನ್ನು ಗಳಿಸಲು ಇಂಗ್ಲಿಷರಿಗೆ ಸಹಾಯ ಮಾಡಿದುದು ಉದ್ದವಾದ ಬಿಲ್ಲೆಂದರೆ (Long Bow) ತಪ್ಪಲ್ಲ. ಆಗಲೇ ಸ್ಕಾಟರೊಡನೆ ನಡೆದ ಯುದ್ಧದಲ್ಲಿ (Holidon Hill ೧೩೩೩) ಉದ್ದವಾದ ಬಿಲ್ಲಿನ ಉಪಯುಕ್ತತೆಯು ಪ್ರಕಾಶಕ್ಕೆ ಬಂದಿತ್ತು. ಕ್ರೆಸಿಯಲ್ಲಿ ಕುದುರೆಯ ಮೇಲೆ ಹತ್ತಿಕುಳಿತು ಯುದ್ಧಮಾಡುತ್ತಿದ್ದ ಫ್ರೆಂಚ್ ಯೋಧರನ್ನು ಉದ್ದವಾದ ಬಿಲ್ಲನ್ನು ಉಪಯೋಗಿಸುತ್ತಿದ್ದ ಬಿಲ್ಲುಗಾರರು ಸದೆಬಡಿದರು. ಪಯಿಟಿಯರ್ಸ್‌ನಲ್ಲಿ ಫ್ರೆಂಚ್‌ಯೋಧರು ಕುದುರೆಯಿಂದ ಇಳಿದು ಕಾಲಾಳುಗಳ ಜೊತೆಯಲ್ಲಿ ಇಂಗ್ಲಿಷರ ಮೇಲೆ ಎದುರುಬಿದ್ದರು. ಆದರೂ ಅವರ ಆಟ ಉದ್ದದ ಬಿಲ್ಲಿನ ಮುಂದೆ ನಡೆಯಲಿಲ್ಲ. ಬಂದೂಕದ ಮದ್ದು (Gun Powder) ಯೂರೋಪಿನಲ್ಲಿ ಬಳಕೆಗೆ ಬರುವವರೆಗೂ

ಉದ್ದವಾದ ಬಿಲ್ಲೇ ಪ್ರಾಮುಖ್ಯತೆಯನ್ನು ಪಡೆದಿತ್ತು. ಭಾನುವಾರ ಮತ್ತು ಇತರ ರಜಾದಿನಗಳಲ್ಲಿ ರೈತರೂ ಮತ್ತು ಇತರರೂ ಉದ್ದವಾದ ಬಿಲ್ಲಿನ ಪ್ರಯೋಗವನ್ನು ಅಭ್ಯಾಸಮಾಡಬೇಕೆಂದೂ, ಕಾಲ್ಚೆಂಡು ಮತ್ತು ಟೆನಿಸ್ ಆಟಗಳನ್ನು ಆಡಕೂಡದೆಂದೂ ಪಾರ್ಲಿಮೆಂಟ್ ಇಂಗ್ಲೆಂಡಿನಲ್ಲಿ ವಿಧಾಯಕ ಮಾಡಿದ್ದುದರಲ್ಲಿ ಆಶ್ಚರ್ಯವೇನೂ ಇಲ್ಲ.

ನಾಲ್ಕು ವರ್ಷಗಳನಂತರ (ಕ್ರಿ. ಶ. ೧೩೬೦) ಕೆಲೆ ಅಥವಾ ಬ್ರಿಟಿಗ್ನೆ (Bretigne) ಕೌಲಿನಿಂದ ಯುದ್ಧವು ಮುಕ್ತಾಯಗೊಂಡಿತು. ಇಂಗ್ಲೆಂಡಿಗೆ ಫ್ರಾನ್ಸಿನಲ್ಲಿ ಅಕ್ವಿಟೈನ್ ಎಂಬ ಪ್ರದೇಶವು ಮತ್ತು ಕೆಲೆ ಪಟ್ಟಣವೂ ಕೊಡಲ್ಪಟ್ಟುವು (Territory). ಫ್ರಾನ್ಸಿನ ರಾಜನಾದ ಜಾನನ ಬಿಡುಗಡೆಗೆ ಮುನ್ನೂರು ಮಿಲಿಯನ್ ಚಿನ್ನದ ನಾಣ್ಯವನ್ನು ತೆರಬೇಕೆಂದೂ ಗೊತ್ತಾಯಿತು.

ನೂರುವರ್ಷಗಳ ಯುದ್ಧದ ಎರಡು ಹಂತಗಳು

ಒಂಬತ್ತು ವರ್ಷಗಳ ನಂತರ ಪುನಃ ಯುದ್ಧ ಪ್ರಾರಂಭವಾಯಿತು. ಆದರೆ, ಈ ಹಂತದಲ್ಲಿ ಇಂಗ್ಲಿಷರ ಕೈ ಸಾಗಲಿಲ್ಲ. ಫ್ರಾನ್ಸಿನಲ್ಲಿ ದಕ್ಷನಾದ ಐದನೆ ಚಾರ್ಲ್ಸನು ಪಟ್ಟಕ್ಕೆ ಬಂದಿದ್ದನು. ಅಷ್ಟೆ ಅಲ್ಲದೆ, ಫ್ರಾನ್ಸಿನಲ್ಲಿ ಬರ್ಟ್ರಾಂಡ್ ಡು ಗೆಸ್ಕ್ಲಿನ್ (Bertrand du Guesclin) ಎಂಬ ಮಹಾ ಯೋಧನು ಸೈನ್ಯಾಧಿಪತಿಯಾಗಿದ್ದನು :ಅವನ ಸಲಹೆಯ ಪ್ರಕಾರ ಫ್ರೆಂಚರು ಪ್ರತ್ಯಕ್ಷ ಕದನಗಳಲ್ಲಿ ತೊಡಗದೆ ಪರೋಕ್ಷ ಯುದ್ಧವನ್ನು ಪ್ರಾರಂಭಿಸಿದರು. ಕ್ರಿ.ಶ. ೧೩೭೨ ರಲ್ಲಿ ಲ್ಯಾರೊಷ್ಯೇಲ್ (La Rochelle) ಎಂಬಲ್ಲಿ ನಡೆದ ಸಮುದ್ರ ಕದನದಲ್ಲಿ ಇಂಗ್ಲಿಷರು ಸೋತು

ಹೋದರು. ಇದರಿಂದ ಇಂಗ್ಲೆಂಡಿಗೆ ಸಮುದ್ರದ ಮೇಲಿನ ಹತೋಟಿಯು ತಪ್ಪಿಹೋಯಿತು.

ಐದನೆ ಹೆನ್ರಿಯ (ಕ್ರಿ. ಶ. ೧೪೧೩–೧೪೨೨) ಕಾಲದಲ್ಲಿ ಪುನಃ ನೂರು ವರ್ಷಗಳ ಯುದ್ಧ ಪ್ರಾರಂಭವಾಯಿತು. ಅವನು ಫ್ರಾನ್ಸಿನ ಸಿಂಹಾಸನಕ್ಕೆ ತಾನೇ ಅಧಿಕಾರಿಯೆಂದು ಹೇಳಿಕೊಳ್ಳಲಾರಂಭಿಸಿದನು. ಕ್ರಿ. ಶ. ೧೪೧೫ ರಲ್ಲಿ ನಡೆದ ಎಜಿನ್ ಕೋರ್ಟ್ (Agin Court) ಯುದ್ಧದಲ್ಲಿ ಪುನಃ ಇಪ್ಪತ್ತುನಾಲ್ಕುಸಾವಿರ ಇಂಗ್ಲಿಷ್ ಬಿಲ್ಲಾಳುಗಳು ತಮ್ಮ ಕೈಚಳಕವನ್ನು ಪ್ರದರ್ಶಿಸಿದರು. ಫ್ರೆಂಚರ ಕಡೆ ಹತ್ತುಸಾವಿರ ಸೈನಿಕರು ಮಡಿದರು. ಇಂಗ್ಲಿಷಿನವರ ಕಡೆ ಮಡಿದವರ ಸಂಖ್ಯೆ ನೂರು ಮಾತ್ರ. ಕ್ರಿ. ಶ. ೧೪೨೦ ರ ಟ್ರಾಯ್ಸ್ (Troyes) ಒಪ್ಪಂದದಿಂದ ಹೆನ್ರಿಯು ಫ್ರಾನ್ಸಿನ ಸಿಂಹಾಸನದ ಉತ್ತರಾಧಿಕಾರಿಯೆಂದೂ, ಈ ಮಧ್ಯೆ ಫ್ರಾನ್ಸಿನ ರಾಜನ ಮಗಳಾದ ಕ್ಯಾಥರೀನ್ (Katherine) ಎಂಬುವಳನ್ನು ಮದುವೆಯಾಗಬೇಕೆಂದೂ ಗೊತ್ತಾಯಿತು.

ಐದನೆ ಹೆನ್ರಿಯು ಸತ್ತ ಎಂಟು ವರ್ಷಗಳವರೆಗೂ ಇಂಗ್ಲಿಷರು ಫ್ರಾನ್ಸಿನ ಮೇಲೆ ತಮ್ಮ ಪ್ರಭುತ್ವವನ್ನು ಸ್ಥಾಪಿಸಿಕೊಂಡಿದ್ದರು. ಇವನ ಸಹೋದರನಾದ ಡ್ಯೂಕ್ ಆಫ್ ಬೆಡ್‌ಫರ್ಡ್ (Duke of Bed-ford) ಎಂಬುವನು ದಕ್ಷತೆಯಿಂದಲೂ ಚತುರತೆಯಿಂದಲೂ ಫ್ರೆಂಚರನ್ನು ಒಲಿಸಿಕೊಂಡಿದ್ದನು. ಫ್ರಾನ್ಸಿನ ರಾಜನಾದ ಏಳನೇ ಚಾರ್ಲ್ಸನು (Charles VII) ಬಲಹೀನನೂ ಅಸಮರ್ಥನೂ ಆಗಿದ್ದನು. ಫ್ರಾನ್ಸಿನ ಶ್ರೀಮಂತರು ಮತ್ತು ಸೈನ್ಯಾಧಿಪತಿಗಳು ಒಗ್ಗಟ್ಟಿನಿಂದ ಕೂಡಿರಲಿಲ್ಲ. ಫ್ರಾನ್ಸಿನಲ್ಲಿ ದೇಶಪ್ರೇಮವನ್ನು ಹರಡಿ, ಯೋಧರನ್ನು ಹುರಿದುಂಬಿಸಿ, ಇಂಗ್ಲಿಷರ ಅಪಜಯಕ್ಕೆ ಕಾರಣಳಾದವಳು ಜೋನ್ ಆಫ್ ಆರ್ಕ್ (Joan of Arc). ಇವಳು ಫ್ರಾನ್ಸಿನ ಒಂದು ಹಳ್ಳಿಯಲ್ಲಿ ಜೀವಿಸುತ್ತಿದ್ದ ರೈತನೊಬ್ಬನ ಮಗಳು. ಚಿಕ್ಕಂದಿನಿಂದಲೂ ಇವಳು ಆಗಾಗ್ಗೆ ಆವೇಶಪರಳಾಗುತ್ತಿದ್ದಳು. ಹದಿನೇಳು ವರ್ಷದ ಇವಳು ಗಂಡಸಿನಂತೆ ಉಡುಪು ಧರಿಸಿ, ಉಕ್ಕಿನ ಕವಚ ತೊಟ್ಟು ಯುದ್ಧಾಸಕ್ತಿಯುಳ್ಳವಳಾಗಿದ್ದಳು. ಏಳನೇ ಚಾರ್ಲ್ಸನು ಇವಳ ಧೈರ್ಯ ನೋಡಿ ಕ್ರಿ.ಶ. ೧೪೨೯ ರಲ್ಲಿ

ಇಂಗ್ಲಿಷರಿಂದ ಮುತ್ತಲ್ಪಟ್ಟಿದ್ದ ಅರ್ಲಿಯನ್ಸ್ (Orleans) ಎಂಬ ಪಟ್ಟಣವನ್ನು ಬಿಡಿಸಲು ಈಕೆಯನ್ನು ನಿಯಮಿಸಿದನು. ಅವಳ ಶಕ್ತಿ ಸಾಮರ್ಥ್ಯದಿಂದ ಹುರುಪುಗೊಂಡಿದ್ದ ಫ್ರೆಂಚ್ ಸೈನಿಕರು ಇಂಗ್ಲಿಷರನ್ನು ಆರ್ಲಿಯನ್ಸ್‌ನಿಂದ ಓಡಿಸಿದರು. ಪ್ಯಾಟೆ (Patay) ಎಂಬಲ್ಲಿ ನಡೆದ ಕದನದಲ್ಲಿ ಇಂಗ್ಲಿಷರು ಸೋತರು. ಇಷ್ಟಾದಮೇಲೆ ಜೋನಳು ಹಿಂದಿರುಗಲು ಚಾರ್ಲ್ಸ್‌ನ ಅಪ್ಪಣೆಯನ್ನು ಕೇಳಿದಳು. ಅವಳಿಗೆ ತಾನು ಮಾಡಬೇಕಾಗಿದ್ದ ಕೆಲಸವು ಮುಗಿದಂತೆ ಭಾಸವಾಯಿತು. ಆದರೆ ರಾಜನು ಅವಳನ್ನು ಬಿಟ್ಟುಕೊಡಲಿಲ್ಲ. ಆದರೆ ಅವಳು ಪ್ಯಾರಿಸನ್ನು ಹಿಡಿಯಲು ಹೋದಾಗ ವಿಜಯಗಳಿಸಲಿಲ್ಲ. ಕೊನೆಗೆ ಬರ್ಗಂಡಿ (Burgundy) ಸೈನಿಕರ ಕೈಗೆ ಸಿಕ್ಕಿಬಿದ್ದಳು. ಅವರು ಅವಳನ್ನು ಹತ್ತುಸಾವಿರ ಚಿನ್ನದ ನಾಣ್ಯಗಳಿಗೆ ಇಂಗ್ಲಿಷರಿಗೆ ಮಾರಿದರು. ಸೋಲಿನಿಂದ ಕೋಪಗೊಂಡಿದ್ದ ಇಂಗ್ಲಿಷರು ಅವಳು ಮಾಟಗಾತಿಯೆಂದು ವಾದಿಸಿ ಕ್ರೈಸ್ತ ಚರ್ಚಿನ ಅನುಮತಿಯಿಂದ ಜೀವಸಹಿತ ಸುಟ್ಟರು. ಹೀಗೆ ಜೋನಳ ಜೀವನ ಯಾತ್ರೆ ಅತ್ಯಲ್ಪ ಕಾಲದಲ್ಲೆ ಮುಗಿದುಹೋಯಿತು.

ಅವಳು ಕ್ರಿ. ಶ. ೧೪೨೯ ನೇ ಮಾರ್ಚಿಯಲ್ಲಿ ಏಳನೆ ಚಾರ್ಲ್ಸ್‌ನನ್ನು ಭೇಟಿ ಮಾಡಿದಳು. ಮೇ ತಿಂಗಳಲ್ಲಿ ಆರ್ಲಿಯನ್ಸ್ ಪಟ್ಟಣವನ್ನು ಇಂಗ್ಲಿಷರಿಂದ ಬಿಡಿಸಿದಳು, ರೀಮ್ಸ್ (Reims)ನಗರದಲ್ಲಿ ಜುಲೈನಲ್ಲಿ ಚಾರ್ಲ್ಸ್‌ನ ಕಿರೀಟಧಾರಣೋತ್ಸವವನ್ನು ನೆರವೇರಿಸಿದಳು; ಸಪ್ಟೆಂಬರಿನಲ್ಲಿ ಪ್ಯಾರಿಸ್ಸಿನಲ್ಲಿ ಸೋತಳು; ಕ್ರಿ. ಶ. ೧೪೩೦ ನೇ ಮೇನಲ್ಲಿ ಫ್ರೆಂಚ್ ನಾಯಕರುಗಳ ಹೊಟ್ಟೆಕಿಚ್ಚು ಮತ್ತು ಅರೆಮನಸ್ಸಿನ ಬೆಂಬಲಗಳ ಫಲವಾಗಿ ಕ್ಯಾಂಪೀನ್ (Compiegne) ಎಂಬಲ್ಲಿ ಸೆರೆ ಸಿಕ್ಕಿದಳು. ಕ್ರಿ. ಶ. ೧೪೩೧ ನೇ ಮೇನಲ್ಲಿ ಆಕೆಯನ್ನು ಬರ್ಗಂಡಿಯ ಸೈನಿಕರು ಮಾರಿದರು; ಚರ್ಚಿನಿಂದ ಅವಳ ಖಂಡನೆ ಮತ್ತು ಇಂಗ್ಲಿಷರಿಂದ ಜೀವಸಹಿತ ಸುಡಲ್ಪಟ್ಟದ್ದು ಇವು—ಎರಡೇ ವರ್ಷಗಳಲ್ಲಿ ನಡೆದುಹೋದುವು.

ಇಂಗ್ಲಿಷರು ಜೋನಳನ್ನೇನೋ ಸುಟ್ಟರು. ಆದರೆ ಅವಳು ಫ್ರೆಂಚರಲ್ಲಿ ಮೂಡಿಸಿದ ದೇಶಪ್ರೇಮವನ್ನು ಸುಡಲಾಗಲಿಲ್ಲ. ಅಲ್ಲಿಂದಾಚೆಗೆ ಇಂಗ್ಲಿಷರಿಗೆ ಸೋಲಿನ ಮೇಲೆ ಸೋಲು ಸಂಭವಿಸಿತು. ಕ್ರಿ. ಶ. ೧೪೫೦

ರಲ್ಲಿ ನಡೆದ ಫಾರ್‌ಮಿಗ್ನಿ (Formigny) ಎಂಬ ಕದನದ ಫಲಿತಾಂಶ ವಾಗಿ ನಾರ್ಮಂಡಿಯು ಇಂಗ್ಲಿಷರ ಕೈಬಿಟ್ಟುಹೋಯಿತು. ಕ್ಯಾಸ್ಟಿಲಾನ್ (Castillon) ಕದನವು ನೂರುವರ್ಷಗಳ ಯುದ್ಧದ ಕೊನೆಯನ್ನು ಕ್ರಿ. ಶ. ೧೪೫೩ ರಲ್ಲಿ ತಂದಿತು. ಫ್ರೆಂಚರು ಬಂದೂಕದ ಮದ್ದು ಮತ್ತು ಗುಂಡುಗಳನ್ನು ಈ ಕದನದಲ್ಲಿ ಉಪಯೋಗಿಸಿ ಜಯವನ್ನು ಗಳಿಸಿದರು. ಸಾಧಾರಣ ಫ್ರೆಂಚ್ ಸೈನಿಕನೊಬ್ಬನ ಬಂದೂಕದ ಗುಂಡಿಗೆ ಇಂಗ್ಲಿಷ್ ಸೈನ್ಯಾಧಿಪತಿಯಾದ ಟಾಲ್‌ಬಾಟ್ (Tal bot) ತುತ್ತಾದನು. ಫಿರಂಗಿಯಿಂದ ಶ್ರೀಮಂತರ ಪ್ರಾಬಲ್ಯ ಕೊನೆಗೊಂಡಿತೆಂದು ಹೇಳಬಹುದು. ಇದೇ ವರ್ಷದಲ್ಲಿ ತುರ್ಕಿಯರು (Turks) ಫಿರಂಗಿ ಸಹಾಯದಿಂದ ಕಾನ್‌ಸ್ಟಾಂಟಿನೋಪಲನ್ನು (Constantinople) ಹಿಡಿದರು. ಇವು ಮಧ್ಯಮ ಯುಗದ ಅಂತ್ಯವನ್ನು ತಂದುವು. ಇಂಗ್ಲಿಷರಿಗೆ ನೂರು ವರ್ಷಗಳ ಯುದ್ಧದ ಕೊನೆಯಲ್ಲಿ ಫ್ರಾನ್ಸಿನಲ್ಲಿ ಕೆಲೆ ಪಟ್ಟಣವು ಮಾತ್ರ ಉಳಿಯಿತು.

ಮೂರನೆ ಎಡ್ವರ್ಡನು ಬರಿ ಯುದ್ಧದಲ್ಲೇ ಆಸಕ್ತಿಯುಳ್ಳವನಾಗಿರಲಿಲ್ಲ. ಅವನ ಆಳ್ವಿಕೆಯು ಇಂಗ್ಲೆಂಡಿನ ವಾಣಿಜ್ಯದ ಚರಿತ್ರೆಯಲ್ಲಿ ಮುಖ್ಯವಾದುದು. ಹದಿನಾಲ್ಕನೆ ಶತಮಾನದಲ್ಲಿ ಇಂಗ್ಲೆಂಡ್ ಉಣ್ಣೆ ತಯಾರಿಕೆಯಲ್ಲಿ ಪ್ರಾಮುಖ್ಯತೆ ಪಡೆದಿತ್ತು. ಇಂಗ್ಲೆಂಡಿನ ಉಣ್ಣೆಯು ಹೆಚ್ಚಾಗಿ ಫ್ಲಾಂಡರ್ಸ್ ದೇಶದ ಪಟ್ಟಣಗಳಿಗೆ ರಫ್ತಾಗುತ್ತಿತ್ತು. ಕೆಲೆಯು ಉಣ್ಣೆಯ ರಫ್ತಿನ ದೊಡ್ಡ ಕೇಂದ್ರವಾಗಿತ್ತು. ಪ್ರತಿಯೊಂದು ಉಣ್ಣೆಯ ರಫ್ತಿನ ದೊಡ್ಡ ಚೀಲದ ಮೇಲೂ ಆರು ಷಿಲಿಂಗ್ ಎಂಟು ಪೆನ್ನಿ ಆದಾಯವು ಎಡ್ವರ್ಡನಿಗೆ ಬರುತ್ತಿತ್ತು.

ಮೂರನೆ ಎಡ್ವರ್ಡನು ಉಣ್ಣೆಯನ್ನು ರಫ್ತುಮಾಡುತ್ತಿದ್ದ ಇಂಗ್ಲೆಂಡ್ ದೇಶವನ್ನು ಉಣ್ಣೆಯ ಬಟ್ಟೆಯನ್ನು ಮಾಡುವ ದೇಶವನ್ನಾಗಿ ಮಾರ್ಪಡಿಸಿದನು. ಅವನು ಫ್ಲಾಂಡರ್ಸ್ ದೇಶದಿಂದ ಅನೇಕ ನೇಯ್ಗೆಯವರು ಇಂಗ್ಲೆಂಡಿಗೆ ಬಂದು ನೆಲಸುವಂತೆ ಮಾಡಿದನು. ಕ್ರಿ. ಶ. ೧೩೩೧ ರಲ್ಲಿ ಜಾನ್‌ಕೆಂಪ್ (John Kempe) ಎಂಬುವನು ನಾರ್‌ವಿಚ್ (Norwich) ಎಂಬಲ್ಲಿ ನೆಲಸಿ ಉಣ್ಣೆಯ ಬಟ್ಟೆಯ ಕೈಗಾರಿಕೆ

ಯನ್ನು ಸ್ಥಾಪಿಸಿದನು. ಅದರ ಹತ್ತಿರವಿದ್ದ ವರ್‌ಸ್ಟೆಡ್ (Worsted) ಎಂಬ ಹಳ್ಳಿಯು ಅದೇ ಹೆಸರಿನ ಉಣ್ಣೆಯ ಬಟ್ಟೆಯ ತಯಾರಿಕೆಯಲ್ಲಿ ಹೆಸರು ಪಡೆಯಿತು.

**ಕರಿಯ ಸಾವು** (Black Death) : ಕ್ರೆಸಿ ಮತ್ತು ಪಾಯ್‌ಟಿಯರ್ಸ್ ಕದನಗಳ ನಡುವೆ ಇಂಗ್ಲೆಂಡಿನಲ್ಲಿ ಒಂದು ದೊಡ್ಡ ರೋಗವು ತಲೆಹಾಕಿತು. ಇದಕ್ಕೆ ಕರಿಯ ಸಾವು ಎಂದು ಹೆಸರು. ಕ್ರಿ. ಶ. ೧೩೪೯ ಮತ್ತು ೧೩೫೦ ರಲ್ಲಿ ಬ್ರಿಟಿಷ್ ದ್ವೀಪಗಳು ಯೂರೋಪಿನಿಂದ ಬಂದ ಭಯಂಕರವಾದ ಪ್ಲೇಗಿಗೆ ತುತ್ತಾದವು. ರೋಗ ಸೋಕಿದ ಇಪ್ಪತ್ತುನಾಲ್ಕು ಘಂಟೆಗಳಲ್ಲಿ ಕರಿ ಗುಳ್ಳೆ ಎದ್ದು ಸಾವು ಒದಗುತ್ತಿತ್ತು. ವಿಪರೀತವಾಗಿ ಜನರು ಸತ್ತರು. ಇದರಿಂದ ಸತ್ತವರ ಸಂಖ್ಯೆಯನ್ನು ಸರಿಯಾಗಿ ಗೊತ್ತು ಮಾಡಲು ಸಾಧ್ಯವಿಲ್ಲ. ಆಗಿನ ಕಾಲದ ಫ್ರಾಯ್‌ಸಾರ್ಟ್ (Froissart) ಎಂಬ ಚರಿತ್ರೆಕಾರನು ಮೂರರಲ್ಲಿ ಒಂದುಭಾಗದಷ್ಟು ಜನರು ಸತ್ತರೆಂದು ವರದಿ ಮಾಡಿದ್ದಾನೆ. ಸತ್ತವರಿಗೆ ಅಂತ್ಯಸಂಸ್ಕಾರ ನಡೆಸಲು ಪಾದ್ರಿಗಳು ಕೂಡಾ ಇರಲಿಲ್ಲ. ಜಮೀನುಗಳಲ್ಲಿ ಬೆಳೆದು ನಿಂತಿದ್ದ ಬೆಳೆಗಳು ಕುಯ್ಯುವವರಿಲ್ಲದೆ ದನಗಳ ನುಗ್ಗುವಿಕೆಯಿಂದ ಹಾಳಾದವು.

ಕರಿಯ ಸಾವಿನಿಂದ ಹೆಚ್ಚು ಆರ್ಥಿಕ ಮುಗ್ಗಟ್ಟು ಉಂಟಾಯಿತು. ಎಲ್ಲೆಲ್ಲಿ ನೋಡಿದರೂ ಕೂಲಿಗಾರರ ಸುಳಿವೇ ಇಲ್ಲ. ಅವರಲ್ಲಿ ಅಳಿದುಳಿದವರು ಹೆಚ್ಚು ಹೆಚ್ಚು ಕೂಲಿಯನ್ನು ಕೇಳತೊಡಗಿದರು. ಕರಿಯ ಸಾವು ಬರುವದಕ್ಕಿಂತ ಮುಂಚೆಯೇ ಶ್ರೀಮಂತರಾದ ಜಮೀನುದಾರರು ತಮ್ಮ ಜಮೀನಿನಲ್ಲಿ ಒತ್ತಾಯವಾಗಿ ವಾರಕ್ಕೆ ಕೆಲವು ದಿವಸ ಕೆಲಸಮಾಡುತ್ತಿದ್ದ ವಿಲೀನ್ಸ್ (Villeins) ಎಂಬ ಕೀಳುದರ್ಜೆ ರೈತಾಪಿ ಜನಗಳಿಂದ ಅವರ ಸೇವೆಗೆ ಬದಲಾಗಿ ಹಣವನ್ನು ತೆಗೆದುಕೊಳ್ಳುವ ಪದ್ಧತಿಯನ್ನು ಪ್ರಾರಂಭ ಮಾಡಿದ್ದರು. ಈ ಹಣದಿಂದ ಅವರು ಬೇರೆ ಕೂಲಿಗಾರರನ್ನು ನಿಯಮಿಸಿಕೊಳ್ಳುತ್ತಿದ್ದರು. ಕರೀಸಾವಿನಿಂದ ಕೂಲಿಗಾರರ ಸಂಖ್ಯೆ ಕಡಿಮೆಯಾದ ಪ್ರಯುಕ್ತ (Shortage of Labour) ಕೊಡಬೇಕಾದ ಕೂಲಿಯು ದರ ಹೆಚ್ಚಾಯಿತು. ಇಷ್ಟೇ ಅಲ್ಲದೆ ಪದಾರ್ಥಗಳ ಬೆಲೆಯೂ ಏರಿತು. ಆದರೂ ಕ್ರಿ. ಶ. ೧೩೫೧ ರಲ್ಲಿ ಜಾರಿಗೆ ಬಂದ ಕಾರ್ಮಿಕ ಶಾಸನವು

(Statute of Labourers) ಹಿಂದೆ ಇದ್ದಂತೆಯೆ ಕೂಲಿಯ ಮತ್ತು ಪದಾರ್ಥಗಳ ಬೆಲೆಯು (Old wages and old prices) ಇರಬೇಕೆಂದೂ, ಹೆಚ್ಚುಕೂಲಿ ಕೊಟ್ಟವರು ಮತ್ತು ಹೆಚ್ಚುಕೂಲಿ ತೆಗೆದು ಕೊಂಡವರು ಶಿಕ್ಷೆಗೆ ಗುರಿಯಾಗಬೇಕೆಂದೂ ವಿಧಿಸಿತು. ಇದರಿಂದ ಕೂಲಿಗಾರರು ಹೆಚ್ಚುಕೂಲಿ ಸಿಕ್ಕುವ ಕಡೆಗೆ ಹೊರಡಲು ಪ್ರಾರಂಭಿಸಿದರು. ಒಡೆಯ ಮತ್ತು ಕೂಲಿಗಾರರ ಬಾಂಧವ್ಯವು ವಿಷಮಿಸಿತು. ಸ್ವಂತಂತ್ರ ಕೂಲಿಗಾರರ ಸ್ಥಿತಿಗಿಂತಲೂ ವಿಲೀನರ ಸ್ಥಿತಿಯು ಕೀಳಾಯಿತು. ಅವರಲ್ಲನೇಕರು ಜಮೀನುಗಳನ್ನು ಬಿಟ್ಟು ಓಡಿಹೋದರು. ಇದರಿಂದ ಕೃಷಿ (Agriculture) ಹಿಂದೆ ಬಿದ್ದಿತು.

ಅನೇಕ ಶ್ರೀಮಂತರು ಹೆಚ್ಚುಕೂಲಿ ಕೊಡಲಾರದೆ, ತಮ್ಮ ಜಮೀನುಗಳಲ್ಲಿ ವ್ಯವಸಾಯ ಕೈಗೊಳ್ಳಲಾರದೆ (Cultivation) ಹೆಚ್ಚುಹೆಚ್ಚಾಗಿ ಕುರಿಗಳನ್ನು ಮೇಯಿಸಲು (Sheep grazing) ಉದ್ಯುಕ್ತರಾದರು. ಇದರ ಫಲವಾಗಿ ಉಣ್ಣೆಯ ಶೇಖರಣೆ ಜಾಸ್ತಿಯಾದುದಲ್ಲದೆ, ಪಟ್ಟಣಗಳಿಗೆ ಓಡಿಹೋಗಿದ್ದ ಕೂಲಿಗಾರರು ಉಣ್ಣೆಬಟ್ಟೆ ನೇಯುವ ಕೈಗಾರಿಕೆಯಲ್ಲಿ ಭಾಗವಹಿಸುವಂತಾಯಿತು.

**ರೈತರ ದಂಗೆ** (ಕ್ರಿ. ಶ. ೧೩೮೧): ಹೀಗೆ ಅಶಾಂತಿ ಮತ್ತು ಅತೃಪ್ತಿಯಿಂದ ಕೂಡಿದ್ದ ಇಂಗ್ಲಿಷ್ ಸಮಾಜದಲ್ಲಿ ಒಂದು ದೊಡ್ಡ ಘಟನೆಯು ಸಂಭವಿಸಿತು. ಇದುವರೆಗೆ ಬ್ರಿಟನ್ನಿನ ಚರಿತ್ರೆಯಲ್ಲಿ ರಾಜರು, ಶ್ರೀಮಂತರು, ಮಠಾಧಿಪತಿಗಳು ಇವರೇ ಮೊದಲಾದವರ ಆಗು ಹೋಗುಗಳನ್ನು ನಾವು ಕಂಡಿದ್ದೇವೆ. ಆದರೆ ಒಂದೇ ತಿಂಗಳಲ್ಲಿ ಉಲ್ಬಣಾವಸ್ಥೆಗೇರಿ ಮುಗಿದುಹೋದ ರೈತರ ದಂಗೆಯು ನಮಗೆ ಬ್ರಿಟನ್ನಿನ ನಿಜವಾದ ಜನಗಳ ಪರಿಚಯವನ್ನು ಮಾಡಿಕೊಡುತ್ತದೆ. ಈ ವೇಳೆಗೆ ಮೂರನೆಯ ಎಡ್ವರ್ಡ್ ಮತ್ತು ಅವನ ಮಗ ಬ್ಲಾಕ್‌ಪ್ರಿನ್ಸ್ ಕಾಲವಾಗಿದ್ದರು. ಬ್ಲಾಕ್ ಪ್ರಿನ್ಸಿನ ಮಗನಾದ ಎರಡನೆ ರಿಚರ್ಡನು ಪಟ್ಟಕ್ಕೆಬಂದು ನಾಲ್ಕು ವರ್ಷಗಳಾಗಿತ್ತು. ಫ್ರಾನ್ಸಿನೊಂದಿಗೆ ಆಗುತ್ತಿದ್ದ ಯುದ್ಧದ ಖರ್ಚಿಗೆ ಹಣವನ್ನು ಒದಗಿಸಲು ಕ್ರಿ. ಶ. ೧೩೮೧ ರಲ್ಲಿ ಒಂದು ಷಿಲಿಂಗ್ ತಲೆಗಂದಾಯವನ್ನು (Polltax) ರಿಚರ್ಡನ ಮಂತ್ರಿಗಳು ಹದಿನೈದು ವರ್ಷಕ್ಕಿಂತ ಜಾಸ್ತಿ

ವಯಸ್ಸಾಗಿದ್ದವರ ಮೇಲೆ ಹಾಕಿದರು. ಇದರಿಂದ ದಂಗೆಯೊದಗಲು ಕಾರಣವಾಯಿತು. ದಂಗೆಯ ಮುಖಂಡರುಗಳ ಹೆಸರುಗಳಲ್ಲಿ ಎರಡು ಮುಖ್ಯವಾದುವು. ಜಾನ್ ಬಾಲ್ (John Ball) ಎಂಬ ಪಾದ್ರಿಯು ಮೊದಲಿನಿಂದಲೂ ಬಡವರ ಹಿತೈಷಿ. ಬಡವರು ಮತ್ತು ಬಲ್ಲಿದರು ದೇವರ ಮುಂದೆ ಸಮಾನರೆಂದು ಅವನು ಆಗಾಗ್ಯೆ ಬೋಧಿಸುತ್ತಿದ್ದನು. ವಾಟ್ ಟೈಲರ್ (Wat tyler) ಎಂಬ ಮತ್ತೊಬ್ಬನು ಸೈನಿಕವೃತ್ತಿಯಲ್ಲಿ ಸ್ವಲ್ಪ ಮಟ್ಟಿಗೆ ಶಿಕ್ಷಣ ಪಡೆದಿದ್ದು, ಗುಂಪಿನ (Mob) ಮುಖಂಡನಾಗುವುದಕ್ಕೆ ಬೇಕಾದ ಗುಣಗಳೆಲ್ಲವನ್ನೂ ಹೊಂದಿದ್ದನು. ದಂಗೆಕಾರರು ಲಂಡನ್ನಿಗೆ ನುಗ್ಗಿ ಅದನ್ನು ವಶಪಡಿಸಿಕೊಂಡರು. ತಲೆಗಂದಾಯ ಹಾಕಲು ಕಾರಣನಾದ ಸಡ್‌ಬರಿ (Sud bury) ಎಂಬುವನನ್ನು ಕೊಂದರು. ಕೆಲವರು ಪರದೇಶದಿಂದ ಬಂದು ಇಂಗ್ಲೆಂಡಿನ ನೆಯ್ಗೆ ಕೈಗಾರಿಕೆಯ ಅಭಿವೃದ್ಧಿಗೆ ಕಾರಣರಾದ ಬಡನಾಯಿಗಳ ವಾಸಹತುಗಳಿಗೆ ನುಗ್ಗಿ ಅವರ ಮನೆಗಳನ್ನು ಸುಟ್ಟರು. ಬಡವರ ಮತ್ತು ಐಶ್ವರ್ಯವಂತರ ಜಗಳದಲ್ಲಿ ಯಾವಾಗಲೂ ಐಶ್ವರ್ಯವಂತರಿಗೆ ಸಹಾಯಕರಾಗಿದ್ದರೆಂದು ಲಂಡನ್ನಿನ ವಕೀಲರ ಮನೆಯನ್ನೂ ಮತ್ತು ಕಛೇರಿಯನ್ನೂ (Temple) ಹಾಳುಮಾಡಿದರು. ರಿಚರ್ಡನ ಅಧಿಕಾರಿಗಳು ಅಧೈರ್ಯದಿಂದ ಕಂಗೆಟ್ಟರು. ಆದರೆ ಧೈರ್ಯಶಾಲಿಯಾದ ಎರಡನೆ ರಿಚರ್ಡನು ಹದಿನಾಲ್ಕು ವರ್ಷದ ಹುಡುಗನಾಗಿದ್ದರೂ ಜೂನ್ ಹದಿನಾಲ್ಕು ಮತ್ತು ಹದಿನೈದರಲ್ಲಿ ದಂಗೆಕಾರರನ್ನು ಭೇಟಿಮಾಡಿ, ಕಾರ್ಮಿಕರ ಶಾಸನವನ್ನೂ ಮತ್ತು 'ವಿಲೀನರ' ದರ್ಜೆಯನ್ನೂ ರದ್ದುಮಾಡುವುದಾಗಿ ವಾಗ್ದಾನ ಮಾಡಿದನು. ಲಂಡನ್ನಿನ ಪೌರಸಭಾಧ್ಯಕ್ಷ (Mayor) ದಂಗೆಯ ಮುಖಂಡನಾದ ಟೈಲರ್‌ನನ್ನು ಕೊಂದುಹಾಕಿದಾಗ, ತಾನೇ ದಂಗೆಯ ಮುಖಂಡತ್ವವನ್ನು ವಹಿಸುವುದಾಗಿ ದಂಗೆಕಾರರಿಗೆ ಹೇಳಿದನು. ಹೀಗೆ ವಾಗ್ದಾನದಿಂದ ಸಂತುಷ್ಟರಾದ ದಂಗೆಕಾರರು ತಮ್ಮ ತಮ್ಮ ಮನೆಗಳ ಕಡೆಗೆ ತೆರಳಿದರು. ದಂಗೆಯು ಈ ರೀತಿ ಮುಕ್ತಾಯವಾಯಿತು. ಆದರೆ ರಿಚರ್ಡನು ತನ್ನ ವಾಗ್ದಾನವನ್ನು ಪರಿಪಾಲಿಸಲಿಲ್ಲ. ಬೇರೆ ಬೇರೆ ಪಟ್ಟಣಗಳಲ್ಲಿ ಆದ ಸಣ್ಣ ಪುಟ್ಟ ದಂಗೆಗಳು ಸುಲಭವಾಗಿ ಅಡಗಿಸಲ್ಪಟ್ಟುವು.

"ದಾಸರೆ, ನೀವು ದಾಸರಾಗಿಯೆ ಇರಿ" (Villeins ye are and Villeins ye shall remain) ಎಂದು ರಿಚರ್ಡನು ಹೇಳಿ ದರೂ ಐವತ್ತು ವರ್ಷಗಳ ಕಾಲದಲ್ಲಿ ಇಂಗ್ಲೆಂಡಿನಲ್ಲಿ ದಾಸತ್ವವು ತೊಡೆದುಹೋಯಿತು. ಆದರೆ, ಫ್ರಾನ್ಸಿನಲ್ಲಿ ಫ್ರೆಂಚ್ ಮಹಾಕ್ರಾಂತಿಯ ವರೆಗೂ, ರಷ್ಯಾದಲ್ಲಿ ಹತ್ತೊಂಭತ್ತನೆಯ ಶತಮಾನದವರೆಗೂ ದಾಸತ್ವವು (Serfdom) ಉಳಿದುಕೊಂಡೇ ಬಂದಿತ್ತು.

ಎರಡನೆ ರಿಚರ್ಡನ ಕಾಲದಲ್ಲಿ ಪಾರ್ಲಿಮೆಂಟ್ ಬೆಳೆಯಿತು. ಎರ ಡನೆ ಎಡ್ವರ್ಡನ ಕಾಲದಲ್ಲಿ ಹೇಗೆ ಶ್ರೀಮಂತರ ಒಂದು ಗುಂಪು ರಾಜ್ಯದ ಸೂತ್ರಗಳನ್ನೆಲ್ಲಾ ತನ್ನ ಕೈಯಲ್ಲಿ ಇಟ್ಟುಕೊಂಡಿತ್ತೋ (Lords Ordainer) ಹಾಗೆಯೇ ರಿಚರ್ಡನ ಕಾಲದಲ್ಲಿ ಒಂದು ಸಣ್ಣ ಶ್ರೀಮಂತರ ಗುಂಪು (Lords appelant) ರಾಜ್ಯದ ಅಧಿಕಾರವನ್ನು ವಹಿಸಿಕೊಂಡಿತು. ಈ ಗುಂಪು ರಿಚರ್ಡನ ಮಂತ್ರಿ ಮತ್ತು ಸ್ನೇಹಿತ ಮೈಕೇಲ್ ಡಿ ಲಾ ಪೋಲ್ (Michael de la Pole) ಎಂಬುವನನ್ನು ಖಂಡಿಸುವ ಸಲುವಾಗಿ ಒಂದಾಗಿದ್ದರು. ಖಂಡನೆಗೋಸ್ಕರ ರಾಜನಲ್ಲಿ ಇವರು ಒತ್ತಾಯಪೂರ್ವ ಕವಾದ ಅರಿಕೆಯನ್ನು (appeal) ಮಾಡುತ್ತಿದ್ದುದರಿಂದ ಅವರಿಗೆ ಲಾರ್ಡ್ಸ್ ಅಪಲೆಂಟ್ ಎಂದು ಹೆಸರಾಯಿತು. ಎಂಟು ವರ್ಷಗಳ ಕಾಲ (ಕ್ರಿ. ಶ. ೧೩೮೯–೧೩೯೭) ಅವರ ಆಳ್ವಿಕೆಯು ನಡೆಯಿತು. ಅನಂತರ ರಿಚರ್ಡನು ಅವರ ಮೇಲೆ ಬಿದ್ದನು. ಅವರನ್ನು ಒಬ್ಬೊಬ್ಬರನ್ನಾಗಿ ತೀರಿಸಿದನು. ಜಾನ್ ಆಫ್ ಗಾಂಟನ ಮಗನಾದ ಲಂಕಾಸ್ಟ್ರಿಯರ್ ಡ್ಯೂಕ್ ಹೆನ್ರಿಯನ್ನು (Henry, duke of Lancaster) ದೇಶದಿಂದ ಓಡಿಸಿ ಅವನ ಅಪಾರವಾದ ಆಸ್ತಿಯನ್ನು ತಾನೇ ಸೇರಿಸಿಕೊಂಡನು. ರಿಚರ್ಡನ ವರ್ತನೆಯು ಅನೇಕರಿಗೆ ಸರಿಬೀಳಲಿಲ್ಲ; ಸರಿಯಾಗಿ ಅರ್ಥ ವಾಗುವುದೂ ಇಲ್ಲ. ಅವನು ಎಲ್ಲರಲ್ಲೂ ದ್ವೇಷವನ್ನು ಕಟ್ಟಿಕೊಂಡಿದ್ದನು. ಓಡಿ ಹೋಗಿದ್ದ ಹೆನ್ರಿಯು ಇಂಗ್ಲೆಂಡಿಗೆ ಮರಳಿ ಬಂದಾಗ ಅವನ ಕಡೆ ಅನೇಕರು ಸೇರಿಕೊಂಡರು. ರಿಚರ್ಡನು ಅವನ ಕೈಸೆರೆಯಾದನು. ಜಾಣನಾದ ಹೆನ್ರಿಯು ಯುದ್ಧದಲ್ಲಿ ರಾಜ್ಯವನ್ನು ಗೆದ್ದರೂ ಪಾರ್ಲಿ ಮೆಂಟನ್ನು ಸೇರಿಸಿ ಖಾಲಿಯಾಗಿದ್ದ ಸಿಂಹಾಸನಕ್ಕೆ ತಾನೇ ಹಕ್ಕುದಾರ

ನೆಂದು ತೋರಿಸಿಕೊಂಡನು. ಪಾರ್ಲಿಮೆಂಟ್ ಇದಕ್ಕೆ ತನ್ನ ಸಮ್ಮತಿಯನ್ನು ಕೊಟ್ಟಿತು. ಬ್ರಿಟನ್ನಿನ ಚರಿತ್ರೆಯಲ್ಲಿ ಪಾರ್ಲಿಮೆಂಟು ರಾಜನನ್ನು ಆರಿಸಿದುದು ಇದೇ ಮೊಟ್ಟ ಮೊದಲು.

## ಹದಿನಾಲ್ಕನೆ ಶತಮಾನದ ಜನಜೀವನ

ಹದಿನಾಲ್ಕನೆಯ ಶತಮಾನದ ಉತ್ತರಾರ್ಧದ ಇಂಗ್ಲಿಷ್ ಸಮಾಜದ ಸ್ಥಿತಿಯನ್ನು ಅರಿಯಲು ನಮಗೆ ಹೆಚ್ಚಾಗಿ ಸಾಧನಗಳಿವೆ. ಫ್ರಾಯಿಸರ್ಟ್ (Froissart) ಲಾಂಗ್ ಲೆಂಡ್ (Long land) ಮತ್ತು ಚಾಸರ್ (Chaucer) ಎಂಬ ಮೂರುಜನ ಸುಪ್ರಸಿದ್ಧ ಲೇಖಕರು ಈ ಕಾಲದಲ್ಲಿ ಜೀವಿಸಿ, ಸಮಾಜದ ಸ್ಥಿತಿಗತಿಗಳನ್ನು ಚೆನ್ನಾಗಿ ವರ್ಣಿಸಿದ್ದಾರೆ. ಇಷ್ಟೇ ಅಲ್ಲದೆ ವೈಕ್ಲಿಫ್ (Wycliffe) ಎಂಬಾತನ ಉಪದೇಶಗಳು ಮತ್ತು ಬರವಣಿಗೆಯು ಇಂಗ್ಲಿಷ್ ಸಮಾಜದಲ್ಲಿ ಸ್ವಲ್ಪ ಮಟ್ಟಿಗೆ ಆಂದೋಲನವನ್ನುಂಟುಮಾಡಿತೆಂದು ಹೇಳಬಹುದು.

**ಫ್ರಾಯ್ ಸಾರ್ಟ್** (ಕ್ರಿ. ಶ. ೧೩೩೮–೧೪೧೦): ಇವನು ಇಂಗಿಷಿನವನಲ್ಲದಿದ್ದರೂ, ಇಂಗ್ಲಿಷ್ ಆಸ್ಥಾನದಲ್ಲಿ ಆಗ್ಗಾಗ್ಗೆ ಹೆಚ್ಚುಕಾಲ ಕಳೆಯುತ್ತಿದ್ದನು. ಇವನು ಮೂರನೇ ಎಡ್ವರ್ಡನ ರಾಣಿಯಂತೆ ಫ್ಲಾಂಡರ್ಸ್ ದೇಶದಿಂದ ಬಂದವನು. ಇವನಿಗೆ ಐಶ್ವರ್ಯವಂತರ ಸಮಾಜವನ್ನು ಕಂಡರೆ ಅಭಿಮಾನ. ಕ್ರಿ. ಶ. ೧೩೮೧ ರಲ್ಲಿ ನಡೆದ ರೈತರ ದಂಗೆಯ ವಿಚಾರವಾಗಿ ಇವನು ಅನೇಕ ವಿಷಯಗಳನ್ನು ಬರೆದಿಟ್ಟಿದ್ದಾನೆ.

**ಲಾಂಗ್ ಲೆಂಡ್** (ಕ್ರಿ. ಶ. ೧೩೩೨–೧೪೦೦ ?): ಲಾಂಗ್ ಲೆಂಡಿನ ವಿಷಯ ನಮಗೆ ಹೆಚ್ಚಾಗಿ ತಿಳಿಯದು. ಅನೇಕ ವಿದ್ವಾಂಸರು ಅವನು ಜೀವಿಸಿದ್ದನೇ ? ಇಲ್ಲವೇ ? ಎನ್ನುವ ವಿಷಯದಲ್ಲಿ ಹೆಚ್ಚು ಹೆಚ್ಚಾಗಿ ಚರ್ಚೆ ನಡೆಸಿದ್ದಾರೆ. ಅವನು ಬರೆದ 'ಪಯರ್ಸ್ ದಿ ಪ್ಲೋಮನ್' (Piers the Plowman) ಎಂಬ ಪದ್ಯವು ಬೇರೆ ಬೇರೆ ಐದಾರು ಗ್ರಂಥಕರ್ತರಿಂದ ಆಗಿರಬೇಕೆಂದು ವಾದಿಸಿದ್ದಾರೆ. ಲಾಂಗ್ ಲೆಂಡನು ಅಲ್ಲಿ ಇಲ್ಲಿ ಜೀವಿಸಿ ಒಬ್ಬ ಪಾದ್ರಿಯ ಜೊತೆಯಲ್ಲಿ ಇದ್ದಂತೆ ಕಾಣುತ್ತದೆ. ಲಾಂಗ್ ಲೆಂಡನು ಬಡವರ ಪಕ್ಷಪಾತಿ. ಅವನ ಪದ್ಯವು ಹದಿನಾಲ್ಕನೆ ಶತಮಾನದಲ್ಲಿ ಅನೇಕರ ಮನಸ್ಸನ್ನು ಸೆಳೆದಿತ್ತು. ರೈತರ ದಂಗೆಯ ಮುಖಂಡನಾಗಿದ್ದ

ಜಾನ್‌ಬಾಲ್ ಎಂಬ ಪಾದ್ರಿಯು ಅನೇಕ ಸಾರಿ ಅವನ ಪದ್ಯಗಳನ್ನು ಉದಾಹರಿಸುತ್ತಿದ್ದನು. ಕರೀಸಾವಿನ ಅನಾಹುತದಿಂದ ಸ್ವತಂತ್ರರಾದ ಕೂಲಿಗಾರರ ಜೀವನದಲ್ಲಿ ಆದ ಬದಲಾವಣೆಗಳನ್ನು ಲ್ಯಾಂಗ್‌ಲೆಂಡ್ ಚೆನ್ನಾಗಿ ವಿವರಿಸಿದ್ದಾನೆ.

**ಚಾಸರ್** : ಚಾಸರನು ಲಂಡನ್ನಿನ ಒಬ್ಬ ಮದ್ಯದ ವ್ಯಾಪಾರಿಯ ಮಗ. ಮೂರನೆ ಎಡ್ವರ್ಡನ ಮಗನಾದ ಲಯನಲ್ ಡ್ಯೂಕ್ ಆಫ್ ಕ್ಲಾರೆನ್ಸ್ (Lionel, dukc of clarence) ಎಂಬುವನ ಮನೆಯಲ್ಲಿ ಕೆಲಸಕ್ಕೆ ಸೇರಿಕೊಂಡಿದ್ದನು. ಫ್ರಾನ್ಸಿನೊಡನೆ ಒದಗಿದ ಯುದ್ಧದಲ್ಲಿ ಸೆರಸಿಕ್ಕಿ ಬಿಡುಗಡೆಯಾದನು. ರಾಜಕಾರ್ಯಕ್ಕಾಗಿ ಫ್ಲಾಂಡರ್ಸ್, ಇಟಲಿ ಮೊದಲಾದ ಕಡೆಗಳಲ್ಲೆಲ್ಲಾ ಸಂಚರಿಸಿದನು. ಇವನು ಬರೆದ ಕ್ಯಾಂಟರ್‌ಬರಿ ಟೇಲ್ಸ್ ಎಂಬ (Canterbury tales) ಪದ್ಯವು ಇಂಗ್ಲಿಷ್ ಸಾಹಿತ್ಯದಲ್ಲಿ ದೊಡ್ಡ ಪ್ರಗತಿಯನ್ನು ಸಾಧಿಸಿದುದಲ್ಲದೆ, ಇಂಗ್ಲಿಷ್ ಸಮಾಜದ ಸ್ಥಿತಿಗತಿಗಳನ್ನೂ ತಿಳಿಸುತ್ತದೆ. ಇವನು ಬರೆದ ಇತರ ಪದ್ಯಗಳಲ್ಲಿ ಆಗಿನ ಕಾಲದ ಇಟಲಿಯ ಸುಪ್ರಸಿದ್ಧ ಬರಹಗಾರರಾದ ಪೆಟ್ರಾರ್ಕ್ (Petrarch) ಮತ್ತು ಬೊಕ್ಯಾಷಿಯೊ (Boccaccio) ಇವರ ಬರಹಗಳ ಪ್ರಭಾವವನ್ನು ಕಾಣಬಹುದು. ಚಾಸರನ ಪಾತ್ರಗಳು ಕ್ಯಾಂಟರ್‌ಬರಿ ಕಥೆಗಳ ನಾಂದಿಯಲ್ಲಿ (Prologue) ನಮಗೆ ಕಂಡು ಬರುತ್ತವೆ. ಅವರೆಲ್ಲರೂ ಬೆಕೆಟ್ಟನ ಸನ್ನಿಧಿಗೆ ಯಾತ್ರೆಹೋಗಲು ತೊಡಗಿದ್ದಾರೆ. ಇವರಲ್ಲಿ ಅನೇಕರು ಕ್ರೈಸ್ತ ಚರ್ಚಿಗೆ ಸೇರಿದವರು— ದಪ್ಪನಾದ ಕ್ರೀಡಾಸಕ್ತ ಸಂನ್ಯಾಸಿ (The fat, sporting monk), ಸ್ತ್ರೀಯರನ್ನು ಸಂತುಷ್ಟಿಗೊಳಿಸುವುದರಲ್ಲಿ ಚತುರನಾದ ಭಿಕ್ಷುಕ ಸಂನ್ಯಾಸಿ (Friar, an expert in pleasing Ladies), ಠಕ್ಕುಗಾರನಾದ ಚರ್ಚಿನ ನ್ಯಾಯಾಲಯದ ಅಮೀನ (Summoner of Archdeacon's Court), ಕ್ರೈಸ್ತ ಸಾಧುಸಂತರ ಅವಶೇಷಗಳನ್ನು ಇಟ್ಟುಕೊಂಡವನಂತೆ ನಟಿಸಿ ಜನಗಳನ್ನು ಮೋಸಗೊಳಿಸುವ ಬೂಟಾಟಿಕೆಯ ಕ್ಷಮಾಪಣೆಗಾರ (Pardoner) ಮತ್ತು ಇವರೆಲ್ಲರಿಗೂ ವ್ಯತಿರಿಕ್ತನಾದ, ಕಷ್ಟಪಟ್ಟು ಕೆಲಸಮಾಡುವ ಮತ್ತು ಪ್ರಾಮಾಣಿಕನಾದ

ಹಳ್ಳಿಯ ಪಾದ್ರಿ (Country Parson)— ಇವರುಗಳು ನಮ್ಮ ಚಿರ ಪರಿಚಿತರೆಂದು ಭಾಸವಾಗುತ್ತದೆ. ಸಾಮಾನ್ಯ ಯಾತ್ರಿಕರ ಪೈಕಿ ಪುಷ್ಟನಾದ ಜಮಿಾನುದಾರ (Knight), ಕೆಲವು ವರ್ತಕರು ಮತ್ತು ಯೂರೋಪ್ ಖಂಡದ ಪ್ರಮುಖ ಸಾಧುಸಂತರ ಸನ್ನಿಧಿಗಳಿಗೆಲ್ಲಾ ಭೇಟಿ ಕೊಟ್ಟ ಬಾತ್ (Bath) ಎಂಬ ಊರಿನ ಹೆಂಗಸೊಬ್ಬಳು ಇವರೇ ಪ್ರಮುಖರು. ಯಾತ್ರೆ ಮಾಡುವುದು ಮೋಕ್ಷಕ್ಕಲ್ಲ; ತಮಾಷೆಗಾಗಿ ಎಂಬ ಭಾವನೆ ಜನಗಳಲ್ಲಿ ಬಂದಿತ್ತೆಂದು ಚಾಸರನು ತೋರಿಸಲು ಪ್ರಯತ್ನಿಸಿರುವುದು ಕಾಣುತ್ತದೆ. ಅವರು ಹೇಳುವ ಕಥೆಗಳು ಅವರ ಸ್ವಭಾವದಷ್ಟೇ ವೈಲಕ್ಷಣ್ಯವುಳ್ಳವಾಗಿವೆ. ಲಾಂಗ್‌ಲೆಂಡ್ ಕಂಡ ಇಂಗ್ಲೆಂಡ್ ದುಃಖಮಯದ್ದಾದರೆ, ಚಾಸರನದು ಸಂತೋಷಮಯವಾದುದು. ಆದರೆ, ಅವರಿಬ್ಬರೂ ಕ್ರೈಸ್ತ ಚರ್ಚಿನಲ್ಲಿದ್ದ ಮೋಸ, ಅಪವಿತ್ರತೆ ಇವುಗಳ ವಿಚಾರವನ್ನು ಒಮ್ಮತದಿಂದ ಹೇಳಿದ್ದಾರೆ.

ಕ್ರೈಸ್ತ ಜಗದ್ಗುರು ಪೋಪನು ಈ ಕಾಲದಲ್ಲಿ ಫ್ರೆಂಚ್ ರಾಜನ ಅಧೀನಕ್ಕೊಳಗಾಗಿ, ಮೂರನೆ ಎಡ್ವರ್ಡನು ಫ್ರಾನ್ಸಿನೊಂದಿಗೆ ಯುದ್ಧ ಮಾಡುತ್ತಿದ್ದಾಗ, ಫ್ರಾನ್ಸಿನಲ್ಲಿದ್ದ ಅವಿಗ್ನಾನ್ (Avignon) ಎಂಬಲ್ಲಿ ಜೀವಿಸುತ್ತಿದ್ದನು. ಇಂಗ್ಲೆಂಡಿನಿಂದ ಅವನಿಗೆ ಹೋಗುತ್ತಿದ್ದ ಕಪ್ಪ ಕಾಣಿಕೆಗಳು, ತೆರಿಗೆಗಳು ಶತ್ರುವಾದ ಫ್ರಾನ್ಸಿನ ಕೈಗೆ ಹೋಗುವುದನ್ನು ನಿಲ್ಲಿಸಲು ಎಡ್ವರ್ಡನು ಕ್ರಿ. ಶ. ೧೩೫೧, ೧೩೫೩ ರಲ್ಲಿ ಎರಡು ಕಾನೂನುಗಳನ್ನು ಜಾರಿಗೆ ತಂದನು. ಸ್ಟಾಚ್ಯೂಟ್ ಆಫ್ ಪ್ರಾವಿಸಾರ್ಸ್ (Statute of Provisors) ನಿಂದ ಇಂಗ್ಲೆಂಡಿನ ಚರ್ಚಿನಲ್ಲಿ ಕೆಲಸಗಳಿಗೆ ನಿಯಮಿಸುವ ಪೋಪಿನ ಹಕ್ಕನ್ನು ತೆಗೆದುಹಾಕಲಾಯಿತು. ಸ್ಟಾಚ್ಯೂಟ್ ಆಫ್ ಪ್ರಮುನೇರ್ (Statute of Praemunire) ನಿಂದ ಇಂಗ್ಲಿಷ್ ಚರ್ಚಿನ ನ್ಯಾಯಾಲಯಗಳು (English Church Courts) ಪೋಪನನ್ನು ಪುನರ್ವಿಮರ್ಶೆಗಾಗಿ ಕೇಳಕೂಡದೆಂದೂ (Appeal) ವಿಧಿಸಲ್ಪಟ್ಟಿತು.

ಈ ಮಧ್ಯೆ ಜಾನ್ ವೈಕ್ಲಿಫ್ (John Wycliffe ಕ್ರಿ. ಶ. ೧೩೨೮–೧೩೮೪) ಇಂಗ್ಲಿಷ್ ಚರ್ಚಿನಲ್ಲಿದ್ದ ಅನೇಕ ದೋಷಗಳನ್ನು ೧೭

ನೇ ಶತಮಾನದ ಇರಾಸ್‌ಮಸ್ (Erasmus) ಮತ್ತು ಮಾರ್ಟಿನ್ ಲೂಥರ್ (Martin luther) ಮೊದಲಾದವರು ಮತಧರ್ಮದ ಸುಧಾರಣೆಗಳನ್ನು ಮಾಡುವುದಕ್ಕಿಂತ ಮುಂಚೆಯೆ ಖಂಡಿಸಲಾರಂಭಿಸಿದ್ದನು. ಇದಕೋಸ್ಕರ ಇವನನ್ನು Morning star of the English Reformation ಎಂದು ಚರಿತ್ರಕಾರರು ಕರೆದಿದ್ದಾರೆ. ಚರ್ಚ್ ಶೇಖರಿಸುತ್ತಿದ್ದ ಅಪಾರವಾದ ಐಶ್ವರ್ಯದಿಂದ ಈ ದೋಷಗಳು ಒದಗಿ, ಚರ್ಚಿಗೆ ಮತಧರ್ಮದಲ್ಲಿ ಆಸಕ್ತಿಕುಗ್ಗಿ, ಪ್ರಾಪಂಚಿಕ ಆಸಕ್ತಿ ಉಂಟಾಗಲು ಕಾರಣವೆಂದು ವಾದಿಸಿದನು. ಆದುದರಿಂದ ಚರ್ಚಿನ ಜೀವನವು ಪವಿತ್ರಗೊಳ್ಳಬೇಕಾದರೆ ರಾಜರು ಮತ್ತು ಪಾರ್ಲಿಮೆಂಟು ಅದರ ಹಣವನ್ನೆಲ್ಲಾ ವಶಪಡಿಸಿಕೊಳ್ಳುವುದು ಚರ್ಚಿಗೂ ಮತ್ತು ಸರ್ಕಾರಕ್ಕೂ ಒಳ್ಳೆಯದೆಂದು ಹೇಳಿದನು. ಇದರಿಂದ ರಾಜರಿಗೆ ಚರ್ಚಿನ ಆಸ್ತಿಯನ್ನು ಕಸಿದುಕೊಳ್ಳಲು ಅನುಕೂಲವಾಯಿತು. ವೈಕ್ಲಿಫ್‌ನನ್ನು ಇದಕ್ಕಾಗಿ ಸ್ವಲ್ಪಕಾಲ ರಾಜರು, ಶ್ರೀಮಂತರು ಆದರಿಸಿದರು. ಆದರೆ ಅದು ಸ್ಥಿರವಾಗಿ ಉಳಿಯಲಿಲ್ಲ. ಉದ್ದಾಮ ಪಂಡಿತನೂ ಮತ್ತು ಆಕ್ಸ್‌ಫರ್ಡಿನಲ್ಲಿ ಅನೇಕ ವರ್ಷ ಉಪಾಧ್ಯಾಯನೂ ಆಗಿದ್ದ ವೈಕ್ಲಿಫ್ ಸಾಧಾರಣ ಜನಗಳಿಗಾಗಿ ತಾನು ಲಾಟಿನ್ ಭಾಷೆಯಲ್ಲಿ ಬರೆದಿದ್ದ ಗ್ರಂಥಗಳನ್ನು ಇಂಗ್ಲಿಷಿನಲ್ಲಿ ಬರೆದು ತನ್ನ ಶಿಷ್ಯರನ್ನು ಬಡವರ ಸೇವೆಗೆ ನಿಯಮಿಸಿದನು. ಇವನ ಶಿಷ್ಯರಿಗೆ 'ಲೋಲಾರ್ಡ್ಸ್' (Lollards) ಎಂದು ಹೆಸರಾಯಿತು. ಇವರಲ್ಲಿ ಅನೇಕರನ್ನು ಧರ್ಮದ್ರೋಹಿಗಳೆಂದು ಜೀವಸಹಿತ ಸುಟ್ಟರು.

ಹದಿನಾಲ್ಕನೆಯ ಶತಮಾನದ ಉತ್ತರಾರ್ಧದಲ್ಲಿ ಇಂಗ್ಲಿಷ್ ಭಾಷೆಯ ಜನನವಾಯಿತೆಂದು ಹೇಳಬಹುದು. ನಾರ್ಮನ್ ವಿಜಯದ ಕಾಲದಿಂದ ಇಂಗ್ಲೆಂಡಿನ ಉತ್ತಮ ವರ್ಗಗಳು (Higher classes) ಫ್ರೆಂಚ್ ಭಾಷೆಯನ್ನೇ ಉಪಯೋಗಿಸುತ್ತಿದ್ದುವು. ಆಂಗ್ಲೋಸಾಕ್ಸನ್ ಭಾಷೆಯ ರೂಪಾಂತರಗಳು (Dialects) ಕೆಳದರ್ಜೆಯ ಜನರಲ್ಲಿ ಸಾಮಾನ್ಯವಾಗಿ ಬಳಕೆಯಲ್ಲಿತ್ತು. ಮೊದಲನೆ ಎಡ್ವರ್ಡ್ ಮತ್ತು ಮೂರನೆ ಎಡ್ವರ್ಡ್‌ನಂತಹ ಇಂಗ್ಲಿಷ್ ರಾಜರೂ ಕೂಡಾ ಫ್ರೆಂಚ್ ಭಾಷೆಯನ್ನೇ ಆಡುತ್ತಿದ್ದರು. ಪಾರ್ಲಿಮೆಂಟಿನ ಸಭಾಕಾರ್ಯಗಳೂ

ಕೂಡಾ ಫ್ರೆಂಚಿನಲ್ಲಿಯೇ ಬರೆಯಲ್ಪಡುತ್ತಿದ್ದುವು. ಕ್ರೆಸಿ ಕದನವಾಗುತ್ತಿದ್ದಾಗ 'ನೈಟ್ಸ್' (ಶ್ರೀಮಂತರಿಗಿಂತ ಸ್ವಲ್ಪ ಕೆಳದರ್ಜೆಯವರು) ಒಂದು ಭಾಷೆ ಮತ್ತು ಬಿಲ್ಲಾಳುಗಳು ಮತ್ತೊಂದು ಭಾಷೆಯನ್ನು ಆಡುತ್ತಿದ್ದುದರಲ್ಲಿ ಆಶ್ಚರ್ಯವೇನೂ ಇರಲಿಲ್ಲ. ಆದರೆ ಸ್ವಲ್ಪ ಕಾಲದಲ್ಲೆ ತಮ್ಮ ಶತ್ರುವಿನ ಭಾಷೆಯನ್ನು (ಫ್ರಾನ್ಸಿನ) ತಾವು ಉಪಯೋಗಿಸುತ್ತಿರುವ ವಿಷಯ ಅವರಿಗೆ ಸರಿಬೀಳಲಿಲ್ಲ. ಒಂದು ಹೊಸ ಭಾಷೆಯ ಆವಶ್ಯಕತೆ ತೋರಿತು. ಈ ಹೊಸಭಾಷೆಯಾದ ಇಂಗ್ಲಿಷಿನಲ್ಲಿ ಆಂಗ್ಲೋಸಾಕ್ಸನ್ ಮತ್ತು ಫ್ರೆಂಚ್ ಎರಡೂ ಮಿಳಿತವಾದುವು.

ಇಷ್ಟೆ ಅಲ್ಲದೆ ಕರಿ ಸಾವಿನಿಂದ ಪಾದ್ರಿಗಳ ಜನಸಂಖ್ಯೆ ತೀರ ಕಡಿಮೆಯಾಗಿ, ಮೇಲ್ದರ್ಜೆಯ ಮಕ್ಕಳ ವಿದ್ಯಾಭ್ಯಾಸ ಕಷ್ಟವಾಯಿತು. ಈ ಮಕ್ಕಳು ಕೆಳದರ್ಜೆಯ ಮಕ್ಕಳು ಉಪಯೋಗಿಸುತ್ತಿದ್ದ ಭಾಷೆಯನ್ನೇ ಕಲಿಯಬೇಕಾಯಿತು. ಕ್ರಿ. ಶ. ೧೩೬೨ ರ ಶಾಸನವೊಂದರಿಂದ ಇಂಗ್ಲಿಷ್ ನ್ಯಾಯಾಲಯದ ಭಾಷೆಯಾಯಿತು. ಲಾಟಿನ್ ಭಾಷೆಯಲ್ಲಿದ್ದ ಬೈಬಲನ್ನು ಕ್ರಿ. ಶ. ೧೩೮೦ ರಲ್ಲಿ ವೈಕ್ಲಿಫ್ ಇಂಗ್ಲಿಷ್ ಭಾಷೆಗೆ ತರ್ಜುಮೆ ಮಾಡಿ, ಅದು ಜನಸಾಮಾನ್ಯರಿಗೆ ತಿಳಿಯುವಂತೆ ಮಾಡಿದನು. ನಾಲ್ಕನೇ ಹೆನ್ರಿ ತಾನು ಸಿಂಹಾಸನವನ್ನೇರಿದಾಗ ಪ್ರಮಾಣವಚನವನ್ನು ಇಂಗ್ಲಿಷಿನಲ್ಲಿಯೇ ಮಾಡಿದನು. ಹೀಗೆ ಇಂಗ್ಲಿಷ್ ಭಾಷೆಯು ತಲೆಯೆತ್ತಲು ಪ್ರಾರಂಭಿಸುತ್ತಿದ್ದಾಗಲೆ ಚಾಸರನು ಅದಕ್ಕೆ ಬೆಂಬಲಕೊಟ್ಟು ಅದನ್ನು ಸಾಹಿತ್ಯದ ಭಾಷೆಯನ್ನಾಗಿ ಮಾಡಿದನು.

## ಗುಲಾಬಿ ಯುದ್ಧ (Wars of the Roses)
### ಕ್ರಿ. ಶ. ೧೪೫೩-೧೪೮೫

ನೂರು ವರ್ಷಗಳ ಯುದ್ಧದ ಕೊನೆಯ ಹಂತದಲ್ಲಿ ಇಂಗ್ಲಿಷರಿಗೆ ಸೋಲಾಗಲು ಇಂಗ್ಲೆಂಡಿನ ರಾಜಕೀಯ ವಾತಾವರಣ ಹದಗೆಟ್ಟು ಅಲ್ಲೇ ಅಂತಃಕಲಹ ತಲೆದೋರಿದುದು ಕಾರಣವಾಯಿತು. ಆರನೆ ಹೆನ್ರಿಯ (ಕ್ರಿ. ಶ. ೧೪೨೨–೧೪೬೧) ಆಸ್ಥಾನದಲ್ಲಿ ಎರಡು ಪಂಗಡಗಳು ಇದ್ದವು. ಒಂದು ಗುಂಪು ನೂರುವರ್ಷಗಳ ಯುದ್ಧವನ್ನು ದಕ್ಷತೆಯಿಂದಲೂ, ಯಶಸ್ವಿ

ಯಾಗಿಯೂ ನಡೆಯುವಂತೆ ಕಾರ್ಯಕ್ರಮವನ್ನು ಕೈಕೊಳ್ಳಬೇಕೆಂಬ ಉದ್ದೇಶದಿಂದ ಕೂಡಿತ್ತು. ಈ ಯುದ್ಧದ ಪಂಗಡಕ್ಕೆ (War party) ಮುಖಂಡನು ಡ್ಯೂಕ್ ಆಫ್ ಗ್ಲಾಸ್ಟರ್ ಆಗಿದ್ದ ಹಂಫ್ರಿ ಎಂಬುವನು (Humphrey, Duke of Gloucester). ಎರಡನೆಯ ಗುಂಪು ಫ್ರಾನ್ಸಿನೊಡನೆ ಯುದ್ಧವನ್ನು ನಿಲ್ಲಿಸಿ ಇಂಗ್ಲೆಂಡಿನಲ್ಲಿ ಸರಿಯಾದ ಆಡಳಿತ ವ್ಯವಸ್ಥೆಯನ್ನು ಮಾಡಬೇಕೆಂಬ ಉದ್ದೇಶವನ್ನು ಹೊಂದಿತ್ತು. ಹೆನ್ರಿಯ ಹೆಂಡತಿಯಾದ ಮಾರ್ಗರೆಟ್ (Margaret) ಫ್ರಾನ್ಸಿನ ಆಂಜೂ (Anjou) ವಿನವಳಾದ್ದರಿಂದ ಯುದ್ಧವನ್ನು ನಿಲ್ಲಿಸಲು ಆಸೆಯುಳ್ಳವಳಾಗಿದ್ದಳು. ಈ ಶಾಂತಿ ಪಂಗಡದ ಮುಖಂಡ ಬ್ಯೂಫರ್ಟ್ (Beau fort) ಎಂಬುವನು. ಲಂಕಾಸ್ಟ್ರಿಯರ್ ಪಂಗಡಕ್ಕೆ ಸೇರಿದ ಈ ಇಬ್ಬರು ಮುಖಂಡರು ಕ್ರಿ. ಶ. ೧೪೪೭ ರಲ್ಲಿ ಸತ್ತರೂ ಈ ಎರಡು ಪಂಗಡಗಳ ಹೋರಾಟವು ಮುಂದುವರೆಯಿತು. ಹೆನ್ರಿಯ ಮಂತ್ರಿಗಳಾದ ಡ್ಯೂಕ್ ಆಫ್ ಸಫೋಕ್ (Duke of Suffolk) ಮತ್ತು ಡ್ಯೂಕ್ ಆಫ್ ಸಾಮರ್‌ಸೆಟ್ (Duke of Somerset) ಶಾಂತಿಪಂಗಡದ ಮುಖಂಡರಾಗಿಯೂ, ಮೂರನೆ ಎಡ್ವರ್ಡನ ಮಗನಾದ ಎಡ್ಮಂಡ್ ಡ್ಯೂಕ್ ಆಫ್ ಯಾರ್ಕ್‌ನ ಮೊಮ್ಮಗ ರಿಚರ್ಡ್ ಡ್ಯೂಕ್ ಆಫ್ ಯಾರ್ಕ್ ಯುದ್ಧ ಪಂಗಡದ ಮುಖಂಡರಾಗಿಯೂ ಬಂದರು. ಕಾಲಕ್ರಮೇಣ ಲಂಕಾಸ್ಟ್ರಿಯರ್ ಮನೆತನವು ಇಂಗ್ಲೆಂಡಿನ ಅಪಜಯಗಳಿಗೆ ಕಾರಣವೆಂದೂ ಮತ್ತು ಇದರ ವಿರೋಧಿಗಳಾಗಿದ್ದ ಯಾರ್ಕ್ ಮನೆತನದವರು ಇಂಗ್ಲೆಂಡಿನಲ್ಲಿ ದಕ್ಷತೆಯ ಸರ್ಕಾರವನ್ನು ಸ್ಥಾಪಿಸುವುದರಲ್ಲಿ ಆಸಕ್ತಿ ಹೊಂದಿದ್ದರೆಂದೂ ಜನಗಳಲ್ಲಿ ಭಾವನೆ ಮೂಡಿತು.

ಕ್ರಿ. ಶ.೧೪೫೦ ರಲ್ಲಿ ನೂರು ವರ್ಷದ ಯುದ್ಧದ ಪರಿಣಾಮವಾಗಿ ನಾರ್ಮಂಡಿಯು ಇಂಗ್ಲಿಷರ ಕೈಬಿಟ್ಟು ಹೋಯಿತು. ಜನಗಳು ಈ ಅಪಜಯಕ್ಕೆ ಡ್ಯೂಕ್ ಆಫ್ ಸಫೋಕ್ ಕಾರಣನೆಂದು ಬಗೆದು, ಹಡಗಿನಲ್ಲಿ ದೇಶವನ್ನು ಬಿಟ್ಟು ಓಡಿಹೋಗುತ್ತಿದ್ದ ಅವನನ್ನು ಹಿಡಿದು ಕೊಂದರು. ಈ ಅಪಜಯದಿಂದ ಇಂಗ್ಲೆಂಡಿನಲ್ಲಿ ಕೆಲವು ಜನ ಉದ್ರೇಕಗೊಂಡು ಕೆಂಟಿನ ಜಾಕ್ ಕ್ಯಾಡ್ (Jack Cade of kent) ನ ಮುಖಂಡತ್ವದಲ್ಲಿ ದಂಗೆ

ಯೆದ್ದರು. ಜಾಕ್ ಕ್ಯಾಡನು ವಾಟ್ ಟೈಲರ್‌ನಂತೆ ಲಂಡನ್ನಿಗೆ ನುಗ್ಗಿ ಇಂಗ್ಲೆಂಡಿನ ದುರ್ಬಲ ಸರ್ಕಾರವನ್ನು ಸರಿಪಡಿಸಬೇಕೆಂದು ಒತ್ತಾಯ ಮಾಡಿದನು. ಇವನ ಬೇಡಿಕೆಗಳನ್ನು ಈಡೇರಿಸುವುದಾಗಿ ಅಧಿಕಾರಿಗಳು ವಾಗ್ದಾನಮಾಡಿ, ಅವನು ಮತ್ತು ಅವನ ಅನುಯಾಯಿಗಳು ಚದುರಿ ಹೋಗುತ್ತಿದ್ದಾಗ ದಸ್ತಗಿರಿ ಮಾಡಿ ಗಲ್ಲಿಗೇರಿಸಿದರು.

ಯಾರ್ಕ್ ಮನೆತನದ ಗುರಿಯಲ್ಲಿ (Yorkism) ಮೂರು ಹಂತಗಳನ್ನು ನಾವು ಕಾಣಬಹುದು. 1. ಫ್ರಾನ್ಸಿನೊಡನೆ ನೂರು ವರ್ಷದ ಯುದ್ಧವನ್ನು ಉದಾಸೀನತೆಯಿಂದ ನಡೆಸುತ್ತಿದ್ದ ಧೋರಣೆಗೆ ಪ್ರತಿಭಟನೆ. 2. ಇಂಗ್ಲೆಂಡಿನ ಸರ್ಕಾರದ ಹತೋಟಿಯನ್ನು ತನ್ನ ವಶಕ್ಕೆ ತೆಗೆದುಕೊಳ್ಳುವುದು. 3. ರಾಜ್ಯವನ್ನು ಅಪಹರಿಸಿದ ಲಂಕಾಸ್ಟ್ರಿಯನ್ ಮನೆತನವನ್ನೇ ಉರುಳಿಸುವುದು.

ಕ್ರಿ. ಶ. ೧೪೫೩ ರಲ್ಲಿ ಯಾರ್ಕ್ ಮನೆತನದ ಧೋರಣೆ ಮೊದಲನೆಯ ಹಂತದಿಂದ ಎರಡನೆಯ ಹಂತಕ್ಕೆ ಏರಿತೆಂದು ಹೇಳಬಹುದು. ಏಕೆಂದರೆ ರಾಜನಾದ ಆರನೆ ಹೆನ್ರಿಗೆ ಹುಚ್ಚು ಹಿಡಿದು ರಾಜ್ಯವಾಳುವುದು ಅಸಾಧ್ಯವಾಯಿತು. ಡ್ಯೂಕ್ ಆಫ್ ಯಾರ್ಕನು ರಾಜಪ್ರತಿನಿಧಿಯಾಗಿ (Regent) ನಿಯಮಿಸಲ್ಪಟ್ಟನು. ಆದರೆ ಆರನೆಯ ಹೆನ್ರಿಯ ಹುಚ್ಚು ಒಂದೂವರೆ ವರ್ಷದಮೇಲೆ ಸ್ವಲ್ಪ ವಾಸಿಯಾಯಿತು. ಇದರಿಂದ ಯಾರ್ಕನ ರಾಜ್ಯ ಪ್ರತಿನಿಧಿತ್ವವು ಮುಕ್ತಾಯಗೊಳಿಸಲ್ಪಟ್ಟಿತು. ಸಾಮರ್‌ಸೆಟ್ ಪುನಃ ಮಂತ್ರಿಯಾದನು. ಈ ಮಧ್ಯೆ ಆರನೆ ಹೆನ್ರಿಗೆ ಒಬ್ಬ ಮಗ ಹುಟ್ಟಿದನು. ಇದರಿಂದ ಡ್ಯೂಕ್ ಆಫ್ ಯಾರ್ಕ್ ಆರನೇ ಹೆನ್ರಿಯ ಉತ್ತರಾಧಿಕಾರಿಯಾಗಿ ಶಾಂತ ರೀತಿಯಿಂದ ಪಟ್ಟಕ್ಕೆ ಬರುವ ಅವಕಾಶವು ತಪ್ಪಿಹೋಯಿತು. ಹೀಗೆ ಯಾರ್ಕ್ ಮನೆತನಕ್ಕೂ ಮತ್ತು ಲಂಕಾಸ್ಟ್ರಿಯನ್ ಮನೆತನಕ್ಕೂ ಯುದ್ಧವು ಅನಿವಾರ್ಯವಾಯಿತು. ಈ ಯುದ್ಧಕ್ಕೆ "ಗುಲಾಬಿ ಯುದ್ಧ" (Wars of the Roses)ವೆಂದು ಚರಿತ್ರೆಯಲ್ಲಿ ಹೆಸರಾಗಿದೆ. ಏಕೆಂದರೆ ಯಾರ್ಕ್ ಮನೆತನದವರು ಬಿಳಿ ಗುಲಾಬಿಯನ್ನು ತಮ್ಮ ಚಿಹ್ನೆಯನ್ನಾಗಿಯೂ, ಲಂಕಾಸ್ಟ್ರಿಯರ್ ಮನೆತನದವರು ಕೆಂಪು ಗುಲಾಬಿಯನ್ನು ತಮ್ಮ ಚಿಹ್ನೆಯನ್ನಾಗಿಯೂ ಧರಿಸಿಕೊಂಡರು.

ಯಾರ್ಕ್ ಮತ್ತು ಲಂಕಾಸ್ಟ್ರಿಯರ್ ಮನೆತನಗಳಿಗೆ ಒಂದು ಪಕ್ಷ ಅಂತಃಕಲಹ ಸಂಭವಿಸದೆ ಇದ್ದಿದ್ದರೂ, ಇಂಗ್ಲೆಂಡಿನಲ್ಲಿ ಇತರ ಸಣ್ಣ ಪುಟ್ಟ ಅಂತಃಕಲಹಗಳೇನೂ ತಪ್ಪುವಂತಿರಲಿಲ್ಲವೆಂಬುದನ್ನು ತೋರಿಸಲು ಪ್ಯಾಸ್ಟನ್ ಕಾಗದಗಳು (Paston letters) ನಮಗೆ ಸಾಕ್ಷಿಯಾಗಿವೆ.

೧೦೦ ವರ್ಷದ ಯುದ್ಧವು ಮುಕ್ತಾಯವಾದಮೇಲೆ ಶ್ರೀಮಂತರು ಮತ್ತು ಅವರ ಅನುಯಾಯಿಗಳು ಇಂಗ್ಲೆಂಡಿಗೆ ಹಿಂತಿರುಗಿಬಂದರು. ಅವರಿಗೆ ಯುದ್ಧವಿಲ್ಲದೆ ಇರುವುದು ಬೇಸರವಾಗಿತ್ತು. ಮತ್ತು ಅದರಿಂದ ಸಿಕ್ಕುತ್ತಿದ್ದ ಲಾಭವೂ ಕೈತಪ್ಪಿಹೋಗಿತ್ತು. ಗುಲಾಬಿ ಯುದ್ಧವು ಅವರಿಗೆ ಯುದ್ಧಮಾಡಲು ಅವಕಾಶವನ್ನು ಕಲ್ಪಿಸಿ ಕೊಟ್ಟಿತು.

ಆರನೆಯ ಹೆನ್ರಿಯ ಸರ್ಕಾರವು ಬಲಹೀನವಾಗಿ ಶ್ರೀಮಂತರ ಪ್ರಾಬಲ್ಯವು ಅತಿ ಹೆಚ್ಚಾಯಿತು. ೩ ನೇ ಎಡ್ವರ್ಡನ ಮಕ್ಕಳಲ್ಲಿ ನಾಲ್ಕು ಜನ ತಮ್ಮದೇ ಆದ ಪ್ರಬಲವಾದ ಗುಂಪುಗಳನ್ನೇರ್ಪಡಿಸಿಕೊಂಡು ಒಬ್ಬರ ನೊಬ್ಬರು ದ್ವೇಷಿಸುತ್ತಿದ್ದರು. ಇವರ ಜೊತೆಗೆ ನೆವಿಲಿ (Nevilles), ಪರ್ಸಿ (Percies) ಮತ್ತು ಮೋಬ್ರೆ (Mowbrays) ಮೊದಲಾದ ಶ್ರೀಮಂತರು ಸೇರಿಕೊಂಡು ದೇಶದ ಅನಾಯಕತ್ವತೆಗೆ ಕಾರಣರಾದರು. ತಮ್ಮ ಆಶ್ರಯದಲ್ಲಿದ್ದ ನೈಟ್ಸ್ ಮತ್ತು ಇತರ ಜಮೀನುದಾರರು ಶ್ರೀಮಂತರಿಗೆ ಯುದ್ಧಗಳಲ್ಲಿ ಸಹಾಯ ಮಾಡಲು ಆಯುಧ ಸಹಿತರಾದ ಸಿಪಾಯಿಗಳನ್ನು ಒದಗಿಸಬೇಕಾಗಿತ್ತು. ಈ ಸಿಪಾಯಿಗಳು ಮತ್ತು ಈ ಜಮೀನುದಾರರು ಅವರವರ ಶ್ರೀಮಂತರ ಮನೆತನದ ಚಿಹ್ನೆಯನ್ನು ಧರಿಸಬೇಕಾಗಿತ್ತು. ಈ ಪದ್ಧತಿಗೆ 'ಲಿವರಿ' (Livery) ಎಂದು ಹೆಸರು. ಇದಕ್ಕೆ ಪ್ರತಿಫಲವಾಗಿ ಶ್ರೀಮಂತರು ಇವರನ್ನು ರಕ್ಷಿಸುವ ಜವಾಬ್ದಾರಿಯನ್ನು ವಹಿಸಿಕೊಂಡರು. ನ್ಯಾಯಾಲಯದ ಮುಂದೆ ಇವರುಗಳ ವಿಚಾರಣೆ ಏನಾದರೂ ಬಂದರೆ ಶ್ರೀಮಂತರು ಆಯುಧಪಾಣಿಗಳಾದ ತಮ್ಮ ಜನರೊಂದಿಗೆ ಜ್ಯೂರಿಯನ್ನು ಹೆದರಿಸಲು ಹಾಜರಾಗುತ್ತಿದ್ದರು. ಇದರಿಂದ ಹೆದರಿದ ನ್ಯಾಯಾಧಿಪತಿಗಳು ಅವರನ್ನು ಬಿಡುಗಡೆ ಮಾಡುತ್ತಿದ್ದರು. ಇದಕ್ಕೆ 'ಮೆಂಟನಸ್ಸ್' ಎಂದು ಹೆಸರು (Maintenance). ನೇವಿಲಿ ಮನೆತನದವರು ಯಾರ್ಕ್ ಮನೆತನದವರು ಒಂದಾ

ದರು. ರಿಚರ್ಡ್ ನೆವಿಲಿಯು ಸಾಲಿಸ್‌ಬರಿಯ ಐಶ್ವರ್ಯವಂತಳಾದ ವಾರಸುದಾರಳನ್ನು ಮದುವೆಯಾಗಿ ಅರ್ ಆಫ್ ಸಾಲಿಸ್‌ಬರಿಯಾದನು (Earl of Salis bury). ಬಹಳ ಪ್ರಬಲನಾಗಿದ್ದ ಇವನ ಸಹೋದರಿ ಸಿಸಿಲಿ (Cicely) ಯನ್ನು ಡ್ಯೂಕ್ ಆಫ್ ಯಾರ್ಕನು ಮದುವೆಯಾದನು. ಅರ್ಲ್ ಆಫ್ ಸಾಲಿಸ್‌ಬರಿಯು ಮಗ ಅರ್ಲ್ ಆಫ್ ವಾರ್‌ವಿಕ್ ಆಗಿದ್ದ ರಿಚರ್ಡನೂ ಡ್ಯೂಕ್ ಆಫ್ ಯಾರ್ಕನ ಬೆಂಬಲಗಾರನಾದನು. ಇವನೇ ಮುಂದೆ ರಾಜ ನಿರ್ಮಾಪಕನ (King Maker) ಪಾತ್ರವನ್ನು ವಹಿಸಿದವನು.

ಇನ್ನೊಂದು ಪ್ರಮುಖವಾದ ಶ್ರೀಮಂತರ ಮನೆತನವೆಂದರೆ ಟ್ಯೂಡರರದು (Tudor). ಓವನ್ ಟ್ಯೂಡರ್ ಎಂಬುವನು (Owen Tudor) 5ನೆ ಹೆನ್ರಿಯ ವಿಧವೆಯಾದ ಕ್ಯಾಥರೀನ್ ಎಂಬುವಳನ್ನು (Catherine) ಮದುವೆಯಾಗಿದ್ದನು. ಅವನ ಮಗ ಎಡ್ಮಂಡ್ ಟ್ಯೂಡರ್ (Edmund Tudor) ಮತ್ತು ಮಾರ್ಗರೆಟ್ ಬ್ಯೂಫರ್ಟ್ (Margaret Beaufort) ಇವರ ಪುತ್ರನಾದ ಅರ್ಲ್ ಆಫ್ ರಿಚ್‌ಮಂಡನೇ ಮುಂದೆ ಪಟ್ಟಕ್ಕೆ ಬಂದು 7ನೆ ಹೆನ್ರಿಯೆಂದು ಪ್ರಸಿದ್ಧನಾದನು.

ಗುಲಾಬಿ ಯುದ್ಧದ ಹಂತಗಳು : ಕ್ರಿ. ಶ. ೧೪೫೫ ರಲ್ಲಿ ನಡೆದ ಸೇಯಿಂಟ್ ಆಲ್ಬನ್ಸ್ (St. Albans) ಕದನವು ಗುಲಾಬಿ ಯುದ್ಧದ ಮೊದಲನೆಯ ಹಂತವೆನ್ನಬಹುದು. ಇದು ಕೇವಲ ಅರ್ಧಗಂಟೆಯಲ್ಲಿಯೇ ಮುಗಿದುಹೋದರೂ ಈ ಕದನದಲ್ಲಿ ಡ್ಯೂಕ್‌ಆಫ್ ಯಾರ್ಕನು ವಿಜಯಿಯಾದನು ಮತ್ತು ಅವನ ಎದುರಾಳಿಯಾದ ಸಾಮರ್‌ಸೆಟ್ ಮಡಿದನು. ಆರನೆ ಹೆನ್ರಿ ಯಾರ್ಕನ ಸೆರೆಯಾದನು.

ಮಾರ್ಗರೆಟ್ ರಾಣಿಯು (6ನೆ ಹೆನ್ರಿಯ ಹೆಂಡತಿ) ೧೪೫೯ ರಲ್ಲಿ ಲಡ್‌ಫರ್ಡ್ (Lud ford) ಎಂಬಲ್ಲಿ ಯಾರ್ಕ್‌ಸೈನ್ಯದ ಮೇಲೆ ನುಗ್ಗಿದಳು. ಯಾರ್ಕನ ಸೈನ್ಯವು ಅವನನ್ನು ತ್ಯಜಿಸಿ ಓಡಿಹೋಯಿತು. ಅದರ ನಾಯಕರಾದ ಡ್ಯೂಕ್ ಆಪ್ ಯಾರ್ಕ್ ಐರ್ಲೆಂಡಿಗೂ, ಸಾಲಿಸ್‌ಬರಿ ಮತ್ತು ಅವನ ಮಗ ವಾರ್‌ವಿಕ್ ಕೆಲೆಗೂ ಓಡಿಹೋದರು. ಈ ಮಧ್ಯೆ ಕವೆಂಟ್ರಿ (Coventry) ಯಲ್ಲಿ ಪಾರ್ಲಿಮೆಂಟ್ ಲಂಕಾಸ್ಟ್ರಿಯರ್ ಪಂಗಡ

ದವರಿಂದ ತುಂಬಲ್ಪಟ್ಟು ಯಾರ್ಕ್, ಸಾಲಿಸ್‌ಬರಿ ಮತ್ತು ವಾರ್‌ವಿಕ್ ಇವರುಗಳನ್ನು ಅಟೇನ್‌ಡರ್ (Attainder) ಎಂಬ ಕಾನೂನಿನಿಂದ ಮರಣದಂಡನೆಗೆ ಗುರಿಮಾಡಿದ್ದುದೂ ಅಲ್ಲದೆ ಅವರ ಆಸ್ತಿಯನ್ನು ಕೂಡ ಮುಟ್ಟುಗೋಲು ಹಾಕಿಕೊಂಡಿತು. ಇದೇ ಗುಲಾಬಿಯುದ್ಧದ ೨ ನೇ ಹಂತ.

* ಈ ಕಾನೂನು ರಾಜದ್ರೋಹದ ಅಪಾದನೆಯ ಮೇಲೆ ಯಾವನನ್ನಾದರೂ ಗಲ್ಲಿಗೇರಿಸುವ ಅಥವಾ ದೇಶಭ್ರಷ್ಟನನ್ನಾಗಿ ಮಾಡುವ ಶಕ್ತಿಯುಳ್ಳದ್ದಾಗಿತ್ತು. ಅಂತಹವನ ಹೆಸರನ್ನು ಈ ಕಾನೂನಿನಲ್ಲಿ ಸೂಚಿಸಬೇಕಾಗಿತ್ತು. ಖಂಡನೆಯ ಕಾನೂನಿನಲ್ಲಿ (Act of impeachment) ಅಪಾದಿತನಿಗೆ ನ್ಯಾಯಾಸ್ಥಾನದಲ್ಲಿ ವಿಚಾರಣೆಗೆ (Judicial Trial) ಅವಕಾಶವಿತ್ತು. ಆದರೆ ಅಟೇನ್‌ಡರ್ ಕಾನೂನಿನಲ್ಲಿ ಇದಕ್ಕೆ ಅವಕಾಶವಿರಲಿಲ್ಲ. ಈ ಕಾನೂನು ಸ್ಟುವರ್ಟ್ ರಾಜರ ಕಾಲದಲ್ಲಿ ದುರ್ಮಂತ್ರಿಗಳನ್ನು ಶಿಕ್ಷಿಸಲು ಹೆಚ್ಚು ಹೆಚ್ಚಾಗಿ ಬಳಕೆಗೆ ಬಂದಿತು.

ಕ್ರಿ. ಶ. ೧೪೬೦ ರಲ್ಲಿ ಓಡಿಹೋಗಿದ್ದವರೆಲ್ಲರೂ ಇಂಗ್ಲೆಂಡಿಗೆ ಮರಳಿ ಬಂದರು. ನಾರ್ತ್ ಆಂಪ್ಟನ್ (Northampton) ಎಂಬಲ್ಲಿ ನಡೆದ ಕದನದಲ್ಲಿ ವಾರ್‌ವಿಕ್ ಲಂಕಾಸ್ಟ್ರಿಯನ್ನರನ್ನು ಸೋಲಿಸಿ ರಾಜನನ್ನು ಸೆರೆ ಹಿಡಿದನು. ಇದು ಮೂರನೆಯ ಹಂತ. ಆದರೆ ಅದೇ ಡಿಸೆಂಬರ್, ವೇಕ್‌ಫೀಲ್ಡ್ (Wake field) ಎಂಬಲ್ಲಿ ನಡೆದ ಮತ್ತೊಂದು ಭೀಕರ ಕದನದಲ್ಲಿ ಡ್ಯೂಕ್ ಆಫ್ ಯಾರ್ಕ್ ಮತ್ತು ಸಾಲಿಸ್‌ಬರಿ ಇವರಿಬ್ಬರೂ ಕೊಲ್ಲಲ್ಪಟ್ಟರು. ೧೪೬೧ ರಲ್ಲಿ ನಡೆದ ಎರಡನೆಯ ಸೇಂಟ್ ಆಲ್ಬನ್ಸ್ ಕದನದಲ್ಲಿ ವಾರ್‌ವಿಕ್ ಕೂಡ ಸೋತನು. ಇದು ನಾಲ್ಕನೆಯ ಹಂತ.

ರಿಚರ್ಡ್ ಡ್ಯೂಕ್ ಆಫ್ ಯಾರ್ಕನ ಮಗನಾದ ಎಡ್ವರ್ಡನು ತಂದೆಯಂತೆಯೇ ಸಾಹಸಿಯೂ ಮತ್ತು ಸಮರ್ಥನೂ ಆಗಿದ್ದನು. ಇವನು ಮತ್ತು ವಾರ್‌ವಿಕ್ ಯುದ್ಧವನ್ನು ಮುಂದುವರಿಸಿದರು. ಎಡ್ವರ್ಡನು ಲಂಕಾಸ್ಟ್ರಿಯನ್ ಸೈನ್ಯವನ್ನು ಮಾರ್ಟಿಮರ್ಸ್ ಕ್ರಾಸ್ (Mortimer's-cross) ಎಂಬಲ್ಲಿ ೧೪೬೧ ರಲ್ಲಿ ಸೋಲಿಸಿದನು. ಇವನು ಮತ್ತು ವಾರ್‌ವಿಕ್ ಲಂಡನ್ ಪಟ್ಟಣವನ್ನು ಹಿಡಿದರು. ಲಂಡನ್ನಿನಲ್ಲಿ ವಾರ್‌ವಿಕ್ ಎಡ್ವರ್ಡನನ್ನು ನಾಲ್ಕನೇ ಎಡ್ವರ್ಡ್ ಎಂದು ಸಿಂಹಾಸನಕ್ಕೆ ಏರಿಸಿದನು.

* Bill of Attainder

ಅನಂತರ ೧೪೬೧ ರಲ್ಲಿ ಟೌಟನ್ (Towton) ಎಂಬಲ್ಲಿ ರಾಣಿಯ ಸೈನ್ಯವು ಸೋತು, ಅನೇಕ ಲಂಕಾಸ್ಟ್ರಿಯನ್ ಶ್ರೀಮಂತರು ಕೈಸೆರೆ ಸಿಕ್ಕಿಕೊಲ್ಲಲ್ಪಟ್ಟರು. ೧೪೬೪ ರಲ್ಲಿ ಹೆಕ್ಸ್‌ಹಾಮ್, (Hexham) ಎಂಬಲ್ಲಿ ಮತ್ತೊಂದುಬಾರಿ ವಾರ್‌ವಿಕ್ ಲಂಕಾಸ್ಟ್ರಿಯನ್ನರನ್ನು ಸೋಲಿಸಿದನು. ಕ್ರಿ. ಶ. ೧೪೬೫ ರಲ್ಲಿ ಆರನೆ ಹೆನ್ರಿಯನ್ನು ಕೈಸೆರೆ ಹಿಡಿದು ಟವರ್ ಆಫ್ ಲಂಡನ್ (Tower of London) ಎಂಬ ಸೆರೆಮನೆಯಲ್ಲಿ ಇಟ್ಟನು.

ನಾಲ್ಕನೆ ಎಡ್ವರ್ಡನ (ಕ್ರಿ. ಶ. ೧೪೬೧–೧೪೮೩) ಆಳ್ವಿಕೆಯಲ್ಲಿ ವಾರ್‌ವಿಕ್ಕನಿಗೆ ಪ್ರಥಮ ಸ್ಥಾನವು ಸಿಕ್ಕಿದುದು ಆಶ್ಚರ್ಯವೇನೂ ಅಲ್ಲ. ಅವನು ಎಡ್ವರ್ಡನಿಗೆ ಸಹಾಯಕನಾಗಿ ಅನೇಕ ಯುದ್ಧಗಳನ್ನು ಗೆದ್ದು ಅವನು ಸಿಂಹಾಸನಕ್ಕೆ ಬರುವಂತೆ ಮಾಡಿದನು. ಅವನು ಎಡ್ವರ್ಡನನ್ನು ತನ್ನ ಹತೋಟಿಯಲ್ಲಿಟ್ಟುಕೊಳ್ಳಲು ಪ್ರಯತ್ನಿಸಿದನು. ಆದರೆ ಎಡ್ವರ್ಡ್ ಅದನ್ನು ಸಹಿಸಲಿಲ್ಲ. ಕ್ರಮೇಣ ಇವರಿಬ್ಬರಿಗೂ ಮನಸ್ತಾಪವುಂಟಾಯಿತು. ವಾರ್‌ವಿಕ್ ಹಿಂದೆ ತನಗೆ ಶತ್ರುವಾಗಿದ್ದ ಮಾರ್ಗರೆಟ್ ರಾಣಿಯ ಪಕ್ಷವನ್ನು ವಹಿಸಿ, ಲಂಡನ್ನಿನ ಸೆರೆಮನೆಯಲ್ಲಿದ್ದ ಆರನೆ ಹೆನ್ರಿಯನ್ನು ಬಿಡಿಸಿ, ರಾಜನನ್ನಾಗಿ ಮಾಡಿದನು. ಬರ್ಗಂಡಿಗೆ ಓಡಿಹೋಗಿದ್ದ ನಾಲ್ಕನೆ ಎಡ್ವರ್ಡನು ಕ್ರಿ.ಶ. ೧೪೭೧ ರಲ್ಲಿ ಒಂದು ದೊಡ್ಡ ಸೈನ್ಯದೊಡನೆ ವಾರ್‌ವಿಕ್ಕನನ್ನು ಬಾರ್‌ನೆಟ್ (Barnet) ಎಂಬಲ್ಲಿ ಎದುರಿಸಿದನು. ಆ ಕದನದಲ್ಲಿ ರಾಜನಿರ್ಮಾಪಕನಾದ ವಾರ್‌ವಿಕ್ ಮಡಿದನು. ಎಡ್ವರ್ಡನು ಮಾರ್ಗರೆಟ್ ರಾಣಿಯನ್ನು ಟ್ಯೂಕ್ಸ್‌ಬರಿ (Tewkes bury) ಎಂಬಲ್ಲಿ ಸೋಲಿಸಿ, ಅವಳ ಮಗನಾದ ಎಡ್ವರ್ಡನನ್ನು ಕೊಲ್ಲಿಸಿದನು. ರಾಣಿಯು ನಾಲ್ಕು ವರ್ಷ ಸೆರೆಯಲ್ಲಿಡಲ್ಪಟ್ಟು, ಕೊನೆಗೆ ಫ್ರಾನ್ಸಿನ ಹನ್ನೊಂದನೆ ಲೂಯಿಗೆ ಒಪ್ಪಿಸಲ್ಪಟ್ಟಳು. ಲಂಡನ್ನಿಗೆ ಎಡ್ವರ್ಡನು ಹಿಂದಿರುಗಿ ಆರನೆ ಹೆನ್ರಿಯನ್ನು ಕೊಲೆಮಾಡಿಸಿದನು. ನಾಲ್ಕನೆ ಎಡ್ವರ್ಡನ ಆಳ್ವಿಕೆಯಲ್ಲಿ ಸಾವು ನೋವುಗಳ ಎಲ್ಲೆಯು ಮಿತಿಮೀರಿತು. ಸ್ಟಬ್ಸ್ (Stubbs) ಎಂಬ ಚರಿತ್ರೆಗಾರನು ಹೇಳುವಂತೆ ಐಶ್ವರ್ಯವಂತರು (ಶ್ರೀಮಂತರು) ತಮ್ಮ ಹಣದಿಂದಲೂ ಮತ್ತು ಬಡವರು ತಮ್ಮ ಕುತ್ತಿಗೆಯಿಂದಲೂ ಗಲ್ಲಿಗೇರಿಸಲ್ಪಟ್ಟರು (The rich were hanged by the purse and the

poor by the neck). ನಾಲ್ಕನೆ ಎಡ್ವರ್ಡನು ಕ್ರಿ. ಶ. ೧೪೮೩ ರಲ್ಲಿ ಕಾಲವಾದನು. ಅನಂತರ ಹನ್ನೆರಡು ವರ್ಷದ ಅವನ ಮಗ ಐದನೆ ಎಡ್ವರ್ಡನು ಪಟ್ಟಕ್ಕೆ ಬಂದನು. ಹುಡುಗುನಾಗಿದ್ದುದ್ದರಿಂದ ರಾಜ್ಯದ ರಕ್ಷಣೆಯಭಾರವು ಇವನ ಚಿಕ್ಕಪ್ಪನಾದ ಮೂರನೆ ರಿಚರ್ಡನ ಕೈಸೇರಿತು. ಮೂರನೆ ರಿಚರ್ಡನಂತಹ ಕ್ರೂರಿಯಾದ ಚಿಕ್ಕಪ್ಪನನ್ನು ಚರಿತ್ರೆಯು ಅರಿತೇ ಇಲ್ಲ. ತಾನೆ ಸಿಂಹಾಸನವನ್ನಾಕ್ರಮಿಸಿ ರಿಚರ್ಡನು ತನ್ನ ಅಣ್ಣನ ಮಕ್ಕಳಾದ ಐದನೇ ಎಡ್ವರ್ಡನನ್ನೂ ಅವನ ಸಹೋದರನನ್ನೂ ಟವರ್ ಆಫ್ ಲಂಡನ್ ಎಂಬ ಸೆರೆಮನೆಯಲ್ಲಿರಿಸಿ, ಕೊಲ್ಲಿಸಿದನು. ಇಷ್ಟೆ ಅಲ್ಲದೆ ಅವರ ಎಲ್ಲಾ ಅನುಯಾಯಿಗಳನ್ನೂ ಕೊಲ್ಲಿಸಿದನು. ಇದರಿಂದ ಅನೇಕರಿಗೆ ಜೀವಭಯ ಹುಟ್ಟಿ ರಿಚರ್ಡನನ್ನು ಉರುಳಿಸಬೇಕೆಂಬ ಮನಸ್ಸಾಯಿತು. ಯಾರ್ಕ್ ಮನೆತನದವರು ನಡೆಸಿದ ಕೊಲೆಗಳಿಂದ ಜನಗಳಿಗೆ ಬೇಸರವಾಗಿತ್ತು. ಲಂಕಾಸ್ಟರ್ ಮನೆತನಕ್ಕೆ ಸೇರಿದ ಹೆನ್ರಿ ಟ್ಯೂಡರ್‌ನನ್ನು ಪಟ್ಟಕ್ಕೆ ತರಲು ಹೊಂಚು ನಡೆಯಿತು. ಕ್ರಿ. ಶ. ೧೪೮೫ ರಲ್ಲಿ ಬಾಸ್ವರ್ತ್ (Bosworth) ಎಂಬಲ್ಲಿ ಮೂರನೆ ರಿಚರ್ಡನಿಗೂ, ಹೆನ್ರಿ ಟ್ಯೂಡರನಿಗೂ ದೊಡ್ಡ ಯುದ್ಧ ನಡೆದು ಮೂರನೆ ರಿಚರ್ಡನು ಕೊಲ್ಲಲ್ಪಟ್ಟನು. ಅವನ ತಲೆ ಮೇಲೆ ಧರಿಸಿದ್ದ ಚಿನ್ನದ ಕಿರೀಟವು ಒಂದು ಪೊದೆಯಲ್ಲಿ ಸಿಕ್ಕಿತು. ಅದನ್ನೇ ಹೆನ್ರಿ ಟ್ಯೂಡರ್ ಧರಿಸಿ, ಯುದ್ಧಭೂಮಿಯಲ್ಲೇ ಇಂಗ್ಲೆಂಡಿನ ರಾಜನೆಂದು ಘೋಷಿಸಲ್ಪಟ್ಟನು.

ಗುಲಾಬಿಯುದ್ಧವು ಇಂಗ್ಲೆಂಡಿನ ಶ್ರೀಮಂತರ ಪ್ರಾಬಲ್ಯವನ್ನು ಅಡಗಿಸಿತೆಂದು ಧಾರಾಳವಾಗಿ ಹೇಳಬಹುದು. ಯುದ್ಧದಲ್ಲಿ ಅಲ್ಲದೆ ಕೈಸೆರೆ ಸಿಕ್ಕಿದ ಶ್ರೀಮಂತರು ಕೂಡಾ ಪ್ರಾಣತೆತ್ತರು. ಉದಾಹರಣೆಗಾಗಿ ನಾರ್ತ್ ಆಂಪ್ಟನ್ ಹೋರಾಟದಲ್ಲಿ ಮುನ್ನೂರು ಜನ ಲಂಕಾಸ್ಟ್ರಿಯನ್ನರು ಸತ್ತರು. ವೇಕ್‌ಫೀಲ್ಡ್ ಕಾಳಗದ ನಂತರ ಅನೇಕ ಯಾರ್ಕ್ ಮತ್ತು ಅವರ ಅನುಯಾಯಿಗಳು ಕೊಲ್ಲಲ್ಪಟ್ಟರು. ಹೀಗೆ ಹದಿನೈದನೆ ಶತಮಾನದಲ್ಲಿ ಇಂಗ್ಲೆಂಡಿನಲ್ಲಿ ದಬ್ಬಾಳಿಕೆಯನ್ನೆಬ್ಬಿಸಿದ ಶ್ರೀಮಂತರು ಅಳಿದುಹೋದರು. ಅವರ ಬದಲು ಟ್ಯೂಡರ್ ಮನೆತನದ ಆಶ್ರಯದಲ್ಲಿ ಬೇರೆ ಒಂದು ಹೊಸ ಶ್ರೀಮಂತರ ವರ್ಗವು ನಿರ್ಮಿಸಲ್ಪಟ್ಟಿತು.

## ಪಟ್ಟಿ ೧

# ನಾರ್ಮನ್ ರಾಜರು

**ವಿಲಿಯಂ I (ದಿ ಕಾನ್‌ಕರರ್)**

**(೧೦೬೬—೧೦೮೭)**



# ಪಟ್ಟಿ ೨. ಯಾರ್ಕ್ ಮತ್ತು ಲಂಕಾಸ್ಟರ್ ಮನೆತನ.

## ಮೂರನೆ ಎಡ್ವರ್ಡ್

- ಎಡ್ವರ್ಡ್ ಬ್ಲಾಕ್‌ಪ್ರಿನ್ಸ್ (d. ೧೩೭೬)
  - ರಿಚರ್ಡ್ II (೧೩೬೭–೧೩೯೯)
- ವಿಲಿಯಂ (died young)
- ಲಯನಲ್ (ಡ್ಯೂಕ್ ಆಫ್ ಕ್ಲಾರೆನ್ಸ್) (d. ೧೩೬೮)
- ಜಾನ್ ಆಫ್ ಗಾಂಟ್ (ಡ್ಯೂಕ್ ಆಫ್ ಲಂಕಾಸ್ಟರ್) (d. ೧೩೯೯)
  - ಹೆನ್ರಿ ೪ (೧೩೯೯–೧೪೧೩)
    - ಹೆನ್ರಿ ೫ (೧೪೧೩–೨೨)
      - ಹೆನ್ರಿ ೬ (೧೪೨೨–೬೧)
        - ಎಡ್ವರ್ಡ್ (Killed at Tewkesbury)
- ಎಡ್ಮಂಡ್ (ಡ್ಯೂಕ್ ಆಫ್ ಯಾರ್ಕ್)
  - ಎಡ್ವರ್ಡ್ (ಡ್ಯೂಕ್ ಆಫ್ ಯಾರ್ಕ್) (Killed at Agin Court)
  - ರಿಚರ್ಡ್ (ಅರ್ಲ್ ಆಫ್ ಕೆಂಬ್ರಿಡ್ಜ್)
    - ರಿಚರ್ಡ್ (ಡ್ಯೂಕ್ ಆಫ್ ಯಾರ್ಕ್) (Killed at Wakefild, ೧೪೬೦)
      - ಎಡ್ವರ್ಡ್ ೪ (೧೪೬೧–೮೩)
        - *ಎಡ್ವರ್ಡ್ ೫
        - * ರಿಚರ್ಡ್ (ಡ್ಯೂಕ್ ಆಫ್ ಯಾರ್ಕ್)
        - ಎಲಿಜಬೆತ್ = ಹೆನ್ರಿ ೭
      - ರಿಚರ್ಡ್ ೩ (೧೪೮೩–೮೫) (Killed at Bosworth, ೧೪೮೫)
      - ಜಾರ್ಜ್ (ಡ್ಯೂಕ್ ಆಫ್ ಕ್ಲಾರೆನ್ಸ್)
- ಥಾಮಸ್ (ಡ್ಯೂಕ್ ಆಫ್ ಗ್ಲಾಸ್ಟರ್) (murdered ೧೩೯೭)

(*Both murdered in the Tower of London, ೧೪೮೩)

## ನವೋದಯ (Renaissance).

ಹದಿನಾರನೆಯ ಶತಮಾನವು ಇಂಗ್ಲೆಂಡಿನ ಚರಿತ್ರೆಯಲ್ಲಿ ಅತಿ ಮುಖ್ಯವಾದುದು. ಈ ಕಾಲದಲ್ಲಿ ಇಂಗ್ಲೆಂಡಿಗೂ ಮತ್ತು ಯೂರೋಪಿಗೂ ನಿಕಟವಾದ ಸಂಬಂಧವೇರ್ಪಟ್ಟಿತು. ವಿದ್ಯಾಭ್ಯಾಸದಲ್ಲಿ ಆದ ಅಭಿವೃದ್ಧಿ ಇಟಲಿಯಲ್ಲಿ ಜನಿಸಿದ ನವೋದಯದ (Renaissance) ಫಲಿತಾಂಶ ವೆಂದರೆ ತಪ್ಪಲ್ಲ. ಮತಧರ್ಮದಲ್ಲಿ ಆದ ಸುಧಾರಣೆಗಳು ಜರ್ಮನಿಯಲ್ಲಿ ಹುಟ್ಟಿದ ಮಾರ್ಟಿನ್ ಲೂಥರನ ಪ್ರಭಾವದಿಂದ ಆಯಿತೆಂದು ಹೇಳ ಬಹುದು. ಸ್ಕಾಟ್ಲೆಂಡಿನಲ್ಲಿ ಆದ ಮತಧರ್ಮದ ಬದಲಾವಣೆಗಳು ಸ್ವಿಡ್ಜರ್ಲೆಂಡಿನ ಜಾನ್ ಕ್ಯಾಲ್‌ವಿನ್ನನ ಪ್ರಭಾವಕ್ಕೆ ಒಳಗಾಗಿತ್ತು. ವಾಣಿಜ್ಯಕ್ಕಾಗಿ ಹೊಸಹೊಸ ಸಮುದ್ರ ಮಾರ್ಗಗಳನ್ನು ಕಂಡುಹಿಡಿಯಲು ಜಿನೋವ, ಸ್ಪೇನ್ ಮತ್ತು ಪೋರ್ಚುಗಲ್ಲಿನ ನಾವಿಕರು ಮೇಲ್ಪಂಕ್ತಿಯನ್ನು ಹಾಕಿಕೊಟ್ಟರು. ಇಂಗ್ಲೆಂಡ್ ಆ ಮೇಲ್ಪಂಕ್ತಿಯನ್ನು ಅನುಸರಿಸಿತು.

ಈ ಸಂಬಂಧವನ್ನು ನಾವು ಅರಿಯಲು ನವೋದಯ ಎಂದರೇನು ಎಂಬ ಪ್ರಶ್ನೆಗೆ ಉತ್ತರವನ್ನು ತಿಳಿಯಬೇಕು. ಮಧ್ಯಮಯುಗದಲ್ಲಿ ಕ್ರಿಶ್ಚಿಯನ್ ಚರ್ಚ್ ಅತ್ಯಂತ ಪ್ರಮುಖವಾದ ಸಂಸ್ಥೆಯಾಗಿತ್ತು. ಸಮಾಜ, ಮತಧರ್ಮ ಮತ್ತು ರಾಜಕೀಯ ಇವುಗಳ ಮೇಲೆ ಅದರ ಹತೋಟಿಯು ಸಂಪೂರ್ಣವಾಗಿತ್ತು. ಪ್ರಪಂಚವು ಒಂದು ತರಹ ಸೆರೆಮನೆ; ಅದರ ಸುಖಸಂತೋಷಗಳು ದ್ವೇಷಪೂರ್ಣವಾದುವು; ಮತ್ತು ಮಾನವನು ಪರ ಲೋಕಕ್ಕೆ ಹೋಗುವ ಚಿಂತನೆಯಲ್ಲಿ ಇರಬೇಕೆಂಬ ಅಭಿಪ್ರಾಯವು ಸಾಮಾನ್ಯವಾಗಿ ಜನರಲ್ಲಿ ಮೂಡಿತ್ತು. ಮಧ್ಯಮಯುಗದಲ್ಲಿ ರಚಿತವಾದ ಮತ್ತು ಅತ್ಯಂತ ಅಮೋಘವೆಂದು ಪರಿಗಣಿಸಲ್ಪಟ್ಟ ಡಾಂಟೆಯ (Dante) ಡಿವೈನ್ ಕಾಮೆಡಿ (Divine Comedy, ೧೩೦೦, ಕ್ರಿ. ಶ.) ಎಂಬ ಪದ್ಯದಲ್ಲಿ ಪರಲೋಕವನ್ನೇ ಮುಖ್ಯ ವಿಷಯವನ್ನಾಗಿ ಆರಿಸಿಕೊಂಡಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಇದು ನರಕ, ಪರ್ ಗೇಟರಿ (ಅಂದರೆ ಮರಣಾನಂತರದ ಪ್ರಾಯಶ್ಚಿತ್ತ ಪ್ರದೇಶ) ಮತ್ತು ಸ್ವರ್ಗ ಇವುಗಳ ವರ್ಣನೆಯಿಂದ ಕೂಡಿದೆ. ಸಾಧಾರಣವಾಗಿ ಈ ಪ್ರಾಪಂಚಿಕ ಜೀವನವೆಂಬ ಬಲೆಯಿಂದ ಮುಕ್ತರಾಗಿ ಪರಲೋಕಕ್ಕೆ

ಹೋಗಲು ಕಾತುರತೆಯಿಂದ ಕೂಡಿದ ಮನೋಭಾವನೆಯು ಮಾನವೀಯತೆಗೆ ಅಸ್ವಾಭಾವಿಕವಾದರೂ ಹದಿನೈದನೆ ಶತಮಾನದಲ್ಲಿ ಇದು ಜನರ ಮನಸ್ಸನ್ನು ಆಕ್ರಮಿಸಿತ್ತು. ಒಂದೇ ಮಾತಿನಲ್ಲಿ ಹೇಳುವುದಾದರೆ ನವೋದಯವು ಯೂರೋಪಿನಲ್ಲಿ ಮಾನವನನ್ನು ಇದರಿಂದ ವಿಮೋಚನೆ ಮಾಡಿ ಜೀವನ ಸೌಂದರ್ಯವನ್ನೂ ಮಾನವೀಯತೆಯನ್ನೂ ತೋರಿಸಿ ಕೊಟ್ಟಿತು. ಈ ಭಾವವನ್ನು ನಾವು ಚಾಸರನ ಕವಿತೆಯಲ್ಲಿಯೂ ಮತ್ತು ಷೇಕ್ಸ್‌ಪಿಯರನ ಹಾಮ್ಲೆಟ್‌ನಲ್ಲಿಯೂ ಕಾಣಬಹುದು.

" What a piece of work is a man !
How noble in reason! How infinite in faculty !
In form and moving, how express and
admirable !
In action how like an angel ! In apprehension
how like a God !
The beauty of the world ! The paragon of
animals !

ನವೋದಯವು ೧೪೫೩ ರಲ್ಲಿ ತುರ್ಕಿಯವರ ಕಾನ್‌ಸ್ಟಾಂಟಿನೋಪಲ್ ಮುತ್ತಿಗೆಯ ಫಲಿತಾಂಶವಾಗಿ ಉದ್ಭವಿಸಿತೆಂದು ಕೆಲವು ಚರಿತ್ರೆಕಾರರ ಅಭಿಪ್ರಾಯ. ಗ್ರೀಕರು ಅಲ್ಲಿಂದ ತಮ್ಮ ಅಮೂಲ್ಯ ಹಸ್ತಪ್ರತಿಗಳೊಡನೆ ಇಟಲಿಗೆ ಬಂದು ನೆಲಸಿದುದರಿಂದ ಪುರಾತನ ಗ್ರೀಕ್ ಸಾಹಿತ್ಯ, ವಿಮರ್ಶಾತ್ಮಕದೃಷ್ಟಿ ಮೊದಲಾದುವು ಜನರಲ್ಲಿ ಹರಡಿತೆಂದು ವಾದಿಸಿದ್ದಾರೆ ಆದರೆ ಇದಕ್ಕಿಂತ ನೂರು ವರ್ಷಗಳ ಮುಂಚೆಯೇ ಇಟಲಿಯಲ್ಲಿ ಈ ಮನೋಭಾವನೆಯು ಹರಡಿತ್ತು. ಫ್ಲಾರೆನ್ಸ್ ಮತ್ತು ವೆನಿಸ್ ಇದರಲ್ಲಿ ಮುಖ್ಯಪಾತ್ರ ವಹಿಸಿದ್ದುವು. ರೋಮ್ ನಗರವು ಕೂಡ ಹಿಂದುಳಿಯಲಿಲ್ಲ. ಅಲ್ಲಿನ ಪೋಪ್ ಐದನೆ ನಿಕೋಲಸ್ (Nicholas V, ೧೪೪೭-೫೫ ಕ್ರಿ. ಶ.) ಪ್ರಖ್ಯಾತವಾದ ವಾಟಿಕನ್ ಲೈಬ್ರರಿಯನ್ನು (Vatican Library) ಸ್ಥಾಪಿಸಿದನು.

ನವೋದಯದ ಹರಡುವಿಕೆಗೆ ಮುಖ್ಯ ಕಾರಣವಾದುದು ಮುದ್ರಣಾಲಯಗಳ ಸ್ಥಾಪನೆಯೆಂದು ಹೇಳಬಹುದು. ಚಲಿಸುವ ಮುದ್ರಾಕ್ಷರಗಳನ್ನು (Movable types) ಜರ್ಮನಿಯ ಗುಟೆನ್‌ಬರ್ಗ್ (Guten berg) ಎಂಬುವನು ಕಂಡುಹಿಡಿದನು. ಅವನು ಕ್ರಿ. ಶ. ೧೪೫೩ ರಲ್ಲಿ ಯೂರೋಪಿನಲ್ಲಿ ಮೊಟ್ಟಮೊದಲು ಐದನೆ ನಿಕೋಲಸನ ಕಾಗದವನ್ನು ಮುದ್ರಿಸಿದನು. ಇಪ್ಪತ್ತುಮೂರು ವರ್ಷಗಳ ನಂತರ ನಾಲ್ಕನೆ ಎಡ್ವರ್ಡನ ಕಾಲದಲ್ಲಿ ಇಂಗ್ಲೆಂಡಿನಲ್ಲಿ ವಿಲಿಯಂ ಕಾಕ್ಸ್‌ಟನ್ (William Caxton) ಎಂಬುವನು ಮುದ್ರಣಾಲಯವನ್ನು (Printing press) ಸ್ಥಾಪಿಸಿದನು. ಅವನು ಚಾಸರನ ಕಾಂಟರ್‌ಬರಿ ಕಥೆಗಳನ್ನೂ, ಮೆಲೋರಿಯ (Malory) ಮಾರ್ಟ್ ಡಿ ಆರ್ಥರ್ (Morte d' Arthur) ಮೊದಲಾದ ಗ್ರಂಥಗಳನ್ನೂ ಪ್ರಕಟಿಸಿದನು. ಇಂಗ್ಲೆಂಡಿನಲ್ಲಿ ಗ್ರಂಥಗಳ ಅವಲೋಕನದಲ್ಲಿ ಜನರ ಆಸಕ್ತಿ ಇಲ್ಲದಿದ್ದರೆ ಕಾಕ್ಸ್‌ಟನ್ನನು ಬ್ರೂಗ್ಸ್ (Bruges) ಪಟ್ಟಣದಿಂದ ಲಂಡನ್ನಿಗೆ ತನ್ನ ಮುದ್ರಣ ಶಾಲೆಯನ್ನು ಒಯ್ಯುತ್ತಿರಲಿಲ್ಲ. ನಾಲ್ಕನೆ ಎಡ್ವರ್ಡನೇ ಇವನಿಗೆ ಗ್ರಂಥಗಳಿಗಾಗಿ ಇಪ್ಪತ್ತು ಪೌಂಡನ್ನು ಕೊಟ್ಟನು. ಯುದ್ಧದಲ್ಲೇ ತೊಡಗಿದ್ದ ಅನೇಕ ಶ್ರೀಮಂತರು ಗುಲಾಬಿ ಯುದ್ಧದ ಕಾಲದಲ್ಲಿಯೂ ಕೂಡ ಪುಸ್ತಕ ಪ್ರಪಂಚವನ್ನು ಮರೆತಿರಲಿಲ್ಲ. ಕಾಕ್ಸ್‌ಟನ್ನನ ಪೀಳಿಗೆಯ ಹಿಂದೆಯೇ ಐದನೆ ಹೆನ್ರಿಯ ಕಿರಿಯ ಸಹೋದರನೂ ಮತ್ತು ಯುದ್ಧಪ್ರಿಯನೂ ಆದ ಗ್ಲಾಸ್ಟರ್ ಡ್ಯೂಕ್ ಹಂಫ್ರಿ ಎಂಬುವನು ಗ್ರಂಥಗಳ ಶೇಖರಣೆಯಲ್ಲಿಯೂ ಉತ್ಸುಕನಾಗಿದ್ದನು. ಅವನು ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯಕ್ಕೆ ತನ್ನ ಗ್ರಂಥ ಭಂಡಾರದಿಂದ ಅನೇಕ ಗ್ರಂಥಗಳನ್ನು ದಾನಮಾಡಿದನು.

ಹದಿನೈದನೆ ಶತಮಾನದ ಕೊನೆಯ ಹೊತ್ತಿಗೆ ಆಲ್ಡೊ ಮನೂಜಿಯೊ (Aldo manuzio, ೧೪೫೦-೧೫೧೫) ಎಂಬುವನು ಇಟಾಲಿಕ್ ಎಂಬ ಸುಂದರವಾದ ಮುದ್ರಾಕ್ಷರಗಳನ್ನು ತಯಾರಿಸಿದುದಲ್ಲದೆ ವೆನಿಸ್ಸಿನಲ್ಲಿ ಪ್ರಖ್ಯಾತವಾದ ಆಲ್‌ಡೈನ್ ಮುದ್ರಣಾಲಯವನ್ನು (Aldine press) ಸ್ಥಾಪಿಸಿದನು.

ನವೋದಯವು ಬಹು ಮುಖವಾದುದು. ಕಲೆ, ಮತಧರ್ಮ, ಸಾಹಿತ್ಯ, ವಿಜ್ಞಾನ, ಹೊಸ ಸಮುದ್ರಮಾರ್ಗಗಳನ್ನು ಕಂಡುಹಿಡಿಯುವಿಕೆ ಇವೇ ಮೊದಲಾದ ವಿಷಯಗಳ ಮೇಲೆ ತನ್ನ ಪ್ರಭಾವವನ್ನು ಬೀರಿತು.

ಇಟಲಿಯಲ್ಲಿ ಸಾಹಿತ್ಯಕ್ಕೂ, ಕಲೆಗೂ (ಚಿತ್ರಕಲೆ, ಶಿಲ್ಪ, ಸಂಗೀತ) ಹೆಚ್ಚಾಗಿ ಗಮನ ಕೊಡಲಾಯಿತು. ಅಲ್ಲಿ ಗ್ರೀಕ್ ಸಾಹಿತ್ಯದಲ್ಲಿ ಅಭಿರುಚಿ ಹೆಚ್ಚಾಗಿ, ಅನೇಕರು ಗ್ರೀಕ್ ಭಾಷೆಯನ್ನು ಕಲಿತರು. ಪೆಟ್ರಾರ್ಕ್ ಮತ್ತು ಬೊಕಾಷಿಯೊ ಉದ್ದಾಮ ಪಂಡಿತರಾಗಿದ್ದರು. ಇಟಲಿಯ ವಿದ್ವಾಂಸರ ಪರಿಚಿತರಾದ ಅನೇಕ ಇಂಗ್ಲಿಷ್ ವಿದ್ವಾಂಸರು ಆಕ್ಸ್‌ಫರ್ಡಿನಲ್ಲಿ ನೆಲಸಿದರು. ಲಿನಕರ್ (Linacre) ಗ್ರೋಸಿಯನ್ (Grocyn), ಜಾನ್ ಕಾಲೆಟ್ (John colet), ಥಾಮಸ್‌ಮೋರ್ (Thomas more) ಮತ್ತು ಇರಾಸ್‌ಮಸ್ (Eras mus) ಮೊದಲಾದವರು ಈ ಗುಂಪಿನ ಪ್ರಮುಖರು. ಏಳನೆ ಹೆನ್ರಿಯ ತಾಯಿಯಾದ ಮಾರ್ಗರೆಟ್ ಬ್ಯೂಫರ್ಟ್ (Lady Margaret Beaufort) ಈ ಹೊಸ ಪಾಂಡಿತ್ಯದ ಪೋಷಕಿಯಾಗಿದ್ದಳು. ಅವಳು ಕ್ರೇಂಬ್ರಿಡ್ಜಿನಲ್ಲಿ ಕ್ರೈಸ್ಟ್ ಮತ್ತು ಸೆಂಟ್ ಜಾನ' ಕಾಲೇಜುಗಳನ್ನೂ ಮತ್ತು ಆಕ್ಸ್‌ಫರ್ಡ್ ಮತ್ತು ಕ್ರೇಂಬ್ರಿಡ್ಜಿನಲ್ಲಿ ಒಂದೊಂದು ಮತಶಾಸ್ತ್ರದ ಪ್ರಾಧ್ಯಾಪಕರ ಹುದ್ದೆಯನ್ನೂ ಸ್ಥಾಪಿಸಿದಳು.

ಇಟಲಿಯ ಚಿತ್ರಕಲೆಯು ಅತ್ಯದ್ಭುತವಾದುದು. ಕಲೆಯು ಚರ್ಚಿನ ಸೇವೆಗೆ (ಮತಧರ್ಮಕ್ಕೆ) ಮೀಸಲಾಗಿದ್ದರೂ ಚಿತ್ರಗಾರರು ಪ್ರಾಪಂಚಿಕ ಸೌಂದರ್ಯತೆಗೆ ಹೆಚ್ಚು ಹೆಚ್ಚಾಗಿ ಪ್ರಾಶಸ್ತ್ಯ ಕೊಟ್ಟರು. ಬೊಟಿಸೆಲಿ (Botticelli, ೧೪೪೪–೧೫೧೦) ಮತ್ತು ಫ್ರಾಫಿಲಿಪ್ಪೋ ಲಿಪ್ಪಿ (Fra Filippo lippi, ೧೪೦೬–೧೪೬೯) ಇವರುಗಳ ಚಿತ್ರಕಲೆಯಲ್ಲಿ ನಾವು ಇದನ್ನು ನೋಡಬಹುದು. "ಮಡೋನ ಮತ್ತು ಮಗು" (Madonna-and child) ತಾಯಿತನದ ಅಮೋಘತೆಯನ್ನು ಎತ್ತಿ ತೋರಿಸುತ್ತದೆ. ಅದು ಮತಧರ್ಮಕ್ಕೆ ಮಾತ್ರ ಸಂಬಂಧ ಪಟ್ಟದ್ದೆಂದು ಅದನ್ನು ನೋಡುವವರಿಗೆ ಅನಿಸುವುದಿಲ್ಲ. ಇದೇ ಭಾವವನ್ನು ನಾವು ಡೊನಟೆಲೊ (Donatello, ೧೩೮೬–೧೪೬೬), ಲಿಯನಾರ್ಡೊ ಡ ವಿನ್ಸಿ (Leonardo da vinci), ಮೈಕೆಲಾಂಜಲೊ (Michelangelo),

ರಫೇಲ್ (Raphaeal) ಮತ್ತು ಟಿಷಿಯನ್ (Titian) ಮೊದಲಾದ ಚಿತ್ರಗಾರರ ಮತ್ತು ಶಿಲ್ಪಿಗಳ ಕೃತಿಗಳಲ್ಲಿ ಕಾಣಬಹುದು.

ಇಟಲಿಯಲ್ಲಿ ಕಲೆ ಮತ್ತು ಸಾಹಿತ್ಯದಲ್ಲಿ ಈ ಹೊಸ ಹುರುಪು ತೋರಿದರೆ, ಜರ್ಮನಿ, ಇಂಗ್ಲೆಂಡ್, ಸ್ಕಾಟ್ಲೆಂಡಿನಲ್ಲಿ ಇದು ಹೆಚ್ಚಾಗಿ ಮತಧರ್ಮದಲ್ಲಿ ಕಾಣಿಸಿಕೊಂಡಿತು. ಹಿಂದೆಯೇ ವೈಕ್ಲಿಫ್ ಕ್ರಿಶ್ಚಿಯನ್ ಚರ್ಚಿನಲ್ಲಿದ್ದ ದೋಷಗಳನ್ನು ಎತ್ತಿ ತೋರಿಸಿದ್ದನು. ಕಾಲೆಟ್, ಥಾಮಸ್ ಮೋರ್, ಮೊದಲಾದವರು ಚರ್ಚಿನ ದೋಷಗಳನ್ನು ಜನಗಳ ಮುಂದೆ ಪುನಃ ಎತ್ತಿ ಹಿಡಿಯಲಾರಂಭಿಸಿದರು. ಮೋರ್ ಬರೆದ "ಉಟೋಪಿಯ" (Utopia, ೧೫೧೫) ಮತ್ತು ಇರಾಸ್ಮಸ್ ಬರೆದ "ಪ್ರೈಸ್ ಆಫ್ ಫಾಲಿ" (Praise of Folly, ೧೫೦೯)–ಈ ಗ್ರಂಥಗಳು ಚರ್ಚಿನ ಅನಾಚಾರದ ವಿಷಯದಲ್ಲಿ ಜನಗಳ ಕಣ್ಣನ್ನು ತೆರೆದುವು. ಹೀಗೆ ಇವರು ಜರ್ಮನಿಯ ಮಾರ್ಟಿನ್ ಲೂಥರನಿಗೆ ಮೇಲ್ಪಂಕ್ತಿಯನ್ನು ಹಾಕಿ ಕೊಟ್ಟರು. ಇದಕ್ಕಾಗಿಯೇ ಕೆಲವು ಚರಿತ್ರೆಕಾರರು ಇರಾಸ್ಮಸ್ ಹಾಕಿದ 'ಮೊಟ್ಟೆ'ಯನ್ನು ಲೂಥರ್ 'ಮರಿ' ಮಾಡಿದನೆಂದು ಹೇಳಿದ್ದಾರೆ. ಆದರೆ ಇರಾಸ್ಮಸ್ ಲೂಥರನು ಅನುಸರಿಸಿದ ಕ್ರಮವನ್ನು ಒಪ್ಪಲಿಲ್ಲ.

ವಿಜ್ಞಾನದಲ್ಲಿ ಈ ನವಚೈತನ್ಯವು ಚೆನ್ನಾಗಿ ಹೊರಹೊಮ್ಮಿತೆಂದು ಹೇಳಬಹುದು. ಇತರರು ಹಾಕಿಕೊಟ್ಟಿದ್ದ ಮೆಲ್ಪಂಕ್ತಿಯನ್ನಾಗಲೀ, ಮಾರ್ಗವನ್ನಾಗಲಿ ಸುಮ್ಮನೆ ಅನುಕರಣ ಮಾಡುವುದು ಮಧ್ಯಮಯುಗದ ವಿಜ್ಞಾನದಲ್ಲಿ ಬಳಕೆಗೆ ಬಂದಿತ್ತು. ವಿಜ್ಞಾನದಲ್ಲಿ ಪ್ರಯೋಗಗಳಿಗೆ (Experiment) ಪ್ರಾಮುಖ್ಯತೆ ಕೊಡಬೇಕೆಂದು ಆ ಕಾಲದಲ್ಲಿ ವಾದಿಸಿದವನು ರೋಜರ್ಬೇಕನ್ (Roger Bacon). ಆದರೆ ಅವನ ಮಾತು ಅರಣ್ಯರೋದನವಾಗಿತ್ತು.

ಲಿಯೊನಾರ್ಡೊ ಡ ವಿನ್ಸಿ (Leonardo da Vinci, ೧೪೫೨–೧೫೧೯) ಯು ವಿಜ್ಞಾನದ ಈ ಹೊಸ ಚೈತನ್ಯಕ್ಕೆ ಮೂರ್ತಿವತ್ತನೆಂದು ಹೇಳಬಹುದು. ಅವನು ಕೇವಲ ವಿಜ್ಞಾನಿ ಮಾತ್ರ ಆಗಿರಲಿಲ್ಲ. ಶಿಲ್ಪಕಲೆ, ಚಿತ್ರಕಲೆ, ಯಂತ್ರವಿದ್ಯೆ ಮೊಲಾದವುಗಳಲ್ಲೂ ಕುಶಲನಾಗಿದ್ದನು. ವಾಸ್ತವವಾಗಿಯೂ ಈ ನವೋದಯದ ಕಾಲಕ್ಕೆ (Period

of the Renaissance) ಸೇರಿದ ಅನೇಕ ಪ್ರಮುಖ ವ್ಯಕ್ತಿಗಳು ಒಂದೇ ಶಾಸ್ತ್ರದಲ್ಲಾಗಲೀ ಅಥವಾ ಪಾಂಡಿತ್ಯದಲ್ಲಾಗಲೀ ತಜ್ಞರಾಗಿರಲಿಲ್ಲ (narrow specialist). ಮಧ್ಯಮ ಯುಗದಲ್ಲಿ ಟಾಲಮಿ (Ptolemy) ಯ ಬೋಧನೆಯಿಂದ ಸೂರ್ಯನು ಭೂಮಿಯನ್ನು ಸುತ್ತುತ್ತಿದ್ದನೆಂಬ ಭಾವನೆಯು ಜನರಲ್ಲಿ ಸಾಮಾನ್ಯವಾಗಿ ಮೂಡಿತ್ತು. ಕೋಪರ್‌ನಿಕಸ್ (Copernicus) ಎಂಬ ವಿಜ್ಞಾನಿಯು ಇದನ್ನು ವಿರೋಧಿಸಿ ಭೂಮಿಯೇ ಸೂರ್ಯನನ್ನು ಸುತ್ತುತ್ತದೆ ಎಂಬ ಅಂಶವನ್ನು ಪ್ರಕಟಪಡಿಸಿದನು. ಪೈತಗೋರಸ್ (Pythagoras) ಎಂಬ ಗ್ರೀಕನು ಈ ಅಂಶವನ್ನು ಹಿಂದೆಯೇ ಹೇಳಿದ್ದರೂ, ಅದು ಜನಗಳಲ್ಲಿ ಯಾವ ಪರಿಣಾಮವನ್ನೂ ಉಂಟುಮಾಡಿರಲಿಲ್ಲ. ಕೋಪರ್ ನಿಕಸ್ ಸತ್ತ (೧೫೪೩) ಇಪ್ಪತ್ತು ವರ್ಷಗಳನಂತರ ಪೀಸಾ (pisa) ಎಂಬಲ್ಲಿ ಹುಟ್ಟಿದ ಗೆಲಿಲಿಯೋ (Galileo)ಎಂಬ ವಿಜ್ಞಾನಿಯು ಕೋಪರ್ ನಿಕಸ್ಸನ ಅಭಿಪ್ರಾಯವನ್ನೇ ದೂರದರ್ಶಕ ಯಂತ್ರದಿಂದ ಸಮರ್ಥಿಸಿದನು. ಆದರೆ ಇದು ಕ್ರಿಶ್ಚಿಯನ್ ಚರ್ಚಿನ ಅಭಿಪ್ರಾಯಕ್ಕೆ ವಿರುದ್ಧವಾಗಿದ್ದುದರಿಂದ ಮುದುಕನಾಗಿದ್ದ ಗೆಲಿಲಿಯೊ ಪ್ರಾಣವನ್ನುಳಿಸಿಕೊಳ್ಳಲು ಈ ಸಮರ್ಥನೆಯನ್ನು ಹಿಂದಕ್ಕೆ ತೆಗೆದುಕೊಳ್ಳಬೇಕಾಯಿತು.

ಕಾನ್‌ಸ್ಟಾಂಟಿನೋಪಲ್ ೧೪೫೩ ರಲ್ಲಿ ತುರ್ಕಿಯವರ ಕೈಸೇರಿದ್ದರಿಂದ ಹಳೆಯ ವಾಣಿಜ್ಯ ಮಾರ್ಗಗಳು ಅವರ ವಶವಾದುವು. ಆದುದರಿಂದ ಐಶ್ವರ್ಯದಿಂದ ಕೂಡಿದ ಪ್ರಾಚ್ಯದೇಶಗಳೊಡನೆ ವ್ಯಾಪಾರ ಮಾಡಿ ಲಾಭ ಸಂಪಾದಿಸಲು ಯೂರೋಪಿಯನ್ ರಾಷ್ಟ್ರಗಳು ಹೊಸ ಹೊಸ ಸಮುದ್ರ ಮಾರ್ಗಗಳನ್ನು ಕಂಡುಹಿಡಿಯಲು ಪ್ರಾರಂಭಮಾಡಿದುವು. ಇದರಲ್ಲಿ ಬಹು ಮುಖ್ಯ ಪಾತ್ರವನ್ನು ಚಿಕ್ಕ ದೇಶವಾದ ಪೋರ್ಚುಗಲ್ ವಹಿಸಿತು. ಆ ದೇಶದ ರಾಜನಾದ ಹೆನ್ರಿಯು (Prince Henry) ನಲವತ್ತೆರಡು ವರ್ಷಗಳ ಕಾಲ (೧೪೧೮–೬೦) ಸಮುದ್ರ ಸಂಚಾರದ ವಿಚಾರವಾಗಿ ಶೋಧನೆಗಳನ್ನು ಮಾಡಿ, ಹೊಸ ತರಹ ನೌಕೆಗಳನ್ನು ನಿರ್ಮಿಸಿದನು. ೧೪೯೨ ರಲ್ಲಿ ಕೊಲಂಬಸ್ ಸ್ಪೈನಿನ ಪರವಾಗಿ ಪೌರ್ವಾತ್ಯ ದೇಶಗಳಿಗೆ ಹೊಸ ಮಾರ್ಗವನ್ನು ಕಂಡುಹಿಡಿಯಬೇಕೆಂಬ ಆಸೆಯಿಂದ ಎಪ್ಪತ್ತು

ದಿನಗಳು ಸಮುದ್ರಯಾನ ಮಾಡಿ ವೆಸ್ಟಿಂಡೀಸ್ ದ್ವೀಪಗಳಲ್ಲಿ ಒಂದನ್ನು ಕಂಡುಹಿಡಿದನು. ಇವನಂತೆಯೆ ಮ್ಯಾಜಿಲಾನ್ (Magellan) ಫಿಲಿಪ್ಪೈನ್ಸ್ ದ್ವೀಪವನ್ನೂ, ಮತ್ತು ವಾಸ್ಕೋಡಿಗಾಮನು ಕೇಪ್ ಗುಡ್ ಹೋಪ್ ಮಾರ್ಗವಾಗಿ ಇಂಡಿಯಾವನ್ನೂ ತಲಪಿದರು. ಹೀಗೆ ಇವರುಗಳ ಸಾಹಸದ ಫಲವಾಗಿ ಹೊಸ ಹೊಸ ದೇಶಗಳು ಕಂಡುಹಿಡಿಯಲ್ಪಟ್ಟು, ವಾಣಿಜ್ಯದಲ್ಲಿ ಒಂದು ದೊಡ್ಡ ಕ್ರಾಂತಿಯೇ ಆಯಿತು. ಹಿಂದೆ ವ್ಯಾಪಾರ ಕೇಂದ್ರಗಳಾಗಿದ್ದ ಜಿನೋವ, ವೆನಿಸ್ ಮೊದಲಾದುವು ಹಿಂದೆ ಬಿದ್ದುವು. ಅವುಗಳ ಬದಲು ಆಂಟ್‌ವರ್ಪ್ (Antwerp), ಆಮ್‌ಸ್ಟರ್‌ಡಾಮ್ (Amsterdam) ಮತ್ತು ಲಂಡನ್ (London) ವಾಣಿಜ್ಯ ಕೇಂದ್ರಗಳಾಗಿ ಪರಿಣಮಿಸಿದುವು.

ನವೋದಯದಿಂದ (Renaissance) ಮಧ್ಯಮ ಯುಗವು ಮುಗಿದು ಆಧುನಿಕ ಯುಗವು ಪ್ರಾರಂಭವಾಯಿತು.

# ಆಧುನಿಕ ಯುಗ.

## ಟ್ಯೂಡರ್ ರಾಜರು : ರಾಷ್ಟ್ರೀಯ ಸರ್ಕಾರಗಳು

ಹದಿನೈದನೆ ಶತಮಾನದ ಕೊನೆಯ ಭಾಗದಲ್ಲಿ ಯೂರೋಪಿನಲ್ಲಿ ಪ್ರಬಲವಾದ ಮತ್ತು ನಿರಂಕುಶ ರಾಜ್ಯಗಳು ಸ್ಥಾಪಿತವಾದುವು. ಸ್ಪೈನ್, ಫ್ರಾನ್ಸ್, ಆಸ್ಟ್ರಿಯ ಇವುಗಳಲ್ಲಿ ಬಹು ಮುಖ್ಯವಾದುವು. ಕ್ರಿ. ಶ. ೧೪೭೯ ರಲ್ಲಿ ಸ್ಪೈನಿನ ಕಾಸ್ಟಿಲ್ (Castile) ಮತ್ತು ಅರಗಾನ್ (Aragon) ಎಂಬ ಸಣ್ಣ ರಾಜ್ಯಗಳು ಇಸಬೆಲ ಮತ್ತು ಫರ್ಡಿನಾಂಡ್ (Isabella and Ferdinand) ಇವರುಗಳ ಮದುವೆಯಿಂದ ಒಂದಾಗಿ, ಆಧುನಿಕ ಸ್ಪೈನ್ ನಿರ್ಮಾಣವಾಯಿತು. ಇದೇ ರೀತಿಯಲ್ಲಿ ಆಸ್ಟ್ರಿಯದ ರಾಜನಾದ ಮಾಕ್ಸಿಮಿಲಿಯನ್ (Maximilian) ಬರ್ಗಂಡಿಯ ಮೇರಿಯನ್ನು ಮದುವೆಯಾಗಿ ನೆದರ್‌ಲಾಂಡ್ಸ್ ಪಡೆದುಕೊಂಡನು. ಕ್ರಿ. ಶ. ೧೫೧೯ ರ ವೇಳೆಗೆ ಮಾಕ್ಸಿಮಿಲಿಯನ್ನನ ಮೊಮ್ಮಗ ಐದನೆ ಚಾರ್ಲ್ಸನು ಇಸಬೆಲ ಮತ್ತು ಫರ್ಡಿನಾಂಡ್ ಇವರುಗಳಿಗೆ ಗಂಡುಮಕ್ಕಳಿಲ್ಲದ್ದರಿಂದ ಸ್ಪೈನ್

ರಾಜ್ಯಕ್ಕೂ ಮತ್ತು ಆಸ್ಟ್ರಿಯದ ರಾಜ್ಯಕ್ಕೂ ಒಡೆಯನಾದನು. ಇವನು ಇಸಬೆಲ ಮತ್ತು ಫರ್ಡಿನಾಂಡ್ ಇವರ ಹಿರಿಯ ಮಗಳಮಗ. ಕಿರಿಯ ಮಗಳಾದ ಕ್ಯಾಥರೀನ್ ಎಂಬುವಳನ್ನು ಇಂಗ್ಲೆಂಡಿನ ರಾಜನಾದ ಎಂಟನೆ ಹೆನ್ರಿಯು ಮದುವೆಯಾಗಿದ್ದನು. ಹೀಗೆ ಈ ಅಂತರರಾಷ್ಟ್ರೀಯ ಮದುವೆಗಳಿಂದ ಆಗಿನ ಕಾಲದ ರಾಜರು ತಮ್ಮ ರಾಜ್ಯಗಳನ್ನು ವಿಸ್ತರಿಸಿಕೊಂಡರು. ಇಂಗ್ಲೆಂಡ್ ಟ್ಯೂಡರ್ ರಾಜರ ಕೈಕೆಳಗೆ ನಿರಂಕುಶ ಪ್ರಭುತ್ವವನ್ನು ಸ್ಥಾಪಿಸಿತು. ಒಂದು ವಿಧದಲ್ಲಿ ಈ ನಿರಂಕುಶಪ್ರಭುತ್ವಗಳು ರಾಜಕೀಯ ರಂಗದಲ್ಲಿ ನವೋದಯದ ಪರಿಣಾಮವೆನ್ನಬಹುದು. ರಾಷ್ಟ್ರೀಯ ಭಾವನೆಯು (Nationalism) ಈ ರಾಜ್ಯಗಳಲ್ಲೆಲ್ಲಾ ಮೂಡುತ್ತಾ ಬಂದಿತ್ತು. ಮೇಲೆ ಹೇಳಿದ ಮೂರು ರಾಜ್ಯಗಳು ಇಟಲಿಯಲ್ಲಿ ಯುದ್ಧ ಮಾಡಲು ಅತ್ಯಂತ ಕಾತುರವಾಗಿದ್ದುವು. ಈ ಕಾಲದಲ್ಲಿ ಇಟಲಿಯು ಒಡೆದುಹೋಗಿ ವೆನಿಸ್, ಮಿಲನ್, ಫ್ಲಾರೆನ್ಸ್, ಪೋಪಿನರಾಜ್ಯ (Papacy) ಮತ್ತು ನೇಪಲ್ಸ್ ಎಂಬುದಾಗಿ ಐದು ಸಣ್ಣ ಸಣ್ಣ ರಾಜ್ಯಗಳಾಗಿದ್ದುವು ಪ್ರಬಲವಾದ ರಾಜ್ಯಗಳು ಈ ಸಣ್ಣ ರಾಜ್ಯಗಳ ಕಡೆ ಸೇರಿಕೊಂಡು ಇಟಲಿಯನ್ನು ತಮ್ಮ ಯುದ್ಧರಂಗವನ್ನಾಗಿ ಏರ್ಪಡಿಸಿಕೊಂಡಿದ್ದುವು. ಇಂಗ್ಲೆಂಡು ಕೂಡಾ ಆಗಾಗ್ಗೆ ಟ್ಯೂಡರ್ ರಾಜರ ಮುಖಂಡತ್ವದಲ್ಲಿ ಈ ಇಟಲಿಯ ಯುದ್ಧಗಳಲ್ಲಿ ಭಾಗವಹಿಸುತ್ತಿತ್ತು.

**೭ ನೆ ಹೆನ್ರಿ (೧೪೮೫–೧೫೦೯) : ಯಾರ್ಕ್ ಮನೆತನದವರ ಪಿತೂರಿ.**

ಏಳನೆಯ ಹೆನ್ರಿಯು ಓವನ್ ಟ್ಯೂಡರ್ ಎಂಬುವನ ಮೊಮ್ಮಗ. ಓವನ್ ಟ್ಯೂಡರ್ ಐದನೆ ಹೆನ್ರಿಯು ಸತ್ತನಂತರ ಅವನ ವಿಧವೆ ಫ್ರಾನ್ಸಿನ ಕ್ಯಾಥರೀನಳನ್ನು ಮದುವೆಯಾಗಿದ್ದನು. ಅವರ ಮಗ ಎಡ್ಮಂಡ್ ಟ್ಯೂಡರ್ ಏಳನೆ ಹೆನ್ರಿಯ ತಂದೆ. ಏಳನೆ ಹೆನ್ರಿಯು ಸಿಂಹಾಸನಕ್ಕೆ ಬಂದಾಗ ಅವನಿಗೆ ಇಪ್ಪತ್ತೊಂಬತ್ತುವರ್ಷ ವಯಸ್ಸಾಗಿತ್ತು. ಯುದ್ಧದಲ್ಲಿ ಇವನು ಮೂರನೆಯ ರಿಚರ್ಡನನ್ನು ಸೋಲಿಸಿದರೂ ಇವನಿಗಿಂತ ಯಾರ್ಕ್ ಮನೆತನದ ಅನೇಕ ಹಕ್ಕುದಾರರು ಜೀವಂತರಾಗಿದ್ದರು. ಅವರಲ್ಲಿ ನಾಲ್ಕನೆ ಎಡ್ವರ್ಡನ ಮಗಳಾದ ಎಲಿಸಬೆತ್‌ಳನ್ನು ಏಳನೆ ಹೆನ್ರಿಯು ಮದುವೆಯಾದನು.


ಯುರೋಪ್
೧೪೬೦
ಹ್ಯಾಪ್ಸಬರ್ಗ್
ಆರಗಾನ್
ಪೋಪಿನರಾಜ್ಯ
ವನೀಷಿನ ,,
ತುರುಷ್ಕರ
ಮೂರ್
ನಾರ್ವೇ, ಸ್ವೀಡನ್
ಮತ್ತು
ಡೆನ್ಮಾರ್ಕ್ ರಾಜ್ಯಗಳು
ಸ್ಕಾಟ್ಲೆಂಡ ರಾಜ್ಯ
ಇಂಗ್ಲೆಂಡ್
ಮತ್ತು
ಐರ್ಲೆಂಡ್
ನೆದರ್‌ಲ್ಯಾಂಡ್ಸ
ಬೊಹೀಮಿಯ
ಚಕ್ರಾಧಿಪತ್ಯ
ಪೋಲಂಡ್
ಮಸ್‌ಕೊವಿ
ಹಂಗೆರಿ
ಫ್ರಾನ್ಸ್
ಸಾವಾಯ್
ಮಿಲಾನ್
ರೋಮ
ನೇಪಲ್ಸ್
ಸಿಸಿಲಿ
ಸಾರ್ಡೀನಿಯ
ನವಾರ
ಕ್ಯಾಸ್ಟಿಲ
ಪೋರ್ಚುಗಲ್
ಗ್ರೆನಡ
ಕಾನ್‌ಸ್ಟಾಂಟಿನೋಪಲ್
ಕ್ರೀಟ್
ಸೈಪ್ರಸ

ಇದರಿಂದ ಏಳನೆ ಹೆನ್ರಿಗೆ ಸಿಂಹಾಸನಕ್ಕೆ ಬರುವ ಹಕ್ಕು ಜಾಸ್ತಿಯಾಯಿತು. ಆದರೂ ಯಾರ್ಕ್ ಮನೆತನದವರು ಇವನನ್ನು ಸುಮ್ಮನೆ ಇರಗೊಡಲಿಲ್ಲ. ಅವರು ದಂಗೆಯನ್ನು ಹೂಡಿದರು. ಲಾಂಬರ್ಟ್ ಸಿಮ್ನೆಲ್ (Lambert simnel) ಎಂಬುವನಿಗೆ ನಾಲ್ಕನೆ ಎಡ್ವರ್ಡನ ತಮ್ಮ ಜಾರ್ಜ್ ಡ್ಯೂಕ್ ಆಫ್ ಕ್ಲಾರೆನ್ಸ್ ಎಂಬುವನ ಮಗ ಎಡ್ವರ್ಡ್ ಅರ್ಲ್ ಆಫ್ ವಾರಿಕ್‌ನ ವೇಷವನ್ನು ಹಾಕಿ, ಡಬ್ಲಿನ್ನಿನಲ್ಲಿ ಕ್ರಿ.ಶ. ೧೪೮೭ ರಲ್ಲಿ ಪಟ್ಟಾಭಿಷೇಕವನ್ನು ಮಾಡಿ, ಸೈನ್ಯದೊಡನೆ ಇಂಗ್ಲೆಂಡಿನ ಮೇಲೆ ಅವರು ನುಗ್ಗಿದರು. ಆದರೆ ಏಳನೆ ಹೆನ್ರಿಯು ಎಲಿಜಬೆತ್‌ಳನ್ನು ಮದುವೆಯಾದಾಗಲೇ ನಾಲ್ಕನೆ ಎಡ್ವರ್ಡನ ತಮ್ಮ ಜಾರ್ಜ್ ಡ್ಯೂಕ್ ಆಫ್ ಕ್ಲಾರೆನ್ಸಿನ ಮಗ ಎಡ್ವರ್ಡ್ ಅರ್ಲ್ ಆಫ್ ವಾರಿಕ್ಕನನ್ನುಸೆರೆಮನೆಯಲ್ಲಿಡಿಸಿದ್ದನು. ಹೆನ್ರಿಯು ನಿಜವಾದ ವಾರಿಕ್‌ನನ್ನು ಸೆರೆಮನೆಯಿಂದ ಕರೆಸಿ ಬೀದಿಯಲ್ಲಿ ಜನಗಳಿಗೆ ತೋರಿಸಿದನು. ಆದಾಗ್ಯೂ ಸ್ಟೋಕ್ (Stoke) ಎಂಬಲ್ಲಿ ಯುದ್ಧ ನಡೆದು, ಏಳನೆ ಹೆನ್ರಿಯು ಅವನನ್ನು ಸೋಲಿಸಿ, ಕ್ಷಮಿಸಿ, ತನ್ನ ಪಾಕಶಾಲೆಯಲ್ಲಿ ಊಳಿಗಕ್ಕೆ ಸೇರಿಸಿಕೊಂಡನು. ಪುನಃ ಯಾರ್ಕ್ ಮನೆತನದವರು ಕ್ರಿ. ಶ. ೧೪೯೧ ರಲ್ಲಿ ಪರ್ಕಿನ್ ವಾರ್‌ಬೆಕ್ (Perkin Warbeck) ಎಂಬ ಮತ್ತೊಬ್ಬ ಫ್ಲಾಂಡರ್ಸ್ ದೇಶದ ಯುವಕನಿಗೆ ಸೆರೆಮನೆಯಲ್ಲಿ ಮೂರನೆ ರಿಚರ್ಡನಿಂದ ಕೊಲೆ ಮಾಡಲ್ಪಟ್ಟ ನಾಲ್ಕನೆ ಎಡ್ವರ್ಡನ ಕೊನೆಯ ಪುತ್ರನ ವೇಷವನ್ನು ಹಾಕಿಸಿ, ಕಾರ್ಕ್ ಎಂಬಲ್ಲಿ ಪಟ್ಟ ಕಟ್ಟಿ ಇಂಗ್ಲೆಂಡಿನ ಮೇಲೆ ಕಳುಹಿಸಿದರು. ಪರ್ಕಿನ್ ವಾರ್‌ಬೆಕ್ ತಾನು ಮೂರನೆ ರಿಚರ್ಡನ ಸೆರೆಯಿಂದ ತಪ್ಪಿಸಿಕೊಂಡು. ಈಗ ತನ್ನ ಹಕ್ಕಿಗಾಗಿ ಹೊಡೆದಾಡಲು ಬಂದವನಂತೆ ನಟಿಸಲಾರಂಭಿಸಿದನು. ಏಳನೆ ಹೆನ್ರಿಯು ಅವನನ್ನೂ ಸೋಲಿಸಿ ಸೆರೆಯಲ್ಲಿಟ್ಟನು. ಕ್ರಿ. ಶ. ೧೪೯೯ ರಲ್ಲಿ ಅವನನ್ನೂ ಮತ್ತು ಅರ್ಲ್ ಆಫ್ ವಾರಿಕ್‌ನನ್ನೂ ಗಲ್ಲಿಗೇರಿಸಿದನು. ಇದರಿಂದ ಯಾರ್ಕ್ ಮನೆತನದ ಪಿತೂರಿಯು ಕೊನೆಗಂಡಿತು.

### ಒಳಾಡಳಿತ : ಶ್ರೀಮಂತರ ದಮನ

ಗುಲಾಬಿ ಯುದ್ಧದಲ್ಲಿ ಅಳಿದುಳಿದ ಕೆಲವು ಶ್ರೀಮಂತರು, ಹೆನ್ರಿಯು ಶಿಸ್ತಿನ ಸರ್ಕಾರವನ್ನು ಏರ್ಪಡಿಸಲು ಕೈಗೊಂಡಿದ್ದ ಕ್ರಮಗಳಿಗೆ ವಿರೋಧಿ

ಗಳಾಗಿದ್ದರು. ಪಾರ್ಲಿಮೆಂಟಿನ ಅನುಮತಿಯಿಂದ ಏಳನೆ ಹೆನ್ರಿಯು ಸ್ಟಾರ್ ಛೇಂಬರ್ ಕೋರ್ಟನ್ನು(Star Chamber Court)ಸ್ಥಾಪಿಸಿದನು. ಇದರಲ್ಲಿ ರಾಜನ ಆಡಳಿತ ಸಮಿತಿಯ (King's Council) ಕೆಲವು ಸದಸ್ಯರು ಲಿವರಿ ಮತ್ತು ಮೇಂಟನನ್ಸ್ ಪದ್ಧತಿಯಿಂದ ಬಲಿಷ್ಠರಾಗಿದ್ದ ಶ್ರೀಮಂತರ ಪ್ರಾಬಲ್ಯವನ್ನು ಮುರಿಯಲು ಏಳನೆ ಹೆನ್ರಿಯಿಂದ ಈ ಸ್ಟಾರ್ ಛೇಂಬರ್ ಕೋರ್ಟಿನ ನ್ಯಾಯಾಧಿಪತಿಗಳಾಗಿ ನಿಯಮಿಸಲ್ಪಟ್ಟಿದ್ದರು. ಏಳನೆ ಹೆನ್ರಿಯು ತುಂಬಾ ಹಣದಾಸೆಯುಳ್ಳವನಾಗಿದ್ದುದರಿಂದ ತಪ್ಪಿತಸ್ಥರಾದ ಈ ಶ್ರೀಮಂತರಿಂದ ಹಣದ ರೂಪದಲ್ಲಿ ಹೆಚ್ಚು ದಂಡವನ್ನು ತೆಗೆದುಕೊಳ್ಳುತ್ತಿದ್ದನು. ಒಮ್ಮೆ ತನ್ನ ಸ್ನೇಹಿತನಾದ ಅರ್ಲ್ ಆಫ್ ಆಕ್ಸ್‌ಫರ್ಡನ ಸತ್ಕಾರ ಕೂಟದಲ್ಲಿ ಲಿವರಿ ಮತ್ತು ಮೇಂಟನನ್ಸ್ ಬಗ್ಗೆ ವಿರೋಧವಾದ ತನ್ನ ಶಾಸನವನ್ನು ತನ್ನ ಕಣ್ಣೆದುರಿಗೇ ಉಲ್ಲಂಘಿಸಿದ್ದುದಕ್ಕಾಗಿ ಏಳನೆ ಹೆನ್ರಿಯು ಅವನಿಂದ ಹತ್ತುಸಾವಿರ ಪೌಂಡ್ ದಂಡವನ್ನು ಸೆಳೆದನು. ಈ ಶ್ರೀಮಂತರನ್ನು ಅಡಗಿಸಲು ಸಾಮಾನ್ಯವಾದ ನ್ಯಾಯಾಧಿಪತಿಗಳಿಗೂ ಮತ್ತು ನ್ಯಾಯಾಲಯಗಳಿಗೂ ಸಾಧ್ಯವಿಲ್ಲದಿದ್ದುದರಿಂದ ಈ ಹೊಸ ನ್ಯಾಯಾಲಯವು ನಿರ್ಮಿತವಾಯ್ತು. ವೆಸ್ಟ್‌ಮಿನಿಸ್ಟರ್‌ನಲ್ಲಿ ಸೇರುತ್ತಿದ್ದ ಈ ನ್ಯಾಯಾಲಯದ ಕೊಠಡಿಯ ಒಳಛಾವಣಿಯು ನಕ್ಷತ್ರಗಳ ಅಲಂಕಾರದಿಂದ ಕೂಡಿದ್ದುದರಿಂದ ಅದಕ್ಕೆ ಸ್ಟಾರ್ ಛೇಂಬರ್ ಎಂದು ಹೆಸರಾಯಿತು. ಇದು ಟ್ಯೂಡರ್ ರಾಜರ ಕಾಲದಲ್ಲಿ ಶಿಸ್ತನ್ನು ಮತ್ತು ಶಾಂತಿಯನ್ನು ತರಲು ಉಪಯುಕ್ತವಾದರೂ, ಸ್ಟುವರ್ಟ್ ರಾಜರ ಕೈಯಲ್ಲಿ ಜನಹಿಂಸೆಗೆ ಸಾಧನವಾಯಿತು.

## ಹೆನ್ರಿ ಮತ್ತು ಪಾರ್ಲಿಮೆಂಟು

ಏಳನೆ ಹೆನ್ರಿಯ ವಕೀಲರಾದ ಎಂಪ್‌ಸನ್ (Empson) ಮತ್ತು ಡಡ್ಲಿ (Dudley) ಅನೇಕ ವಿಧದಲ್ಲಿ ಹೆನ್ರಿಗೆ ಹಣವನ್ನು ಒದಗಿಸಲು ಸಹಾಯಕರಾಗಿದ್ದರು. ಶ್ರೀಮಂತರಿಂದ ಬಲಾತ್ಕಾರವಾದ ಸಾಲ (forced Loan)ಮತ್ತು ಬೆನ್‌ವೊಲೆನ್‌ಸಸ್ ಎಂಬ ಕಾಣಿಕೆ ಮೊದಲಾದುವುಗಳಿಂದ ಅವರ ಪ್ರಾಬಲ್ಯವನ್ನು ತಗ್ಗಿಸಲಾಯಿತು. ಹೆನ್ರಿಯ ಮಂತ್ರಿಯಾದ ಮಾರ್ಟ್ಟ (Morton) ಎಂಬುವನು ಹಣ ಶೇಖರಿಸಲು

ಒಂದು ಉಪಾಯವನ್ನು ಹೂಡುತ್ತಿದ್ದನಂತೆ. ಶ್ರೀಮಂತನು ತನ್ನ ಐಶ್ವರ್ಯದಲ್ಲಿ ಸ್ವಲ್ಪವನ್ನು ರಾಜನಿಗೆ ಕೊಟ್ಟರೆ ಅವನ ಸಂಪತ್ತು ಕಡಿಮೆಯಾಗುವುದಿಲ್ಲವೆಂದೂ, ಬಡತನದಿಂದಲೂ ಮತ್ತು ಮಿತವ್ಯಯದಿಂದಲೂ ಜೀವಿಸುತ್ತಿದ್ದವರು ತುಂಬಾ ಹಣವನ್ನು ಉಳಿಸಿರಬೇಕೆಂತಲೂ, ಹಾಗೆ ಉಳಿಸಿದ ಹಣದಲ್ಲಿ ಸ್ವಲ್ಪವನ್ನು ರಾಜನಿಗೆ ಕೊಡಲು ಅಷ್ಟೇನೂ ಅವರಿಗೆ ತೊಂದರೆಯಾಗದೆಂದೂ ಅವನು ಹೇಳುತ್ತಿದ್ದನು. ಈ ರೀತಿಯಲ್ಲಿ ಬಡವರಾಗಲಿ, ಬಲ್ಲಿದವರಾಗಲಿ ಹಣವನ್ನು ತೆರಬೇಕಾಗಿತ್ತು. ಈ ಹಂಚಿಕೆಗೆ "ಮಾರ್ಟನ್ಸ್ ಫೋರ್ಕ್" (Morton's Fork) ಎಂದು ಹೆಸರು. ಹೆನ್ರಿಯು ಈ ರೀತಿ ಹಣ ಸಂಪಾದಿಸಿ, ಪಾರ್ಲಿಮೆಂಟನ್ನು ಆಗಾಗ್ಗೆ ಸೇರಿಸುವ ಗೋಜಿಗೆ ಹೋಗುತ್ತಿರಲಿಲ್ಲ.

**ವಾಣಿಜ್ಯ ಮತ್ತು ವಿದೇಶಾಂಗನೀತಿ** : ಟ್ಯೂಡರ್ ಪ್ರಭುತ್ವವು ಜನಗಳ ಪ್ರೀತಿಗೆ ಪಾತ್ರವಾಗಿದ್ದುದಕ್ಕೆ ಒಂದು ಮುಖ್ಯವಾದ ಕಾರಣವೇನೆಂದರೆ ವ್ಯಾಪಾರಾಭಿವೃದ್ಧಿ. ಹೆನ್ರಿಯ ಕಾಲಕ್ಕಿಂತ ಮುಂಚೆ ವಿದೇಶೀ ವರ್ತಕರು ಮತ್ತು ವ್ಯಾಪಾರದ ಹಡಗುಗಳು ಇಂಗ್ಲೆಂಡಿನಿಂದ ಉಣ್ಣೆಯನ್ನೂ ಮತ್ತು ಉಣ್ಣೆಬಟ್ಟೆಯನ್ನೂ, ಯೂರೋಪಿನಿಂದ ಇಂಗ್ಲೆಂಡಿಗೆ ಇತರ ಸಾಮಾನುಗಳನ್ನೂ ತರುತ್ತಿದ್ದುವು. ಹೆನ್ರಿಯು ಕ್ರಿ.ಶ. ೧೪೮೫ ರಲ್ಲಿ 'ನಾವಿಗೇಷನ್ ಆಕ್ಟ್' ನ್ನು ಜಾರಿಗೆ ತಂದು (Navigation Act) ಬೋರ್ಡೋವಿನಿಂದ (Bordeaux) ಬಂದ ದ್ರಾಕ್ಷಾರಸವು (Wine) ಇಂಗ್ಲಿಷ್ ಹಡಗುಗಳಲ್ಲಿಯೇ, ಇಂಗ್ಲಿಷ್ ನಾವಿಕರಿಂದಲೇ ತರಲ್ಪಡತಕ್ಕುದೆಂದು ವಿಧಾಯಕ ಮಾಡಿದನು. ಜರ್ಮನಿಯ ಹಾನ್‌ಸಾ (Hansa) ವರ್ತಕರ ಸಂಘದ ಪ್ರಾಬಲ್ಯವನ್ನು ರೀಗಾ(Riga)ಮತ್ತು ಡೆನ್‌ಮಾರ್ಕ್ (Denmark) ಇವುಗಳೊಂದಿಗೆ ಮಾಡಿಕೊಂಡ ಕರಾರಿನ ಫಲವಾಗಿ ಹೆನ್ರಿಯು ತಗ್ಗಿಸಿದನು. ಇದರಿಂದ ಬಾಲ್ಟಿಕ್ ವ್ಯಾಪಾರದಲ್ಲಿ ಇಂಗ್ಲೆಂಡ್ ಭಾಗವಹಿಸುವಂತಾಯಿತು. ಹೆನ್ರಿಯು ವ್ಯಾಪಾರಕ್ಕೂ ಮತ್ತು ಯುದ್ಧಕ್ಕೂ ಅನೇಕ ಹಡಗುಗಳನ್ನು ಕಟ್ಟಿಸಿದನು. ಅವನ ಮಗ ಎಂಟನೆಯ ಹೆನ್ರಿಯ ಕಾಲದಲ್ಲಿ ಇಂಗ್ಲಿಷ್ ಹಡಗುಪಡೆ (Navy) ಹೆಚ್ಚು ಅಭಿವೃದ್ಧಿಗೆ ಬಂದಿತು.

ಉಲ್ಲನ್ ಬಟ್ಟೆಯನ್ನು ರಫ್ತುಮಾಡುತ್ತಿದ್ದ “ಮರ್ಚೆಂಟ್ ಅಡ್‌ವೆಂಚರರ್ಸ್” (Merchant Adventurers) ಎಂಬ ವರ್ತಕ ಮಂಡಲಿ (Company) ಯ ಅಭಿವೃದ್ಧಿಯು. ಯಾರ್ಕ್ ಮನೆತನದ ಡಚಸ್ ಆಫ್ ಮಾರ್ಗರೆಟ್ (Dutches of Margaret) ಎಂಬು ವಳು ಫ್ಲಾಂಡರ್ಸನಲ್ಲಿ ಅದರ ವಿರುದ್ಧ ಮಾಡುತ್ತಿದ್ದ ಚಟುವಟಿಕೆಯಿಂದ ಕುಂದುತ್ತಿದ್ದುದರಿಂದ ಹೆನ್ರಿಯು ಉಣ್ಣೆಯ ಕೇಂದ್ರವನ್ನು ಆಂಟ್‌ವರ್ಪ್‌ನಿಂದ ಕೆಲೆಗೆ ಬದಲಾಯಿಸಿದನು. ಇದರಿಂದ ಫ್ಲಾಂಡರ್ಸ್ ದೇಶವು ಹೆನ್ರಿಯೊಂದಿಗೆ ಕ್ರಿ. ಶ. ೧೪೯೬ ರಲ್ಲಿ ಒಪ್ಪಂದಕ್ಕೆ ಬಂದಿತು. ಈ ಕರಾರಿಗೆ ಮ್ಯಾಗ್ನಸ್ ಇಂಟರ್‌ಕರ್ಸಸ್ (Magnus Intercursus) ಎಂದು ಹೆಸರು.

ಹೆನ್ರಿಯು ತನ್ನ ವಿದೇಶಾಂಗ ನೀತಿಯನ್ನು ತನ್ನ ಕಾಲದ ಇತರ ಯೂರೋಪಿಯನ್ ರಾಷ್ಟ್ರಗಳು ಅನುಸರಿಸುತ್ತಿದ್ದಂತೆಯೇ ತಾನೂ ಅಂತರ ರಾಷ್ಟ್ರೀಯ ವಿವಾಹಗಳಲ್ಲಿ ಭಾಗವಹಿಸಿ ಇಂಗ್ಲೆಂಡಿನ ವ್ಯಕ್ತಿತ್ವವನ್ನು ಹೆಚ್ಚಿಸಬೇಕೆಂಬ ಅಭಿಲಾಷೆಯುಳ್ಳವನಾಗಿದ್ದನು. ಈ ವಿವಾಹಗಳಲ್ಲಿ ಮಕ್ಕಳು, ಮುದುಕರು ಎಂಬ ಪರಿಗಣನೆಯೇ ಇಲ್ಲದೆ ರಾಷ್ಟ್ರಗಳು ತಮ್ಮ ಆಸೆ ಆಕಾಂಕ್ಷೆಗಳನ್ನೇ ಮುಖ್ಯ ಧ್ಯೇಯವನ್ನಾಗಿ ಹೊಂದಿದ್ದವೆಂದರೆ ತಪ್ಪಲ್ಲ. ಇವುಗಳ ವರ್ಣನೆಯು ಲಾಭದಾಯಕವಲ್ಲದಿದ್ದರೂ ಆಗಿನ ಯೂರೋಪಿಯನ್ ರಾಷ್ಟ್ರಗಳ ಅಂತರರಾಷ್ಟ್ರೀಯ ವ್ಯವಹಾರದ ರೀತಿ ನೀತಿಗಳನ್ನು ಇದರಿಂದ ಸ್ವಲ್ಪಮಟ್ಟಿಗೆ ನಾವು ಕಾಣುವಂತೆ ಮಾಡುತ್ತದೆ.

ಸ್ಪೈನಿನ ಇಸಬೆಲ ಮತ್ತು ಫರ್ಡಿನಾಂಡ್ ಇವರ ಮಗಳಾದ ಕಾಥರೀನ್ ಆಫ್ ಅರಗಾನ್ ಎಂಬುವಳನ್ನು ಹೆನ್ರಿಯು ತನ್ನ ಹಿರಿಯ ಮಗನಾದ ಆರ್ಥರ್ ಎಂಬುವನಿಗೆ ಮದುವೆ ಮಾಡಿಸಿದನು. ಆಗ್ಗೆ ಸ್ಪೈನ್ ಅತ್ಯಂತ ಪ್ರಬಲ ರಾಷ್ಟ್ರವಾಗಿದ್ದುದರಿಂದ ಈ ಸಂಬಂಧವು ಇಂಗ್ಲೆಂಡಿನ ಪ್ರತಿಷ್ಠೆಯನ್ನು ಹೆಚ್ಚಿಸಿತು. ಮದುವೆಯಾದ ಒಂದೇ ವರ್ಷದೊಳಗೆ ಆರ್ಥರ್ ಸತ್ತುಹೋದುದರಿಂದ ಹೆನ್ರಿಯು ಬಳುವಳಿಯನ್ನು ಕಳೆದುಕೊಳ್ಳಲು ಇಷ್ಟವಿಲ್ಲದೆ ತನ್ನ ಎರಡನೆಯ ಮಗನಾದ ಎಂಟನೆ ಹೆನ್ರಿಗೆ ಕ್ಯಾಥರೀನಳನ್ನು ಪುನರ್ವಿವಾಹ ಮಾಡಿಸಲು ಏರ್ಪಾಡು ಮಾಡಿಸಿದನು.

ಇದು ಅಶಾಸ್ತ್ರೀಯವಾದುದ್ದರಿಂದ ಕ್ರೈಸ್ತ ಜಗದ್ಗುರುವಿನ (Pope) ವಿಶೇಷ ಅಪ್ಪಣೆಯನ್ನು (Dispensation) ಕ್ರಿ. ಶ. ೧೫೦೩ ರಲ್ಲಿ ಪಡೆಯಲಾಯಿತು.

ಇಂಗ್ಲೆಂಡಿಗೂ, ಸ್ಕಾಟ್ಲೆಂಡಿಗೂ ಶತ್ರುತ್ವವು ನಡೆದುಕೊಂಡೇ ಬಂದಿತ್ತು. ಸಮಯ ಸಿಕ್ಕಿದಾಗಲೆಲ್ಲಾ ಸ್ಕಾಟ್ಲೆಂಡ್ ಇಂಗ್ಲೆಂಡಿಗೆ ವಿರುದ್ಧವಾಗಿ ಫ್ರಾನ್ಸಿನ ಜೊತೆ ಸೇರಿಕೊಳ್ಳುತ್ತಿತ್ತು. ಸ್ಕಾಟ್ಲೆಂಡ್ ಸ್ನೇಹವನ್ನು ವಿವಾಹ ಮೂಲಕ ಬೆಳಸಲು ಒಂದನೇ ಎಡ್ವರ್ಡನೇ ಪ್ರಯತ್ನಿಸಿದ್ದನು. ಆದರೆ ನಾರ್ವೆ ಕುಮಾರಿಯ (Maid of Norway) ಸಾವಿನಿಂದ ಅದು ತಪ್ಪಿಹೋಗಿತ್ತು. ಏಳನೇ ಹೆನ್ರಿಯು ಸ್ಕಾಟ್ಲೆಂಡಿನ ಮೈತ್ರಿಯನ್ನು ಸಂಪಾದಿಸಲು ತನ್ನ ಹಿರಿಯ ಮಗಳಾದ ಮಾರ್ಗರೆಟ್ ಎಂಬುವಳನ್ನು ಕ್ರಿ. ಶ. ೧೫೦೨ ರಲ್ಲಿ ರಾಜನಾದ ನಾಲ್ಕನೆ ಜೇಮ್ಸನಿಗೆ ಮದುವೆ ಮಾಡಿ ಕೊಟ್ಟನು.

ಫ್ರಾನ್ಸಿನ ರಾಜನಾದ ಎಂಟನೆ ಚಾರ್ಲ್ಸನು ಸ್ವತಂತ್ರ ಸಣ್ಣ ರಾಜ್ಯವಾಗಿದ್ದ ಬ್ರಿಟನಿಯನ್ನು (Brittany) ತನ್ನ ರಾಜ್ಯಕ್ಕೆ ಸೇರಿಸಿ ಕೊಳ್ಳಲು ಪ್ರಯತ್ನಪಡುತ್ತಿದ್ದನು. ಹೆನ್ರಿಯು ಇದಕ್ಕೆ ಅವಕಾಶ ಕೊಡದೆ ತನ್ನ ಸೈನ್ಯವನ್ನು ಫ್ರಾನ್ಸಿನಮೇಲೆ ಹೊರಡಿಸಿದನು. ಕೆಲವು ತಿಂಗಳ ನಂತರ ಚಾರ್ಲ್ಸನು ಇಟಲಿಯಲ್ಲಿ ಯುದ್ಧಮಾಡಲು ಜರೂರು ಹೋಗ ಬೇಕಾಗಿದ್ದುದರಿಂದ ಈಟಾಪಲ್ಸ್ (Etaples) ಎಂಬ ಕರಾರಿನ ಪ್ರಕಾರ ಹೆನ್ರಿಗೆ ತುಂಬಾ ಹಣ ಕೊಟ್ಟು ಹಿಂದಕ್ಕೆ ಕಳುಹಿಸಿದನು. ಹೆನ್ರಿಗೆ ಬೇಕಾಗಿದ್ದುದೂ ಹಣವೇ ಹೊರತು ಯುದ್ಧವಲ್ಲ. ಅವನು ಫ್ರಾನ್ಸಿನಿಂದ ಹಿಂದಿರುಗಿದನು.

ಹೆನ್ರಿಯ ಆಳ್ವಿಕೆಯಲ್ಲಿ ಐರ್ಲೆಂಡ್ ಸ್ವಲ್ಪಮಟ್ಟಿಗೆ ಮುಖ್ಯಪಾತ್ರ ವಹಿಸಿತೆಂದು ಹೇಳಬಹುದು. ಯಾರ್ಕ್ ಮನೆತನದವರು ನಡೆಸುತ್ತಿದ್ದ ಪಿತೂರಿಗಳಿಗೆ ಅದು ಕೇಂದ್ರವಾಗಿತ್ತು. ಡಬ್ಲಿನ್ನಿನಿಂದ ಉತ್ತರಕ್ಕೆ ಸೇರಿದ ಸ್ವಲ್ಪ ಭಾಗವು ಇಂಗ್ಲೆಂಡಿಗೆ ಸೇರಿತ್ತು. ಇದಕ್ಕೆ ಪೇಲ್ (Pale) ಎಂದು ಹೆಸರು. ಕ್ರಿ. ಶ. ೧೪೯೫ ರಲ್ಲಿ ಹೆನ್ರಿಯ ಮಂತ್ರಿಯಾದ ಎಡ್ವರ್ಡ್ ಪಾಯ್ನಿಂಗ್ಸ್ (Edward Poynings) ಎಂಬುವನು ಐರ್ಲೆಂಡಿಗೆ

ಹೋಗಿ, ಅಲ್ಲಿನ ಪಾರ್ಲಿಮೆಂಟನ್ನು ಸೇರಿಸಿ ಎರಡು ಕಾನೂನುಗಳನ್ನು ಜಾರಿಗೆ ತಂದನು. ಮೊದಲನೆಯದು ಇಂಗ್ಲೆಂಡಿನ ಪಾರ್ಲಿಮೆಂಟಿನಲ್ಲಿ ರಚಿತವಾದ ಕಾನೂನುಗಳೆಲ್ಲಾ ಐರ್ಲೆಂಡಿಗೆ ಅನ್ವಯಿಸಬೇಕೆಂದೂ, ಎರಡನೆಯದು ಐರ್ಲೆಂಡಿನ ಪಾರ್ಲಿಮೆಂಟು ಇಂಗ್ಲೆಂಡ್ ರಾಜನು ಮತ್ತು ಅವನ ಆಡಳಿತ ಸಮಿತಿಯು ಮೊದಲೆ ಒಪ್ಪಿಗೆ ಕೊಡದೆ ಇದ್ದ ಮಸೂದೆಗಳನ್ನು ತರಕೂಡದೆಂದೂ ವಿಧಿಸಿದುವು.

ಹೆನ್ರಿಯ ಆಳ್ವಿಕೆಯನ್ನು "ಚಿಕಿತ್ಸೆ ಮತ್ತು ಬಿತ್ತನೆಯ ಕಾಲ" (Remedy and Seed Time) ವೆಂದು ಹೇಳಬಹುದು. ಅನೇಕ ಕ್ಷೇತ್ರಗಳಲ್ಲಿ ಬೀಜ ನೆಟ್ಟು ಮೊಳಕೆಯಾಯಿತು. ಅದರ ಫಲವು ಮಾತ್ರ ಮುಂದಿನ ಪೀಳಿಗೆಗಳಲ್ಲಿ ದೊರಕಿತು. ಗುಲಾಬಿ ಯುದ್ಧದಿಂದ ತಲ್ಲಣಿಸಿ ಹೋಗಿದ್ದ ಇಂಗ್ಲೆಂಡಿನಲ್ಲಿ ಹೆನ್ರಿಯ ಸರ್ಕಾರವು ಚಿಕಿತ್ಸೆಯನ್ನು ಆರಂಭಿಸಿತು. ದೇಶದಲ್ಲಿ ತಲೆದೋರಿದ ಶಾಂತಿಯಿಂದ ವ್ಯಾಪಾರಾಭಿವೃದ್ಧಿಯಾಯಿತು. ಐಶ್ವರ್ಯವು ಹೆಚ್ಚಾಯಿತು. ಇದೇ ಕಾಲದಲ್ಲಿ ಇಂಗ್ಲೆಂಡಿನಲ್ಲಿ ನವೋದಯವು ತಲೆದೋರಿ, ಹೆಚ್ಚಿನ ಪ್ರಗತಿಗೆ ಕಾರಣವಾಯಿತು. ಹೆನ್ರಿಯ ಸರ್ಕಾರವು ನಿರಂಕುಶ ಸರ್ಕಾರವಾಗಿದ್ದರೂ ಜನಪ್ರಿಯವಾಗಿತ್ತು. ಜನಗಳಿಗೆ ಅತ್ಯವಶ್ಯಕವಾಗಿ ಬೇಕಾಗಿದ್ದ ಶಾಂತಿಯು ಲಭಿಸಿದ್ದುದರಿಂದ ಸರ್ಕಾರವು ನಿರಂಕುಶವಾಗಿದ್ದುದನ್ನು ಅವರು ಅಷ್ಟೇನೂ ಗಮನಿಸಲಿಲ್ಲ. ಅಷ್ಟೇ ಅಲ್ಲದೆ ನಿರಂಕುಶ ಪ್ರಭುತ್ವಕ್ಕೆ ಅವರು ತಮ್ಮ ಬೆಂಬಲವನ್ನು ನೀಡಿದರು. ಟ್ಯೂಡರ್ ಸರ್ಕಾರವು ನಿರಂಕುಶ ಪ್ರಭುತ್ವವೆಂದರೆ ಜನಗಳ ಸ್ವಾತಂತ್ರ್ಯವನ್ನು ಕಸಿದುಕೊಂಡು ಅವರನ್ನು ಗುಲಾಮಗಿರಿಗೆ ಇಳಿಸಿತ್ತೆಂದು ಅರ್ಥವಲ್ಲ. ಅದು ಪಾರ್ಲಿಮೆಂಟಿನ ಹತೋಟಿಯಲ್ಲಿದ್ದ ಸರ್ಕಾರವಲ್ಲವೆಂದರ್ಥ. ತಮಗೆ ಬೇಕಾದಾಗ ಮಾತ್ರ ಟ್ಯೂಡರ್ ರಾಜರು ಪಾರ್ಲಿಮೆಂಟನ್ನು ಸೇರಿಸುತ್ತಿದ್ದರೇ ವಿನಃ ಅವರು ಅದರ ಆಶ್ರಯಕ್ಕೆ ಕಟ್ಟುಬಿದ್ದಿರಲಿಲ್ಲ. ವ್ಯಾಪಾರದಿಂದ ಐಶ್ವರ್ಯ ಸಂಪಾದಿಸಿ ಪ್ರಾಮುಖ್ಯತೆಗೆ ಬರುತ್ತಿದ್ದ ಮಧ್ಯಮ ತರಗತಿಯವರು ಸರ್ಕಾರಕ್ಕೆ ಒತ್ತಾಸೆಯನ್ನು ಕೊಡುತ್ತಿದ್ದರು. ಜಗಳಗಂಟರಾದ ಶ್ರೀಮಂತರ ಬದಲು ಇವರು ಪ್ರಾಮುಖ್ಯತೆಗೆ ಬಂದರು.

**ಎಂಟನೆ ಹೆನ್ರಿ, ಕ್ರಿ. ಶ. ೧೫೦೯–೧೫೪೭ :** ಏಳನೇ ಹೆನ್ರಿಯು ಹಣ ಶೇಖರಿಸುವ ಮನೋಭಾವವುಳ್ಳವನಾಗಿದ್ದರೆ ಅವನ ಮಗ ಎಂಟನೆ ಹೆನ್ರಿಯು ಹಣ ಖರ್ಚುಮಾಡುವುದರಲ್ಲಿ ನಿಸ್ಸೀಮನಾಗಿದ್ದನು. ಹದಿನೆಂಟು ವರ್ಷದ ಹೆನ್ರಿಯು ರಾಜಕೀಯಕ್ಕಿಂತ ಹೆಚ್ಚಾಗಿ ಆಟ ಪಾಟಗಳಲ್ಲಿ ಆಸಕ್ತಿಯುಳ್ಳವನಾಗಿದ್ದನು. ಆಗ ಅವನನ್ನು ನೋಡಿದವರು ಮುಂದೆ ಅವನು ಅಷ್ಟು ಕ್ರೂರಿಯೂ, ಕಠಿಣ ಮನಸ್ಕನೂ ಆಗುವನೆಂದು ತಿಳಿದಿರಲಿಲ್ಲ. ಹಾಲ್‌ಬೀನ್ (Holbein) ಬರೆದ ಅವನ ಚಿತ್ರವನ್ನು ನೋಡಿದರೆ ಅವನ ದಪ್ಪವಾದ ಮುಖ, ಕ್ರೂರವಾದ ಕಣ್ಣು, ಬಾಯಿ ಇವುಗಳು ಎದ್ದು ಕಾಣುತ್ತವೆ. ಜನಗಳ ಪ್ರೀತಿಯನ್ನು ಸಂಪಾದಿಸಲು ಜನರನ್ನು ಹಿಂಸಿಸಿ ತನ್ನ ತಂದೆಗೆ ಹಣಗಳಿಸಿದ ಎಂಪ್‌ಸನ್ ಮತ್ತು ಡಡ್ಲಿಯನ್ನು ಇವನು ಕೊಲ್ಲಿಸಿದನು.

ಕ್ರಿ. ಶ. ೧೫೦೯ ರಿಂದ ೧೫೨೯ ರ ವರೆಗೆ ಹೆನ್ರಿಯ ಆಳ್ವಿಕೆಯಲ್ಲಿ ಥಾಮಸ್ ವುಲ್ಸಿ (Thomas Wolsey ಕ್ರಿ. ಶ. ೧೪೭೧–೧೫೩೦) ಮುಖ್ಯಪಾತ್ರ ವಹಿಸಿದನು ಇವನು ಈಪ್ಸ್‌ವಿಚ್ (Ipswich) ಎಂಬ ಊರಿನ ಒಬ್ಬ ವರ್ತಕನ ಮಗ. ಈಪ್ಸ್‌ವಿಚ್ ಗ್ರಾಮರ್ ಸ್ಕೂಲಿನಲ್ಲಿ ಓದಿ, ಆಕ್ಸ್‌ಫರ್ಡಿನ ಮಾಡಲೀನ್ ಕಾಲೇಜಿನಲ್ಲಿ (Magdalen College of Oxford) ವ್ಯಾಸಂಗಮಾಡಿ ಹದಿನೈದನೆ ವರ್ಷದಲ್ಲೆ ಪದವೀಧರನಾದನು. ಅವನು ಚರ್ಚಿನಲ್ಲಿ ಕೆಲಸಕ್ಕೆ ಸೇರಿ ಏಳನೆ ಹೆನ್ರಿಯ ಮಂತ್ರಿಯಾದ ಬಿಷಪ್ ಫಾಕ್ಸ್ ಎಂಬುವನ ಪ್ರೀತಿಯನ್ನು ಸಂಪಾದಿಸಿ, ಅವನ ಕಾರ್ಯದರ್ಶಿಯಾದನು. ಸ್ವಲ್ಪಕಾಲ ಏಳನೆ ಹೆನ್ರಿಯ ಪುರೋಹಿತನೂ ಆಗಿದ್ದನು (Chaplain). ಇವನು ಬಹಳ ಕಷ್ಟಪಟ್ಟು ಕೆಲಸಮಾಡುವವನಾಗಿದ್ದುದರಿಂದ ಬಹು ಬೇಗ ಎಂಟನೆ ಹೆನ್ರಿಯ ದೃಷ್ಟಿಗೆ ಬಿದ್ದನು. ಆಡಳಿತವನ್ನು ವಹಿಸಿಕೊಂಡು, ನಡೆಸಿಕೊಂಡು ಹೋಗುವ ಅಧಿಕಾರಿಯೊಬ್ಬನು ಹೆನ್ರಿಗೂ ಬೇಕಾಗಿತ್ತು. ವುಲ್ಸಿಯು ಸಿಕ್ಕಿದುದರಿಂದ ರಾಜಕಾರ್ಯವನ್ನು ಅವನಿಗೆ ವಹಿಸಿದನು. ಮೂರು ನಾಲ್ಕು ವರ್ಷಗಳಲ್ಲೆ ವುಲ್ಸಿಯು ಇಂಗ್ಲೆಂಡಿನ ಅತ್ಯಂತ ಐಶ್ವರ್ಯವಂತನಾಗಿಯೂ ಮತ್ತು ಬಲವುಳ್ಳವನಾಗಿಯೂ ಆದನು. ಅವನು ಚಾನ್ಸೆಲ್ಲರ್ (Chancellor) ಪದವಿಯನ್ನು ಪಡೆದು

ವಲ್ಲವೆ ಕ್ರೈಸ್ತ ಜಗದ್ಗುರುವಿನಿಂದ ಕಾರ್ಡಿನಲ್ (Cardinal) ಎಂಬ ಪದವಿಯನ್ನೂ ಸಂಪಾದಿಸಿದನು. ವಿಂಚೆಸ್ಟರ್ ಮಠಾಧಿಪತಿಯೂ ಮತ್ತು ಯಾರ್ಕ್ ಮಹಾ ಮಠಾಧಿಪತಿಯೂ ಆದನು (Bishop of Winchester and Archbishop of York). ತಾನೇ ಕ್ರೈಸ್ತ ಜಗದ್ಗುರುವಾಗಬೇಕೆಂಬ ಆಸೆ ಇವನಿಗೆ ಪ್ರಬಲವಾಗಿತ್ತು. ಇವನ ಅಹಂಕಾರವು ಇವನ ಐಶ್ವರ್ಯದಷ್ಟೇ ಇತ್ತು.

ವುಲ್ಸಿಯು ಇಂಗ್ಲೆಂಡಿನ ವಿದೇಶಾಂಗ ನೀತಿಯನ್ನು ರೂಪಿಸಿದನೆಂದು ಹೇಳಬಹುದು. ಹೆನ್ರಿಯು ಇವನಲ್ಲಿ ಪೂರ್ಣ ವಿಶ್ವಾಸವನ್ನಿಟ್ಟು, ಇಂಗ್ಲೆಂಡು ಯೂರೋಪಿಯನ್ ರಾಷ್ಟ್ರಗಳ ಮಧ್ಯೆ ಸರಿಯಾದ ಸ್ಥಾನವನ್ನು ಪಡೆಯುವಂತೆ ಮಾಡಲು ಇವನಿಗೆ ಪೂರ್ಣ ಸ್ವಾತಂತ್ರ್ಯವನ್ನು ಕೊಟ್ಟಿದ್ದನು. ವುಲ್ಸಿಯ ವಿದೇಶಾಂಗ ನೀತಿಯ ಗುರಿ, ಯಾವ ಯೂರೋಪಿಯನ್ ರಾಷ್ಟ್ರವೂ ತುಂಬಾ ಪ್ರಾಬಲ್ಯದಿಂದ ಕೂಡಿರದೆ, ಒಂದೇ ತೂಕದಲ್ಲಿರುವಂತೆ ಮಾಡಬೇಕೆಂಬುದೇ ಆಗಿತ್ತು. ಇದಕ್ಕೆ ಬ್ಯಾಲೆನ್ಸ್ ಆಫ್ ಪವರ್ (Balance of Power) ಎಂದು ಹೆಸರು.

ಆಗ್ಗೆ ಫ್ರಾನ್ಸ್ ಮತ್ತು ಸ್ಪೈನ್ ಇಟಲಿಯಲ್ಲಿ ಒಂದಕ್ಕೊಂದು ಹೋರಾಡುತ್ತಿದ್ದುವು. ಮೊದಲು ಹೆನ್ರಿಯು ತನ್ನ ಮಾವನಾದ ಫರ್ಡಿನಾಂಡಿನ ಕಡೆ ಸೇರಿಕೊಂಡು ಫ್ರಾನ್ಸಿನ ಮೇಲೆ ಯುದ್ಧಕ್ಕೆ ಹೋದನು. ಇಂಗ್ಲೆಂಡು ಫ್ರಾನ್ಸನ್ನು ತನ್ನ ಹಳೆಯ ಶತ್ರುವೆಂದು ಇನ್ನೂ ಮರೆತಿರಲಿಲ್ಲ. ಇಟಲಿಯಲ್ಲಿ ಪೋಪ್ ಎರಡನೆ ಜೂಲಿಯಸ್ ಎಂಬುವನು ಫ್ರೆಂಚರನ್ನು ಇಟಲಿಯಿಂದ ಅಟ್ಟಿಬಿಡಲು ಪವಿತ್ರ ಸಂಘವೊಂದನ್ನು (Holy League) ಏರ್ಪಡಿಸಿದ್ದನು. ಹೆನ್ರಿಯು ಆ ಪವಿತ್ರ ಸಂಘಕ್ಕೆ ಸೇರಿಕೊಂಡನು. ಕ್ರಿ. ಶ. ೧೫೧೩ ರಲ್ಲಿ ಸ್ಪರ್ಸ್ ಕದನದಲ್ಲಿ (Battle of the Spurs) ಫ್ರಾನ್ಸ್ ಸೋತಿತು. ಇಂಗ್ಲೆಂಡ್ ಫ್ರಾನ್ಸಿನ ಮೇಲೆ ಯುದ್ಧಮಾಡುತ್ತಿದ್ದಾಗ ಸಮಯ ನೋಡಿ ಸ್ಕಾಟ್ಲೆಂಡ್ ಇಂಗ್ಲೆಂಡಿನ ಮೇಲೆ ಬಿದ್ದಿತು. ಕ್ರಿ. ಶ. ೧೫೧೩ ರಲ್ಲಿ ಫ್ಲಾಡೆನ್ (Flodden) ಎಂಬಲ್ಲಿ ಕದನ ನಡೆದು, ಸ್ಕಾಟ್ಲೆಂಡಿನ ರಾಜನಾದ ನಾಲ್ಕನೆ ಜೇಮ್ಸ್ ಮತ್ತು ಅವನ ಆಪ್ತ ಅನುಯಾಯಿಗಳು ಸತ್ತರು. ಒಂದು ವರ್ಷದ ನಂತರ ಯುದ್ಧ ಮುಗಿದು

ಶಾಂತಿ ಬಂದಿತು. ಫರ್ಡಿನಾಂಡ್, ಮಾಕ್ಸಿಮಿಲಿಯನ್ ಮತ್ತು ಎರಡನೆ ಜೂಲಿಯಸ್ ಇವರುಗಳು ಫ್ರಾನ್ಸಿನ ಯುದ್ಧದಲ್ಲಿ ಆದ ಉಪಯೋಗವೆಲ್ಲವನ್ನೂ ತಾವೇ ಪಡೆದುಕೊಂಡರೆಂದು ಹೆನ್ರಿಗೆ ವುಲ್ಸಿಯಿಂದ ಮುಂದಟ್ಟಾಯಿತು. ಅವನು ಪವಿತ್ರ ಸಂಘದಿಂದ ಹೊರಬಿದ್ದನು.

ಈ ವೇಳೆಗೆ ವುಲ್ಸಿಯ ಸಲಹೆ ಮೇರೆ ಹೆನ್ರಿಯು ಸ್ಪೈನಿಗೆ ವಿರುದ್ಧವಾಗಿ ನಿಂತನು. ಫ್ರಾನ್ಸಿನ ಸಖ್ಯ ಬೆಳೆಸಲು ವುಲ್ಸಿಯು ಹೆನ್ರಿಯ ತಂಗಿಯಾದ ಮೇರಿಯನ್ನು ಹನ್ನೆರಡನೆ ಲೂಯಿಗೆ ಮದುವೆ ಮಾಡಿಸಿದನು. ಲೂಯಿಗೆ ಐವತ್ತೆರಡು ವರ್ಷಗಳು ಮತ್ತು ಮೇರಿಗೆ ಹದಿನೆಂಟು ವರ್ಷಗಳಾಗಿ ವಯಸ್ಸಿನಲ್ಲಿ ತುಂಬಾ ಅಂತರವಿದ್ದುದು ರಾಜಕಾರಣಪಟುವಾಗಿದ್ದ ವುಲ್ಸಿಯ ಚತುರತೆಗೆ ಅಡ್ಡಿಯಾಗಲಿಲ್ಲ. ಕಾಲ ಕಳೆದಂತೆಲ್ಲಾ ತಮಗೆ ಸ್ಪೈನ್ ನಿಜವಾದ ಪ್ರತಿಸ್ಪರ್ಧಿಯೆಂದೂ ಮತ್ತು ಶತ್ರುವೆಂದೂ ಇಂಗ್ಲೆಂಡಿಗೆ ಗೊತ್ತಾಯಿತು. ಆದರೆ ಆಗ ಇದು ಅಷ್ಟು ಸ್ಪಷ್ಟವಾಗಿರಲಿಲ್ಲ. ಒಂದು ರಾಷ್ಟ್ರವನ್ನು ಮತ್ತೊಂದು ರಾಷ್ಟ್ರದ ಮೇಲೆ ಎತ್ತಿಹಾಕಿ, ಅವು ಇಂಗ್ಲೆಂಡಿನ ಸಹಾಯ ಕೇಳುವುದರ ಮೂಲಕ ಇಂಗ್ಲೆಂಡಿನ ಮಹತ್ವವನ್ನು ಹೆಚ್ಚಿಸಬೇಕೆಂಬುದೇ ವುಲ್ಸಿಯ ಉದ್ದೇಶವಾಗಿತ್ತು. ಕ್ರಿ. ಶ. ೧೫೧೫ ರಲ್ಲಿ ಹನ್ನೆರಡನೆ ಲೂಯಿಯು ಸತ್ತನು. ಫರ್ಡಿನಾಂಡ್ ೧೫೧೬ ರಲ್ಲೂ ಮತ್ತು ಮಾಕ್ಸಿಮಿಲಿಯನ್ ೧೫೧೯ ರಲ್ಲೂ ಸಹ ಕಾಲವಾದರು.

ಈ ಮೂವರು ಮುದುಕರ ಮರಣದಿಂದ ಯೂರೋಪಿನ ರಾಜಕೀಯದಲ್ಲಿ ಹೊಸ ವಾತಾವರಣವೇರ್ಪಟ್ಟಿತು. ಇಬ್ಬರು ಯುವಕರು ಒಬ್ಬರಿಗೊಬ್ಬರು ಪ್ರತಿಸ್ಪರ್ಧಿಗಳಾಗಿ ಯೂರೋಪನ್ನು ತಮ್ಮ ಹಿಡಿತದಲ್ಲಿಟ್ಟುಕೊಳ್ಳಲು ಸಾಹಸಪಡುತ್ತಿದ್ದರು. ಇವರಲ್ಲಿ ಒಬ್ಬನು ಫ್ರಾನ್ಸಿನ ರಾಜನಾದ ವೆಲಾಯ್ ವಂಶದ ಮೊದಲನೆಯ ಫ್ರಾನ್ಸಿಸ್ (Francis I). ಎರಡನೆಯವನಾದ ಹಾಪ್ಸ್‌ಬರ್ಗ್ ವಂಶದ ಚಕ್ರವರ್ತಿ ಐದನೆ ಚಾರ್ಲ್ಸನಿಗೆ (Charles V) ಸ್ಪೈನ್, ಆಸ್ಟ್ರಿಯ, ನೆದರ್‌ಲಾಂಡ್ಸ್ ಮತ್ತು ಸ್ಪೈನ್ ಇಟಲಿಯಲ್ಲಿ ಗೆದ್ದಿದ್ದ ಪ್ರದೇಶಗಳು ಮೊದಲಾದುವೆಲ್ಲವೂ ಸೇರಿತ್ತು. ವುಲ್ಸಿಯು ಫ್ರಾನ್ಸಿಸ್ಸನಿಗೆ ಬೆಂಬಲ ಕೊಟ್ಟು, ಹೆನ್ರಿಯು ಮತ್ತು ಫ್ರಾನ್ಸಿಸ್ಸನು ಕೆಲ್ ಪಟ್ಟಣದ ಹತ್ತಿರ ಕ್ರಿ. ಶ. ೧೫೨೦ ರಲ್ಲಿ ಒಬ್ಬರನ್ನೊಬ್ಬರು

ಭೇಟಿ ಮಾಡುವಂತೆ ಏರ್ಪಡಿಸಿದನು. ಈ ಭೇಟಿಯು ಅತ್ಯಂತ ವೈಭವದಿಂದಲೂ ಮತ್ತು ಸಂಭ್ರಮದಿಂದಲೂ ಕೂಡಿದ ಪ್ರದರ್ಶನವಾಗಿದ್ದುದರಿಂದ ಇದಕ್ಕೆ "ಫೀಲ್ಡ್ ಆಫ್ ಕ್ಲಾತ್ ಆಫ್ ಗೋಲ್ಡ್" (Field of Cloth of Gold) ಎಂದು ಹೆಸರಾಯಿತು. ಆದರೆ ಹೆನ್ರಿಯು ತನ್ನ ಬಂಧುವಾದ ಚಾರ್ಲ್ಸ್‌ನನ್ನು ನೋಡದೆ ಇರಲಿಲ್ಲ ಇಷ್ಟೆ ಅಲ್ಲದೆ, ಇಂಗ್ಲೆಂಡಿನ ಉಣ್ಣೆಯ ವ್ಯಾಪಾರವು ಚಾರ್ಲ್ಸ್‌ನ ಕೈಕೆಳಗಿದ್ದ ನೆದರ್ ಲಾಂಡ್ಸ್ ದೇಶದೊಡನೆ ನಡೆಯುತ್ತಿತ್ತು. ಪೋಪ್ ಜಗದ್ಗುರುವಿನ ಸ್ಥಾನವು ಖಾಲಿ ಬಿದ್ದಾಗ ಅದು ತನಗೆ ದೊರೆಯಲು ಚಾರ್ಲ್ಸ್‌ನು ಬೆಂಬಲ ಕೊಡುವನೆಂದು ವುಲ್ಸಿಯೂ ಕೂಡ ಚಾರ್ಲ್ಸ್‌ನಿಗೆ ಸಹಾಯ ಮಾಡಲು ಸಿದ್ಧನಾಗಿದ್ದನು. ಫ್ರಾನ್ಸಿನೊಡನೆ ಮತ್ತೆ ಯುದ್ಧ ಪ್ರಾರಂಭವಾಯಿತು. ಆದರೆ ಈ ನೀತಿಯು ಹೆಚ್ಚು ಕಾಲ ನಿಲ್ಲಲಿಲ್ಲ. ಕ್ರಿ. ಶ. ೧೫೨೫ ರಲ್ಲಿ ಫ್ರಾನ್ಸಿಸ್ ದೊರೆಯು ಪಾವಿಯ (Pavia) ಎಂಬಲ್ಲಿ ಸೋತು ಚಾರ್ಲ್ಸ್‌ನಿಗೆ ಸೆರೆ ಸಿಕ್ಕಿದನು. ಚಾರ್ಲ್ಸ್‌ನ ಸೈನ್ಯವು ರೋಮ್ ನಗರವನ್ನೂ ಮುತ್ತಿತು. ಇದರಿಂದ ಯೂರೋಪೆಲ್ಲವೂ ಚಾರ್ಲ್ಸ್‌ನ ಅಧೀನಕ್ಕೆ ಒಳಪಡಬಹುವಾದ ಸಂದರ್ಭ ಒದಗಿತು. ಹೀಗಾಗುವುದು ಹೆನ್ರಿಗಾಗಲಿ ಮತ್ತು ವುಲ್ಸಿಗಾಗಲಿ ಇಷ್ಟವಿರಲಿಲ್ಲ. ಎರಡನೆಯದಾಗಿ ಚಾರ್ಲ್ಸ್‌ನು ವುಲ್ಸಿಗೆ ಪೋಪ್ ಜಗದ್ಗುರುವಾಗಲು ಸಹಾಯ ಮಾಡಲಿಲ್ಲ. ಮೂರನೆಯದಾಗಿ ಹೆನ್ರಿಯು ಚಾರ್ಲ್ಸ್‌ನ ಚಿಕ್ಕಮ್ಮನಾದ ಕಾಥರೀನಳಲ್ಲಿ ಬೇಸರ ಹುಟ್ಟಿ ದಾಂಪತ್ಯವಿಚ್ಛೇದನಕ್ಕೆ ಮನಸ್ಸು ಮಾಡಿದ್ದನು. ಈ ಕಾರಣಗಳಿಂದ ಹೆನ್ರಿ ಮತ್ತು ವುಲ್ಸಿ ಚಾರ್ಲ್ಸ್‌ನ ಪಕ್ಷವನ್ನು ತ್ಯಜಿಸಿದರು.

ವುಲ್ಸಿಯ ಪತನ: ಈ ವೇಳೆಗೆ ವುಲ್ಸಿಯ ವಿಷಯದಲ್ಲಿ ಜನಗಳಿಗೆ ಬೇಸರವಾಗಿತ್ತು. ಅವನ ಗರ್ವವನ್ನು ಕಂಡರೆ ಶ್ರೀಮಂತರಿಗೆ ಆಗುತ್ತಿರಲಿಲ್ಲ. ಇತರರು ಅವನು ಮಾಡುತ್ತಿದ್ದ ವೈಭವದ ಜೀವನವನ್ನು ನೋಡಿ ಅಸೂಯೆ ಪಡುತ್ತಿದ್ದರು. ಅವನಿಗೆ ಮೂರು ಸೊಗಸಾದ ಅರಮನೆಗಳೂ ಮತ್ತು ಏಳುನೂರು ಜನ ಸೇವಕರೂ ಇದ್ದರು. ಕ್ರಿ. ಶ. ೧೫೨೩ ರಲ್ಲಿ ಸೇರಿದ ಪಾರ್ಲಿಮೆಂಟ್ ವುಲ್ಸಿಯ ಆಡಳಿತವನ್ನು ಕಟುವಾಗಿ ಟೀಕಿಸಿತು. ಎಲ್ಲಿಯವರೆಗೆ ರಾಜನಾದ ಹೆನ್ರಿಯ ಬೆಂಬಲವೂ ಮತ್ತು ವಿಶ್ವಾಸವೂ

ಇತ್ತೋ ಅಲ್ಲಿಯವರೆಗೆ ವುಲ್ಸಿಯನ್ನು ಯಾರೂ ಅಲುಗಾಡಿಸಲು ಸಾಧ್ಯ ವಿರಲಿಲ್ಲ. ಆದರೆ ದಾಂಪತ್ಯ ವಿಚ್ಛೇದನದ ಪ್ರಕರಣದಲ್ಲಿ ಇವನು ತೋರಿಸಿದ ವರ್ತನೆಯು ಇವನ ಪತನಕ್ಕೆ ಕಾರಣವಾಯಿತು.

ಹೆನ್ರಿಗೆ ಆನಿಬೊಲೇನ್ (Anne Boleyn) ಎಂಬುವಳನ್ನು ಮದುವೆಯಾಗಲು ಆಸಕ್ತಿ ಹುಟ್ಟಿತ್ತು. ಅವನು ಇದಕ್ಕಾಗಿ ಕಾಥರೀನಳ ದಾಂಪತ್ಯ ವಿಚ್ಛೇದನಕ್ಕೆ ಅನುವಾಗಿದ್ದನು. ಆದರೆ ಕ್ರೈಸ್ತ ಚರ್ಚ್ ಇದಕ್ಕೆ ಸಮ್ಮತಿಸುವುದು ಕಷ್ಟವಾಗಿತ್ತು. ಹೆನ್ರಿಯು, ತಾನು ತನ್ನ ಅಣ್ಣನ ಹೆಂಡತಿಯನ್ನು ಮದುವೆಯಾದುದು ತಪ್ಪೆಂದೂ, ಅದಕ್ಕೆ ಸಮ್ಮತಿಕೊಟ್ಟ ಪೋಪ್ ತಪ್ಪುಮಾಡಿದನೆಂದೂ ಮತ್ತು ಅದನ್ನು ಸರಿಪಡಿಸಲು ಪೋಪ್ ದಾಂಪತ್ಯ ವಿಚ್ಛೇದನಕ್ಕೆ ಅನುಮತಿ ಕೊಡುವುದು ಉಚಿತವೆಂದೂ ವಾದಿಸಿದನು. ಆದರೆ ಪೋಪ್ ಏಳನೆ ಕ್ಲೆಮೆಂಟನು (Clement VII) ಹೆನ್ರಿಗೆ ಸಹಾಯಮಾಡಲು ಇಷ್ಟವುಳ್ಳವನಾಗಿದ್ದರೂ ಐದನೆ ಚಾರ್ಲ್ಸ್‌ನ ಭಯದಿಂದ ತಾಟಸ್ಥ್ಯವನ್ನು ವಹಿಸಬೇಕಾಯಿತು. ಅವನು ಈ ವಿಚಾರ ವನ್ನು ಲಂಡನ್ನಿನಲ್ಲೇ ಪರಿಶೀಲಿಸಲು ವುಲ್ಸಿಯನ್ನು ಮತ್ತು ಕಾಂಪೆಜಿಯೋ (Campeggio) ಎಂಬ ಇಟಲಿಯ ಪಾದ್ರಿಯನ್ನು ಕ್ರಿ. ಶ. ೧೫೨೯ ರಲ್ಲಿ ನೇಮಿಸಿದನು. ಎರಡು ತಿಂಗಳನಂತರ ಯಾವ ತೀರ್ಮಾನವೂ ಆಗದೆ ಕಾಂಪೆಜಿಯೋ ಇಂಗ್ಲೆಂಡಿನಿಂದ ಹೊರಟುಹೋದನು. ಇದು ರೋಂ ನಗರಿಗೆ ಪುನಃ ಪರಿಶೀಲನೆಗಾಗಿ ಹಾಕಲ್ಪಟ್ಟಿತು. ಕುಪಿತನಾದ ಹೆನ್ರಿಯು ಇದರಲ್ಲಿ ಯಾವ ಉತ್ಸಾಹವನ್ನೂ ವುಲ್ಸಿಯು ತೋರಿಸಲಿಲ್ಲವೆಂದು ಅವ ನನ್ನು ಕೆಲಸದಿಂದ ವಜಾ ಮಾಡಿದನು. ಆದರೆ ಅವನ ಶತ್ರುಗಳು ಅವನನ್ನು ಹಾಗೆಯೇ ಬಿಡಲಿಲ್ಲ. ಅವನ ಮೇಲೆ ರಾಜದ್ರೋಹದ ಅಪಾದನೆಯನ್ನು ಹೊರೆಸಿ, ಅವನು ಲಂಡನ್ನಿಗೆ ವಿಚಾರಣೆಗೆ ಬರುವಂತೆ ಮಾಡಿದರು. ದಾರಿ ಯಲ್ಲಿ ವುಲ್ಸಿಯು ಕ್ರಿ. ಶ. ೧೫೩೦ ರಲ್ಲಿ ಮೃತಪಟ್ಟನು. ಅವನು ಸಾಯು ವಾಗ ತಾನು ರಾಜನಿಗೆ ಸೇವೆಮಾಡಿದಂತೆ ದೇವರಿಗೆ ಮಾಡಿದ್ದರೆ ಅವನು ತನ್ನನ್ನು ಈ ವೃದ್ಧಾಪ್ಯದಲ್ಲಿ ತ್ಯಜಿಸುತ್ತಿರಲಿಲ್ಲವೆಂದು ಹೇಳಿಕೊಂಡನು. ಆದರೆ ವುಲ್ಸಿಯು ತನ್ನ ಉಚ್ಛ್ರಾಯ ಕಾಲದಲ್ಲಿ ಹೆನ್ರಿಯಷ್ಟೇ ದಬ್ಬಾಳಿಕೆ

ಯುಳ್ಳವನಾಗಿದ್ದನು. ಇರಾಸ್‌ಮುಸ್ ಹೇಳಿದಂತೆ ಅವನನ್ನು ಕಂಡರೆ ಎಲ್ಲರಿಗೂ ಹೆದರಿಕೆ, ಯಾರಿಗೂ ಪ್ರೀತಿಯಿರಲಿಲ್ಲ.

ದಾಂಪತ್ಯವಿಚ್ಛೇದನವು ಸಾಧನೆಯಾಗದೆ ಹೋದುದರಿಂದ ಹೆನ್ರಿಯು ಇಂಗ್ಲೆಂಡಿನಲ್ಲಿ ಪೋಪಿನ ಅಧಿಕಾರವನ್ನೇ ತೆಗೆದುಹಾಕಿ, ಸ್ವತಂತ್ರವಾದ ಒಂದು ಚರ್ಚನ್ನು ಸ್ಥಾಪಿಸುವಂತೆ ಮಾಡಲು ಉದ್ಯುಕ್ತನಾದನು. ಈ ಮಧ್ಯೆ ಕೇಂಬ್ರಿಡ್ಜಿನ ವಿದ್ವಾಂಸನಾದ ಥಾಮಸ್ ಕ್ರಾನ್ಮರ್ (Thomas Cranmer) ಎಂಬುವನು ಇಂತಹ ವಿಷಯಗಳಿಗೆ ಪೋಪಿನ ಅನುಮತಿ ಅನವಶ್ಯಕವೆಂದೂ ಮತ್ತು ಕಾಂಟರ್‌ಬರಿ ಮಹಾಮಠಾಧಿಪತಿಯ ಅಭಿಪ್ರಾಯವೇ ಸಾಕೆಂದೂ ವ್ಯಕ್ತಪಡಿಸಿದನು. ಹೆನ್ರಿಗೆ ಇದರಿಂದ ತುಂಬಾ ಸಂತೋಷವಾಯಿತು. ಸ್ವಲ್ಪ ಕಾಲದಲ್ಲೆ ಹೆನ್ರಿಯು ಕ್ರಾನ್ಮರನನ್ನು ಕಾಂಟರ್‌ಬರಿಯ ಮಹಾಮಠಾಧಿಪತಿಯನ್ನಾಗಿ ಮಾಡಿದನು.

**ಜರ್ಮನಿಯಲ್ಲಿ ಮತಧರ್ಮ ಸುಧಾರಣೆ:** ಮಾರ್ಟಿನ್ ಲ್ಯೂಥರ್ (Martin Luther ಕ್ರಿ. ಶ. ೧೪೮೩–೧೫೪೬) ಜರ್ಮನಿಯ ಒಂದು ಹಳ್ಳಿಯಲ್ಲಿ ಹುಟ್ಟಿದನು. ಅವನ ತಂದೆಯು ಅವನನ್ನು ಎರ್‌ಫರ್ಟ್ (Erfurt) ವಿಶ್ವವಿದ್ಯಾನಿಲಯದಲ್ಲಿ ವ್ಯಾಸಂಗಕ್ಕೆ ಸೇರಿಸಿದನು. ಸ್ವಲ್ಪ ಕಾಲವಾದನಂತರ ಅವನ ವಿದ್ವತ್ತನ್ನು ಮೆಚ್ಚಿ, ವಿಟನ್‌ಬರ್ಗ್ ವಿಶ್ವ ವಿದ್ಯಾನಿಲಯದಲ್ಲಿ ಮತಶಾಸ್ತ್ರದ (Theology) ಅಧ್ಯಾಪಕನನ್ನಾಗಿ ಆರಿಸಲಾಯಿತು. ಕ್ರಿ. ಶ. ೧೫೧೧ ರಲ್ಲಿ ಅವನು ರೋಂ ಪಟ್ಟಣಕ್ಕೆ ಯಾತ್ರಾರ್ಥಿಯಾಗಿ ಹೋದನು. ಅಲ್ಲಿ ಅವನಿಗೆ ಇರಾಸ್‌ಮುಸ್ಸನಿಗಾದಂತೆ ಪೋಪಿನ ಪ್ರಾಪಂಚಿಕ ಜೀವನವನ್ನು ಮತ್ತು ಅದರ ವೈಭವವನ್ನು ನೋಡಿ ಜಿಗುಪ್ಸೆಯಾಯಿತು. ಕ್ರಿ. ಶ. ೧೫೧೭ ರಲ್ಲಿ ಪೋಪ್ ಹತ್ತನೆ ಲಿಯೊ (Leo X) ಎಂಬುವನು ಟೆಟ್‌ಜಲ್ (Tetzel) ಎಂಬುವನನ್ನು ಹಣದ ವಸೂಲಿಗಾಗಿ ಜರ್ಮನಿಗೆ ಕಳುಹಿಸಿದನು. ಅವನು ಪಾಪಗಳ ಕ್ಷಮಾಪಣೆ ಪತ್ರಗಳನ್ನು (Indulgences) ಮಾರಾಟಮಾಡತೊಡಗಿದನು. ಇದು ಹಿಂದಿನಿಂದಲೂ ಕ್ಯಾಥಲಿಕ್ ಚರ್ಚಿನಲ್ಲಿ ಆಚರಣೆಗೆ ಬಂದಿತ್ತು. ಪಾಪದ ಕ್ಷಮಾಪಣೆ ಪತ್ರವನ್ನು ಕೊಂಡು ಚರ್ಚಿಗೆ ಹಣವನ್ನು ಕೊಡುವಾಗ, ಕೊಳ್ಳುವವರು ಸಾಕಾದಷ್ಟು ಪ್ರಾಯಶ್ಚಿತ್ತಕ್ರಮವನ್ನು ಕೈಗೊಳ್ಳಬೇಕಾ

ಗಿತ್ತು. ಆದರೆ ಟೆಟ್‌ಜಲ್ ಮತ್ತಿತರರು ಪ್ರಾಯಶ್ಚಿತ್ತ ಪ್ರಕರಣಕ್ಕೆ ಯಾವ ಬೆಲೆಯನ್ನೂ ಕೊಡದೆ, ಹಣವನ್ನೇ ಮುಖ್ಯವಾಗಿ ಸೆಳೆಯುತ್ತಿದ್ದ ಪದ್ಧತಿಯನ್ನು ಕಂಡು, ದೈವಭಕ್ತನೂ ಮತ್ತು ಬೈಬಲ್ಲಿನಲ್ಲಿ ಅಪಾರ ನಂಬಿಕೆಯುಳ್ಳವನೂ ಆದ ಲ್ಯೂಥರನಿಗೆ ಹೆಚ್ಚಾಗಿ ಅಸಮಾಧಾನವಾಯಿತು. ಇದನ್ನು ವಿರೋಧಿಸಿ ಲ್ಯೂಥರನು ತನ್ನ 'ತೊಂಭತ್ತೈದು ವಾದ' ಗಳನ್ನು ಬರೆದು, ವಿಟನ್‌ಬರ್ಗ್ ಚರ್ಚಿನ ದ್ವಾರದಲ್ಲಿ ಪ್ರಕಟನೆಗಾಗಿ ತೂಗುಹಾಕಿದನು. ದೇಶದಾದ್ಯಂತವೂ ಆಗತಾನೆ ಪ್ರಾಮುಖ್ಯತೆಗೆ ಬರುತ್ತಿದ್ದ ಮುದ್ರಣಾಲಯದಿಂದ (Printing Press) ಲ್ಯೂಥರನ ವಾದವು ಹರಡಿತು. ಕ್ರಿ. ಶ. ೧೫೨೦ ರಲ್ಲಿ ಪೋಪನು ಲ್ಯೂಥರನನ್ನು ಬಹಿಷ್ಕರಿಸಿದನು. ಆದರೆ ಧೈರ್ಯಶಾಲಿಯಾದ ಲ್ಯೂಥರನು ವಿಟನ್‌ಬರ್ಗ್ ಅಂಗಡಿ ಚೌಕದ ಬಳಿ ಬಹಿಷ್ಕಾರಪತ್ರವನ್ನು ಸುಟ್ಟನು. ಇದಾದನಂತರ ಐದನೆ ಚಾರ್ಲ್ಸನು ಕೊಟ್ಟ ರಕ್ಷಣಾ ಪತ್ರದಿಂದೊಡಗೂಡಿ ವರ್ಮ್ಸ್ ಸಭೆಗೆ ಹೋದನು. ಅಲ್ಲಿ ತನ್ನ ತಪ್ಪನ್ನು ಒಪ್ಪಿಕೊಳ್ಳುವಂತೆ ಅವನನ್ನು ಕೇಳಲಾಯಿತು. ಆದರೆ ಲ್ಯೂಥರನು ತಾನು ಮಾಡಿದ್ದು ತಪ್ಪಲ್ಲವೆಂದೂ ಮತ್ತು ತನ್ನ ಅಂತರಾತ್ಮಕ್ಕೂ ಬೈಬಲ್ಲಿಗೂ ವಿರುದ್ಧವಾಗಿ ನಡೆಯಲು ಶಕ್ತನಲ್ಲವೆಂದೂ ಹೇಳಿದನು. ಹೀಗೆ ಇವನು ಕ್ಯಾಥಲಿಕ್ ಚರ್ಚನ್ನು ಪ್ರತಿಭಟಿಸಿ (Protest) ಬೈಬಲನ್ನೇ ಎತ್ತಿಹಿಡಿದುದ್ದರಿಂದ ಇವನ ಅನುಯಾಯಿಗಳಿಗೆ ಪ್ರಾಟೆಸ್ಟೆಂಟ್ (Protestants) ಎಂದು ಹೆಸರಾಯಿತು. ಎಂಟನೆ ಹೆನ್ರಿಗೆ ಲ್ಯೂಥರನ ವಾದ ಹಿಡಿಸಲಿಲ್ಲ. ಅವನು ತಾನು ಬರೆದ ಪುಸ್ತಕವೊಂದರಲ್ಲಿ ಲ್ಯೂಥರನ ವಿರುದ್ಧ ವಾದಿಸಿದನು. ಇದಕ್ಕಾಗಿ ಪೋಪ್ ಅವನಿಗೆ 'ಮತರಕ್ಷಕ' ನೆಂಬ (Defender of the Faith) ಬಿರುದನ್ನು ಕೊಟ್ಟನು. ಈ ಬಿರುದನ್ನು ಇಂಗ್ಲಿಷ್ ನಾಣ್ಯಗಳ ಮೇಲೆ ನಾವು ಈಗಲೂ ಕಾಣಬಹುದು.

ಲ್ಯೂಥರನಿಗೆ ಜೀವಭಯವಿದ್ದುದನ್ನು ಕಂಡು ಅವನ ಸ್ನೇಹಿತನಾದ ಸಾಕ್ಸೋನಿಯ ರಾಜನು ಅವನನ್ನು ವಾರ್ಟ್‌ಬರ್ಗ್ ಎಂಬ ಕೋಟೆಯ (Castle) ಲ್ಲಿಟ್ಟು ರಕ್ಷಿಸಿದನು. ಅಲ್ಲಿ ಲ್ಯೂಥರನು ತನ್ನ ದೇಶದ ಜನಗಳಿಗಾಗಿ ಬೈಬಲನ್ನು ಜರ್ಮನ್ ಭಾಷೆಗೆ ತರ್ಜುಮೆ ಮಾಡಿದನು. ಕೊನೆಗೆ ಜರ್ಮನಿಯು ಎರಡು ಭಾಗವಾಗಿ, ಮತೀಯ ಯುದ್ಧವೇ ಪ್ರಾರಂ

ಭವಾಯಿತು. ಕ್ರಿ. ಶ. ೧೫೫೫ ರಲ್ಲಿ ಆಗ್ಸ್‌ಬರ್ಗ್ (Augsburg) ಕೌಲಿನಿಂದ ಶಾಂತಿ ಸ್ಥಾಪನೆಯಾಗಿ ಪ್ರಾಟೆಸ್ಟೆಂಟ್ ಮತವಾಗಲಿ, ರೋಮನ್ ಕ್ಯಾಥೋಲಿಕ್ ಮತವಾಗಲಿ ಆಯಾ ಪ್ರದೇಶಗಳ ರಾಜರುಗಳಿಂದ (Cujus Regio, Ejus Religio = The religion of the prince is the religion of the people) ತೀರ್ಮಾನಿಸಲ್ಪಡತಕ್ಕದ್ದೆಂದು ಗೊತ್ತಾಯಿತು. ಲ್ಯೂಥರನಿಗೆ ಜರ್ಮನಿಯ ರಾಜರುಗಳ ಬೆಂಬಲವು ಸಿಕ್ಕದಿದ್ದರೆ ಪ್ರಾಟೆಸ್ಟೆಂಟ್ ಮತದ ಸ್ಥಾಪನೆಯಾಗುತ್ತಿರಲಿಲ್ಲವೆಂದು ಹೇಳಬಹುದು. ಜರ್ಮನಿಯ ಸಣ್ಣ ಸಣ್ಣ ರಾಜರಿಗೆ ರೋಮನ್ ಕ್ಯಾಥಲಿಕ್ ಚರ್ಚಿನ ಅಪಾರವಾದ ಭೂಮಿ, ಐಶ್ವರ್ಯ ಇವುಗಳ ಮೇಲೆ ಮೊದಲಿನಿಂದಲೂ ಕಣ್ಣಿತ್ತು. ಯಾವಾಗ ಲ್ಯೂಥರನು ರೋಮನ್ ಕ್ಯಾಥಲಿಕ್ ಚರ್ಚಿನ ಲೋಪ ದೋಷಗಳ ವಿಚಾರವಾಗಿ ಪ್ರತಿಭಟಿಸಲು ಪ್ರಾರಂಭಿಸಿದನೋ ಆಗ ಅವರಿಗೆ ಚರ್ಚಿನ ಆಸ್ತಿಪಾಸ್ತಿಗಳನ್ನು ಕಸಿದುಕೊಳ್ಳುವ ಸಂದರ್ಭ ಒದಗಿತು.

ಇಂಗ್ಲೆಂಡಿನಲ್ಲೂ ಕೂಡ ಕಾಲೆಟ್ ಮತ್ತು ಇರಾಸ್‌ಮಸ್ ಮೊದಲಾದವರು ಮತೀಯ ಸುಧಾರಣೆಯ ಆವಶ್ಯಕತೆಯನ್ನು ಎತ್ತಿತೋರಿಸಿದ್ದರೆಂದು ಹಿಂದೆಯೇ ಹೇಳಿದೆ. ಮೂರನೆ ಎಡ್ವರ್ಡನ ಕಾಲದಲ್ಲಿ ಇಂಗ್ಲೆಂಡಿನಲ್ಲಿ ಪೋಪನ ಅಧಿಕಾರಗಳನ್ನು ಮೊಟಕು ಮಾಡಲು ಪ್ರಯತ್ನಗಳಾಗಿದ್ದುವು. ಇದರಲ್ಲಿ ವೈಕ್ಲಿಫನ ಪಾತ್ರವನ್ನೂ ಹಿಂದೆಯೇ ವಿವರಿಸಲಾಗಿದೆ. ಆದರೆ ಇಂಗ್ಲೆಂಡಿನಲ್ಲಿ ಮತೀಯ ಬದಲಾವಣೆಗಳು ಬರಲು ರಾಜಕೀಯ ಕಾರಣಗಳೇ ಮುಖ್ಯವೆಂದು ಹೇಳಬಹುದು. ಎಂಟನೆ ಹೆನ್ರಿಯ ದಾಂಪತ್ಯ ವಿಚ್ಛೇದನದ ಪ್ರಶ್ನೆಯು ಇದರ ತತ್‌ಕ್ಷಣದ ಕಾರಣವೆನ್ನಬಹುದು (Immediate Cause).

**ಮತೀಯ ಸುಧಾರಕ ಪಾರ್ಲಿಮೆಂಟ್ ಮತ್ತು ಅದರ ಕೆಲಸ, ೧೫೨೯–೩೬. (The work of the Reformation Parliament, ೧೫೨೯–೧೫೩೬)** ಕ್ರಿ. ಶ. ೧೫೨೯ ರಲ್ಲಿ ಪಾರ್ಲಿಮೆಂಟ್ ಸಭೆ ಸೇರಿ ಪಾದ್ರಿಗಳು ಅನುಭವಿಸುತ್ತಿದ್ದ ಕೆಲವು ವಿಶೇಷ ಪ್ರಯೋಜನಗಳನ್ನು (Privileges) ತೆಗೆದುಹಾಕಿತು; ಒಬ್ಬನೇ ಅನೇಕ ಹುದ್ದೆಗಳಿಂದ

ಬಂದ ಲಾಭವನ್ನು (Pluralities) ಪಡೆಯುವುದು, ಮದುವೆ ಮೊದಲಾದುವುಗಳಿಗೆ ವಿಧಿಸತಕ್ಕ ಶುಲ್ಕ–ಇವೇ ಮುಂತಾದ ವಿಷಯಗಳಲ್ಲಿ ಕಾನೂನನ್ನು ರಚಿಸಿತು. ಪಾದ್ರಿಗಳು ಹೆನ್ರಿಗೆ ತುಂಬಾ ಹಣಕೊಟ್ಟು ಶರಣಾಗತರಾದರು. ಪ್ರಮುನೀರ್ ಶಾಸನವು ಪುನರುಜ್ಜೀವನಗೊಳಿಸಲ್ಪಟ್ಟಿತು.

ಕ್ರಿ. ಶ. ೧೫೩೨ ರಲ್ಲಿ ಹೆನ್ರಿಯು ಆನೇಟ್ಸ್ (Annates) ಕಾನೂನನ್ನು ಜಾರಿಗೆ ತಂದನು. ಹೊಸದಾಗಿ ನಿಯಮಿಸಲ್ಪಟ್ಟ ಮಠಾಧಿಪತಿಗಳು ಮತ್ತು ಇತರ ಪಾದ್ರಿಗಳು ಒಂದು ವರುಷದ ತಮ್ಮ ವರಮಾನವನ್ನು ಪೋಪ್ ಜಗದ್ಗುರುವಿಗೆ ಕೊಡುವ ವಾಡಿಕೆಯಿತ್ತು. ಈ ಕಾನೂನಿನಿಂದ ಹಾಗೆ ಹಣ ಕೊಡುವುದು ನಿಷೇಧಿಸಲ್ಪಟ್ಟಿತು. ಕ್ರಾನ್ಮರನ ಒಪ್ಪಿಗೆಯಿಂದ ಹೆನ್ರಿಯು ಮತ್ತು ಕಾಥರೀನಳು ಬೇರೆಬೇರೆಯಾಗಿ ಆನ್‌ಬೊಲಿನ್ನಳ ಮದುವೆಯು ಜರುಗಿತು.

ಕ್ರಿ. ಶ. ೧೫೩೩ ರಲ್ಲಿ ಇಂಗ್ಲಿಷ್ ಚರ್ಚಿನ ನ್ಯಾಯಾಲಯಗಳು ಪೋಪಿಗೆ ಪುನರ್ವಿಮರ್ಶೆಗಾಗಿ ಯಾವ ವಿಷಯವನ್ನೂ ಕಳುಹಿಸಕೂಡದೆಂದು ವಿಧಾಯಕವಾಯಿತು (Act of appeal). ಮೂರನೆ ವರ್ಷ ಕಾನೂನಿನಿಂದ ಹೆನ್ರಿಯ ಉತ್ತರಾಧಿಕಾರತ್ವವು ಆನ್ ಬೋಲಿನ್ ಸಂತತಿಗೆ ಸೇರತಕ್ಕದ್ದೆಂದು ನಿರ್ಧರಿಸಲ್ಪಟ್ಟಿತು. (Act of Succession, ೧೫೩೪). ಎಲ್ಲರೂ ಇದಕ್ಕಾಗಿ ಪ್ರಾಮಾಣ ವಚನವನ್ನು ಸ್ವೀಕರಿಸಬೇಕೆಂದೂ ಹೆನ್ರಿಯು ಒತ್ತಾಯ ಪಡಿಸಿದನು. ಸರ್ ಥಾಮಸ್ ಮೋರ್ (Sir Thomas More) ಮತ್ತು ಮಠಾಧಿಪತಿ ಫಿಷರ್ (Fisher) ಇದಕ್ಕೆ ಒಪ್ಪಲಿಲ್ಲವಾದ್ದರಿಂದ ಸೆರೆಮನೆಗೊಯ್ಯಲ್ಪಟ್ಟರು.

ಜನಗಳ ಬೆಂಬಲ ತನ್ನ ಕಡೆ ಇರುವುದೆಂಬ ನಂಬಿಕೆ ಹೆನ್ರಿಗೆ ಬಲವಾಗುತ್ತಿದ್ದುದರಿಂದ ಆವನು ಕ್ರಿ. ಶ. ೧೫೩೪ ರಲ್ಲಿ ಇಂಗ್ಲೆಂಡಿಗೂ ಮತ್ತು ರೋಮನ್ ಕ್ಯಾಥಲಿಕ್ ಮತದ ಕೇಂದ್ರವಾಗಿದ್ದ ರೋಮಿಗೂ ಇದ್ದ ಪೂರ್ತಿ ಸಂಬಂಧವನ್ನೇ ಕಡಿದುಹಾಕಲು ನಿರ್ಧರಿಸಿದನು. ಪಾರ್ಲಿಮೆಂಟ್, ಹೆನ್ರಿಯೇ ಇಂಗ್ಲಿಷ್ ಚರ್ಚಿನ ಶ್ರೇಷ್ಠ ಮುಖ್ಯಸ್ಥನೆಂದೂ (Head), ಪೋಪ್ ಮುಖ್ಯಸ್ಥನಲ್ಲವೆಂದೂ ಸಾರಿತು. ಇದಕ್ಕೆ 'ಸಾರ್ವ

ಭೌಮತ್ವಕಾನೂನು'(Act of Supremacy)ಎಂದುಹೆಸರು. ಅನೇಕ ಪ್ರಾಮಾಣಿಕರಾದ ರೋಮನ್ ಕ್ಯಾಥೊಲಿಕ್ ಮತದ ಅನುಯಾಯಿಗಳಿಗೆ ಇದರಿಂದ ಧರ್ಮಸಂಕಟ ಉಂಟಾಯಿತು. ವುಲ್ಸಿಯ ಪತನವಾದ ನಂತರ ಅವನ ಸ್ಥಾನಕ್ಕೆ ನಿಯಮಿಸಲ್ಪಟ್ಟಿದ್ದ ಹೆನ್ರಿಯ ಪರಮ ಮಿತ್ರನಾದ ಸರ್ ಥಾಮಸ್ ಮೋರ್ ಮತ್ತು ಪರಿಶುದ್ಧವಾದ ಜೀವನದಿಂದ ಕೂಡಿ ಜನಗಳ ಭಕ್ತಿಯನ್ನು ಮತ್ತು ಮೆಚ್ಚಿಗೆಯನ್ನು ಪಡೆದು ಆಗಲೇ ಮುದುಕನಾಗಿದ್ದ ರೊಚೆಸ್ಟರ್ (Rochester) ಮಠಾಧಿಪತಿ ಫಿಷರ್ ಇವರಿಬ್ಬರೂ ಹೆನ್ರಿಯ ಆಗ್ರಹಕ್ಕೆ ತುತ್ತಾಗಿ ಕ್ರಿ. ಶ. ೧೫೩೫ ರಲ್ಲಿ ಅವನಿಂದ ಕೊಲ್ಲಲ್ಪಟ್ಟರು. ಮೋರನು ಮರದ ತುಂಡಿನಮೇಲೆ ತನ್ನ ತಲೆಯನ್ನಿಟ್ಟು ಕೊಡಲಿಗೆ ಬಲಿಯಾಗಲು ತಯಾರಾದುದ್ದನ್ನು ನೋಡಿ ವಧೆಗಾರನಿಗೆ (Executioner) ಸಂಕಟವಾಯಿತು. ಮೋರನು ಅವನಿಗೆ ಧೈರ್ಯ ಹೇಳಿ ತನ್ನ ಗಡ್ಡವು ರಾಜದ್ರೋಹವನ್ನು ಮಾಡಿಲ್ಲ. ಆದ್ದರಿಂದ ಅದು ಕತ್ತರಿಸಲ್ಪಡುವುದು ಯುಕ್ತವಲ್ಲವೆಂದು ತಮಾಷೆಮಾಡಿ ಮರಣವನ್ನು ಅನುಭವಿಸಿದನು.

ಕ್ರಿ. ಶ. ೧೫೩೬ ರಲ್ಲಿ ಆನ್‌ಬೊಲಿನ್ನಳು ಹೆನ್ರಿಗೆ ಬೇಕಾಗಿದ್ದ ಪುತ್ರನನ್ನು ಪಡೆಯದೆ ಹೋದುದರಿಂದ ಹೆನ್ರಿಯು ಅವಳಲ್ಲಿ ಅಸಂತುಷ್ಟಿಗೊಂಡು ಅವಳ ನಡತೆಯು ಸರಿಯಾಗಿಲ್ಲವೆಂದು ಆರೋಪಿಸಿ ಅವಳ ಶಿರಚ್ಛೇದನ ಮಾಡಿಸಿದನು. ಇದಾದ ಹದಿನೈದು ದಿವಸಗಳಲ್ಲಿಯೇ ಹೆನ್ರಿಯು ಜೇನ್ ಸೇಮೂರ್ (Jane Seymour) ಎಂಬುಳನ್ನು ಮದುವೆಯಾದನು. ಪೋಪಿನ ಅಧಿಕಾರವನ್ನು ಕೊನೆಗಾಣಿಸಿದ ಮೇಲೆ ಕ್ರಿ. ಶ. ೧೫೩೬ ರಲ್ಲೇ ಹೆನ್ರಿಯು ಚರ್ಚಿಗೆ ಸೇರಿದ್ದ ಆಸ್ತಿಗಳನ್ನು ತನ್ನ ಕೈವಶಮಾಡಿಕೊಳ್ಳಲು ಪ್ರಾರಂಭಿಸಿದನು. ಚರ್ಚಿಗೆ ಸೇರಿದ ಮಠಗಳು ಐಶ್ವರ್ಯದಿಂದ ಕೂಡಿ ಹೆಚ್ಚಾಗಿ ಜಮಾನುಗಳನ್ನು ಹೊಂದಿದ್ದವು. ಮಧ್ಯಮ ಯುಗದಲ್ಲಿ ಈ ಮಠಗಳು ಸಮಾಜದಲ್ಲಿ ಒಳ್ಳೆಯ ಸ್ಥಾನಗಳಿಸಿದ್ದುವು. ಒಂದು ರೀತಿಯಲ್ಲಿ ಅವು ಯೂರೋಪಿಯ್ನ ಸಂಸ್ಕೃತಿಯನ್ನು ಬೆಳಸಿದವೆಂದರೆ ತಪ್ಪಲ್ಲ. ಅಲ್ಲಿ ಬಡವರಿಗೂ ಮತ್ತು ಪ್ರಯಾಣಕರಿಗೂ ಅನ್ನದಾನವು ನಡೆಯುತ್ತಿತ್ತು. ಈ ಮಠಗಳು ಸುತ್ತ ಮುತ್ತಲಿನ ಜನಗಳಿಗೆ ವಿದ್ಯಾದಾನವನ್ನೂ ಮಾಡುತ್ತಿದ್ದವು. ಆದರೆ ಈ ವೇಳೆಗೆ ಮಠಗಳ

ತೇಜಸ್ಸು ಅಳಿಸಿಹೋಗಿ ಅವು ಸೋಮಾರಿಗಳಾದ ಸನ್ಯಾಸಿಗಳ (Monks) ನೆಲೆಯಾಗಿತ್ತು. ಎರಡನೆಯದಾಗಿ, ಈ ಮಠಗಳು ಪೋಪಿಗೆ ಸಹಾಯಕವಾಗಿದ್ದವು. ಹೆನ್ರಿ ಮತ್ತು ಆಗಿನ ಕಾಲದ ಮಧ್ಯಮ ವರ್ಗದ ಜನರು ಮಠಗಳ ಆಸ್ತಿಯ ಮೇಲೆ ಕಣ್ಣುಹಾಕಿದ್ದರು. ವುಲ್ಸಿಯ ಕೈಕೆಳಗೆ ಕೆಲಸಮಾಡುತ್ತಿದ್ದ ಥಾಮಸ್ ಕ್ರಾಮ್‌ವೆಲ್ ಎಂಬುವನನ್ನು ಹೆನ್ರಿಯು ಮಠಗಳ ಸ್ಥಿತಿಯ ವಿಚಾರದಲ್ಲಿ ವರದಿಮಾಡಲು ನಿಯಮಿಸಿದನು. ರಾಜಕೀಯ ಮತ್ತು ಪಾರ್ಲಿಮೆಂಟಿನ ಕೆಲಸಗಳಿಗಾಗಿ ಹೆನ್ರಿಯು ಥಾಮಸ್ ಕ್ರಾಮ್‌ವೆಲ್ಲನನ್ನು ತನ್ನ ಬಳಿ ಇಟ್ಟುಕೊಂಡಿದ್ದನು. ಕ್ರಾಮ್‌ವೆಲ್ಲನಿಗೆ ನಿರುಂಕುಶ ಪ್ರಭುತ್ವವೇ ಆದರ್ಶ. ಮ್ಯಾಕೆವಿಲಿ (Machiavelli) ಯೇ ಅವನ ಗುರು. ಅವನಿಗೆ ಪ್ರಾಟೆಸ್ಟೆಂಟ್ ಮತದಲ್ಲಿಯಾಗಲಿ, ಯಾವ ಮತದಲ್ಲಿಯಾಗಲಿ ಆಸಕ್ತಿ ಇರಲಿಲ್ಲ. ಸದ್ಯಕ್ಕೆ ಪ್ರಾಟೆಸ್ಟೆಂಟ್ ಮತವು ಲಾಭದಾಯಕವಾದುದ್ದರಿಂದ ಅದಕ್ಕೆ ಬೆಂಬಲವನ್ನು ಕೊಟ್ಟನು. ಕೆಲವು ಮಠಗಳಿಂದ ಹಣ ಮತ್ತು ಒಡವೆ ಮೊದಲಾದವುಗಳನ್ನು ಲಂಚವಾಗಿ ತೆಗೆದುಕೊಂಡರೂ ಅವನು ತನ್ನ ವರದಿಯಲ್ಲಿ ಮಠಗಳೆಲ್ಲವನ್ನೂ ಖಂಡಿಸಿದನು. ಪಾರ್ಲಿಮೆಂಟ್ ಹೆನ್ರಿಯಿಂದ ಪ್ರೇರೇಪಿಸಲ್ಪಟ್ಟು, ಇವನ ವರದಿಯನ್ನು ಅಂಗೀಕರಿಸಿ, ಎರಡನೂರು ಪೌಂಡುಗಳಿಗಿಂತ ಕಮ್ಮಿ ವಾರ್ಷಿಕ ವರಮಾನವುಳ್ಳ ಇನ್ನೂರ ಎಪ್ಪತ್ತಾರು ಸಣ್ಣ ಮಠಗಳನ್ನು ಕೊನೆಗಾಣಿಸಿತು. ಮಠಗಳ ನಾಶದಿಂದ ಉತ್ತರ ಇಂಗ್ಲೆಂಡಿನಲ್ಲಿ ಸ್ವಲ್ಪಮಟ್ಟಿಗೆ ದಂಗೆಯು ತಲೆದೋರಿತು.

ಏಕೆಂದರೆ, ಯಾರ್ಕ್‌ಷೈರಿನ ಮಠಗಳು ಜನಪ್ರಿಯವಾಗಿದ್ದುವು. ಅವು ಭಿಕ್ಷುಕರಿಗೂ ಮತ್ತು ಪ್ರಯಾಣಿಕರಿಗೂ ಅತಿಥಿಸತ್ಕಾರವನ್ನೆಸಗುತ್ತಿದ್ದುವು. ಇದನ್ನು ಸಾಧಿಸುವುದಕ್ಕಾಗಿ ರಾಬರ್ಟ್ ಆಸ್ಕ್ (Robert Aske) ಎಂಬುವನ ಮುಖಂಡತ್ವದಲ್ಲಿ ಎದ್ದ ದಂಗೆಗೆ "ಪಿಲಿಗ್ರಿಮೇಜ್ ಆಫ್ ಗ್ರೇಸ್"(Pilgrimage of Grace) ಎಂದು ಹೆಸರು. ಈ ಅನಾಹುತಗಳಿಗೆಲ್ಲಾ ಕಾರಣನಾದ ಕ್ರಾಮ್ವೆಲ್ಲನನ್ನು ವಜಾಮಾಡಬೇಕೆಂದು ದಂಗೆಕಾರರು ಕೇಳಿಕೊಂಡರು. ಆದರೆ, ಈ ದಂಗೆಯು ಸುಲಭವಾಗಿ ಅಡಗಿಸಲ್ಪಟ್ಟಿತು. ಅನೇಕ ಜನಗಳು ಮರಣ ದಂಡನೆಗೆ ಗುರಿಯಾದರು.

ಸನ್ಯಾಸಿಗಳು ಮಠಗಳ ನಾಶದಿಂದ ಚದುರಿಹೋಗಿ ಭಿಕ್ಷುಕರಂತೆ ಜೀವನ ಮಾಡತೊಡಗಿದರು. ಎರಡುನೂರು ವರ್ಷಗಳಲ್ಲಿ ದೊಡ್ಡ ದೊಡ್ಡ ಮಠಗಳೂ ನಾಶವಾದುವು. ಅವುಗಳ ಅಪಾರವಾದ ಆಸ್ತಿಯನ್ನು ಹೆನ್ರಿಯು ತನ್ನ ವಶಪಡಿಸಿಕೊಂಡನು. ತನ್ನ ಆಶ್ರಿತರಿಗೆ ಸ್ವಲ್ಪ ಭಾಗವನ್ನು ಕೊಟ್ಟು, ಒಂದು ಹೊಸ ಮಧ್ಯಮ ತರಗತಿಯು ಪ್ರಾಬಲ್ಯಕ್ಕೆ ಬರುವಂತೆ ಮಾಡಿದನು. ಸ್ವಲ್ಪಮಟ್ಟಿಗೆ ಮಠಗಳ ಐಶ್ವರ್ಯವು ವಿದ್ಯೆಯ ಅಭಿವೃದ್ಧಿಗೋಸ್ಕರ ವಿನಿಯೋಗವಾಯಿತೆಂದು ಹೇಳಬಹುದು. ಆಕ್ಸ್‌ಫರ್ಡ್ ಮತ್ತು ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯಗಳಲ್ಲಿ ಐದು ರೀಜಿಯಸ್ ಪ್ರಾಧ್ಯಾಪಕರ ಹುದ್ದೆಗಳು ಕಲ್ಪಿಸಲ್ಪಟ್ಟುವು. ಪಿಲಿಗ್ರಿಮಿಜ್ ಆಫ್ ಗ್ರೇಸ್ ದಂಗೆಯಿಂದ ಆದ ಮತ್ತೊಂದು ಫಲಿತಾಂಶವೇನೆಂದರೆ—ಹೆನ್ರಿಯು ಉತ್ತರ ಇಂಗ್ಲೆಂಡಿನವರನ್ನು ತನ್ನ ಹತೋಟಿಯಲ್ಲಿಟ್ಟುಕೊಳ್ಳಲು ಯಾರ್ಕ್ ನಗರದಲ್ಲಿ ಉತ್ತರದ ಸಮಿತಿ (Council of North) ಯನ್ನು ಸ್ಥಾಪಿಸಿದುದು.

ಮತಧರ್ಮದ ವಿಚಾರದಲ್ಲಿ ಇಂಗ್ಲೆಂಡಿನಲ್ಲಿ ಹೀಗೆ ಅನೇಕ ಬದಲಾವಣೆಗಳಾದರೂ, ಹೆನ್ರಿಯು ರೋಮನ್ ಕ್ಯಾಥಲಿಕ್ ಮತಕ್ಕೆ ಸೇರಿದವನಾಗಿಯೇ ಉಳಿದನು. ಆದರೆ, ಪೋಪ್ ಜಗದ್ಗುರುವಿನ ಆಡಳಿತಕ್ಕೆ ಮಾತ್ರ ಒಳಗಾಗದ ರೋಮನ್ ಕ್ಯಾಥಲಿಕ್‌ಆಗಿದ್ದನೆಂದು ಹೇಳಬಹುದು. ರೋಮನ್ ಕ್ಯಾಥಲಿಕ್ ಮತದ ಆರು ವಿಧಿಗಳನ್ನು (Six Articles) ಕ್ರಿ. ಶ. ೧೫೩೯ ರಲ್ಲಿ ಯಾರೂ ಮುರಿಯಕೂಡದೆಂದು ಆಜ್ಞೆ ಮಾಡಿದನು. ಈ ರೀತಿಯಲ್ಲಿ ಹೆನ್ರಿಯು ಪ್ರಾಟೆಸ್ಟೆಂಟ್ ಮತದವರನ್ನೂ ಮತ್ತು ತನ್ನ ಮತೀಯ ಸಾರ್ವಭೌಮತ್ವವನ್ನು ನಿರಾಕರಿಸಿದವರನ್ನೂ ಮರಣದಂಡನೆಗೆ ಗುರಿಮಾಡದೆ ಇರುತ್ತಿರಲಿಲ್ಲ. ಥಾಮಸ್ ಕ್ರಾಮ್ವೆಲ್ ಹೆನ್ರಿಗೆ ಪ್ರಾಟೆಸ್ಟೆಂಟ್ ಮತದಲ್ಲಿ ಆಸಕ್ತಿ ಹುಟ್ಟಿಸುವ ಉದ್ದೇಶದಿಂದ ಪ್ರಾಟೆಸ್ಟೆಂಟ್ ಮನೆತನಕ್ಕೆ ಸೇರಿದ ಜರ್ಮನ್ ರಾಜಕುಮಾರಿ ಆನಿ ಆಫ್ ಕ್ಲೀವ್ಸ್ (Anne of Cleves) ಎಂಬುವಳನ್ನು ಮದುವೆ ಮಾಡಿಸಿದನು. ಆದರೆ ಹೆನ್ರಿಯು ಅವಳನ್ನು ಮೋಹಿಸಲಿಲ್ಲ. ಹೆನ್ರಿಯು ಕೋಪಗೊಂಡು, ಇದಕ್ಕೆ ಕಾರಣನಾದ ಕ್ರಾಮ್ವೆಲ್ಲನ ಮೇಲೆ ರಾಜದ್ರೋಹದ ಅಪಾದನೆ ಹೊರಿಸಿ, ಅವನನ್ನು ಕ್ರಿ. ಶ. ೧೫೪೦ ರಲ್ಲಿ ಶಿರಚ್ಛೇದನ ಮಾಡಿಸಿದನು.

ಹೆನ್ರಿಯು ಟ್ಯೂಡರ್ ನಿರಂಕುಶ ಪ್ರಭುತ್ವದ ಪತಾಕೆಯನ್ನು ಎತ್ತಿ ಹಾರಿಸಿದವನೆಂಬುದು ಚರಿತ್ರೆಕಾರರ ಖಚಿತ ಅಭಿಪ್ರಾಯವೆನ್ನಬಹುದು. ಅವನ ದಪ್ಪವಾದ ಶರೀರದ ಪ್ರತಿಯೊಂದು ಭಾಗದಲ್ಲಿಯೂ ರಾಜತ್ವವು ತುಂಬಿ ತುಳುಕಾಡುತ್ತಿತ್ತು. ಅವನು ಬ್ರಿಟನ್ನಿನ ಚರಿತ್ರೆಯಲ್ಲಿ ಕಾಥರೀನ್ ಆಫ್ ಆರಗಾನ್ (Catherine of Aragon), ಆನಿಬೋಲಿನ್ (Anne Boleyn), ಜೇನ್ ಸೇಮೂರ್ (Jane Seymour). ಆನ್ ಆಫ್ ಕ್ಲೀವ್ಸ್ (Anne of Cleves), ಕಾಥರೀನ್ ಹವರ್ಡ್ (Catherine Howard) ಮತ್ತು ಕಾಥರೀನ್ ಪಾರ್ (Catherine Parr)—ಎಂಬ ಆರು ಜನ ಪತ್ನಿಯರನ್ನು ವಿವಾಹಮಾಡಿಕೊಂಡನೆಂದು ಉಲ್ಲೇಖಿತವಾಗಿರುವುದು ತಿಳಿದ ಅಂಶ. ಆದರೆ ಹೆನ್ರಿಯು ಇಂಗ್ಲೆಂಡಿನ ಮಹತ್ವವನ್ನು ಹೆಚ್ಚಿಸಿದ ಹಿರಿದಾದ ವ್ಯಕ್ತಿಯೂ ಹೌದು. ಅವನು ಇಂಗ್ಲೆಂಡಿನ ಅತಿ ಮುಖ್ಯ ಸಂಸ್ಥೆಗಳಮೇಲೆ ತನ್ನ ಮುದ್ರೆಯನ್ನು ಊರಿದನು. ಇಂಗ್ಲಿಷ್ ಪಾರ್ಲಿಮೆಂಟ್, ಇಂಗ್ಲಿಷ್ ಚರ್ಚ್ ಮತ್ತು ಇಂಗ್ಲಿಷ್ ಹಡಗುಪಡೆ ಇವೇ ಮೊದಲಾದುವುಗಳ ಮೇಲೆ ತನ್ನ ಪ್ರಭಾವವನ್ನು ಬೀರಿದನು.

ಹೆನ್ರಿಯು ಕ್ರಿ. ಶ. ೧೫೨೯ ರಲ್ಲಿ ಸೇರಿಸಿದ ಪಾರ್ಲಿಮೆಂಟು ಇಂಗ್ಲೆಂಡಿನ ಆಧುನಿಕ ಚರಿತ್ರೆಯಲ್ಲಿ ಅತಿ ಮುಖ್ಯವೆಂದು ಕೆಲವು ಚರಿತ್ರೆಕಾರರು ಪರಿಗಣಿಸಿದ್ದಾರೆ. ಕಾನೂನುಗಳನ್ನು ರಚಿಸುವಾಗ ಹೆನ್ರಿಯು ಪಾರ್ಲಿಮೆಂಟಿನ ಅನುಮತಿ ಪಡೆಯದೆ ಇರುತ್ತಿರಲಿಲ್ಲ. ಅವನ ನಿರಂಕುಶ ಪ್ರಭುತ್ವವು ಸೈನ್ಯದ ಶಕ್ತಿಯ ಮೇಲೆ ನಿರ್ಮಿತವಾಗಿರಲಿಲ್ಲ. ಅವನಲ್ಲಿ ಸೈನ್ಯವೇ ಇರಲಿಲ್ಲ. ಬೇಕಾದಾಗ ಅದನ್ನು ಅವನು ಪ್ರಜೆಗಳ ಅನುಮತಿಯಿಂದ ಕೂಡಿಸಬೇಕಾಗಿತ್ತು. ಅವನ ಶಕ್ತಿಯು ಪಾರ್ಲಿಮೆಂಟಿನ ಬಲವನ್ನು ಅವಲಂಬಿಸಿತ್ತೆಂದು ಹೇಳಬಹುದು. ಸುಪ್ರಸಿದ್ಧ ಟ್ಯೂಡರ್ ಚರಿತ್ರೆಕಾರರಾದ ಪೊಲಾರ್ಡ್ (Pollard) ಎಂಬುವರು ಹೇಳುವಂತೆ ಹೆನ್ರಿಯ ಪಾರ್ಲಿಮೆಂಟಿನಲ್ಲಿ ಅವನ ಕಡೆಯವರನ್ನೇ ತುಂಬುವ ಪದ್ಧತಿಯೂ ಇರಲಿಲ್ಲ. ಪಾರ್ಲಿಮೆಂಟಿನ ಉಸಿರಾದ ವಾಕ್ ಸ್ವಾತಂತ್ರ್ಯ ಮತ್ತು ವಿಚಾರಣೆ ಇಲ್ಲದೆ ಸೆರೆಮನೆಗೊಯ್ಯುವಿಕೆ—ಇವೆರಡು ಅತಿ ಮುಖ್ಯ ಹಕ್ಕು

ಗಳು ಹೆನ್ರಿಯ ಕಾಲದಲ್ಲಿ ಪಾರ್ಲಿಮೆಂಟಿಗೆ ದೊರಕಿದುವು. ಪಾರ್ಲಿಮೆಂಟಿಗೆ ಟ್ಯೂಡರ್ ರಾಜರ ಆಳ್ವಿಕೆಯಲ್ಲಿ ಒಂದು ರೀತಿಯಲ್ಲಿ ತರಪೇತು ಸಿಕ್ಕಿತೆಂದು ಹೇಳಬಹುದು. ಫ್ರಾನ್ಸಿನ ಪಾರ್ಲಿಮೆಂಟಾದ ಎಸ್ಟೇಟ್ ಜನರಲ್ (Estate General) ಮತ್ತು ಸ್ಪೈನಿನ ಪಾರ್ಲಿಮೆಂಟಾದ ಕಾರ್ಟಿಸ್ (Cortez) ಎಂಬುವು ಅಭಿವೃದ್ಧಿಗೆ ಬರದೆ ಆ ದೇಶಗಳಲ್ಲಿ ಅವು ಕ್ಷೀಣಿಸಿ ಹೋದುವು. ಆದರೆ ಇಂಗ್ಲೆಂಡಿನಲ್ಲಿ ಟ್ಯೂಡರ್ ಕಾಲದಲ್ಲಿ ಪಾರ್ಲಿಮೆಂಟ್ ಪ್ರವರ್ಧಮಾನಕ್ಕೆ ಬಂದಿತು.

ಸ್ವತಂತ್ರವಾದ ಇಂಗ್ಲಿಷ್ ಚರ್ಚನ್ನು ಸ್ಥಾಪಿಸಿ, ಅದನ್ನು ರೋಮನ್ ಕ್ಯಾಥಲಿಕ್ ಚರ್ಚಿನಿಂದ ಬೇರ್ಪಡಿಸಲು ಹೆನ್ರಿಯು ತೋರಿದ ಧೈರ್ಯವು ಪ್ರಶಂಸನೀಯವಾದುದು.

ಇಂಗ್ಲೆಂಡಿಗೆ ಹೆನ್ರಿಯು ಮಾಡಿದ ಉಪಕಾರವೆಂದರೆ ಅವನು ನಿರ್ಮಿಸಿದ ಸಶಸ್ತ್ರ ಹಡಗಿನ ಪಡೆ ಎಂದರೆ ಅತಿಶಯೋಕ್ತಿಯಲ್ಲ. ಇಂಗ್ಲೆಂಡ್ ಸಮುದ್ರದ ಸಾರ್ವಭೌಮತ್ವವನ್ನು ಗಳಿಸಲು ಹೆನ್ರಿಯು ಕಲ್ಪಿಸಿದ ಈ ಹಡಗುಪಡೆಯೇ ಅಡಿಗಲ್ಲನ್ನು ಹಾಕಿತೆನ್ನಬಹುದು. ಸಮುದ್ರ ಯುದ್ಧಕ್ಕಾಗಿ ಹೆನ್ರಿಯು ಹಡಗುಗಳ ಮೇಲೆ ಫಿರಂಗಿಗಳನ್ನು ಜೇಮ್ಸ್ ಬೇಕರ್(James Baker) ಎಂಬುವನ ಸಹಾಯದಿಂದ ಇಡಿಸಿದನು. ಇಂತಹ ಹಡಗೊಂದನ್ನು ಹೆನ್ರಿಯೇ ನಾವಿಕನ ಉಡಪನ್ನು ಧರಿಸಿ ತಾನೇ ನಡೆಸಿದನು. ಈ ಉಪಕಾರಗಳಿಗಾಗಿ ಇಂಗ್ಲೆಂಡ್ ಹೆನ್ರಿಯ ಕ್ರೂರತ್ವ, ಸ್ವಾರ್ಥಪರತೆ, ಹಿಂಸೆ–ಮೊದಲಾದವನ್ನು ಪರಿಗಣಿಸದೆ ಅವನ್ನು ಮರೆತಿದ್ದುದು ಆಶ್ಚರ್ಯವೇನೂ ಅಲ್ಲ. ಸ್ಟಬ್ಸ್ (Stubbs) ಹೇಳುವಂತೆ ಹೆನ್ರಿಯು ತನಗಾಗಿ ಜೀವಿಸಿದನೇ ವಿನಃ ತನ್ನ ಪ್ರಜೆಗಳಿಗಾಗಿ ಜೀವಿಸಲಿಲ್ಲ. ಆದರೂ ಅವನಿಗೆ ಇಂಗ್ಲೆಂಡಿನ ಚರಿತ್ರೆಯಲ್ಲಿ ಪ್ರಮುಖಸ್ಥಾನ ಸಿಕ್ಕದೇ ಇಲ್ಲ.

### ಆರನೆ ಎಡ್ವರ್ಡ್, ಕ್ರಿ. ಶ. ೧೫೪೭–೧೫೫೩.

ಎಂಟನೆ ಹೆನ್ರಿಯು ಕ್ರಿ. ಶ. ೧೫೪೭ ರಲ್ಲಿ ಕಾಲವಾದ ಬಳಿಕ ಅವನ ಹತ್ತು ವರ್ಷದ ಮಗನಾದ ಆರನೆ ಎಡ್ವರ್ಡನು ಪಟ್ಟಕ್ಕೆ ಬಂದನು. ಇವನ ಚಿಕ್ಕಪ್ಪನಾದ ಎಡ್ವರ್ಡ್ ಸೆಮೂರ್ (Edward Seymour) ಎಂಬುವನು ರಾಜ್ಯದ ಸೂತ್ರಗಳನ್ನು ವಹಿಸಿ, ರಾಜನ ಪ್ರತಿನಿಧಿಯಾಗಿ,

ಡ್ಯೂಕ್ ಆಫ್ ಸಾಮರ್‌ಸೆಟ್ (Duke of Somerset) ಎಂಬ ಬಿರುದಿನಿಂದ ಆಡಳಿತವನ್ನು ನಡೆಸಲಾರಂಭಿಸಿದನು (೧೫೪೭–೧೫೪೯). ಇವನ ನಡತೆಯು ವೈವಿಧ್ಯವೂ ವಿಲಕ್ಷಣವೂ ಆಗಿತ್ತೆಂದು ಹೇಳಬಹುದು. ಒಂದು ಕಡೆ ಮಠಗಳನ್ನು ನಾಶಮಾಡಿ ಅವುಗಳ ಐಶ್ವರ್ಯವನ್ನು ಕಸಿದು ಕೊಂಡನು. ಮತ್ತೊಂದು ಕಡೆ ಬಡವರಿಗೆ ಆಗುತ್ತಿದ್ದ ತೊಂದರೆಯನ್ನು ತಪ್ಪಿಸಲು, ಗೋಮಾಳಕ್ಕೆ ಬೇಲಿಯನ್ನು ಹಾಕುತ್ತಿದ್ದ ಪದ್ಧತಿಯನ್ನು ಹೋಗಲಾಡಿಸಲು ಪ್ರಯತ್ನಿಸಿದನು (Act of Enclosure). ಟ್ಯೂಡರ್ ಕಾಲದಲ್ಲಿ ಜಮಿಾನನ್ನು ಸಾಗುವಳಿ ಮಾಡುವುದಕ್ಕಿಂತ ಕುರಿಗಳನ್ನು ಮೇಯಿಸುವುದು ಹೆಚ್ಚು ಲಾಭದಾಯಕವೆಂದು ಜಮಿಾನುದಾರರಿಗೆ ಗೊತ್ತಾಗಿತ್ತು. ಕುರಿಗಳನ್ನು ಮೇಯಿಸಲು ಜಮಿಾನುದಾರರು ಅವು ಓಡಿಹೋಗದಂತೆ ಬೇಲಿಯನ್ನು ತಮ್ಮ ತಮ್ಮ ಜಮಿಾನುಗಳ ಸುತ್ತಲೂ ಹಾಕಿಕೊಂಡಿದ್ದರು. ಇದರಿಂದ ಬೇಸಾಯವು ಕಡಿಮೆಯಾಗಿ ಅನೇಕ ಜನರಿಗೆ ಕೆಲಸವಿಲ್ಲದೆ ಹೋಯಿತು. ಅದೂ ಅಲ್ಲದೆ ಜಮಿಾನುದಾರರು ತಮ್ಮ ಕೈಕೆಳಗೆ ಇದ್ದ ಸಣ್ಣ ಪುಟ್ಟ ಬೇಸಾಯಗಾರರನ್ನು ಓಡಿಸಿದರು. ಹೀಗೆ ಎಲ್ಲೆಲ್ಲೂ ಕುರಿಗಳು ಪ್ರಬಲವಾಗಿ ಮನುಷ್ಯರನ್ನು ಕೆಲಸದಿಂದ ತೆಗೆದುಹಾಕುವಂತೆ ಒದಗಿದ ಪರಿಸ್ಥಿತಿಯನ್ನು ಕಂಡು ಸರ್‌ಥಾಮಸ್ ಮೋರ್ (Sir Thomus More) ಆಗಲೇ ಅದನ್ನು ಖಂಡಿಸಿದ್ದನು. ಅನೇಕ ವೇಳೆ ಸಾರ್ವಜನಿಕವಾಗಿದ್ದ ಜಮಿಾನುಗಳಿಗೆ Common-Land) ಶ್ರೀಮಂತರು ಬೇಲಿ ಹಾಕಿಕೊಳ್ಳಲು ಪ್ರಾರಂಭಿಸಿದರು. ಇದರಿಂದ ಬಡವರಿಗೆ ಅಲ್ಲಿ ಕುರಿ ಮೇಯಿಸುವುದು, ಕಟ್ಟಿಗೆ ಮೊದಲಾದವುಗಳನ್ನು ಶೇಖರಿಸುವುದು ತಪ್ಪಿಹೋಗಿ ಕಷ್ಟ ಒದಗಿತು. ಇದೂ ಅಲ್ಲದೆ ಹೆನ್ರಿಯು ನಾಣ್ಯಗಳಿಗೆ ಉಪಯೋಗಿಸುತ್ತಿದ್ದ ಬೆಳ್ಳಿ ಮೊದಲಾದ ಲೋಹಗಳಿಗೆ ಇತರ ಲೋಹಗಳನ್ನು ಹೆಚ್ಚಾಗಿ ಬೆರಿಸಿ (Debased) ನಾಣ್ಯಗಳ ಬೆಲೆಯು ಕಡಿಮೆಯಾಗುವಂತೆ ಮಾಡಿದ್ದನು. ಇದರಿಂದ ಒಳ್ಳೆಯ ನಾಣ್ಯಗಳನ್ನೆಲ್ಲಾ ಜನರು ಬಚ್ಚಿಟ್ಟರು. ಬೆಳ್ಳಿಯನ್ನು ಶೇಖರಿಸಲಾರಂಭಿಸಿದರು. ಈ ಕಾರಣದಿಂದ ವ್ಯಾಪಾರ ಕೆಟ್ಟಿತು. ಪದಾರ್ಥಗಳ ಬೆಲೆ ಏರಿ ಬಡವರಿಗೆ ತುಂಬಾ ತೊಂದರೆಯಾಯಿತು.

ಇದೂ ಅಲ್ಲದೆ ಬಡವರ ಕಷ್ಟಗಳನ್ನು ಪರಿಹರಿಸುತ್ತಿದ್ದ ಮಠಗಳು ಕೂಡಾ ನಾಶವಾಗಿ ಹೋಗಿದ್ದವು.

ಈ ಕಾರಣಗಳಿಂದ ರಾಬರ್ಟ್ ಕೆಟ್ (Robert Ket) ಎಂಬುವನ ಮುಖಂಡತ್ವದಲ್ಲಿ ೧೬,೦೦೦ ಜನಗಳಿಂದ ಕೂಡಿದ ದಂಗೆಯು ಪ್ರಾರಂಭವಾಯಿತು. ದಂಗೆಕಾರರು ಬೇಲಿಗಳನ್ನು ತೆಗೆದುಹಾಕಬೇಕೆಂದು ಪ್ರಾರ್ಥಿಸಿದರು. ಸಾಮರ್ ಸೆಟ್ಟನಿಗೆ ಈ ಬಡವರ ಕಷ್ಟವನ್ನು ನೋಡಿ ಸಹಾಯಮಾಡಬೇಕೆಂಬ ಮನಸ್ಸಿತ್ತು. ಆದರೆ ರಾಜಪ್ರತಿನಿಧಿ ಸಮಿತಿಯು ಇದನ್ನು ಸಹಿಸದೆ ದಂಗೆಯನ್ನು ಅಡಗಿಸಲು ಜಾನ್ ಡಡ್ಲಿ (John-Dudley) ಎಂಬುವನನ್ನು ನಿಯಮಿಸಿತು. ಈ ದಂಗೆಯಲ್ಲಿ ೩,೦೦೦ ರೈತಾಪಿ ಜನಗಳು ಸತ್ತರು. ಅನೇಕ ಮುಖಂಡರು ಸೆರೆಸಿಕ್ಕಿ ಗಲ್ಲಿಗೇರಿಸಲ್ಪಟ್ಟರು.

ಈ ಮಧ್ಯೆ ಇಂಗ್ಲೆಂಡಿಗೂ ಮತ್ತು ಸ್ಕಾಟ್ಲೆಂಡಿಗೂ ಸಖ್ಯ ಬೆಳೆಸಲು ಸ್ಕಾಟ್ಲೆಂಡಿನ ಐದನೆ ಜೇಮ್ಸಿನ ಮಗಳಾದ ಮೇರಿಯನ್ನು ಆರನೆ ಎಡ್ವರ್ಡನಿಗೆ ವಿವಾಹ ಮಾಡಿಸಬೇಕೆಂದು ಸಾಮರ್‌ಸೆಟ್ ಪ್ರಯತ್ನ ಮಾಡಿದನು. ಆದರೆ ಸ್ಕಾಟ್ಲೆಂಡ್ ಇದಕ್ಕೆ ಸಮ್ಮತಿಸುವಂತೆ ಮಾಡಲು ಸಾಮರ್‌ಸೆಟ್ ಆ ದೇಶದ ಮೇಲೆ ಯುದ್ಧಕ್ಕೆ ಹೋಗಿ, ಆ ದೇಶದ ಜನರನ್ನು ಕ್ರಿ. ಶ. ೧೫೪೭ ರಲ್ಲಿ ಪಿಂಕಿ (Pinkie) ಎಂಬಲ್ಲಿ ಸೋಲಿಸಿದನು. ಇದರಿಂದ ಸ್ಕಾಟ್ ಜನರ ಮನಸ್ಸನ್ನು ನಿಜವಾಗಿಯೂ ಗೆಲ್ಲಲಾಗಲಿಲ್ಲ. ಅವರಿಗೆ ವಿವಾಹದಲ್ಲಿ ಇಷ್ಟವಿದ್ದರೂ ಸಾಮರ್‌ಸೆಟ್ ಅನುಸರಿಸಿದ ರೀತಿ ಸರಿಬೀಳಲಿಲ್ಲ. ಅವರು ಮೇರಿಯನ್ನು ಫ್ರೆಂಚ್ ಯುವರಾಜನಿಗೆ ಮದುವೆಮಾಡಲು ಫ್ರಾನ್ಸಿಗೆ ಕಳುಹಿಸಿದರು.

ಸಾಮರ್‌ಸೆಟ್ಟನ ಕಾಲದಲ್ಲಿ ಪ್ರಾಟೆಸ್ಟೆಂಟ್ ಮತವು ಅಭಿವೃದ್ಧಿಗೆ ಬಂದತು. ರೋಮನ್ ಕ್ಯಾಥಲಿಕ್ ಮಠಗಳ ನಾಶವು ಇನ್ನೂ ಹೆಚ್ಚಾಯಿತು. ಚರ್ಚುಗಳಲ್ಲಿದ್ದ ಸುಂದರವಾದ ಸಂತರ ಮೂರ್ತಿಗಳನ್ನು ಒಡೆದುಹಾಕಲಾಯಿತು. ಕ್ಯಾಂಟರ್‌ಬರಿಯ ಮಹಾಮಠಾಧಿಪತಿ ಕ್ರಾನ್ಮರನು ಸೊಗಸಾದ ಇಂಗ್ಲಿಷಿನಲ್ಲಿ ಪ್ರಾರ್ಥನಾ ಪುಸ್ತಕವೊಂದನ್ನು ಸಾಮರ್‌ಸೆಟ್ಟನ ಅಪ್ಪಣೆಯಿಂದ ರಚಿಸಿದನು. ಕ್ರಿ. ಶ. ೧೫೪೯ ರಲ್ಲಿ ಜಾರಿಗೆ ಬಂದ ಆಕ್ಟ

ಆಫ್ ಯೂನಿಫಾರ್ಮಿಟಿಯಿಂದ (Act of Uniformity) ಅದನ್ನು ಇಂಗ್ಲೆಂಡಿನ ಎಲ್ಲಾ ಚರ್ಚುಗಳಲ್ಲಿಯೂ ಉಪಯೋಗಿಸುವಂತಾಯಿತು. ಹೆನ್ರಿಯ ಕಾಲದಲ್ಲಿ ಜಾರಿಗೆ ಬಂದಿದ್ದ "ಆರು ವಿಧಿ" ಗಳನ್ನು (ಇವು ರೋಮನ್ ಕ್ಯಾಥಲಿಕ್ ಮತದ ತತ್ವಗಳಿಗೆ ಸಂಬಂಧಪಟ್ಟವು) ಸಾಮರ್ ಸೆಟ್ ರದ್ದು ಮಾಡಿದನು.

ಇಂಗ್ಲೆಂಡಿನಲ್ಲಿ ಪ್ರಾಟೆಸ್ಟೆಂಟ್ ಮತವು ಮುಂದುವರಿಯಲು ಯೂರೋಪಿನ ಪ್ರಗತಿಯು ಈ ವಿಚಾರದಲ್ಲಿ ಕಾರಣವಾಯಿತು. ಜಾನ್ ಕ್ಯಾಲ್ವಿನ್ (John Calvin) ೧೫೦೯ ರಲ್ಲಿ ಹುಟ್ಟಿದನು. ಇವನು ಫ್ರೆಂಚ್‌ದೇಶದವನಾದರೂ ಜಿನೀವ ನಗರದಲ್ಲಿ ಹೋಗಿ ನೆಲಸಿದ್ದನು. ೧೫೪೬ ರಲ್ಲಿ ಲೂಥರನು ಕಾಲವಾದಮೇಲೆ ಕಾಲ್‌ವಿನ್ನನು ಪ್ರಾಟೆಸ್ಟೆಂಟ್ ಮತದ ನಾಯಕತ್ವವನ್ನು ವಹಿಸಿಕೊಂಡನಾದರೂ ಲೂಥರನ ತತ್ವಗಳನ್ನು ಪ್ರತಿಪಾದಿಸಲಿಲ್ಲ. ಲೂಥರನಿಗೆ ರಾಜನ ಅಧಿಕಾರತ್ವದಲ್ಲಿ ಪೂರ್ಣ ನಂಬಿಕೆ ಇತ್ತು. ಅವನೇ ರಾಷ್ಟ್ರದ ಒಡೆಯನೆಂಬ ಭಾವನೆ ಇತ್ತು. ಆದರೆ ಕಾಲ್‌ವಿನ್ ರಾಜನ ಸರ್ವಾಧಿಕಾರತ್ವವನ್ನು ಒಪ್ಪಲಿಲ್ಲ. ಅದು ಜನಗಳಿಗೆ ಸೇರಿದುದೆಂದು ವಾದಿಸಿದನು. ಸಣ್ಣ ಊರಾದ ಜಿನೀವಾದಲ್ಲಿ ಕಾಲ್‌ವಿನ್ನನು ಈ ತತ್ವವನ್ನು ರಾಜಕೀಯ ಜೀವನದಲ್ಲಿಯೂ ಮತ್ತು ಮತೀಯ ಜೀವನದಲ್ಲಿಯೂ ಆಚರಣೆಗೆ ತರಲು ಅವಕಾಶವಾಯಿತು. ಚರ್ಚಿನ ಆಡಳಿತದಲ್ಲಿ ಲೂಥರನು ಮಠಾಧಿಪತಿಗಳಿಗೆ (Bishops) ಅಧಿಕಾರವನ್ನು ಕೊಟ್ಟಿದ್ದನು. ಆದರೆ ಕಾಲ್‌ವಿನ್ ಮತೀಯ ಆಡಳಿದದಲ್ಲಿ ಅಧಿಕಾರವು ಸಮಾಜದ ಮುಖ್ಯಸ್ಥರಿಂದ (Elders) ನಡೆಸಲ್ಪಡಬೇಕೆಂದು ವಿಧಾಯಕ ಮಾಡಿದನು. ಈ ಸಮಾಜದ ಮುಖಂಡರು ಚುನಾವಣೆಯಿಂದ ಆರಿಸಲ್ಪಡುತ್ತಿದ್ದರು. ಇವರನ್ನು ಪ್ರಿಸ್ಬಿಟರ್ಸ್ (Presbyters) ಎಂದು ಕರೆಯುವುದುಂಟು,

ಇಂಗ್ಲೆಂಡ್, ಸ್ಕಾಟ್ಲೆಂಡ್ ಮತ್ತು ಅಮೇರಿಕ ದೇಶದ ಪ್ಯೂರಿಟನ್ ಮತ್ತು ಫ್ರಾನ್ಸ್‌ದೇಶದ ಹ್ಯೂಜ್‌ನಾಟ್ಸ್ (Huguenots) ಇವರುಗಳೆಲ್ಲರೂ ಕಾಲ್‌ವಿನ್ ಸ್ಥಾಪಿಸಿದ ಮತದ ಅನುಯಾಯಿಗಳು. ಹೀಗೆ ಕಾಲ್‌ವಿನ್ನನು ಚರ್ಚಿನ್ನ ಆಡಳಿತವನು ಪ್ರಜಾಪ್ರಭುತ್ವದ (Demo-

cracy) ತತ್ವದ ತಳಹದಿಯ ಮೇಲೆ ಕಟ್ಟಿದನು. ಪ್ರಜಾಪ್ರಭುತ್ವದ ಚರಿತ್ರೆಯನ್ನು ಅವಲೋಕಿಸುವಾಗ ನಮಗೆ ಇಬ್ಬರು ಫ್ರೆಂಚ್ ದೇಶೀಯರ (French Men) ಜ್ಞಾಪಕವು ಬರುತ್ತದೆ. ಮೊದಲನೆಯವನು ಮತೀಯ ಪ್ರಜಾಪ್ರಭುತ್ವವನ್ನು ಸ್ಥಾಪಿಸಿದ (Democracy in Religion) ಕಾಲ್‌ವಿನ್. ಎರಡನೆಯವನು ಫ್ರಾನ್ಸಿನ ಮಹಾಕ್ರಾಂತಿಗೆ ತಳಹದಿಯನ್ನು ಹಾಕಿ, ರಾಜಕೀಯದಲ್ಲಿ ಪ್ರಜಾಪ್ರಭುತ್ವವನ್ನು (Democracy in Politics) ಸ್ಥಾಪಿಸಿದ ರೂಸೋ (Rousseau). ಪ್ಯೂರಿಟನ್ ಮತ, ಕಲೆ, ನೃತ್ಯ, ಸಂತೋಷಕರವಾದ ಜೀವನ, ಒಳ್ಳೆಯ ಉಡಿಗೆ ತೊಡಿಗೆಗಳು—ಇವುಗಳಿಗೆ ಮನ್ನಣೆಯನೀಯದೆ ಜೀವನವನ್ನು ನಿಸ್ಸಾರವನ್ನಾಗಿ ಮಾಡಿತೆಂದು ಅನೇಕ ಚರಿತ್ರೆಕಾರರ ಅಭಿಪ್ರಾಯ. ಇದು ಸ್ವಲ್ಪಮಟ್ಟಿಗೆ ನಿಜವಾದರೂ ಪ್ಯೂರಿಟನ್ ಮತವು ಯೂರೋಪ್ ದೇಶದ ಅನೇಕ ರಾಷ್ಟ್ರಗಳ ಅಭಿವೃದ್ಧಿಗೆ ಕಾರಣವಾಯಿತು. ಅನಾಯಕತ್ವತೆಯಿಂದ ಕೂಡಿದ ಮತ್ತು ಹಿಂದುಳಿದ ಜನಾಂಗವಾದ ಸ್ಕಾಟರನ್ನು ಇದು ವಿದ್ಯಾವಂತರನ್ನಾಗಿಯೂ ಮತ್ತು ಕಷ್ಟಪಟ್ಟು ಕೆಲಸ ಮಾಡುವವರನ್ನಾಗಿಯೂ ಮಾಡಿತು. ಇಂಗ್ಲೆಂಡಿನಲ್ಲಿ ಇದು ಸ್ಟುವರ್ಟ್ ರಾಜರ ನಿರಂಕುಶ ಪ್ರಭುತ್ವವನ್ನು ಎದುರಿಸಿ ಪಾರ್ಲಿಮೆಂಟಿನ ಪರಮಾಧಿಕಾರವನ್ನು ಸ್ಥಾಪಿಸುವಂತೆ ಚಳುವಳಿಯನ್ನು ಹೂಡಿಸಿತು. ಡಚ್ಚರ ಸ್ವಾತಂತ್ರ್ಯವನ್ನು ಸ್ಥಾಪಿಸಲು ಕಾರಣವಾಗಿ ಅವರನ್ನು ಕೆಲವು ಕಾಲ ಯೂರೋಪಿನ ವಾಣಿಜ್ಯ ಮತ್ತು ವಿಜ್ಞಾನದಲ್ಲಿ ಪ್ರಮುಖರನ್ನಾಗಿ ಮಾಡಿತು. ಇದು ಅನೇಕರು ಉತ್ತರ ಅಮೇರಿಕಾದೇಶಕ್ಕೆ ವಲಸೆಹೋಗಿ ಅಲ್ಲಿ ಸಂಯುಕ್ತ ಸಂಸ್ಥಾನವನ್ನು (United States of America) ಸ್ಥಾಪಿಸುವಂತೆ ಮಾಡಿತು.

ಸಾಮರ್ ಸೆಟ್ಟನನ್ನು ಕ್ರಿ. ಶ. ೧೫೫೨ ರಲ್ಲಿ ಮರಣದಂಡನೆಗೆ ಗುರಿ ಮಾಡಿ, ಅವನ ಪದವಿಯನ್ನಾಕ್ರಮಿಸಿದ ಡಡ್ಲಿಯು ಇಂಗ್ಲೆಂಡಿನಲ್ಲಿ ಪ್ರಾಟೆಸ್ಟೆಂಟ್‌ಮತದ ಪ್ರಗತಿಗೆ ಸಾಮರ್‌ಸೆಟ್ಟನಂತೆಯೇ ಪ್ರೋತ್ಸಾಹ ನೀಡಿದನು. ಅದೇ ವರ್ಷ ಅವನು ಎರಡನೆ ಪ್ರಾರ್ಥನೆಯ ಪುಸ್ತಕವನ್ನು ಹೊರಡಿಸಿದನು. ಆದರೆ ಇವನಿಗೆ ನಿಜವಾಗಿಯೂ ಪ್ರಾಟೆಸ್ಟೆಂಟ್ ಮತದಲ್ಲಿ ವಿಶ್ವಾಸ

ವಾಗಲಿ, ಅಭಿಮಾನವಾಗಲಿ ಇರಲಿಲ್ಲ. ಅದರ ಪ್ರಗತಿಯನ್ನು ಸಾಧಿಸುವ ನೆವದಿಂದ ಡಡ್ಲಿಯು ತನ್ನ ಅಧಿಕಾರವನ್ನು ಹೆಚ್ಚಿಸಿಕೊಳ್ಳಲು ಇಷ್ಟವುಳ್ಳವನಾಗಿದ್ದನು. ಕೊನೆಗೆ ತನ್ನ ವಂಶಕ್ಕೇ ರಾಜ್ಯವು ಸಿಕ್ಕುವಂತೆ ಮಾಡಿಕೊಳ್ಳಬೇಕೆಂದು ಹವಣಿಸಿದನು. ಆರನೆ ಎಡ್ವರ್ಡನು ರೋಗಗ್ರಸ್ತನಾಗಿದ್ದನು. ಎಂಟನೆ ಹೆನ್ರಿಯ ಮಗಳಾದ ಮೇರಿಯು ರೋಮನ್ ಕ್ಯಾಥಲಿಕ್ ಮತದ ಅಭಿವೃದ್ಧಿಯಲ್ಲಿ ಅತ್ಯಂತ ಆಸಕ್ತಿಯಿಂದ ಕೂಡಿದವಳಾಗಿದ್ದಳು. ಅವಳು ಪಟ್ಟಕ್ಕೆ ಬಂದರೆ ಪ್ರಾಟೆಸ್ಟೆಂಟ್ ಮತಕ್ಕೆ ಧಕ್ಕೆ ತಗುಲುವುದೆಂಬ ನೆಪದಿಂದ ಡಡ್ಲಿಯು ಆರನೆ ಎಡ್ವರ್ಡನಿಂದ ಅವನ ಕಾಲಾನಂತರ ರಾಜ್ಯವು ಏಳನೇ ಹೆನ್ರಿಯ ಮಗಳಾದ ಮೇರಿಯ ಮೊಮ್ಮಗಳು ಜೇನ್ ಗ್ರೇ (Jane Grey) ಎಂಬುವಳಿಗೆ ಸೇರತಕ್ಕದೆಂದು ಮರಣಶಾಸನವನ್ನು ಬರೆಯಿಸಿದನು. ಜೇನ್ ಗ್ರೇ ಡಡ್ಲಿಯ (ಡ್ಯೂಕ್ ಆಫ್ ನಾರ್ದಂಬರ್ ಲ್ಯಾಂಡ್) ಮಗನಾದ ಗಿಲ್ ಫರ್ಡ್ ಡಡ್ಲಿಯನ್ನು ಮದುವೆಯಾಗಿದ್ದುದರಿಂದ ಸೊಸೆಯ ಹೆಸರಿನಲ್ಲಿ ತಾನೇ ರಾಜ್ಯವನ್ನಾಳಬಹುದೆಂದು ಸಂಕಲ್ಪ ಮಾಡಿಕೊಂಡಿದ್ದನು. ಇಂಗ್ಲೆಂಡಿನ ಜನರಿಗೆ ಮತೀಯ ವಿಚಾರದಲ್ಲಿ ಭಿನ್ನಾಭಿಪ್ರಾಯವಿದ್ದಿತಾದರೂ, ಡಡ್ಲಿಯ ಮನೆತನಕ್ಕಿಂತ ಟ್ಯೂಡರ್ ಮನೆತನದವರೇ ರಾಜರಾಗಿರಬೇಕೆಂಬ ವಿಷಯದಲ್ಲಿ ಯಾವ ಭಿನ್ನಾಭಿಪ್ರಾಯವೂ ಇರಲಿಲ್ಲ. ಮೇರಿಯ ಸೈನ್ಯಕ್ಕೆ ಸೆರೆ ಸಿಕ್ಕಿ ಡಡ್ಲಿಯು ಮರಣದಂಡನೆಗೆ ಗುರಿಯಾದನು.

**ಮೇರಿಯ ಆಳ್ವಿಕೆ :** (೧೫೫೩—೧೫೫೮) ಮೇರಿಯು ಪಟ್ಟಕ್ಕೆ ಬರುವ ವೇಳೆಗೆ ಅವಳಿಗೆ ಮೂವತ್ತೇಳು ವರ್ಷವಾಗಿತ್ತು. ಅವಳ ತಂದೆಯಾದ ಎಂಟನೆ ಹೆನ್ರಿಯು ಅವಳ ಬಗ್ಗೆ ಕನಿಕರದಿಂದ ವರ್ತಿಸಿರಲಿಲ್ಲ. ಹನ್ನೆರಡನೆ ವಯಸ್ಸಿನಿಂದಲೇ ಅವಳಿಗೆ ಕಷ್ಟ ಪ್ರಾರಂಭವಾಯಿತು. ಆಗ್ಗೆ ತಾಯಿಯಾದ ಕ್ಯಾಥರೀನಳ ದಾಂಪತ್ಯ ವಿಚ್ಛೇದನದ ಪ್ರಕರಣವು ನಡೆಯುತ್ತಿತ್ತು. ಇಪ್ಪತ್ತು ವರ್ಷದ ವೇಳೆಗೆ ತಾಯಿಯ ಸಾವು ಒದಗಿಬಂದಿತು. ಆರನೆ ಎಡ್ವರ್ಡನ ಕಾಲದಲ್ಲಿ ಅವಳಿಗೂ ಮತ್ತು ಅವಳು ಅವಲಂಬಿಸಿದ್ದ ರೋಮನ್ ಕ್ಯಾಥಲಿಕ್ ಮತಕ್ಕೂ ಒದಗಿದ ಹಿಂಸೆಯನ್ನು ಅವಳು ಧೈರ್ಯದಿಂದ ಎದುರಿಸಿದಳು. ಪಟ್ಟಕ್ಕೆ ಬಂದ ಮೇಲೆ ಇವಳಿಗೆ

ರೋಮನ್ ಕ್ಯಾಥಲಿಕ್ ಮತವನ್ನು ಪುನರುಜ್ಜೀವನಗೊಳಿಸುವುದೇ ಜೀವನದ ಗುರಿಯಾಯಿತು. ಇದರ ಮೊದಲನೆ ಅಂಗವಾಗಿ ಅವಳು ರೋಮನ್ ಕ್ಯಾಥಲಿಕ್ ಮತದ ಆಧಾರ ಸ್ತಂಭವಾಗಿದ್ದ ಐದನೆ ಚಾರ್ಲ್ಸ್‌ನ ಮಗನಾದ ಸ್ಪೈನಿನ ಎರಡನೆ ಫಿಲಿಪ್ಪನನ್ನು ಮದುವೆಯಾದಳು. ಈ ಮದುವೆಯು ಇಂಗ್ಲೆಂಡಿನಲ್ಲಿ ಅನೇಕರಿಗೆ ಅತೃಪ್ತಿಯನ್ನುಂಟುಮಾಡಿತು. ಏಕೆಂದರೆ, ಇವರಲ್ಲಿ ಜನಿಸುವ ಮಗನು ಮುಂದೆ ಸ್ಪೈನಿನ ಚಕ್ರಾಧಿಪತ್ಯಕ್ಕೆ ರಾಜನಾಗಿ, ಇಂಗ್ಲೆಂಡನ್ನು ಆ ಚಕ್ರಾಧಿಪತ್ಯದ ಒಂದು ಸಣ್ಣ ಭಾಗವೆಂದು ಅಲಕ್ಷ್ಯ ಮಾಡಬಹುದೆಂಬ ಶಂಕೆಯುಳ್ಳವರಾಗಿದ್ದರು. ಕೆಂಟ್ ಪ್ರದೇಶ ದಲ್ಲಿ ಸರ್ ಥಾಮಸ್ ವ್ಯಾಟ್ (Sir Thomas Wyatt) ಎಂಬುವನ ಮುಖಂಡತ್ವದಲ್ಲಿ ಒಂದು ದೊಡ್ಡ ದಂಗೆಯು ಈ ಮದುವೆಯನ್ನು ಪ್ರತಿ ಭಟಿಸಲು ಎದ್ದಿತು. ಮೇರಿಯು ಧೈರ್ಯದಿಂದ ಅದನ್ನಡಗಿಸಿದಳು. ವ್ಯಾಟ್ ಮತ್ತು ಅವನ ಮುಖ್ಯ ಅನುಯಾಯಿಗಳು ಗಲ್ಲಿಗೇರಿಸಲ್ಪಟ್ಟರು. ಈ ದಂಗೆಯ ಫಲಿತಾಂಶವಾಗಿ ಅನೇಕ ನಿರಪರಾಧಿಗಳೂ ತಮ್ಮ ಪ್ರಾಣ ವನ್ನು ತೆತ್ತರು. ಇವರಲ್ಲಿ ಅತ್ಯಂತ ನಿರ್ದೋಷಿಗಳಾಗಿದ್ದು, ಸೆರೆಮನೆಯ ಲ್ಲಿದ್ದ ಜೇನ್ ಗ್ರೇ ಮತ್ತು ಅವಳ ಗಂಡ ಗಿಲ್ಫರ್ಡ್ ಡಡ್ಲಿ ಇವರನ್ನು ಮೇರಿಯು ಕೊಲ್ಲಿಸಿದಳು. ಎಲ್ಲಿಯವರೆಗೆ ಪ್ರಾಟೆಸ್ಟೆಂಟ್ ಮತಕ್ಕೆ ಸೇರಿದ್ದ ಮತ್ತು ಸಿಂಹಾಸನಕ್ಕೆ ಹಕ್ಕುಳ್ಳ ಜೇನ್ ಗ್ರೇ ಜೀವಿಸಿದ್ದಳೋ ಅಲ್ಲಿಯ ವರೆಗೆ ಮೇರಿಯು ತನಗೆ ಸುರಕ್ಷತೆ ಇಲ್ಲವೆಂದು ತಿಳಿದಿದ್ದಳು. ಜೇನ್‌ಗ್ರೇ ಸಾಯುವಾಗ ತೋರಿದ ಅನುಪಮ ಮನಶ್ಶಾಂತಿಯು, ಗಾಂಭೀರ್ಯವು ಜನಗಳನ್ನು ದಂಗುಬಡಿಸಿತು. ಅವಳಿಗೆ ಇಂಗ್ಲೆಂಡಿನ ಸಿಂಹಾಸನ ವನ್ನೇರಲು ಯಾವ ಕಾಲದಲ್ಲೂ ಆಸೆಯಿರಲಿಲ್ಲ. ಕ್ರೂರಿಯೂ ಕಪ ಟಿಯೂ ಆದ ಅವಳ ಮಾವ ಡಡ್ಲಿಯ ಪಿತೂರಿಯಿಂದ ಅವಳ ಜೀವನವೇ ನಂದಿಹೋಯಿತು.

ರೋಮನ್ ಕ್ಯಾಥಲಿಕ್ ಮತವನ್ನು ಪುನರುಜ್ಜೀವನಗೊಳಿಸಲು ಮೇರಿಯು ಪಾರ್ಲಿಮೆಂಟಿನ ಒಪ್ಪಿಗೆ ಮೇರೆ ಆರನೆ ಎಡ್ವರ್ಡನ ಕಾಲದಲ್ಲಿ ಜಾರಿಗೆ ಬಂದಿದ್ದ ಮತೀಯ ಬದಲಾವಣೆಗಳನ್ನೆಲ್ಲಾ ರದ್ದುಮಾಡಿಸಿದಳು. ಪೋಪಿನ ಸಾರ್ವಭೌಮತ್ವವನ್ನು ಇಂಗ್ಲಿಷ್ ಚರ್ಚ್ ಒಪ್ಪಿಕೊಳ್ಳುವಂತೆ

ಮಾಡಿದಳು. ಆದರೆ, ಚರ್ಚಿಗೆ ಸೇರಿದ ಜಮಿಾನು, ಐಶ್ವರ್ಯ ಮುಂತಾ ದುವು ಆಗಲೇ ಶ್ರೀಮಂತರ ಮತ್ತು ಇತರರ ಕೈವಶವಾಗಿದ್ದುದರಿಂದ ಅವುಗಳನ್ನು ಚರ್ಚು ವಾಪಸ್ ಪಡೆಯಲು ಅವಕಾಶ ಕೊಡುವುದಿಲ್ಲವೆಂದು ಅವಳು ವಾಗ್ದಾನ ಮಾಡಬೇಕಾಯಿತು.

ರೋಮನ್ ಕ್ಯಾಥಲಿಕ್ ಮತವನ್ನು ಪುನರುಜ್ಜೀವನಗೊಳಿಸಲು ಯೂರೋಪಿನಲ್ಲೇ ಒಂದು ಚಳುವಳಿಯು ಪ್ರಾರಂಭವಾಗಿತ್ತು. ಲೂಥರನ ಬೋಧನೆಯ ಫಲಿತಾಂಶವಾಗಿ ಜರ್ಮನಿಯಲ್ಲಿ ಅಭಿವೃದ್ಧಿಗೆ ಬರುತ್ತಿದ್ದ ಪ್ರಾಟೆಸ್ಟೆಂಟ್ ಮತವನ್ನು ಕುಗ್ಗಿಸಿ, ರೋಮನ್ ಕ್ಯಾಥಲಿಕ್ ಮತದ ಪ್ರಾಬಲ್ಯವನ್ನು ಹೆಚ್ಚಿಸಲು ಅನೇಕ ಮಹಾ ವ್ಯಕ್ತಿಗಳು ಟೊಂಕ ಕಟ್ಟಿದ್ದರು. ಈ ಚಳುವಳಿಗೆ ಕೌಂಟರ್ ರಿಫರ್ಮೇಷನ್ (Counter Reformation) ಎಂದು ಹೆಸರು. ಈ ಚಳುವಳಿಯ ಚರಿತ್ರೆಯನ್ನು ನೋಡುವಾಗ ನಮಗೆ ಮೂರು ಅಂಶಗಳು ಕಂಡುಬರುತ್ತವೆ: (೧) ಜೇಸಸ್ಸಿನ ಸಂಘ (Society of Jesus), (೨) ಟ್ರೆಂಟ್ ಮಂತ್ರಾಲೋಚನ ಸಭೆ (Council of Trent), (೩) ಇನ್ಕ್ವಿಸಿಷನ್ (Inquisition).

೧೫೪೦ ರಲ್ಲಿ ಜೇಸಸ್ಸಿನ ಸಂಘವನ್ನು ಸ್ಥಾಪಿಸಿದವನು ಇಗ್ನೇಷಿಯಸ್ ಲಯೋಲ (Ignatius Loyola) ಎಂಬ ಸ್ಪೈನಿನ ಯೋಧನು. ಈ ಸಂಘಕ್ಕೆ ಸೇರಿದವರಿಗೆ ಜೆಸೂಟ್ಸ್ (Jesuits) ಎಂದು ಹೆಸರು. ಇವರಿಗೆ ತಮ್ಮ ಮುಖಂಡರಲ್ಲಿ ಅಪಾರವಾದ ವಿಧೇಯತೆಯೂ ಮತ್ತು ರೋಮನ್ ಕ್ಯಾಥಲಿಕ್–ಮತದಲ್ಲಿ ಅತ್ಯಂತ ಅಭಿಮಾನವೂ ಇದ್ದುವು. ಜೆಸೂಟ್ಸ್ ತಮ್ಮ ಪ್ರಭಾವವನ್ನು ವಿದ್ಯಾಭ್ಯಾಸದ ಮೇಲೆ ಬೀರಿದರು. ಅವರ ಪಾಠಶಾಲೆಗಳು ಮತ್ತು ಕಾಲೇಜುಗಳು ಬಹಳ ಪ್ರಸಿದ್ಧವಾಗಿದ್ದುವು. ಜರ್ಮನಿಯಲ್ಲಿ ಅವರು ಸ್ಥಾಪಿಸಿದ ಇಂಗಲ್‌ಸ್ಟಾಟ್ (Ingol Stadt) ಎಂಬ ವಿಶ್ವವಿದ್ಯಾನಿಲಯವು ಲೂಥರನ ವಿಟನ್‌ಬರ್ಗ್ ವಿಶ್ವವಿದ್ಯಾನಿಲಯದ ಕೀರ್ತಿಯನ್ನು ಬಹು ಬೇಗ ಕುಗ್ಗಿಸಿತು. ಫ್ಲಾಂಡರ್ಸ್ ದೇಶದ ಡುವಾಯ್ (Douai) ಕಾಲೇಜು ಬಹಳ ಪ್ರಖ್ಯಾತವಾದುದು. ಮಕ್ಕಳು, ಯುವಕರು ಈ ಪಾಠಶಾಲೆಗಳಿಗೂ ಮತ್ತು ಕಾಲೇಜುಗಳಿಗೂ ವಿದ್ಯೆ ಕಲಿಯಲು ಹೆಚ್ಚು ಸಂಖ್ಯೆಯಲ್ಲಿ ಹೋಗುತ್ತಿದ್ದುದು ಆಶ್ಚರ್ಯವೇನೂ ಅಲ್ಲ.

೧೫೪೫–೧೫೬೩ ಟ್ರೆಂಟ್ ಮಂತ್ರಾಲೋಚನ ಸಭೆಯಲ್ಲಿ ರೋಮನ್ ಕ್ಯಾಥಲಿಕ್ ಮತದಲ್ಲಿದ್ದ ಲೋಪದೋಷಗಳನ್ನು ನಿವಾರಿಸಲು ಅನೇಕ ಕಾರ್ಯಕ್ರಮಗಳನ್ನು ಕೈಗೊಳ್ಳಲಾಯಿತು. ಲೂಥರ್ ಮೊದಲಾದವರು ಈ ಲೋಪದೋಷಗಳನ್ನೇ ಎತ್ತಿ ಖಂಡಿಸಿದ್ದರು. ರೋಮನ್ ಕ್ಯಾಥಲಿಕ್ ಮತದ ತತ್ವಗಳನ್ನು (Doctrines) ಚೆನ್ನಾಗಿ ಪರಿಶೋಧಿಸಲಾಯಿತು. ಇತರರು ತಮ್ಮ ಮೇಲ್ಪಂಕ್ತಿಯನ್ನನುಸರಿಸುವಂತೆ ನಾಲ್ಕನೆ ಪಿಯಸ್, ಐದನೆ ಪಿಯಸ್ ಮೊದಲಾದ ಪೋಪರು ತಮ್ಮ ಪರಿಶುದ್ಧವಾದ ಮತೀಯ ಜೀವನವನ್ನು ನಡೆಸತೊಡಗಿದರು.

ಇನ್ಕ್ವಿಸಿಷನ್ ಎಂಬ ಸಂಸ್ಥೆಯು ಅಧರ್ಮಿಗಳಿಗೆ ಬುದ್ಧಿಕಲಿಸಲು ಜಾಗರೂಕತೆಯಿಂದ ನೋಡಿಕೊಳ್ಳುತ್ತಿತ್ತು. ಇದರ ಚಟುವಟಿಕೆಯು ಪೋಲೀಸರ ಚಟುವಟಿಕೆಯಂತೆ ಚುರುಕಾಗಿತ್ತು. ಗೆಲಿಲಿಯೊ ಎಂಬ ವಿಜ್ಞಾನಿಯು ಈ ಸಂಸ್ಥೆಯ ಮುಂದೆ ವಿಚಾರಣೆಗೆ ನಿಂತಾಗ ಭಯದಿಂದ ತನ್ನ ಹೇಳಿಕೆಯನ್ನೇ ಬದಲಾಯಿಸಿದನೆಂಬ ವಿಷಯವು ತಿಳಿದೇ ಇದೆ.

ಮೇರಿಯ ಆಳ್ವಿಕೆಯಲ್ಲಿ ಪ್ರಾಟೆಸ್ಟೆಂಟ್ ಮತವು ಧರ್ಮಬಾಹಿರವೆಂದೂ ಘೋಷಿಸಲ್ಪಟ್ಟು, ತನ್ನ ಪ್ರಜೆಗಳು ಆ ಮಾರ್ಗವನ್ನು ಅವಲಂಬಿಸಿ ಪಾಪಯುಕ್ತರಾಗಕೂಡದೆಂಬ ಉದ್ದೇಶ್ಯದಿಂದ ಪ್ರಾಟೆಸ್ಟೆಂಟ್ ಮತದ ಮುಖಂಡರನ್ನು ಜೀವಸಹಿತ ಸುಡುವುದು ಪ್ರಾರಂಭವಾಯಿತು. ಮಠಾಧಿಪತಿ ಹೂಪರ್ (Hooper), ರಿಡ್ಲಿ (Ridley), ಲಾಟಿಮರ್ (Latimer) ಮೊದಲಾದವರು ಕ್ರಿ. ಶ. ೧೫೫೫ ರಲ್ಲಿ ಈ ಶಿಕ್ಷೆಗೆ ಒಳಗಾದರು. ಕ್ರಾನ್‌ಮರ್ ೧೫೫೬ ರಲ್ಲಿ ಇದಕ್ಕೆ ಒಳಗಾದನು. ಅವನು ಪ್ರಾಟೆಸ್ಟೆಂಟ್ ಮತಕ್ಕೆ ಸೇರಿದ್ದು ಸರಿಯಲ್ಲವೆಂದು 'ಅವನಿಂದಲೇ ಹೇಳಿಸಬೇಕೆಂಬುದು ಮೇರಿಯ ಆಸೆಯಾಗಿತ್ತು. ಜೀವಭಯದಿಂದ ಕ್ರಾನ್ಮರ್ ಈ ಒಪ್ಪಿಗೆ ಪತ್ರವನ್ನು ಬರೆದುಕೊಟ್ಟನು. ಆದರೆ ಅವನ ಶತ್ರುಗಳು ಅವನ ಪ್ರಾಣವನ್ನು ಉಳಿಸಲು ಇಷ್ಟವುಳ್ಳವರಾಗಿರಲಿಲ್ಲ. ತನ್ನ ತಾಯಿಯಾದ ಕಾಥರೀನ್ ಆಫ್ ಆರಗಾನಳ ಮದುವೆಯು ತನ್ನ ತಂದೆಯಾದ ಎಂಟನೆ ಹೆನ್ರಿಯೊಡನೆ ಧರ್ಮಬದ್ಧವಾದುದಲ್ಲವೆಂದು ಕ್ರಾನ್ಮರನು ಹೇಳಿದ್ದುದನ್ನು

ಮೇರಿಯು ಮರೆತಿರಲಿಲ್ಲ. ಅವನು ಶಿಕ್ಷೆಗೆ ಒಳಗಾಗುವ ಮುನ್ನ ತಾನು ಪ್ರಾಟೆಸ್ಟೆಂಟ್ ಮತವನ್ನು ಸೇರಿದ್ದು ಸರಿಯಲ್ಲವೆಂಬ ಹೇಳಿಕೆಗೆ ಸಹಿಹಾಕಿದ್ದಕ್ಕೆ ಅತ್ಯಂತ ದುಃಖಪಟ್ಟನು. ಅದಕ್ಕೆ ಕಾರಣವಾಗಿದ್ದ ತನ್ನ ಬಲಗೈ ಪೂರ್ತಿಯಾಗಿ ಸುಡುವವರೆಗೂ ಬೆಂಕಿಯ ಉರಿಯಿಂದ ಅದನ್ನು ಹಿಂದಕ್ಕೆ ತೆಗೆಯಲಿಲ್ಲ. ಒಟ್ಟಿನಲ್ಲಿ ಮುನ್ನೂರು ಜನರು ಶಿಕ್ಷೆಗೆ ಗುರಿಯಾದರು. ಈ ಹುತಾತ್ಮರ ಸಂಖ್ಯೆ (Martyr) ಫ್ರಾನ್ಸಿನ ಸೆಂಟ್ ಬಾರ್ತೊಲೊಮ್ಯು (St. Bartholomew) ಕೊಲೆಯ (Massacre) ಸಂಖ್ಯೆಗಾಗಲಿ ಅಥವಾ ನೆದರ್ಲೆಂಡಿನಲ್ಲಿ (Holland) ಆಲ್ವ (Alva) ಎಂಬುವನು ತೆಗೆದುಕೊಂಡ ಯಜ್ಞಪಶುಗಳ (Victims) ಸಂಖ್ಯೆಗಾಗಲಿ ಹೋಲಿಸಿ ನೋಡಿದರೆ ಬಹಳ ಕಮ್ಮಿ ಎಂದು ಹೇಳಬಹುದು. ಆದರೆ ಲಾಟಿಮರ್, ರಿಡ್ಲಿ ಮತ್ತು ಕ್ರಾನ್ಮರ್ ತಮ್ಮ ಮತಕ್ಕಾಗಿ ಪ್ರಾಣ ತೆತ್ತಿದ್ದು ಜನಗಳಲ್ಲಿ ಪ್ರಾಟೆಸ್ಟೆಂಟ್ ಮತದ ವಿಷಯವಾಗಿ ಗೌರವವನ್ನು ತಂದಿತು. ಮೇರಿಗಿಂತ ಮುಂಚೆ ಪ್ರಾಟೆಸ್ಟೆಂಟ್ ಮತವು ಜಾನ್‌ಡಡ್ಲಿಯಂತಹ ಕೊಳ್ಳೆಗಾರನ ಸಹವಾಸಕ್ಕೆ ಸಿಲುಕಿತ್ತು. ಚರ್ಚಿನ ಆಸ್ತಿಯನ್ನು ಕೊಳ್ಳೆಹೊಡೆಯುವುದು ಪ್ರಾಟೆಸ್ಟೆಂಟ್ ಮತದ ಒಂದು ವೈಖರಿಯೆಂದು ಜನಗಳ ಮನಸ್ಸಿಗೆ ಬಂದಿತ್ತು. ಆದರೆ ಮೇರಿಯ ಕೈಗೆ ಸಿಕ್ಕಿ ದಹಿಸಿಹೋದ ಈ ಮಹಾವ್ಯಕ್ತಿಗಳಿಂದ ಪ್ರಾಟೆಸ್ಟೆಂಟ್ ಮತಕ್ಕೆ ಕಳೆಯೇರಿ ಅದು ಹೆಚ್ಚು ಹೆಚ್ಚಾಗಿ ಪ್ರವರ್ಧಮಾನವಾಗಲು ಕಾರಣವಾಯಿತು. ಮೇರಿ ಮತ್ತು ಅವಳ ಸಲಹೆಗಾರರಾದ ಕಾರ್ಡಿನಲ್ ಪೋಲ್, ಮಠಾಧಿಪತಿ ಬೊನ್ನರ್ (Bonner) ಮತ್ತು ಸ್ಪೇನಿನ ಎರಡನೆ ಫಿಲಿಪ್ ಇವರುಗಳು ಊಹಿಸಿದಂತೆ ಪ್ರಾಟೆಸ್ಟೆಂಟ್ ಮತವು ಕ್ಷೀಣಿಸಲಿಲ್ಲ.

ಎರಡನೆ ಫಿಲಿಪ್ ಹೇಳಿದಂತೆ ಮೇರಿಯು ಫ್ರಾನ್ಸಿನ ವಿರುದ್ಧವಾಗಿ ಯುದ್ಧಮಾಡಿ ನೂರು ವರ್ಷಗಳ ಯುದ್ಧದ ಕೊನೆಯಲ್ಲಿ ಫ್ರಾನ್ಸಿನಲ್ಲಿ ಇಂಗ್ಲಿಷರಿಗೆ ಉಳಿದಿದ್ದ ಕೆಲೆ ಪಟ್ಟಣವನ್ನೂ ಕಳೆದುಕೊಂಡಳು. ಈ ಪಟ್ಟಣವನ್ನು ಹೊಂದಿದ್ದುದರಿಂದ ಇಂಗ್ಲೆಂಡಿಗೆ ಲಾಭವಿಲ್ಲದೆ ಇದ್ದಾಗ್ಯೂ ಅದು ಕೈಬಿಟ್ಟು ಹೋದುದು ಮೇರಿಗಾಗಲೀ ಮತ್ತು ಇಂಗ್ಲೆಂಡಿಗಾಗಲಿ ಸಹಿಸಲಾಗಲಿಲ್ಲ. ತನ್ನ ವಿವಾಹಿತ ಜೀವನ, ಮತ ಮತ್ತು ವಿದೇಶಾಂಗ ನೀತಿ

ಇವುಗಳೆಲ್ಲವೂ ನಿಷ್ಫಲಕಾರಿಯಾಯಿತೆಂದು ಅರಿತುಕೊಂಡ ಮೇರಿಯು ಹತಾಶಳಾಗಿ ಕ್ರಿ. ಶ. ೧೫೫೮ ರಲ್ಲಿ ಕಾಲವಾದಳು.

**ಎಲಿಸಬೆತ್** : ಕ್ರಿ. ಶ. ೧೫೫೮–೧೬೦೩ : ಮೇರಿಯ ನಂತರ ಪಟ್ಟಕ್ಕೆ ಬಂದ ಎಲಿಸಬೆತ್ ಕ್ರಿ. ಶ. ೧೫೩೩ ರಲ್ಲಿ ಹುಟ್ಟಿದಳು. ಪಟ್ಟಕ್ಕೆ ಬಂದಾಗ ಅವಳಿಗೆ ಇಪ್ಪತ್ತೈದು ವರ್ಷ ವಯಸ್ಸಾಗಿತ್ತು. ಅವಳು ಮೂರು ವರ್ಷದವಳಾಗಿದ್ದಾಗ ಅವಳ ತಾಯಿಯಾದ ಆನಿಬೋಲಿನ್ನಳು ಎಂಟನೆ ಹೆನ್ರಿಯ ಕೋಪಕ್ಕೆ ಸಿಕ್ಕಿ ಆಹುತಿಯಾಗಿದ್ದಳು. ತನ್ನ ತಂದೆ, ಸಹೋದರ ಮತ್ತು ಸಹೋದರಿ ಇವರುಗಳು ಅನುಸರಿಸಿದ ಮತೀಯ ಸುಧಾರಣೆಗಳನ್ನು ಅವಳು ಜಾಗರೂಕತೆಯಿಂದ ಪರಿಶೀಲಿಸಿದ್ದಳು. ಆರನೆ ಎಡ್ವರ್ಡನ ಕಾಲದಲ್ಲಿ ಅತಿ ಪ್ರಗತಿಗೆ ಬಂದಿದ್ದ ಪ್ರಾಟೆಸ್ಟೆಂಟ್ ಮತವಾಗಲಿ ಮತ್ತು ಮೇರಿಯ ಕಾಲದಲ್ಲಿ ಅತಿ ಉಚ್ಛ್ರಾಯ ಸ್ಥಿತಿಗೇರಿದ್ದ ರೋಮನ್ ಕ್ಯಾಥಲಿಕ್ ಮತವಾಗಲೀ ಇವಳಿಗೆ ರುಚಿಸಲಿಲ್ಲ. ಇವುಗಳಲ್ಲಿ ಒಂದು ಮಧ್ಯಮ ಮಾರ್ಗವನ್ನನುಸರಿಸಿ ಒಂದು ಮತೀಯ ತಹಬಂದಿಯನ್ನೇರ್ಪಡಿಸುವುದರ ಮೂಲಕ ಇಂಗ್ಲೆಂಡಿನಲ್ಲಿ ಮತೀಯ ಶಾಂತಿಯನ್ನು ಸ್ಥಾಪಿಸುವುದೇ ಅವಳ ಉದ್ದೇಶವಾಗಿತ್ತು. ಅವಳ ಸ್ವಂತ ಮತವಾವುದೆಂದು ಸರಿಯಾಗಿ ಹೇಳಲು ಸಾಧ್ಯವಿಲ್ಲ. ಬಹುಶಃ ಅವಳಿಗೆ ಮತದಲ್ಲಿ ಯಾವ ನಂಬಿಕೆಯೂ ಇರಲಿಲ್ಲವೆಂದು ಕಾಣುತ್ತದೆ. ಆದರೆ ಪ್ರಾಟೆಸ್ಟೆಂಟ್ ಮತಕ್ಕೆ ಅವಳ ಪ್ರಜೆಗಳು ಹೆಚ್ಚಾಗಿ ಸೇರಿದ್ದರಿಂದ ಅವಳು ಅದನ್ನೇ ಅನುಸರಿಸ ಬೇಕಾಯಿತು. ಅದೂ ಅಲ್ಲದೆ ಅವಳು ಪಟ್ಟಕ್ಕೆ ಬರಲು ಪ್ರಾಟೆಸ್ಟೆಂಟ್ ಮತವೆ ಕಾರಣವೆಂದು ಹೇಳಬಹುದು. ಅವಳ ತಂದೆಯಾದ ಎಂಟನೆ ಹೆನ್ರಿ ಮತ್ತು ಆನಿಬೋಲಿನ್ ಇವರ ವಿವಾಹವು ಯಾವ ರೋಮನ್ ಕ್ಯಾಥಲಿಕ್ಕ ರಿಂದಲೂ ಧಾರ್ಮಿಕವೆಂದಾಗಲೀ ಮತ್ತು ಕಾನೂನು ಬದ್ಧವೆಂದಾಗಲಿ ಪರಿಗಣಿಸಲ್ಪಟ್ಟಿರಲಿಲ್ಲ. ಇದಕ್ಕಾಗಿ ಅವಳು ಇಂಗ್ಲಿಷ್ ಚರ್ಚಿನ ಮೇಲೆ ಪೋಪಿಗಿದ್ದ ಸಾರ್ವಭೌಮತ್ವವನ್ನು ತೆಗೆದುಹಾಕಬೇಕೆಂದು ನಿರ್ಧರಿಸಿದಳು. ಕ್ರಿ. ಶ. ೧೫೫೯ ರಲ್ಲಿ ಜಾರಿಗೆ ಬಂದಿದ್ದ ಪೋಪಿನ ಸಾರ್ವಭೌಮತ್ವವನ್ನು ರದ್ದುಗೊಳಿಸಿದಳು.

ಎಲಿಸಬೆತ್ತಿನ ಮತೀಯ ನೀತಿಯಲ್ಲಿ ಹೊಸದೇನೂ ಇಲ್ಲ. ಅದು ಮಧ್ಯಮತರದ ನೀತಿಯೆಂದು (Via-media) ಹೇಳಬಹುದು. ಮಹಾ ಮಠಾಧಿಪತಿಯಾಗಿದ್ದ ಪೋಲ್, ಮೇರಿಯು ಮರಣ ಹೊಂದಿದ ದಿನವೇ ಕಾಲವಾಗಿದ್ದನು. ಖಾಲಿಯಾದ ಅವನ ಜಾಗಕ್ಕೆ ಎಲಿಸಬೆತ್ ಮ್ಯಾಥ್ಯೂ ಪಾರ್ಕರ್ (Mathew Parker) ಎಂಬುವನನ್ನು ನಿಯಮಿಸಿದಳು. ಅವನು ಪ್ರಾಟೆಸ್ಟೆಂಟ್ ಮತದಲ್ಲಿ ಹೆಚ್ಚು ಆಸಕ್ತಿಯನ್ನು ತೋರದೆ ಇದ್ದುದರಿಂದ, ಲಾಟಿಮರ್ ಮತ್ತು ರಿಡ್ಲಿ ಮೊದಲಾದವರಂತೆ ಮೇರಿಯ ಕೋಪಕ್ಕೆ ಸಿಲುಕದೆ ಉಳಿದುಕೊಂಡಿದ್ದನು. ಇವನಿಗೆ ರಾಜತ್ವದಲ್ಲಿ ನಂಬಿಕೆಯಿತ್ತು. ಎಲಿಸಬೆತ್ತಳಿಗೆ ಇಂತಹವನು ಮಹಾಮಠಾಧಿಪತಿಯಾಗಲು ಸಿಕ್ಕಿದುದು ಅದೃಷ್ಟವೇ ಸರಿ.

ಎಲಿಸಬೆತ್ತಳ ಕಾಲದಲ್ಲಿ ಇಂಗ್ಲೆಂಡಿನಲ್ಲಿ ಮೂರು ಮುಖ್ಯ ಮತೀಯ ಗುಂಪುಗಳಿದ್ದುವೆಂದು ಹೇಳಬಹುದು : (೧) ರೋಮನ್ ಕ್ಯಾಥಲಿಕ್, (೨) ಪ್ರಾಟೆಸ್ಟೆಂಟ್, (೩) ಪ್ಯೂರಿಟನ್. ಈ ಮೂರು ಪಂಗಡಗಳನ್ನೂ ಇಂಗ್ಲಿಷ್ ಚರ್ಚಿನ ಒಳಗೆ ಬರುವಂತೆ ಮಾಡುವುದು ಎಲಿಸಬೆತ್ತಿನ ಮತೀಯ ನೀತಿಯ ಗುರಿಯಾಗಿತ್ತು. ಆದರೆ ಅದು ಸಫಲವಾಗಲಿಲ್ಲ. ಒಂದು ವಿಧದಲ್ಲಿ ಅವಳ ಮತೀಯ ವ್ಯವಸ್ಥೆಯು ಅಷ್ಟೇನೂ ಅಪ್ರಯೋಜನಕಾರಿಯಾಗಲಿಲ್ಲವೆಂದು ಹೇಳಬಹುದು. ಸುಮಾರು ನೂರು ವರ್ಷಗಳ ಕಾಲ ಅದು ಇಂಗ್ಲೆಂಡಿನಲ್ಲಿ ಮತೀಯ ಶಾಂತಿಯನ್ನು ತಂದಿತು. ಫ್ರಾನ್ಸ್, ಜರ್ಮನಿ, ನೆದರ್‌ಲ್ಯಾಂಡ್ಸ್ ಮೊದಲಾದ ದೇಶಗಳಲ್ಲಿ ನೂರು ವರ್ಷಗಳಲ್ಲಿ ಅಂತಃಕಲಹಗಳ ಪರಿಣಾಮವಾಗಿ ರಕ್ತದ ಪ್ರವಾಹವೇ ಹರಿಯಿತು. ಇಂಗ್ಲೆಂಡಿನಲ್ಲಿ ಎಲಿಸಬೆತ್ ಮಾಡಿದ ಮತೀಯ ವ್ಯವಸ್ಥೆಯು (ಆಂಗ್ಲಿಕನ್ ಪದ್ಧತಿ), ಕ್ರಿ.ಶ. ೧೬೮೮ ರಲ್ಲಿ ಎರಡನೇ ಜೇಮ್ಸ್‌ನ ಅವಿವೇಕದ ಆಳ್ವಿಕೆಯ ಫಲವಾಗಿ ಜರುಗಿದ ಕ್ರಾಂತಿಯಾದ ತರುವಾಯ, ಪುನಃ ಆಚರಣೆಗೆ ಬಂದಿತು. ಇಂಗ್ಲೆಂಡ್ ದೇಶವು ಡಚ್ ಮತ್ತು ಜರ್ಮನ್ ಜನಾಂಗಗಳಿಗೆ ಸೇರಿದ ರಾಜರುಗಳಿಂದ ಆಳಲ್ಪಡುವುದನ್ನು ಸಹಿಸೀತೇ ವಿನಃ ಎಲಿಜಬೆತ್ ಏರ್ಪಡಿಸಿದ ಮತೀಯ ವ್ಯವಸ್ಥೆಯನ್ನು ಅದು ತ್ಯಜಿಸಲು ಸಿದ್ಧವಾಗಿರಲಿಲ್ಲ.

ರೋಮನ್ ಕ್ಯಾಥಲಿಕರಿಗೆ ಒಪ್ಪುವಂತೆ, ಅವಳು ತನ್ನ ತಂದೆಯಂತೆ ತಾನು ಇಂಗ್ಲಿಷ್ ಚರ್ಚಿನ ಸಾರ್ವಭೌಮಳೆಂದು (Supreme Head of the Church) ಹೇಳಿಕೊಳ್ಳದೆ, ಚರ್ಚಿನ ಮುಖ್ಯ ಗೌರ್ನರ್ ಎಂದು ಹೇಳಿಕೊಂಡಳು. ಆದರೆ, ರೋಮನ್ ಕ್ಯಾಥಲಿಕ್ ಪಂಗಡವು ಅವಳ ಆಳ್ವಿಕೆಯನ್ನೇ ಕೊನೆಗಾಣಿಸಲು ಉದ್ಯುಕ್ತವಾಯಿತು. ಕೊನೆಕೊನೆಗೆ ಎಲಿಸಬೆತ್ತಳ ಪ್ರಾಣವನ್ನೇ ತೆಗೆಯಲು ಅನೇಕ ಒಳಸಂಚುಗಳು, ಪಿತೂರಿಗಳು ನಡೆದುವು. ಇವುಗಳಲ್ಲಿ ರಿಡಾಲ್ಫಿ (Ridolfi) ಮತ್ತು ಬೆಬಿಂಗ್‌ಟನ್ (Babington) ಇವರುಗಳ ಪಿತೂರಿ ಮುಖ್ಯವಾದುವು. ಕ್ಯಾಥಲಿಕ್ ಮತವನ್ನು ಪುನರುಜ್ಜೀವನಗೊಳಿಸುವುದರಲ್ಲಿ ಬದ್ಧಕಂಕಣರಾಗಿದ್ದ ಜೆಸೂಟರು ಯೂರೋಪಿನಿಂದ ಇಂಗ್ಲೆಂಡಿಗೆ ಬಂದು ಈ ಪಿತೂರಿಗಳಲ್ಲಿ ಮುಖ್ಯ ಪಾತ್ರವನ್ನು ವಹಿಸುತ್ತಿದ್ದರು. ಕ್ಯಾಥಲಿಕರು ಸ್ಕಾಟ್ಲೆಂಡಿನ ರಾಣಿಯಾದ ಮೇರಿಯನ್ನು ಪಟ್ಟಕ್ಕೆ ತರಬೇಕೆಂದು ಆಸೆಯುಳ್ಳವರಾಗಿದ್ದರು. ಅವರಿಗೆ ಅತ್ಯಂತ ಪ್ರಬಲವಾದ ಕ್ಯಾಥಲಿಕ್ ರಾಜ್ಯವಾಗಿದ್ದ ಸ್ಪೈನ್ ಗುಟ್ಟಾಗಿ ಸಹಾಯ ನೀಡುತ್ತಿತ್ತು. ಎಲಿಸಬೆತ್ ಸ್ಪೈನಿಗೆ ಪ್ರತೀಕಾರವನ್ನು ಮಾಡಲು ತಾನೂ ರಹಸ್ಯವಾಗಿಯೇ ಸ್ಪೈನಿನ ಅಧೀನದಲ್ಲಿದ್ದು, ಪ್ರಾಟೆಸ್ಟೆಂಟ್ ಮತಕ್ಕೆ ಸೇರಿ, ಸ್ಪೈನಿನ ರಾಜನಾದ ಎರಡನೆ ಫಿಲಿಪ್‌ನ ವಿರುದ್ಧವಾಗಿ ದಂಗೆಯೆದ್ದಿದ್ದ ನೆದರ್‌ಲ್ಯಾಂಡ್ಸ್ ದೇಶಕ್ಕೆ ಸಹಾಯವನ್ನು ಮಾಡುತ್ತಿದ್ದಳು.

ರೋಮನ್ ಕ್ಯಾಥಲಿಕರಂತೆ ಪ್ಯೂರಿಟನ್ ಪಂಗಡಕ್ಕೆ ಸೇರಿದವರು ಶತ್ರುಗಳ ಜೊತೆಗೆ ಸೇರಿ ದೇಶದ್ರೋಹವನ್ನೆಣಿಸುತ್ತಿರಲಿಲ್ಲ. ಅವರು ಹೆಚ್ಚಾಗಿ ದೇಶಪ್ರೇಮದಿಂದ ಕೂಡಿದ್ದವರೆಂದು ಹೇಳಬಹುದು. ಎಲಿಸಬೆತ್ತಳು ಸ್ಪೈನಿನ ಪ್ರಾಬಲ್ಯವು ಅತಿ ಹೆಚ್ಚಾಗದಂತೆ ತಡೆಯಲು ಫ್ರಾನ್ಸಿನ ರಾಜನನ್ನು ಮದುವೆಯಾಗುವವಳಂತೆ ನಟಿಸುತ್ತಿದ್ದಾಗ ಒಬ್ಬ ಪ್ಯೂರಿಟನ್ ಇದನ್ನು ಖಂಡಿಸಿ ಬರೆದನು. ಇದರ ಫಲವಾಗಿ ಸರ್ಕಾರವು ಅವನ ಬಲಗೈಯನ್ನು ಕತ್ತರಿಸುವಂತೆ ಆಜ್ಞೆ ಮಾಡಿತು. ರಕ್ತದಿಂದ ಕೂಡಿದ ಮೊಂಡುಗೈಯನ್ನು ಎತ್ತಿ ಅವನು "ಎಲಿಸಬೆತ್ ರಾಣಿಯು ಚಿರಕಾಲ ಬಾಳಲಿ" ಎಂದು ಹೇಳಿದನು. ಆದಾಗ್ಯೂ ಅವರು ಎಲಿಸಬೆತ್

ಏರ್ಪಡಿಸಿದ ಮತೀಯ ವ್ಯವಸ್ಥೆಯನ್ನು ಅಂಗೀಕರಿಸಲು ಇಷ್ಟವುಳ್ಳವರಾಗಿರಲಿಲ್ಲ. ಅವರಿಗೆ ಚರ್ಚಿನ ಆಡಳಿತವು ಮಠಾಧಿಪತಿಗಳಿಂದ (Bishops) ನಡೆಸಲ್ಪಡುತ್ತಿದ್ದುದೂ ಮತ್ತು ಆರನೆ ಎಡ್ವರ್ಡನ ಕಾಲದ ಎರಡನೆ ಪ್ರಾರ್ಥನಾ ಪುಸ್ತಕವನ್ನೇ ತನ್ನ ರಾಜ್ಯದ ಎಲ್ಲಾ ಚರ್ಚುಗಳಲ್ಲಿಯೂ ಉಪಯೋಗಿಸಬೇಕೆಂಬ 'ಯೂನಿಫಾರ್ಮಿಟಿ' ಕಾನೂನೂ (Act of Uniformity) ಸರಿಬೀಳಲಿಲ್ಲ. ಇವು ಪ್ರಾಟೆಸ್ಟೆಂಟ್ ಪಂಗಡದವರಿಗೆ ಮಾತ್ರ ತೃಪ್ತಿಕರವಾಗಿದ್ದುವು. ಪಾರ್ಕರನ ನಂತರ ಮಹಾಮಠಾಧಿಪತಿಯಾಗಿ ಬಂದ ಗ್ರಿಂಡಲ್ (Grindal) ಪ್ಯೂರಿಟನ್ನರ ಪಕ್ಷಪಾತಿಯಾಗಿದ್ದನು. ಆದರೆ ಅವನ ಕಾಲಾನಂತರ ಎಲಿಸಬೆತ್ತಳು ತನಗೆ ಅನುಕೂಲವಾದ ವ್ಹಿಟ್‌ಗಿಫ್ಟ್ (Whitgift) ನನ್ನು ಮಹಾ ಮಠಾಧಿಪತಿಯನ್ನಾಗಿ ನೇಮಿಸಿಕೊಂಡಳು. ಮತೀಯ ವಿಚಾರದಲ್ಲಿ ಅವನಿಗೆ ಸಹಾಯಮಾಡಲು ' ಹೈಕಮಿಷನ್ ಕೋರ್ಟ್' ಎಂಬ ವಿಚಾರಣಾಲಯವನ್ನು ಸ್ಥಾಪಿಸಿದಳು. ಎಲಿಸಬೆತ್ತಳ ಕಾಲದಲ್ಲಿ ಪ್ಯೂರಿಟನ್ನರು ಅಷ್ಟು ಪ್ರಬಲರಾಗಿರಲಿಲ್ಲ. ಎಲಿಸಬೆತ್ತಳ ನಂತರ ಬಂದ ಸ್ಟುವರ್ಟ್ ರಾಜರುಗಳ ಆಳ್ವಿಕೆಯು ಬರುವ ವೇಳೆಗೆ ಅವರು ಅತಿ ಪ್ರಾಬಲ್ಯಕ್ಕೆ ಬಂದರು. ಇವರು ಒಂದನೆ ಚಾರ್ಲ್ಸ್‌ನ ಕಾಲದಲ್ಲಿ ಇಂಗ್ಲೆಂಡಿನಲ್ಲಿ ಯುದ್ಧವನ್ನೇ ಪ್ರಾರಂಭಿಸಿದರು.

**ಎಲಿಸಬೆತ್ ಮತ್ತು ಸ್ಕಾಟ್ಲೆಂಡ್** : ಏಳನೆ ಹೆನ್ರಿಯು ಸ್ಕಾಟ್ಲೆಂಡಿನ ಸ್ನೇಹವನ್ನು ಸಂಪಾದಿಸಲು ಅದರ ರಾಜನಾದ ನಾಲ್ಕನೆ ಜೇಮ್ಸ್ ಎಂಬುವನಿಗೆ ತನ್ನ ಮಗಳಾದ ಮಾರ್ಗರೇಟಳನ್ನು ಮದುವೆಮಾಡಿದ್ದನಷ್ಟೆ. ಆದರೆ ಅದು ಫಲಿಸಲಿಲ್ಲ. ಎಂಟನೆ ಹೆನ್ರಿಯ ಕಾಲದಲ್ಲಿ ಇಂಗ್ಲೆಂಡಿಗೂ ಮತ್ತು ಸ್ಕಾಟ್ಲೆಂಡಿಗೂ ನಡೆದ ಫ್ಲಾಡನ್ ಕದನದಲ್ಲಿ ನಾಲ್ಕನೆ ಜೇಮ್ಸ್ ಮಡಿದನು. ಅವನ ಮಗ ಐದನೆ ಜೇಮ್ಸ್ ಪಟ್ಟಕ್ಕೆ ಬಂದನು. ಎಂಟನೆ ಹೆನ್ರಿಯ ಕಾಲದಲ್ಲೆ ಕ್ರಿ. ಶ. ೧೫೪೨ ರಲ್ಲಿ ಇಂಗ್ಲೆಂಡಿಗೂ ಸ್ಕಾಟ್ಲೆಂಡಿಗೂ ಸಾಲ್ವೆಮಾಸ್ ಎಂಬಲ್ಲಿ ಮತ್ತೊಂದು ಕದನವು ನಡೆಯಿತು. ಐದನೆ ಜೇಮ್ಸ್ ಅದು ಜರುಗಿದ ಕೆಲವು ದಿನಗಳಲ್ಲೇ ಕಾಲವಾದನು. ಅವನ ಮಗಳಾದ ಸ್ಕಾಟರ ರಾಣಿ ಮೇರಿಯು ಚಿಕ್ಕಮಗುವಾಗಿದ್ದಾಗಲೇ ಪಟ್ಟಕ್ಕೆ

ಬರಬೇಕಾಯಿತು. ಅವಳನ್ನು ಆರನೆ ಎಡ್ವರ್ಡನಿಗೆ ಮದುವೆಮಾಡಿಸ ಬೇಕೆಂದು ಸಾಮರ್‌ಸೆಟ್ ಪ್ರಯತ್ನಪಟ್ಟನು. ಇದಕ್ಕಾಗಿ ಪಿಂಕಿ ಕದನವು ನಡೆದು ಸ್ಕಾಟರು ರಾಣಿಯಾದ ಮೇರಿಯನ್ನು ಫ್ರೆಂಚ್‌ರಾಜಕುಮಾರ ನಿಗೆ ಮದುವೆಮಾಡಿಕೊಡಲು ಫ್ರಾನ್ಸಿಗೆ ಕಳುಹಿಸಿದರು.

ಜಾನ್ ಕಾಲ್‌ವಿನ್ನನ ಶಿಷ್ಯನಾದ ಜಾನ್ ನಾಕ್ಸ್ (John Knox) ಎಂಬುವನು ಸ್ಕಾಟ್ಲೆಂಡಿನಲ್ಲಿ "ಪ್ಯೂರಿಟನ್" ಮತವನ್ನು ಹರಡಿದ್ದನು. ಅದು ಸ್ಕಾಟ್ಲೆಂಡಿನಲ್ಲಿ ಬಹಳ ಬೇಗ ಅಭಿವೃದ್ಧಿಯನ್ನು ಹೊಂದಿತು. ಸ್ಕಾಟ್ಲೆಂಡಿನ ಶ್ರೀಮಂತರು ಮಠಗಳ ಆಸ್ತಿಯನ್ನು ಕೊಳ್ಳೆಹೊಡೆದರು. ಮತೀಯ ಮತ್ತು ಧಾರ್ಮಿಕ ವಿಷಯಗಳೆಲ್ಲವನ್ನೂ "ಕಿರ್ಕ್" (Kirk) ಎಂಬ ಚುನಾಯಿತವಾದ ಹಿರಿಯರ ಸಭೆಯೇ ನಿರ್ವಹಿಸಲು ಪ್ರಾರಂಭ ವಾಯಿತು. ಆದರೆ ಸರ್ಕಾರವು ಫ್ರೆಂಚರ ವಶದಲ್ಲಿತ್ತು.

ಸ್ಕಾಟ್ಲೆಂಡಿನಲ್ಲಿ ಪ್ರೆಸ್ಬಿಟೇರಿಯನ್ (ಪ್ಯೂರಿಟನ್) ಮತದ ಅನುಯಾಯಿಗಳಿಗೂ ಮತ್ತು ಫ್ರೆಂಚರ ಅಧೀನಕ್ಕೊಳಗಾದ ಸರ್ಕಾರಕ್ಕೂ ಯುದ್ಧ ಪ್ರಾರಂಭವಾಯಿತು. ಸ್ಕಾಟ್ಲೆಂಡಿನ ಈ ಮುಖಂಡರು ಎಲಿಸಬೆತ್‌ಳ ಸಹಾಯವನ್ನು ಕೇಳಿದರು. ಇಂಗ್ಲೆಂಡಿನ ಸಹಾಯದಿಂದ ಇವರು ಫ್ರೆಂಚ ರನ್ನು ಸೋಲಿಸಿ ಕ್ರಿ. ಶ. ೧೫೬೦ ರಲ್ಲಿ ಎಡಿನ್‌ಬರೋ ಕರಾರನ್ನು ಮಾಡಿ ಕೊಂಡರು. ಇದರಿಂದ ಫ್ರೆಂಚರು ಸ್ಕಾಟ್ಲೆಂಡನ್ನು ಬಿಟ್ಟು ಹೊರಡ ಬೇಕಾಯಿತು. ಸಹಾಯಕ್ಕೆ ಬಂದಿದ್ದ ಇಂಗ್ಲಿಷ್ ಸೈನ್ಯವೂ ಸ್ಕಾಟ್ಲೆಂಡನ್ನು ಬಿಟ್ಟು ವಾಪಸ್ ಹೋದುದರಿಂದ ಸ್ಕಾಟ್ಲೆಂಡಿನ ಆಡಳಿತವು ಜಾನ್ ನಾಕ್ಸ್ ಮತ್ತು ಅವನ ಅನುಯಾಯಿಗಳಾದ 'ಲಾರ್ಡ್ಸ್ ಆಫ್ ದಿ ಕಾಂಗ್ರಿಗೇಷನ್' (Lords of the Congregation) ರವರ ಕೈಸೇರಿತು. ಹೀಗೆ ಇಂಗ್ಲೆಂಡಿಗೂ ಮತ್ತು ಸ್ಕಾಟ್ಲೆಂಡಿಗೂ ಸ್ನೇಹವು ಉಂಟಾಯಿತು. ಶತ ಮಾನಗಳಿಂದ ಇದ್ದ ಸ್ಕಾಟ್ಲೆಂಡ್ ಮತ್ತು ಫ್ರಾನ್ಸಿನ ಸ್ನೇಹವು ಮುರಿಯಿತು.

ಈ ಮಧ್ಯೆ ಫ್ರಾನ್ಸಿನ ರಾಣಿಯಾಗಿದ್ದ, ಅತ್ಯಂತ ಸೌಂದರ್ಯ ವತಿಯಾದ ಮೇರಿಯು ತನ್ನ ಹತ್ತೊಂಭತ್ತನೇ ವಯಸ್ಸಿನಲ್ಲೇ ವಿಧವೆ ಯಾಗಿ ಕ್ರಿ. ಶ. ೧೫೬೧ ರಲ್ಲಿ ಸ್ಕಾಟ್ಲೆಂಡಿಗೆ ಹಿಂದಿರುಗಿದಳು. ಒಂಬತ್ತು ವರ್ಷಗಳಕಾಲ ಅವಳು ಸ್ಕಾಟ್ಲೆಂಡಿನಲ್ಲಿ ಹೆಸರಿಗೆಮಾತ್ರ ರಾಣಿಯಾಗಿದ್ದಳು.

ಕ್ರಿ. ಶ. ೧೫೬೫ ರಲ್ಲಿ ಅವಳು ಲಾರ್ಡ್ ಡಾರ್ನ್ಲೆ (Lord Darnley) ಎಂಬ ಸ್ಕಾಟ್ ಶ್ರೀಮಂತನನ್ನು ಮದುವೆಯಾದಳು. ಡಾರ್ನ್ಲೆಯು ಏಳನೆ ಹೆನ್ರಿಯ ಮಗಳಾದ ಮಾರ್ಗರೇಟ್‌ಳ ಮೊಮ್ಮಗನಾಗಿದ್ದುದರಿಂದ ಅವನಿಗೂ ಮತ್ತು ಮೇರಿಗೂ ಇಂಗ್ಲೆಂಡಿನ ಸಿಂಹಾಸನಕ್ಕೆ ಬರುವ ಹಕ್ಕು ಇತ್ತು.

**ಏಳನೇ ಹೆನ್ರಿ**




ಇಂಗ್ಲೆಂಡಿನ ಸಿಂಹಾಸನಕ್ಕೆ ಕ್ಯಾಥಲಿಕರು ಮೇರಿಯ ಹಕ್ಕನ್ನು ಸ್ಥಾಪಿಸಲು ಕಾತುರರಾಗಿದ್ದರು. ಇದರಿಂದ ಎಲಿಸಬೆತ್ತಳಿಗೂ ಮತ್ತು ಅವಳ ಮಂತ್ರಿಗಳಿಗೂ ಯೋಚನೆಗೆ ಪ್ರಾರಂಭವಾಯಿತು. ಮೇರಿಯು ಎಲಿಸಬೆತ್ತಳಂತೆ ದೂರಾಲೋಚನೆಯುಳ್ಳವಳಲ್ಲ. ಆದುದರಿಂದ ಅವಳು ಬಹು ಬೇಗ ಗೊಂದಲಕ್ಕೆ ಸಿಕ್ಕಿಕೊಂಡಳು. ಡಾರ್ನ್ಲೆಯು ಮೇರಿಯ ಸ್ನೇಹಿತರಲ್ಲಿ ಅಸೂಯೆಯುಳ್ಳವನಾಗಿದ್ದನು. ಅವಳೆದುರಿಗೆ ಅವಳ ಕಾರ್ಯದರ್ಶಿಯಾಗಿದ್ದ ಡೇವಿಡ್ ರಿಸಿಯೊ (David Rizzio) ಎಂಬುವನನ್ನು ಕೊಲ್ಲಿಸಿದನು. ಸ್ವಲ್ಪ ಕಾಲದಲ್ಲಿ ಡಾರ್ನ್ಲೆಯು ರೋಗಪೀಡಿತನಾಗಿ ಮಲಗಿದ್ದ ಮನೆಯೇ ಬಂದೂಕದ ಮದ್ದಿನಿಂದ ಸಿಡಿದುಹೋಯಿತು. ಮೇರಿಯೂ ಮತ್ತು ಅವಳ ಅನುರಾಗಕ್ಕೆ ಪಾತ್ರನಾಗಿದ್ದ ಬಾತ್ವೆಲ್ ಎಂಬ ಶ್ರೀಮಂತನೂ (Earl of Bothwell) ಈ ಕೊಲೆಯನ್ನು ಮಾಡಿದರೆಂಬ ಅಪಾದನೆಗೆ ಗುರಿಯಾದರು. ಇದು ಬಾತ್ವೆಲ್ಲನ ಕಡೆಯ ಒಬ್ಬ

ಮನುಷ್ಯನು ತಪ್ಪಿಸಿಕೊಂಡು ಓಡಿಹೋಗುವಾಗ ಅವನಲ್ಲಿದ್ದ "ಕ್ಯಾಸ್ಕೆಟ್ ಲೆಟರ್ಸ್"ಗಳಿಂದ ಊಹಿಸಲ್ಪಟ್ಟಿದೆ. "ಕ್ಯಾಸ್ಕೆಟ್ ಲೆಟರ್ಸ್" ನಲ್ಲಿ ಮೇರಿಯು ಬಾತ್ವೆಲ್ಲನಿಗೆ ಬರೆದ ಕಾಗದಗಳು ಇವೆಯೆಂದು ಹೇಳಲಾಗಿದೆ. ಲಾರ್ಡ್ ಆಕ್ಟನ್ (Lord Acton) ಹೇಳುವಂತೆ "ಕ್ಯಾಸ್ಕೆಟ್ ಲೆಟರ್ಸ್" ವಾಸ್ತವವಾಗಿ ಮೇರಿಯದಾಗಿದ್ದರೆ ಅವಳು ದೋಷಿ; ಸುಳ್ಳಾಗಿದ್ದರೆ ಅವಳು ನಿರ್ದೋಷಿ. ಇದರ ಸತ್ಯಾಂಶವು ಇನ್ನೂ ಚರಿತ್ರೆಗೆ ಗೊತ್ತಿಲ್ಲ.

ಕ್ರಿ. ಶ. ೧೫೬೭ ರಲ್ಲಿ ಮೇರಿಯು ಒಂದು ಅವಿವೇಕದ ಕೆಲಸವನ್ನು ಮಾಡಿದಳು. ಆ ವರ್ಷ ಮೇರಿ ಮತ್ತು ಬಾತ್ವೆಲ್ಲರ ಮದುವೆಯಾಯಿತು. ಸ್ಕಾಟ್ಲೆಂಡಿನ ಶ್ರೀಮಂತರು ದಂಗೆಯೆದ್ದು ಮೇರಿಯನ್ನು ಕಾರ್ಬೆರಿ ಹಿಲ್ (Carberry Hill) ಎಂಬಲ್ಲಿ ಸೋಲಿಸಿದರು. ಬಾತ್ವೆಲ್ ಪಲಾಯನ ಮಾಡಿದನು. ಮೇರಿಯು ಸೆರೆಸಿಕ್ಕಿ ಸಿಂಹಾಸನತ್ಯಾಗ ಮಾಡಬೇಕಾಯಿತು. ಅವಳ ಸಣ್ಣ ಮಗನಾದ ಆರನೇ ಜೇಮ್ಸ್‌ಗೆ ಪಟ್ಟಕಟ್ಟಲಾಯಿತು. ಮೇರಿಯು ಲಾಖ್‌ಲೆವೆನ್ (Lochleven) ಎಂಬ ಸೆರೆಯಿಂದ ತಪ್ಪಿಸಿಕೊಂಡು, ಮತ್ತೊಂದು ಯುದ್ಧದಲ್ಲಿ ಸೋತು, ಎಲಿಸಬೆತ್ತಳ ಆಶ್ರಯವನ್ನು ಹೊಂದಿದಳು. ಅಲ್ಲಿ ಹತ್ತೊಂಭತ್ತು ವರ್ಷಗಳ ಕಾಲ ಬಂಧನದಲ್ಲಿದ್ದಳು. ಮೇರಿಯು ಇಂಗ್ಲೆಂಡಿಗೆ ಬಂದಮೇಲೆ ಎಲಿಸಬೆತ್ತಳಿಗೆ ಅಪಾಯವು ಹೆಚ್ಚಾಯಿತು. ಮೇರಿಯನ್ನು ಪಟ್ಟಕ್ಕೆ ತರಲು ಕ್ಯಾಥಲಿಕರ ಒಳಸಂಚು ಹೆಚ್ಚಾಯಿತು. ಕ್ರಿ. ಶ. ೧೫೮೬ ರಲ್ಲಿ ಬೇಬಿಂಗ್‌ಟನ್ ಎಂಬುವನ ಪಿತೂರಿಯು ಎಲಿಸಬೆತ್ತಳ ಅಧಿಕಾರಿಯಾದ ವಾಲ್‌ಸಿಂಗ್‌ಹಾಮ್ (Walsingham) ಎಂಬುವನ ಜಾಣತನದಿಂದಲೂ ಮತ್ತು ಜಾಗರೂಕತೆಯಿಂದಲೂ ಬಯಲಿಗೆ ಬಂದಿತು. ಬೇಬಿಂಗ್‌ಟನ್ ಮೇರಿಗೆ ಬರೆದ ಕಾಗದ ಪತ್ರಗಳು ವಾಲ್‌ಸಿಂಗ್ ಹಾಮನ ಕೈಗೆ ಸಿಕ್ಕಿದವು. ಅವುಗಳ ನಕಲನ್ನು ಮಾಡಿಕೊಂಡು ಆ ಕಾಗದಗಳು ಯಾರಿಗೆ ಬರೆಯಲ್ಪಟ್ಟಿದ್ದವೋ ಅವರಿಗೆ ತಲಪುವಂತೆ ಮಾಡಿದನು. ಇಂತಹ ಕಾಗದವೊಂದರಲ್ಲಿ ಎಲಿಸಬೆತ್ತಳ ಪ್ರಾಣಹರಣವಾಗುವುದೆಂಬ ತಿಳುವಳಿಕೆಯು ಮೇರಿಯ ಅವಗಾಹನೆಗೆ ಬಂದಿತ್ತು. ಈ ಆಧಾರಗಳನ್ನೆಲ್ಲಾ ಇಟ್ಟುಕೊಂಡು ವಾಲ್ಸಿಂಗ್

ಹಾಮನು ಬೇಬಿಂಗ್‌ಟನ್ನನನ್ನೂ ಮತ್ತು ಅವನ ಸಹಾಯಕರನ್ನೂ ದಸ್ತಗಿರಿ ಮಾಡಿದನು. ಹದಿಮೂರು ಜನ ಪಿತೂರಿಗಾರರು ಮರಣದಂಡನೆಗೆ ಗುರಿಯಾದರು. ಮೇರಿಯನ್ನು ವಿಚಾರಣೆಗೆ ಗುರಿಪಡಿಸಲಾಯಿತು. ರಾಣಿಯಾದ ತನ್ನನ್ನು ವಿಚಾರಣೆಗೆ ಗುರಿಪಡಿಸಲು ಯಾವ ನ್ಯಾಯಾಸ್ಥಾನಕ್ಕೂ ಹಕ್ಕಿಲ್ಲವೆಂದೂ ಮತ್ತು ತಾನು ನಿರ್ದೋಷಿಯೆಂದೂ ಮೇರಿಯು ವಾದಿಸಿದಳು. ಕೊನೆಗೆ ಅವಳನ್ನು ತಪ್ಪಿತಸ್ಥಳೆಂದು ತೀರ್ಮಾನಿಸಲಾಯಿತು. ಪಾರ್ಲಿಮೆಂಟ್ ರಾಜದ್ರೋಹದ ತಪ್ಪಿಗಾಗಿ ಅವಳಿಗೆ ಮರಣದಂಡನೆಯನ್ನು ವಿಧಿಸಿತು. ಆದರೆ ಸ್ವಲ್ಪ ಕಾಲ ಎಲಿಸಬೆತ್ತಳು ಅದಕ್ಕೆ ಒಪ್ಪಿಗೆಯನ್ನು ಕೊಡಲು ಹಿಂಜರಿದಳು. ಕಟ್ಟಕಡೆಗೆ ಕ್ರಿ.ಶ. ೧೫೮೭ ನೇ ಫೆಬ್ರವರಿಯಲ್ಲಿ ಮೇರಿಯ ಶಿರಚ್ಛೇದನವಾಯಿತು. ಮೇರಿಯ ಜೀವನವು ಈ ದುರಂತದಲ್ಲಿ ಕೊನೆಗಂಡಿತು.

**ಎಲಿಸಬೆತ್ ಮತ್ತು ನೆದರ್‌ಲ್ಯಾಂಡ್ಸ್:** ಆಧುನಿಕ ಹಾಲೆಂಡ್ ಮತ್ತು ಬೆಲ್ಜಿಯಂ ದೇಶಗಳು ಸೇರಿ ನೆದರ್‌ಲ್ಯಾಂಡ್ಸ್ ದೇಶವಾಗಿತ್ತು. ಐದನೆ ಚಾರ್ಲ್ಸ್‌ನ ಆಧಿಪತ್ಯಕ್ಕೆ ಸೇರಿದ ಈ ದೇಶವು ಅವನ ಕಾಲದಲ್ಲಿ ಅಷ್ಟೇನೂ ತೊಂದರೆಗೀಡಾಗಿರಲಿಲ್ಲ. ಆದರೆ ಎರಡನೆ ಫಿಲಿಪ್ಪಿನ ಕಾಲದಲ್ಲಿ ನೆದರ್‌ಲ್ಯಾಂಡ್ಸ್ ದೇಶವು ಅತಿ ದಬ್ಬಾಳಿಕೆಗೆ ಸಿಲುಕಿತು. ಕ್ರಿ. ಶ. ೧೫೬೭ ರಲ್ಲಿ ಆಳ್ವ (Alva) ಎಂಬುವನು ನೆದರ್‌ಲ್ಯಾಂಡ್ಸಿನ ಮುಖ್ಯಾಧಿಕಾರಿಯಾಗಿ ನಿಯಮಿಸಲ್ಪಟ್ಟನು. ಅಲ್ಲಿ ಅವನು ಅನೇಕ ಪ್ರಾಟೆಸ್ಟೆಂಟರನ್ನು ಕೊಲ್ಲಿಸಲಾರಂಭಿಸಿದನು. ಇದನ್ನು ತಡೆಯಲಾರದೆ ಅನೇಕರು ಹಡಗುಗಳನ್ನು ಹತ್ತಿ, "ಸಮುದ್ರದ ಭಿಕ್ಷುಕ" ರೆಂಬ ಹೆಸರನ್ನು ಧರಿಸಿ, ಸ್ಪೇನಿನ ವ್ಯಾಪಾರವನ್ನು ಹಾಳುಮಾಡಲು ಉದ್ಯುಕ್ತರಾದರು. ಕ್ರಿ. ಶ. ೧೫೭೨ ರಲ್ಲಿ ಅವರು ಬ್ರಿಲ್ (Brille) ಎಂಬ ಊರನ್ನು ಹಿಡಿದುಕೊಂಡರು. ಉತ್ತರದ ಏಳು ಪ್ರದೇಶಗಳು ವಿಲಿಯಂ ಆಫ್ ಆರೆಂಜ್ (Wiliam of Orange) ಎಂಬುವನ ಮುಖಂಡತ್ವದಲ್ಲಿ ದಂಗೆಯೆದ್ದವು. ಈ ದಂಗೆಯನ್ನಡಗಿಸಲು ಎರಡನೆ ಫಿಲಿಪ್ಪನು ಪಾರ್ಮಾ (Parma) ಎಂಬುವನನ್ನು ಕಳುಹಿಸಿದನು. ಕ್ರಿ. ಶ. ೧೫೮೪ ರಲ್ಲಿ ಒಬ್ಬ ಸ್ಪೇನಿನ ಕೊಲೆಪಾತಕನ ಚಾಕುವಿನಿಂದ ವಿಲಿಯಂ ಆಫ್ ಆರೇಂಜ್

ಕೊಲ್ಲಲ್ಪಟ್ಟನು. ಕ್ಯಾಲ್‌ವಿನ್ ಬೋಧಿಸಿದ ಮತವನ್ನು ಅನುಸರಿಸಿದ ಹಾಲೆಂಡ್ ದೇಶವು ಸ್ಪೇನಿನ ವಿರುದ್ಧವಾಗಿ ಸಹಾಯ ಮಾಡುವಂತೆ ಇಂಗ್ಲೆಂಡನ್ನು ಕೇಳಿತು. ಎಲಿಸಬೆತ್ ಸ್ವಲ್ಪಕಾಲ ರಹಸ್ಯವಾಗಿಯೂ, ವಿಲಿಯಂ ಆಫ್ ಆರೇಂಜ್ ಕೊಲೆಯಾದ ಮೇಲೆ ಬಹಿರಂಗವಾಗಿಯೂ ಡಚ್ಚರಿಗೆ ಸಹಾಯ ನೀಡಿದಳು. ಒಂದು ಇಂಗ್ಲಿಷ್ ಸೈನ್ಯವು ಲೆಸ್ಟರ್ ಶ್ರೀಮಂತನ (Earl of Leicester) ನಾಯಕತ್ವದಲ್ಲಿ ಸ್ಪೇನಿನ ಸೈನಿಕರನ್ನು ಜಟ್‌ಫನ್ (Zutphen) ಎಂಬಲ್ಲಿ ಎದುರಿಸಿತು. ಈ ಕದನದಲ್ಲಿ ಸರ್ ಫಿಲಿಪ್ ಸಿಡ್ನಿಯು ಮಡಿದನು.

**ಎಲಿಸಬೆತ್ ಮತ್ತು ಸ್ಪೇನ್**: ಇಂಗ್ಲೆಂಡಿಗೆ ಮುತ್ತಿಗೆ ಹಾಕಲು ಸ್ಪೇನಿನ ಸೈನ್ಯವು ಎರಡನೆ ಫಿಲಿಪ್ಪನಿಂದ ಕಳುಹಿಸಲ್ಪಡುವ ವೇಳೆಗೆ ಎಲಿಸಬೆತ್ತಳು ಮೂವತ್ತು ವರ್ಷಗಳ ಕಾಲ ತನ್ನ ಆಳ್ವಿಕೆಯನ್ನು ನಡೆಸಿದ್ದಳು. ಎರಡನೆ ಫಿಲಿಪ್ಪನಿಗೆ ಇಂಗ್ಲೆಂಡಿನ ಮೇಲೆ ಧಾಳಿ ನಡೆಸಲು ಇಷ್ಟು ದೀರ್ಘ ಕಾಲ ತೆಗೆದುಕೊಳ್ಳಲು ಅನೇಕ ಕಾರಣಗಳಿದ್ದುವು. ಬಹಿರಂಗವಾಗಿ ಇಂಗ್ಲೆಂಡಿನ ಮೇಲೆ ಧಾಳಿ ಮಾಡಲು ಸ್ಪಾನಿಷ್ ಸೈನ್ಯವು (Spanish Armada) ಕಳುಹಿಸಲ್ಪಡುವುದಕ್ಕಿಂತ ಮುಂಚೆಯೇ, ರಹಸ್ಯವಾಗಿ ಇಂಗ್ಲೆಂಡ್ ಮತ್ತು ಸ್ಪೇನ್ ಪರಸ್ಪರ ವಿರುದ್ಧವಾದ ಚಟುವಟಿಕೆಗಳನ್ನು ನಡೆಸುತ್ತಿದ್ದುವು. ಸ್ಪೇನ್ ಇಂಗ್ಲೆಂಡಿನಲ್ಲಿ ಪಿತೂರಿ ನಡೆಸಲು ಅನೇಕ ಜೆಸೂಟರನ್ನು ಕಳುಹಿಸುತ್ತಿತ್ತು. ಇದಕ್ಕೆ ಪ್ರತೀಕಾರವಾಗಿ ಇಂಗ್ಲೆಂಡ್ ಸಮುದ್ರದ ಮೇಲೆಯೂ ಮತ್ತು ಸ್ಪೇನಿಗೆ ಸೇರಿದ ಕೆಲವು ಪಟ್ಟಣಗಳ ಮೇಲೆಯೂ ಧಾಳಿ ಮಾಡಿ, ಅವುಗಳಲ್ಲಿದ್ದ ಐಶ್ವರ್ಯವನ್ನು ಕೊಳ್ಳೆಹೊಡೆಯುತ್ತಿತ್ತು. ಸರ್ ಫ್ರಾನ್ಸಿಸ್ ಡ್ರೇಕ್ (Sir Francis Drake) ಎಂಬುವನು ಕ್ರಿ. ಶ. ೧೫೮೫ ರಲ್ಲಿ ವೆಸ್ಟ್ ಇಂಡೀಸ್ ದ್ವೀಪಗಳಲ್ಲಿ ಮಾಡಿದ ಕೊಳ್ಳೆ ಅತಿ ಮುಖ್ಯವಾದದ್ದು. ಎಲಿಸಬೆತ್ತಳು ಸ್ಪೇನಿನ ವಿರುದ್ಧವಾಗಿ ದಂಗೆ ಎದ್ದಿದ್ದ ಹಾಲೆಂಡಿನ ಜನರಿಗೆ ನೀಡಿದ ಸಹಾಯ ಫಿಲಿಪ್ಪನ ಕೋಪವನ್ನು ಕೆರಳಿಸಿತ್ತು. ಇದೂ ಅಲ್ಲದೆ, ಇಂಗ್ಲೆಂಡಿನ ಮೇಲೆ ಧರ್ಮಯುದ್ಧ (Crusade) ಮಾಡಬೇಕೆಂದು ಪೋಪ್ ಫಿಲಿಪ್ಪನನ್ನು ಒತ್ತಾಯಪಡಿಸುತ್ತಿದ್ದನು.

ಆದರೆ ಸ್ಕಾಟ್ಲೆಂಡಿನ ರಾಣಿ ಮೇರಿಯ ಪತನವಾದಮೇಲೆ ಫಿಲಿಪ್ಪನು ಇಂಗ್ಲೆಂಡಿನ ಮೇಲೆ ಯುದ್ಧಮಾಡಲು ನಿರ್ಧರಿಸಿದನು. ಈ ಯುದ್ಧಕ್ಕಾಗಿ ಸನ್ನಾಹಗಳು ಪ್ರಾರಂಭವಾದುವು. ಸ್ಪೇನಿನ ಮುಖ್ಯಪಟ್ಟಣವಾದ ಕೇಡಿಜ್ (Cadiz) ಎಂಬಲ್ಲಿ ಇಂಗ್ಲೆಂಡಿಗೆ ಮುತ್ತಿಗೆ ಹಾಕುವ ಹಡಗು ಮೊದಲಾದುವುಗಳನ್ನು ಕಟ್ಟುತ್ತಿದ್ದಾಗ್ಗೆ ಡ್ರೇಕನು ಅಲ್ಲಿಗೆ ನುಗ್ಗಿ ಅನೇಕ ಅನಾಹುತಗಳನ್ನು ನಡೆಸಿದನು. ಹೀಗೆ ಅವನು "ಸ್ಪೇನಿನ ರಾಜನ ಗಡ್ಡವನ್ನು" ಸೀದನು. (Singed the King of Spain's beard). ಸ್ಪೇನಿಗೆ ಇನ್ನೂ ಅನೇಕ ಕಷ್ಟಗಳು ಒದಗಿದವು. ಸ್ಪೇನಿನ ನೌಕಾದಳವನ್ನು ನಿರ್ವಹಿಸಲು ನೇಮಿಸಲ್ಪಟ್ಟಿದ್ದ ದಕ್ಷನಾದ ನೌಕಾಧಿಪತಿಯು ಕಾಲವಾದನು. ಅವನ ಬದಲು ಸಮುದ್ರದ ಪ್ರಯಾಣವನ್ನೇ ಅರಿಯದ ಮತ್ತು ಮೊದಲಿನಿಂದಲೂ ಸ್ಪೇನಿನ ಈ ಉದ್ಯಮವು ಯಶಸ್ವಿಯಾಗಲಾರದೆಂದು ನಂಬಿದ್ದ ಡ್ಯೂಕ್ ಆಫ್ ಮೆಡಿನ ಸಿಡೋನಿಯ (Duke of Medına Sidonia) ಎಂಬುವನನ್ನು ಫಿಲಿಪ್ ಮುಖ್ಯಾಧಿಕಾರಿಯನ್ನಾಗಿ ನೇಮಿಸಿದನು.

ನೆದರ್‌ಲ್ಯಾಂಡ್ಸಿನಲ್ಲಿದ್ದ ಮೂವತ್ತು ಸಾವಿರ ಸೈನಿಕರನ್ನು, ಆಗಿನ ಕಾಲದಲ್ಲಿ ಅತ್ಯಂತ ಶೂರನಾದ ಡ್ಯೂಕ್ ಆಫ್ ಪಾರ್ಮ (Duke of-Parma) ಎಂಬುವನು ಇಂಗ್ಲೆಂಡನ್ನು ಜಯಿಸುವ ಸಲುವಾಗಿ ತರಪೇತು ಮಾಡಿದ್ದನು. ಆಗಿನ ಕಾಲದಲ್ಲಿ ಸ್ಪೇನಿನ ಕಾಲಾಳು ಬಲವೆಂದರೆ (Infantry) ಅತ್ಯಂತ ದಕ್ಷವಾದುದು. ಈ ಸೈನ್ಯವನ್ನು ಸಾಗಿಸಲು ಮತ್ತು ಅದರ ರಕ್ಷಣೆಯನ್ನು ನಿರ್ವಹಿಸಲು ಫಿಲಿಪ್ಪನು ಒಂದು ದೊಡ್ಡ ನೌಕಾ ಬಲವನ್ನು ತಯಾರಿಸಿದನು. ಇದೇ "ಸ್ಪಾನಿಷ್ ಆರ್ಮೆಡ" (Spanish Armada). ಒಂದು ನೂರ ಮೂವತ್ತು ಹಡಗುಗಳು ಇದರಲ್ಲಿದ್ದುವು. ಆದರೆ ಅವುಗಳಲ್ಲಿದ್ದ ಫಿರಂಗಿಗಳು ಸಣ್ಣವಾಗಿದ್ದುವಲ್ಲದೆ ಹಡಗಿನಲ್ಲಿ ಸರಿಯಾದ ಜಾಗಗಳಲ್ಲಿ ಅವುಗಳು ಇಡಲ್ಪಟ್ಟಿರಲಿಲ್ಲ. ಈ ಹಡಗುಗಳಲ್ಲಿದ್ದ ಸೈನಿಕರು ಕೈ ಕೈ ಯುದ್ಧದಲ್ಲಿ (Hand to Hand-Fight) ನಿಸ್ಸೀಮರು.

"ಸ್ಪಾನಿಷ್ ಆರ್ಮೆಡ" ಇಂಗ್ಲೆಂಡನ್ನು ಮುತ್ತಲು ಬರುತ್ತಿರು

ವುದನ್ನು ಕೇಳಿ ಇಂಗ್ಲೆಂಡಿನ ಜನರಲ್ಲಿ ಹೆಚ್ಚಾಗಿ ಗಾಬರಿಯುಂಟಾಯಿತು. ಆದರೆ ಇಂಗ್ಲಿಷ್ ನೌಕಾಬಲವು ಇಂಗ್ಲೆಂಡಿನ ರಕ್ಷಣೆಗಾಗಿ ಎಲ್ಲಾ ಸಿದ್ಧತೆಯನ್ನೂ ಮಾಡಿಕೊಂಡಿತ್ತು. ಇಂಗ್ಲಿಷ್ ನೌಕೆಗಳು ಸ್ಪೇನಿನ ನೌಕೆಗಳಿಗಿಂತ ಬಹು ಚಿಕ್ಕದಾಗಿದ್ದುದ್ದರಿಂದ ಅವುಗಳ ಚಲನ ವಲನಗಳು ಅತ್ಯಂತ ವೇಗದಿಂದ ಕೂಡಿದ್ದುವು. ಅದೂ ಅಲ್ಲವೆ ಅವುಗಳ ಫಿರಂಗಿಗಳು ದೊಡ್ಡವಾಗಿಯೂ ಅತ್ಯಂತ ದಕ್ಷತೆಯಿಂದಲೂ ಇದ್ದುವು. ಸುಮಾರು ಇಂತಹ ೩೪ ಹಡಗುಗಳು ರಾಣಿಯಾದ ಎಲಿಸಬೆತ್ತಳ ವಶದಲ್ಲಿದ್ದುವು. ಇನ್ನುಳಿದುವು ವರ್ತಕರಿಗೆ ಸೇರಿದ್ದರೂ, ಅವೂ ಇದೇ ಮಾದರಿಯಾಗಿದ್ದವು. ಗುಂಡುಹಾರಿಸುವುದು ಅತ್ಯಂತ ಯಶಸ್ವಿಯಾಗುವಂತೆ ಅವುಗಳನ್ನು ಹಡಗಿನ ಅನುಕೂಲವಾದ ಭಾಗಗಳಲ್ಲಿ ಜಾನ್ ಹಾಕಿನ್ಸ್ (John-Hawkins) ಎಂಬುವನ ಮೇಲ್ವಿಚಾರಣೆಯಲ್ಲಿ ಇಡಿಸಲಾಗಿತ್ತು. ಇಂಗ್ಲಿಷ್ ನೌಕಾಬಲವು ಸಮುದ್ರಯುದ್ಧದಲ್ಲಿ ದಕ್ಷತೆಯನ್ನು ಸಂಪಾದಿಸುವಂತೆ ಅನೇಕ ಸುಧಾರಣೆಗಳನ್ನು ಎಂಟನೆ ಹೆನ್ರಿಯು ಆಗಲೇ ಕೈಗೊಂಡಿದ್ದನು. ಇದರಿಂದ ಇಂಗ್ಲೆಂಡಿಗೆ ಈ ಸಮಯದಲ್ಲಿ ಹೆಚ್ಚು ಉಪಕಾರವಾಯಿತು. ಇಂಗ್ಲಿಷ್ ನೌಕಾಬಲದಲ್ಲಿ ಇದ್ದವರೆಲ್ಲರೂ ಸ್ಪೇನಿನ ಹಡಗುಗಳಿಲ್ಲಿದ್ದವರಂತೆ ಸೈನಿಕರಾಗಿರಲಿಲ್ಲ. ಅವರೆಲ್ಲರೂ ನುರಿತ ನಾವಿಕರು (Sailors). ಇಂಗ್ಲಿಷ್‌ರ ಕಡೆ ಮುಖ್ಯಾಧಿಕಾರಿಯಾಗಿದ್ದ ಲಾರ್ಡ್ ಹವರ್ಡ್ ಆಫ್ ಎಫಿಂಗ್ ಹಾಮ್ (Lord Howard of-Effingham) ಎಂಬುವನು ಶ್ರೀಮಂತನಾಗಿದ್ದರೂ ಅವನಿಗೆ ಸಹಾಯ ಮಾಡಲು, ಸಮುದ್ರಯಾನದಲ್ಲಿ ನುರಿತ, ಮತ್ತು ಐಶ್ವರ್ಯದಿಂದ ತುಂಬಿದ್ದ ಸ್ಪೇನಿನ ಹಡಗುಗಳನ್ನು ಆಗಾಗ್ಗೆ ಕೊಳ್ಳೆ ಹೊಡೆಯುತ್ತಿದ್ದ ಡ್ರೇಕ್, ಹಾಕಿನ್ಸ್, ಫ್ರಾಬಿಷರ್ ಮೊದಲಾದವರು ಇದ್ದರು.

ಸ್ಪಾನಿಷ್ ಆರ್ಮೆಡವು ಕ್ರಿ. ಶ. ೧೫೮೮ ನೇ ಜುಲೈ ೨೦ ರಲ್ಲಿ ಇಂಗ್ಲಿಷ್ ಕಡಲ್ಗಾಲುವೆಯನ್ನು ಪ್ರವೇಶಿಸಿತು. ಅಲ್ಲಿ ಶತ್ರುಗಳಾರೂ ಇಲ್ಲದಿದ್ದುದನ್ನು ಕಂಡು ಇವರಿಗೆ ಆಶ್ಚರ್ಯವಾಯಿತು. ಮಾರನೆದಿನ ಬೆಳಗ್ಗೆ ಪ್ಲಿಮತ್ (Plymouth) ಹತ್ತಿರ ಅರವತ್ತು ಇಂಗ್ಲಿಷ್ ನೌಕೆಗಳು ಗುಂಡುಹಾರಿಸಲು ಪ್ರಾರಂಭಿಸಿದುವು. ಸ್ಪೇನಿನ ಹಡಗುಗಳು

ಇದಕ್ಕೆ ಉತ್ತರ ಕೊಡುವ ಸ್ಥಿತಿಯಲ್ಲಿರಲಿಲ್ಲ. ಏಕೆಂದರೆ ಅಷ್ಟುದೂರ ಅವರ ಫಿರಂಗಿಗಳು ಗುಂಡುಹಾರಿಸುವ ಶಕ್ತಿಯನ್ನು ಹೊಂದಿರಲಿಲ್ಲ. ಇದಲ್ಲದೆ ಕೆಲೆಯ ಹತ್ತಿರ ಸ್ಪೇನಿನ ನೌಕೆಗಳು ಪಾರ್ಮನ ಸೈನಿಕರಿಗಾಗಿ ಕಾಯುತ್ತಿರುವಾಗಲೇ ಡ್ರೇಕ್ ಕೆಲವು ಬೆಂಕಿಯ ಹಡಗುಗಳನ್ನು (fire-ships) ಸ್ಪೇನಿನ ನೌಕೆಗಳ ಮಧ್ಯೆ ಹೋಗುವಂತೆ ಮಾಡಿದ್ದನು. ಇದರಿಂದ ಅವರ ಅನೇಕ ಹಡಗುಗಳು ಸುಟ್ಟುಹೋದವು ಮತ್ತು ಇನ್ನುಳಿದುವು ಸಮುದ್ರದ ಮೇಲೆ ಚಲ್ಲಾಪಿಲ್ಲಿಯಾಗಿ ಹೋದುವು. ಇದೇ ಸಮಯ ಕಾಯುತ್ತಿದ್ದ ಇಂಗ್ಲಿಷ್ ಹಡಗುಗಳು ಗ್ರೇವ್‌ಲೈನ್ಸ್ (Gravelines) ಎಂಬಲ್ಲಿ ಸ್ಪೇನಿನ ಹಡಗುಗಳನ್ನೂ, ಸೈನಿಕರನ್ನೂ ನಾಶಮಾಡಿದವು. ಇಂಗ್ಲಿಷರಿಗೆ ಅನುಕೂಲವಾಗಿ ಗಾಳಿಯೂ ಸಹಾಯ ಮಾಡಿತು. ಸೋತು, ಧೈರ್ಯಗುಂದಿದ ಮೆಡಿನ ಸಿಡೋನಿಯ ಅಳಿದುಳಿದ ಹಡಗುಗಳೊಂದಿಗೆ ಸ್ಕಾಟ್ಲೆಂಡನ್ನು ಸುತ್ತಿಕೊಂಡು ಕ್ಯಾಥಲಿಕ್ ದೇಶವಾದ ಐರ್ಲೆಂಡಿಗೆ ಹೋಗಬೇಕೆಂದು ನಿಶ್ಚಯಿಸಿದನು. ಆದರೆ ಅಸಾಧ್ಯವಾದ ಬಿರುಗಾಳಿಯೊಂದು ಎದ್ದು ಮೊದಲೇ ಶಿಥಿಲವಾಗಿ ಕಂಗೆಟ್ಟಿದ್ದ ಸ್ಪೇನಿನ ಹಡಗುಗಳನ್ನು ನೀರುಪಾಲು ಮಾಡಿತು. ಅನೇಕ ಸೈನಿಕರು ಸಾವಿಗೀಡಾದರು. ೧೩೦ ಹಡಗುಗಳಲ್ಲಿ ೫೦ ಮಾತ್ರ ಐರ್ಲೆಂಡನ್ನು ಬಳಸಿಕೊಂಡು ಸ್ಪೇನನ್ನು ತಲಪಿದುವು. ಫಿಲಿಪ್ ಹಿಂದಿರುಗಿದವರನ್ನು ಬರಮಾಡಿಕೊಂಡು "ನಾನು ನಿಮ್ಮನ್ನು ಮನುಷ್ಯರ ಜೊತೆಯಲ್ಲಿ ಯುದ್ಧಕ್ಕೆ ಕಳುಹಿಸಿದ್ದು, ಪ್ರಕೃತಿಯೊಂದಿಗಲ್ಲ" ಎಂದು ಹೇಳಿ ಸಮಾಧಾನಮಾಡಿದನು.

ಇಂಗ್ಲೆಂಡಿನಲ್ಲಿದ್ದ ರೋಮನ್ ಕ್ಯಾಥಲಿಕರು ರಾಣಿಯ ವಿರುದ್ಧವಾಗಿ ದಂಗೆ ಎದ್ದು ಸ್ಪೇನಿನ ಸೈನ್ಯಕ್ಕೆ ಸಹಾಯ ಮಾಡುವರೆಂದು ಫಿಲಿಪ್ ನಂಬಿದ್ದನು. ಆದರೆ ಇಂಗ್ಲಿಷ್ ಕ್ಯಾಥಲಿಕರು ತಮ್ಮ ದೇಶವನ್ನೂ ಮತ್ತು ರಾಣಿಯನ್ನೂ ಬಿಟ್ಟುಕೊಡಲು ಸಿದ್ಧರಾಗಿರಲಿಲ್ಲ. ಅನೇಕ ಮಂದಿ ಕ್ಯಾಥಲಿಕರು ಈ ಸಮಯದಲ್ಲಿ ಎಲಿಸಬೆತ್ ರಾಣಿಯ ಹಡಗುಗಳಲ್ಲಿ ಕೆಲಸ ಮಾಡಲು ಸೇರಿಕೊಂಡಿದ್ದರು.

ಎಲಿಸಬೆತ್ ಆಳ್ವಿಕೆಯ ಕೊನೆಯವರೆಗೂ ಸ್ಪೇನಿಗೂ, ಇಂಗ್ಲೆಂಡಿಗೂ ಖಾಸಗಿಯಾಗಿ (Unofficial) ಸಮುದ್ರದ ಮೇಲೆ ಆಗಾಗ್ಗೆ ಘರ್ಷಣೆ

ಗಳು ನಡೆಯುತ್ತಲೇ ಇದ್ದುವು. ಸ್ಪೇನಿನ ಪರಾಜಯವು ಇಂಗ್ಲೆಂಡಿಗೆ ಒಂದು ಹೊಸ ಹುರುಪನ್ನು ತಂದಿತು. ಮೂವತ್ತು ವರ್ಷಗಳ ತನಕ




ಸ್ಪೇಯಿನಿನ ನೌಕಾಪಡೆಯ (ಆರ್ಮಡ) ಮಾರ್ಗ

ಇಂಗ್ಲೆಂಡು ಆಕ್ರಮಣದ ಭಯದಲ್ಲಿ ಸಿಲುಕಿತ್ತು. ಈಗ ಅದು ತಪ್ಪಿಹೋಗಿ

ಇಂಗ್ಲೆಂಡು ಉಸಿರಾಡುವಂತಾಯಿತು. ಪ್ರಾಟೆಸ್ಟೆಂಟ್ ಮತಕ್ಕೆ ಒದಗಿದ್ದ ಅಪಾಯವು ತಪ್ಪಿಹೋಯಿತು.

ಎಲಿಸಬೆತ್ತಳ ಆಳ್ವಿಕೆಯು ಕೌಂಟರ್ ರೆಫರ್ಮೇಷನ್ನಿಗೆ (ರೋಮನ್ ಕ್ಯಾಥಲಿಕ್ ಮತದ ಪುನರುಜ್ಜೀವನ) ವಿರುದ್ಧವಾದ ಮತ್ತು ದೀರ್ಘವಾದ ಒಂದು ಹೋರಾಟವೆಂದು (Struggle) ಹೇಳಬಹುದು. ಅದರಲ್ಲಿ ನಾಲ್ಕು ಹಂತಗಳಿವೆ: (೧) ಸ್ಕಾಟಿಷ್ ಹಂತ (೧೫೫೮–೬೮)—ಈ ಹಂತವು ಎಲಿಸಬೆತ್ತಳ ಆಳ್ವಿಕೆಯ ಮೊದಲನೆ ಹತ್ತು ವರ್ಷಗಳನ್ನೊಳಗೊಂಡಿದೆ. ಸ್ಕಾಟ್ಲೆಂಡಿನ ರಾಣಿಯಾದ ಮೇರಿಯು ಎಲಿಸಬೆತ್ತಳ ಆಶ್ರಯವನ್ನು ಪಡೆಯುವುದರೊಂದಿಗೆ ಈ ಹಂತವು ಕೊನೆಗಂಡಿತು. (೨) ಪಿತೂರಿಗಳ ಕಾಲ (೧೫೬೮–೮೭)—ಮೇರಿಯನ್ನು ಸೆರೆಯಿಂದ ಬಿಡಿಸಿ, ಅವಳನ್ನು ಇಂಗ್ಲೆಂಡಿನ ಪಟ್ಟಕ್ಕೆ ಬರುವಂತೆ ಮಾಡುವುದೇ ಎರಡನೇ ಹಂತದ ಗುರಿ. ಮೇರಿಯ ಶಿರಚ್ಛೇದನದಿಂದ ಇದು ಕೊನೆಗಂಡಿತು. (೩) ಸ್ಪಾನಿಷ್ ಆರ್ಮೆಡ (೧೫೮೮)—ಕೌಂಟರ್ ರೆಫರ್ಮೇಷನ್ನಿನ ಶಕ್ತಿಯೆಲ್ಲವೂ ಬಹಿರಂಗ ಯುದ್ಧದಲ್ಲಿ ಪ್ರದರ್ಶಿತವಾಯಿತು. ಆದರೆ ಅದು ವಿಫಲವಾಯಿತು. (೪) ಎಲಿಸಬೆತ್ತಳ ಕೊನೆಯ ದಿನಗಳು (೧೫೮೯–೧೬೦೩)—ಸ್ಪೇನಿನ ಜೊತೆಯಲ್ಲಿ ಯುದ್ಧ ಮುಂದುವರಿಯುತ್ತಲೇ ಇತ್ತು. ಇಂಗ್ಲೆಂಡಿನ ನೌಕಾ ಶಕ್ತಿಯು ಬೆಳೆಯಿತು. ಇಂಗ್ಲೆಂಡ್ ಸ್ಪೇನನ್ನು ಸೋಲಿಸಿ, ಜಯಗಳಿಸಿದ ಫಲವಾಗಿ ಮೂಡಿದ ಹೆಮ್ಮೆಯನ್ನು ಷೇಕ್ಸ್‌ಪಿಯರನು "ಕಿಂಗ್ ಜಾನ್" ಎಂಬ ನಾಟಕದ ಪಾತ್ರವಾದ "ಫಾಲ್‌ಕನ್‌ಬ್ರಿಡ್ಜ್"ನ ಬಾಯಲ್ಲಿ ಹೇಳಿಸಿದ್ದಾನೆ. ಇದರ ಫಲವಾಗಿ ವಸಾಹತುಗಳ ಸ್ಥಾಪನೆಯು ಪ್ರಾರಂಭವಾಯಿತು.

**ವಾಣಿಜ್ಯ ಮತ್ತು ವಸಾಹತುಗಳು** : ಎಲಿಸಬೆತ್ತಳ ಕಾಲದಲ್ಲಿ ಇಂಗ್ಲೆಂಡಿನ ವ್ಯಾಪಾರವು ಅಭಿವೃದ್ಧಿ ಹೊಂದಿತು. ಅನೇಕ ವಾಣಿಜ್ಯ ಕಂಪನಿಗಳು ಸ್ಥಾಪಿತವಾದುವು. ಟರ್ಕಿ ಕಂಪನಿ (೧೫೮೧), ನಂತರ ಹುಟ್ಟಿದ ಲೆವಾಂಟ್ ಕಂಪನಿ (೧೫೯೨) ಇವು ಮುಖ್ಯವಾದುವು. ಅನೇಕ ಹೊಸ ಹೊಸ ಮಾರ್ಗಗಳು ಕಂಡುಹಿಡಿಯಲ್ಪಟ್ಟುವು. ವಿಲ್ಲೋಬೈ (Willoughby) ಮತ್ತು ರಿಚರ್ಡ್ ಛಾನ್ಸೆಲರ್ (Richard


ಎಲಿಜಬೆತ್ ಕಾಲದ ನಾವಿಕರು
ಆರ್ಕೇಂಜಲ್
ಮ ಸ್ ಕೊ ವಿ
ಸ್ಪೈಯಿನ್
ಬೊಖಾರ
ಕಾತೇ
ಇಂಡಿಯಾ
ಗಿನಿ
ಪೋರ್ಚುಗೀಸರ ಚಕ್ರಾಧಿಪತ್ಯ
ಸ್ಪೈಸ್ ದ್ವೀ.
ವರ್ಜೀನಿಯಾ ೧೫೮೫-೭
ನೊಂಬ್ರೆ ಡಿ ಡಯಸ್
ಸ್ಪೈಯಿನಿನ ಚಕ್ರಾಧಿಪತ್ಯ
ಮೆಜಲಾನ್ ಜ
ಡ್ರೇಕನ ಪ್ರಪಂಚ ಪರ್ಯಟನ
ಗುಲಾಮರ ವ್ಯಾಪಾರದ ಮಾರ್ಗ (ಹಾಕಿನ್ಸ್)
ರಷ್ಯಾಕ್ಕೆ ಪ್ರಯಾಣ (ಛಾನ್ಸಲರ್, ಜೆಂಕಿನಸನ್)

Chancellor) ಎಂಬುವರು ರಷ್ಯದ ಕಡೆ ಮಾರ್ಗ ಹುಡುಕಲು ಪ್ರಯತ್ನಿಸಿದರು. ಛಾನ್ಸೆಲರ್ ಬಹಳ ಕಷ್ಟದಿಂದ ರಷ್ಯದ ಚಳಿಯನ್ನು ಎದುರಿಸಿ ಆರ್ಕೆಂಜಲ್ (Archangel) ಎಂಬ ಬಂದರನ್ನು ಸೇರಿದನು. ಇಂಗ್ಲೆಂಡಿಗೂ ರಷ್ಯಾಕ್ಕೂ ವ್ಯಾಪಾರವು ತೆರೆಯಿತು. ಮಸ್ಕೋವೈ (Muscovy) ಕಂಪನಿಯು (೧೫೫೩–೫೫) ಸ್ಥಾಪಿತವಾಯಿತು. ವಾಯುವ್ಯದ ಮಾರ್ಗವನ್ನು ಫ್ರಾಬಿಷರ್ (೧೫೭೬) ಪತ್ತೆಹಚ್ಚಿದನು. ಜೇಮ್ಸ್ ಲಂಕಾಸ್ಟರ್ ಎಂಬುವನು ಪ್ರಾಚ್ಯ ದೇಶಕ್ಕೆ (East) ಹೊರಟನು. ೧೬೦೦ ರಲ್ಲಿ ಈಸ್ಟ್ ಇಂಡಿಯಾ ಕಂಪನಿಯು ಪ್ರಾರಂಭವಾಯಿತು. ಲಂಕಾಸ್ಟರ್ ಜಾವಾ ದ್ವೀಪವನ್ನು ತಲಪಿ. ಅಲ್ಲಿಂದ ಮೆಣಸು ಮತ್ತು ಇತರ ಸಾಂಬಾರ ಪದಾರ್ಥಗಳೊಡನೆ ಹಿಂದಿರುಗಿದನು.

ಸರ್ ಹಂಫ್ರಿ ಗಿಲ್‌ಬರ್ಟನು ೧೫೮೩ರಲ್ಲಿ ನ್ಯೂಫೌಂಡ್‌ಲ್ಯಾಂಡನ್ನು ರಾಣಿಯ ಹೆಸರಿನಲ್ಲಿ ವಶಪಡಿಸಿಕೊಂಡನು. ಹಿಂದಿರುಗುವಾಗ "ಅಳಿಲು" ಎಂಬ ಅವನ ಹಡಗು ಮುಳುಗಿಹೋಯಿತು. ಸರ್ ರಿಚರ್ಡ್ ಗ್ರೆನ್‌ವಿಲ್ ಎಂಬುವನು ೧೫೮೫ ರಲ್ಲಿ ಉತ್ತರ ಅಮೆರಿಕವನ್ನು ತಲಪಿ, ಅಲ್ಲಿ ರಾಣಿಯ ಗೌರವಾರ್ಥವಾಗಿ 'ವರ್ಜೀನಿಯ' ಎಂಬ ವಸಾಹತನ್ನು ಸ್ಥಾಪಿಸಿದನು. ಆದರೆ ಈ ವಸಾಹತು ಎಲಿಸಬೆತ್ತಳ ಕಾಲದಲ್ಲಿ ಊರ್ಜಿತವಾಗಲಿಲ್ಲ. ಎಲಿಸಬೆತ್ತಳ ಕಾಲದಲ್ಲಿ ವಿಲಿಯಂ ಆಡಮ್ಸ್ (William Adams) ಜಪಾನನ್ನು ತಲಪಿದನು. ಜಪಾನಿನ ನೌಕಾಪಡೆಯನ್ನು ಕಟ್ಟಲು ಸಹಾಯ ಮಾಡಿದನು.

೧೫೭೭ ರಲ್ಲಿ ಸರ್ ಫ್ರಾನ್‌ಸಿಸ್ ಡ್ರೇಕ್ ದಕ್ಷಿಣ ಅಮೆರಿಕಾವನ್ನು ತನ್ನ ಹಡಗಾದ 'ಗೋಲ್ಡನ್ ಹಿಂಡ್ (Golden Hind) ನಲ್ಲಿ ತಲಪಿದನು. ಲಿಮ ಮತ್ತು ವಾಲ್‌ಪರೈಸೊ ಮೊದಲಾದುವುಗಳನ್ನು ಕೊಳ್ಳೆ ಹೊಡೆದು, ಪ್ರಪಂಚ ಪ್ರದಕ್ಷಿಣೆ ಮಾಡಿಕೊಂಡು, ೧೫೮೦ರಲ್ಲಿ ಇಂಗ್ಲೆಂಡಿಗೆ ಹಿಂದಿರುಗಿದನು.

ಒಳಾಡಳಿತ : ಎಂಟನೆ ಹೆನ್ರಿಯು ಬೆಳ್ಳಿನಾಣ್ಯಗಳಲ್ಲಿದ್ದ ಬೆಳ್ಳಿಯ ಪ್ರಮಾಣವನ್ನು ಕಡಿಮೆಮಾಡಿ, ಅದರ ಬದಲು ಬೇರೆ ಲೋಹಗಳನ್ನು ಸೇರಿಸಿ, (debasement of currency) ನಾಣ್ಯಗಳ ಬೆಲೆಯನ್ನು

ಇಳಿಸಿದ್ದನಷ್ಟು. ಇದರಿಂದ ಅನೇಕ ತೊಂದರೆಗಳುಂಟಾಗಿದ್ದುವು. ಎಲಿಸಬೆತ್ತಳು ಇದನ್ನು ನಿವಾರಿಸಲು ಈ ಪದ್ಧತಿಯನ್ನು ತೊಡೆದುಹಾಕಿದಳು.

ಕ್ರಿ. ಶ. ೧೫೬೩ ರಲ್ಲಿ "ಕಲಿಕೆಗಾರರ ಕಾನೂನೊಂದು" (Act of Apprentices) ಜಾರಿಗೆ ಬಂದಿತು. ಪ್ರತಿಯೊಬ್ಬನೂ ಯಾವುದಾದರೊಂದು ಉದ್ಯೋಗಕ್ಕೆ ನಿರ್ದಿಷ್ಟವಾದ ಕಾಲದಲ್ಲಿ ತರಪೇತನ್ನು ಹೊಂದದಿದ್ದರೆ ಅವನು ಯಾವ ಉದ್ಯೋಗವನ್ನೂ ಕೈಗೊಳ್ಳಲು ಅರ್ಹತೆಯಿಲ್ಲದೆ, ವ್ಯವಸಾಯದ ಕೂಲಿಗಾರನಾಗಬೇಕಾಗಿತ್ತು (Agricultural Labour). ಪ್ರತಿಯೊಂದು ಉದ್ಯೋಗದಲ್ಲಿಯೂ ಜಸ್ಟೀಸ್ ಆಫ್ ದಿ ಪೀಸ್ (Justice of the peace) ಕೂಲಿ ಮೊದಲಾದವುಗಳನ್ನು ನಿಷ್ಕರ್ಷೆಮಾಡುತ್ತಿದ್ದರು. ಕೈಗಾರಿಕೆಯ ಕ್ರಾಂತಿಯು (Industrial Revolution) ಕಾಲದವರೆಗೂ ಈ ಪದ್ಧತಿಯು ಬಳಕೆಯಲ್ಲಿತ್ತು.

ಕೆಲಸ ಮಾಡಲು ಇಷ್ಟವಿಲ್ಲದವರಿಗೂ, ಸಾಧ್ಯವಿಲ್ಲದವರಿಗೂ ಸರ್ಕಾರವು ಕ್ರಿ. ಶ. ೧೫೭೨ ರಲ್ಲಿ "ಬಡವರ ಕಾನೂನನ್ನು" (Poor Law) ತಂದಿತು. ಇದರಿಂದ ಸರ್ಕಾರವು ಅಂಥವರಿಗೆ ಸಹಾಯವನ್ನು ನೀಡುತ್ತಿತ್ತು. ಇದಕ್ಕೆ ಹಣವನ್ನು ಒದಗಿಸಲು ಪ್ರತಿ ಪ್ರಜೆಯೂ ಸ್ವಲ್ಪ ಹಣವನ್ನು ತೆರಬೇಕಾಗಿತ್ತು.

ಗ್ರೇಟ್‌ಬ್ರಿಟನ್ನಿನ ಚರಿತ್ರೆಯಲ್ಲಿಯೇ ಎಲಿಸಬೆತ್ತಳ ಆಳ್ವಿಕೆಯು ಅತಿ ಮುಖ್ಯವಾದುದು. ಅವಳು ಪಟ್ಟಕ್ಕೆ ಬಂದಾಗ ಇಂಗ್ಲೆಂಡಿನ ಸ್ಥಿತಿಯು ಅತಿ ಶೋಚನೀಯವಾಗಿತ್ತು. ಮತದ ತಿಕ್ಕಾಟ ಒಂದು ಕಡೆ, ಸ್ಪೇನ್ ಧಾಳಿ ಮಾಡುವುದೆಂಬ ಭಯ ಮತ್ತೊಂದು ಕಡೆ, ಅತೃಪ್ತಿಕರವಾದ ಆರ್ಥಿಕ ಸ್ಥಿತಿ ಇವೇ ಮೊದಲಾದವುಗಳಿಂದ ಇಂಗ್ಲೆಂಡ್ ತಲ್ಲಣಿಸಿಹೋಗಿತ್ತು. ರೋಮನ್ ಕ್ಯಾಥಲಿಕರು ಎಲಿಸಬೆತ್ತಳನ್ನು ಪಟ್ಟಕ್ಕೆ ಸರಿಯಾದ ಹಕ್ಕುದಾರಳಲ್ಲವೆಂದು ತಿರಸ್ಕರಿಸಿದ್ದರು. ಈ ಕಷ್ಟಗಳನ್ನೆಲ್ಲಾ ಎಲಿಸಬೆತ್ ಪರಿಹರಿಸಿ ಇಂಗ್ಲೆಂಡನ್ನು ಮಹತ್ವವಾದ ದೇಶವನ್ನಾಗಿ ಮಾಡಿದಳು. ಎಲಿಸಬೆತ್ತಳು ಮೇರಿ ಟ್ಯೂಡರಳಂತಾಗಲಿ ಅಥವಾ ಮೇರಿ ಸ್ಟುವರ್ಟಳಂತಾಗಲಿ ಸುಸಂಸ್ಕೃತವಾದ ಹೃದಯವನ್ನು

ಹೊಂದಿರಲಿಲ್ಲ. ಹಣವೆಂದರೆ ಇವಳಿಗೆ ಅತಿ ಆಸೆ. ಉಪಕಾರಮಾಡಿದವರನ್ನ ಕೈಬಿಡುವುದು ಇವಳ ಸ್ವಭಾವ. ಥಳುಕು ಮಾಡುವುದರಲ್ಲಿಯೂ. ಸುಳ್ಳು ಹೇಳುವುದರಲ್ಲಿಯೂ ಅವಳು ನಿಸ್ಸೀಮಳಾಗಿದ್ದಳು (A hardened flirt and a practised Liar). ಈ ದೋಷಗಳಿಂದ ಕೂಡಿದ ಆ ಹೆಂಗಸು ಇಂಗ್ಲೆಂಡಿನ ಪ್ರಖ್ಯಾತ ರಾಣಿಯಾದುದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಏಕೆಂದರೆ ತನ್ನ ಪ್ರಜೆಗಳಿಗೆ ಏನು ಬೇಕೆಂಬುದು ಅವಳಿಗೆ ಚೆನ್ನಾಗಿ ಗೊತ್ತಿತ್ತು. ದೇಶದ ಪ್ರಗತಿಯನ್ನು ಸಾಧಿಸುವುದು ರಾಣಿಯ ಗುರಿ ಎಂಬುದನ್ನು ಅವಳು ಮರೆತಿರಲಿಲ್ಲ. ರಾಜಕೀಯ ಸಮಸ್ಯೆಗಳನ್ನು ಎದುರಿಸುವುದಕ್ಕೆ ಬೇಕಾದ ಯೋಚನಾಶಕ್ತಿ, ಶಾಂತತೆ ಮತ್ತು ಚತುರತೆ ಇವಳಲ್ಲಿ ಇದ್ದುವು.

ಎಲ್ಲಾ ಟ್ಯೂಡರ್ ರಾಜರುಗಳಂತೆ ಎಲಿಸಬೆತ್ತಳು ಪಾರ್ಲಿಮೆಂಟನ್ನು ಸೇರಿಸಲು ಸಾಧ್ಯವಾದಷ್ಟು ಕಾಲ ತಳ್ಳುತ್ತಿದ್ದಳು. ಅವಳ ಆದಾಯವು ವರ್ಷಕ್ಕೆ ಸುಮಾರು ೨೦೦,೦೦೦ ಪೌಂಡುಗಳು. ಅವಳು ಹಣಕ್ಕಾಗಿ ಬೇರೆ ಉಪಾಯ ಹುಡುಕಬೇಕಾಗಿತ್ತು. ತನಗೆ ಬೇಕಾದವರಿಗೆ ಉಪ್ಪು ಮತ್ತು ಮದ್ಯಗಳನ್ನು ಮಾರುವ ಹಕ್ಕನ್ನು (monopoly) ಕೊಟ್ಟಿದ್ದರ ಫಲವಾಗಿ ಕ್ರಿ. ಶ. ೧೬೦೧ ರಲ್ಲಿ ಸೇರಿದ ಪಾರ್ಲಿಮೆಂಟ್ ತನ್ನ ಅಸಂತೋಷವನ್ನು ವ್ಯಕ್ತಪಡಿಸಿತು. ಉಪ್ಪಿನ ಬೆಲೆಯು ಹನ್ನೊಂದರಷ್ಟು ಏರಿತು. ಪಾರ್ಲಿಮೆಂಟಿನ ಸದಸ್ಯರು ಕೋಪಗೊಂಡಿದ್ದನ್ನು ಕಂಡು ಎಲಿಸಬೆತ್ತಳು ಈ ಪದ್ಧತಿಯನ್ನು ರದ್ದುಮಾಡಿದಳು. ಹೀಗೆ ಸಮಯ ಬಂದಂತೆ ಜಾರಿಕೊಳ್ಳುವ ಚತುರತೆಯು ಎಲಿಸಬೆತ್ತಳಿಗೆ ಇತ್ತು. ಆದರೆ ಅವಳ ನಂತರ ಬಂದ ರಾಜರು ಅವಳ ಸಾಮರ್ಥ್ಯವನ್ನಾಗಲಿ, ಚತುರತೆಯನ್ನಾಗಲಿ ಹೊಂದಿಲ್ಲದಿದ್ದುದರಿಂದ ಪಾರ್ಲಿಮೆಂಟಿನೊಂದಿಗೆ ವ್ಯೇಷಕಟ್ಟಿಕೊಂಡರು.

# ಟ್ಯೂಡರ್ ಕಾಲದ ಸಾಹಿತ್ಯ ಮತ್ತು ಕಲೆ

ಚಾಸರ್ ಕ್ರಿ. ಶ. ೧೪೦೦ ರಲ್ಲಿ ಕಾಲವಾದನು. ಯಾರ್ಕ್ ಮತ್ತು ಲಂಕಾಸ್ಟ್ರಿಯರ್ ಮನೆತನಗಳು ಇಂಗ್ಲೆಂಡಿನಲ್ಲಿ ಯುದ್ಧದಲ್ಲಿ ತೊಡಗಿದ್ದುದ್ದ ರಿಂದ ಸಾಹಿತ್ಯದ ಮತ್ತು ಕಲೆಯ ಬೆಳವಣಿಗೆಗೆ ಅಷ್ಟು ಅವಕಾಶ ಸಿಕ್ಕಲಿಲ್ಲ. ಆದರೆ ಟ್ಯೂಡರ್ ಕಾಲದಲ್ಲಿ ಇದರ ಬೆಳವಣಿಗೆಯು ಪ್ರಾರಂಭವಾಗಿ, ಅದು ಮುಗಿಯುವ ವೇಳೆಗೆ ಹೆಚ್ಚು ಪ್ರಗತಿಯನ್ನು ಹೊಂದಿತು.

ಆಕ್ಸ್‌ಫರ್ಡಿನಲ್ಲಿ ಸ್ವಲ್ಪಮಟ್ಟಿಗೆ ಗ್ರೀಕ್ ಸಾಹಿತ್ಯದ ವ್ಯಾಸಂಗಕ್ಕೆ ಪ್ರೋತ್ಸಾಹವಿದ್ದಿತಾದರೂ, ಗ್ರೀಕ್ ಸಾಹಿತ್ಯದ ತಿರುಳು ಜನಗಳಿಗೆ ಭಾಷಾಂತರಗಳಿಂದ ಗೊತ್ತಾಗಿತ್ತು. ಟ್ಯೂಡರ್ ಕಾಲದ ಸಾಹಿತಿಗಳು ಕೂಡ ಈ ಭಾಷಾಂತರಗಳನ್ನೇ ಉಪಯೋಗಿಸಿಕೊಂಡಿದ್ದರು. ಷೇಕ್ಸ್ ಪಿಯರನು ಬರೆದ ರೋಮನ್ ನಾಟಕಗಳು, ಪ್ಲುಟಾರ್ಕನ ಗ್ರಂಥಗಳನ್ನು ನಾರ್ತ್ ಎಂಬುವನು ಮಾಡಿದ ಭಾಷಾಂತರದ ಆಧಾರದ ಮೇಲೆ ರಚಿಸ ಲ್ಪಟ್ಟುವು. ಎಂಟನೆ ಹೆನ್ರಿಯ ಕಾಲಕ್ಕೆ ಸೇರಿದ ಸರ್ ಥಾಮಸ್ ಮೋರ್ ಬರೆದ ಉಟೋಪಿಯ (೧೫೧೬) ಒಂದು ಅತ್ಯುತ್ತಮ ಗ್ರಂಥ. ಇದು ಲಾಟಿನ್ ಭಾಷೆಯಲ್ಲಿದ್ದುದರಿಂದ ಯೂರೋಪಿನ ವಿದ್ಯಾವಂತರಿಗೆ ಮಾತ್ರ ಅರ್ಥವಾಗುತ್ತಿತ್ತು. ಗ್ರಂಥಕರ್ತನು ಮಡಿದ ೧೫ ವರ್ಷಗಳಾದ ಮೇಲೆ ಅದನ್ನು ಇಂಗ್ಲಿಷಿಗೆ ಭಾಷಾಂತರ ಮಾಡಲಾಯಿತು. ಈ ಗ್ರಂಥವು ಪ್ಲೇಟೋವಿನ ರಿಪಬ್ಲಿಕ್ ಅಂತಯೇ ಅನೇಕ ಕಲ್ಪನೆಗಳಿಂದ ಕೂಡಿದೆ. ಈ ಗ್ರಂಥದಲ್ಲಿ ಬರುವ ಸಮಾಜದಲ್ಲಿ ಬಡತನವಿಲ್ಲ; ಸೋಮಾರಿಗಳಾದ ಶ್ರೀಮಂತರಿಲ್ಲ. ಎಲ್ಲರಿಗೂ ವಿದ್ಯಾಭ್ಯಾಸದ ಸೌಕರ್ಯ, ಯಾರಿಗೂ ತಮ್ಮ ಮತಕ್ಕಾಗಿ ಶಿಕ್ಷೆ ವಿಧಿಸಲ್ಪಡದೆ ಇರುವುದು—ಈ ಸಮಾಜದಲ್ಲಿ ಚಿತ್ರಿತ ವಾಗಿವೆ. ಕ್ರಿ. ಶ. ೧೫೭೯ ರಲ್ಲಿ ಲೈಲಿ (Lyly) ಎಂಬುವನು ಯೂಫಸ್ (Euphues) ಎಂಬ ಗ್ರಂಥವನ್ನು ಬರೆದನು. ಇವನ ಶೈಲಿಯನ್ನು ಅನೇಕರು ಅನುಕರಣ ಮಾಡಿದರು. ಲೈಲಿಯು ಅತಿ ಅಲಂಕಾರ ಯುಕ್ತವಾದ ಶೈಲಿಯನ್ನು ಈ ಗ್ರಂಥದಲ್ಲಿ ಉಪಯೋಗಿಸಿದ್ದಾನೆ. ಒಂದು ಭಾವವನ್ನು ಹೇಳಲು ದೊಡ್ಡ ದೊಡ್ಡ ಶಬ್ದಗಳಿಂದ ಕೂಡಿದ ಪದ ಗಳನ್ನುಪಯೋಗಿಸುವುದು ಲೈಲಿಯ ವೈಶಿಷ್ಟ್ಯ. ಇದಕ್ಕೆ "ಯೂಫಿಸಂ"

ಎಂದು ಹೆಸರು (Euphuism). ಷೇಕ್ಸ್‌ಪಿಯರ್ ಇದನ್ನು ಹ್ಯಾಮ್‌ಲೆಟ್ಟಿನಲ್ಲಿ ಬರುವ ಆಸ್ರಿಕ್ (Osric) ಎಂಬುವನ ಬಾಯಲ್ಲಿ ಗೇಲಿ ಮಾಡಿಸಿದ್ದಾನೆ. ಆದರೆ ಅವನೂ ಈ ದೋಷದಿಂದ ಮುಕ್ತನಾಗಿಲ್ಲ. ಮ್ಯಾಕ್‌ಬೆತ್‌ನಲ್ಲಿ ಬರುವ ಬ್ಲೀಡಿಂಗ್ ಸಾರ್ಜೆಂಟ್ ಆಡುವ ಮಾತುಗಳಲ್ಲಿ ಇದನ್ನು ನಾವು ಕಾಣಬಹುದು. ಕ್ರಿ. ಶ. ೧೫೯೪ ರಲ್ಲಿ ಹೂಕರ್ (Hooker) ಎಂಬುವನು 'ಎಕ್ಲೀಸಿಯಾಸ್ಟಿಕಲ್ ಪಾಲಿಟಿ' (Ecclesiastical Polity) ಎಂಬ ಮತೀಯ ಗ್ರಂಥವನ್ನು ಬರೆದನು. ಕ್ರಿ. ಶ. ೧೫೯೭ ರಲ್ಲಿ ಫ್ರಾನ್‌ಸಿಸ್ ಬೇಕನ್ ತನ್ನ ಪ್ರಬಂಧಗಳನ್ನು ರಚಿಸಿದನು.

ಅನೇಕ ಪದ್ಯಗಳು ರಚಿತವಾದುವು. ಎಂಟನೆ ಹೆನ್ರಿಯ ಕಾಲದಲ್ಲಿ ಸರ್‌ಥಾಮಸ್ ವ್ಯಾಟ್ 'ಫರ್‌ಗೆಟ್ ನಾಟ್ ಎಟ್' (Forget not yet) ಎಂಬ ಪದ್ಯವನ್ನು ಬರೆದನು. ಸಟ್‌ಫನ್ ಕದನದಲ್ಲಿ ಮಡಿದ ಸರ್ ಫಿಲಿಪ್ ಸಿಡ್ನಿಯು ಕೆಲವು ಹತ್ತು ಮಾತ್ರೆಗಳುಳ್ಳ ಪದ್ಯಗಳನ್ನು (Sonnet) ರಚಿಸಿ, ಷೇಕ್ಸ್‌ಪಿಯರನಿಗೆ ಮೇಲ್ಪಂಕ್ತಿ ಹಾಕಿಕೊಟ್ಟನು. ಎಡ್ಮಂಡ್ ಸ್ಪೆನ್ಸರ್ ಎಂಬುವನು ಎಲಿಸಬೆತ್ ಕಾಲದ ದೊಡ್ಡ ಕವಿ. ಅವನು ಬರೆದ 'ಫೇರಿಕ್ವೀನ್, ಸ್ಪಾನಿಷ್ ಆರ್ಮೆಡ ಬಂದು ಹೋದ ಎರಡು ವರ್ಷದ ಮೇಲೆ ಪ್ರಕಟನೆಯಾಯಿತು.

ಅನೇಕ ನಾಟಕಗಳು ಈ ಕಾಲದಲ್ಲಿ ಹೊರಬಿದ್ದುವು. ಎಲಿಸಬೆತ್ತಳ ಕಾಲದಲ್ಲಿ ನಾಟಕವನ್ನು ನೋಡುವುದು ಜನಗಳಲ್ಲಿ ಹೆಚ್ಚು ಪ್ರಿಯವಾಯಿತು. ಅನೇಕ ನಾಟಕಶಾಲೆಗಳು ತಯಾರಾದುವು. ತನ್ನ ಹೆಸರನ್ನು ಕೊಡದ ಯಾವನೋ ಒಬ್ಬ ಬರಹಗಾರನು ಹೇಳುವಂತೆ ನಾಟಕಶಾಲೆಗಳು ಜನಗಳಿಂದ ತುಂಬಿದ್ದುವು; ಚರ್ಚುಗಳು ಖಾಲಿಯಾಗಿದ್ದುವು. ಇದು ಎಲಿಸಬೆತ್ತಳ ಕಾಲದಲ್ಲಿ, ಹುರುಪಿನಿಂದ ಮುಂದೋಡುತ್ತಿದ್ದ ನವಚೈತನ್ಯದ ಕುರುಹು ಎಂದರೆ ತಪ್ಪಲ್ಲ. ಕ್ರಿಸ್ಟಾಫರ್ ಮಾರ್ಲೋ (Christopher Marlowe) ಎಂಬುವನು ಡಾಕ್ಟರ್ ಫಾಸ್ಟಸ್ (Dr. Faustus) ಎಂಬ ಪದ್ಯಗ್ರಂಥವನ್ನು ಬರೆದನು. ಕವಿಸಾರ್ವಭೌಮನಾದ ಷೇಕ್ಸ್‌ಪಿಯರ್ ಇಂಗ್ಲಿಷ್ ಚರಿತ್ರೆಗೆ ಸಂಬಂಧಪಟ್ಟ ನಾಟಕಗಳನ್ನೂ, ಸುಖಾಂತ ನಾಟಕಗಳನ್ನೂ (Comedy) ಮತ್ತು

ಜೂಲಿಯಸ್ ಸೀಸರ್, ಮತ್ತು ಹ್ಯಾಮ್‌ಲೆಟ್ ನಾಟಕಗಳನ್ನೂ ಎಲಿಸಬೆತ್ತಳ ಕಾಲದಲ್ಲಿ ರಚಿಸಿದನು.

ಹಾಲ್‌ಬೀನ್ ಮತ್ತು ಡ್ಯೂರರ್ (Holbein & Durer) ಈ ಕಾಲದ ಪ್ರಖ್ಯಾತ ಚಿತ್ರಗಾರರಾಗಿದ್ದರು. ಸಂಗೀತ ಈ ಕಾಲದಲ್ಲಿ ಹೆಚ್ಚು ಅಭಿವೃದ್ಧಿಯಾಯಿತು. ಹೆಚ್ಚಾಗಿ ಬಾಯಿ ಹಾಡುಗಾರಿಕೆಗೆ (Vocal Music) ಪ್ರಾಶಸ್ತ್ಯವಿತ್ತು. ಷೇಕ್ಸ್‌ಪಿಯರಿನ ನಾಟಕಗಳಲ್ಲಿ ಸಂಗೀತದ ಮೇಲಿದ್ದ ಅಭಿಮಾನ ಎದ್ದು ಕಾಣುತ್ತದೆ. ಅವನ ಪಾತ್ರಗಳಲ್ಲಿ ಅನೇಕರು ಸಂಗೀತಪ್ರಿಯರು. ಆಗ ಇಂಗ್ಲೆಂಡ್ ಯೂರೋಪಿನಲ್ಲಿ ಸಂಗೀತದಲ್ಲಿ ಒಂದು ದೊಡ್ಡ ಸ್ಥಾನವನ್ನು ಗಳಿಸಿತ್ತು. ಟಾಲಿಸ್ (Tallis), ಬರ್ಡ್ (Byrd), ಆರ್ಲೆಂಡೊ ಗಿಬ್ಬನ್ಸ್ (Orlando-Gibbons) ಮೊದಲಾದವರು ಎಲಿಸಬೆತ್ತಳ ಕಾಲದ ಪ್ರಸಿದ್ಧಸಂಗೀತಗಾರರು.

## ಸ್ಟುವರ್ಟ್ ರಾಜರ ಕಾಲ (Stuart period) :
### ೧೬೦೩—೧೭೧೪

ಟ್ಯೂಡರ್ ರಾಜರ ಕಾಲದಲ್ಲಿ ಇಂಗ್ಲೆಂಡಿನ ಅಭಿವೃದ್ಧಿಯು ಹೆಚ್ಚು ಕಡಮೆ ಪಶ್ಚಿಮ ಯೂರೋಪಿನ ರಾಷ್ಟ್ರಗಳ ಸಂಪರ್ಕದೊಡನೆ ಬೆರೆತಿತ್ತೆಂದು ಹೇಳಬಹುದು. ನಿರಂಕುಶಪ್ರಭುತ್ವ, ನವಚೈತನ್ಯ, ಮತೀಯ ಸುಧಾರಣೆಗಳು, ಸಮುದ್ರದ ಮೇಲಿನ ವ್ಯಾಪಾರ ಮೊದಲಾದುವುಗಳು ಯೂರೋಪಿನ ಹಿನ್ನೆಲೆಯಿಂದ ಕೂಡಿದ್ದುವು. ಆದರೆ ಸ್ಟುವರ್ಟ್ ರಾಜರ ಕಾಲದಲ್ಲಿ (೧೭ ನೇ ಶತಮಾನ) ಇಂಗ್ಲೆಂಡಿನ ಬೆಳವಣಿಗೆಯು ಯೂರೋಪಿನ ಬೆಳವಣಿಗೆಯನ್ನು ಅನುಸರಿಸದೆ ತನ್ನದೇ ಆದ ಒಂದು ದಾರಿಯಲ್ಲಿ ನಡೆಯಿತು. ಇಂಗ್ಲೆಂಡಿನಲ್ಲಿ ಪಾರ್ಲಿಮೆಂಟಿನ ಹತೋಟಿಯಲ್ಲಿದ್ದ ಸರ್ಕಾರವು ಸ್ಥಾಪಿತವಾಯಿತು. ಆದರೆ ಯೂರೋಪಿನಲ್ಲಿ ನಿರಂಕುಶಪ್ರಭುತ್ವವು ಹೆಚ್ಚು ಹೆಚ್ಚು ಪ್ರಗತಿಯನ್ನು ಹೊಂದಿ, ಫ್ರಾನ್ಸಿನಲ್ಲಿ ಹದಿನಾಲ್ಕನೆ ಲೂಯಿಯ ಕೈಕೆಳಗೆ ಮುಗಿಲನ್ನು ಮುಟ್ಟಿತು. ಪ್ರಷ್ಯ (Prussia) ದಲ್ಲಿಯೂ ಕೂಡ ಇದೇ ಪರಿಸ್ಥಿತಿ ಒದಗಿತು.

ಇಂಗ್ಲೆಂಡಿನಲ್ಲಿ ಪ್ಯೂರಿಟನ್ ಮತವು ಈ ಕಾಲದಲ್ಲಿ ಹೆಚ್ಚು ಮುಂದುವರಿಯಿತು. ಪ್ಯೂರಿಟನ್ನರೇ ಒಂದನೆ ಚಾರ್ಲ್ಸ್‌ನ ಮೇಲೆ ಯುದ್ಧವನ್ನು ಹೂಡಿ, ತಮ್ಮ ಮತಕ್ಕೆ ಜಯವನ್ನೂ ಮತ್ತು ಪಾರ್ಲಿಮೆಂಟಿನ ಜಯವನ್ನೂ ಸಂಪಾದಿಸಿದರು. ಪಾರ್ಲಿಮೆಂಟಿನ ಜಯವು ಶಾಶ್ವತವಾಗಿ ನಿಂತಿತು. ಎರಡನೆ ಚಾರ್ಲ್ಸ್‌ನ ಪ್ರಭುತ್ವವಾದ ಮೇಲೆ ಪಾರ್ಲಿಮೆಂಟ್ ಆರಿಸಿದ ರಾಜರು ಇಂಗ್ಲೆಂಡಿನ ಪಟ್ಟಕ್ಕೆ ಬಂದರು. ಆದರೆ ಪ್ಯೂರಿಟನ್ ಮತದ ಪ್ರಗತಿಯು ಆಲಿವರ್ ಕ್ರಾಮ್‌ವೆಲ್ಲನ ನಿರಂಕುಶ ಪ್ರಭುತ್ವದಲ್ಲಿ ಕೊನೆಗಂಡಿತು.

ಸ್ಟುವರ್ಟ್ ರಾಜರ ಕಾಲವನ್ನು ಎರಡು ಭಾಗವನ್ನಾಗಿ ಮಾಡಬಹುದು. ಮೊದಲನೆಯದು ೧೬೦೩ ರಿಂದ ೧೬೬೦. ಒಂದನೆ ಜೇಮ್ಸ್, ಒಂದನೆ ಚಾರ್ಲ್ಸ್ ಮತ್ತು ಆಲಿವರ್ ಕ್ರಾಮ್‌ವೆಲ್ ಇವರ ಆಳ್ವಿಕೆಯನ್ನು ಇದರಲ್ಲಿ ಸೇರಿಸಬಹುದು, ಎರಡನೆಯದು ೧೬೬೦–೧೭೧೪. ಎರಡನೆ ಜೇಮ್ಸ್, ಮತ್ತು ೧೬೮೮ ನೇ ಕ್ರಾಂತಿಯಿಂದ ಇಂಗ್ಲೆಂಡಿನ ಸಿಂಹಾಸನಕ್ಕೆ ಬಂದ ವಿಲಿಯಂ ಮತ್ತು ಮೇರಿ ಇವರ ಆಳ್ವಿಕೆಯು ಇದರಲ್ಲಿ ಸೇರಿದೆ. ಮೊದಲನೆಯದರಲ್ಲಿ ವಿದೇಶೀಯ ಪ್ರಭಾವವು ತೀರ ಕಡಿಮೆ. ಯೂರೋಪಿನ ರಾಷ್ಟ್ರಗಳು ಆಗ (೧೬೧೮–೧೬೪೮) ಮೂವತ್ತು ವರ್ಷಗಳ ಮತೀಯ ಯುದ್ಧದಲ್ಲಿ ತೊಡಗಿದ್ದುವು. ಎರಡನೆಯದರಲ್ಲಿ ವಿದೇಶೀಯ ಪ್ರಭಾವವು ಹೆಚ್ಚು ವ್ಯಾಪಿಸಿತು. ಎರಡನೆ ಚಾರ್ಲ್ಸ್ ಮತ್ತು ಎರಡನೆ ಜೇಮ್ಸ್ ಫ್ರಾನ್ಸಿನ ಸಹಾಯಕ್ಕೆ ಮತ್ತು ಅದರ ಪ್ರಭಾವಕ್ಕೆ ಒಳಗಾಗಿದ್ದರು. ಪಾರ್ಲಿಮೆಂಟ್ ಹದಿನಾಲ್ಕನೆ ಲೂಯಿಯ ಪ್ರತಿಕಕ್ಷಿಯಾದ ಹಾಲೆಂಡಿನ ವಿಲಿಯಂ ಆಫ್ ಆರೆಂಜ್ ಎಂಬುವನ ಪ್ರಭಾವಕ್ಕೆ ಒಳಗಾಗಿತ್ತು. ಪ್ಯೂರಿಟನ್ನರ ಕ್ರಾಂತಿಯು ಇಂಗ್ಲೆಂಡಿನಲ್ಲಿ ಸ್ಥಳೀಯ ಪ್ರಾಮುಖ್ಯತೆಯನ್ನು (Local importance) ಹೊಂದಿದೆ ಎಂದು ಹೇಳಬಹುದು. ಆದರೆ ೧೬೮೮ ರ ಕ್ರಾಂತಿಯು ಯೂರೋಪಿಯನ್ ಚರಿತ್ರೆಯಲ್ಲೂ, ಮತ್ತು ಬ್ರಿಟನ್ನಿನ ಚರಿತ್ರೆಯಲ್ಲೂ ಮುಖ್ಯವಾದುದು. ಅದು ಹದಿನಾಲ್ಕನೆ ಲೂಯಿಯು ಪಶ್ಚಿಮ ಯೂರೋಪನ್ನು ತನ್ನ ಹತೋಟಿಯಲ್ಲಿಟ್ಟುಕೊಳ್ಳಲು ಮಾಡಿದ್ದ ಹಂಚಿಕೆಯನ್ನು ಮಣ್ಣುಗೂಡಿಸಿತು.

ಸ್ಟುವರ್ಟ್ ರಾಜರ ಆಳ್ವಿಕೆಯು ಪ್ರಾರಂಭವಾದಾಗ ಇಂಗ್ಲೆಂಡ್ ಮತ್ತು ಸ್ಕಾಟ್ಲೆಂಡಿನ ಕಿರೀಟಗಳು ಒಂದಾದುವು. ಅದು ಮುಗಿಯುವ ವೇಳೆಗೆ ಇಂಗ್ಲಿಷ್ ಮತ್ತು ಸ್ಕಾಟಿಷ್ ಪಾರ್ಲಿಮೆಂಟುಗಳು ಒಂದಾದುವು.

ವ್ಯಾಪಾರ ಮತ್ತು ವಸಾಹತುಗಳ ವಿಚಾರದಲ್ಲಿಯೂ ಈ ಕಾಲವು ಪ್ರಗತಿಯನ್ನು ಸಾಧಿಸಿತು. ಎಲಿಸಬೆತ್ತಳ ಕಾಲದಂತೆ ಸಮುದ್ರದ ಮೇಲೆ ಸಾಹಸ ಮತ್ತು ಶೌರ್ಯಗಳಿಂದ ಕೂಡಿದ್ದ ಕಾರ್ಯಗಳು ಜರುಗದಿದ್ದರೂ ಅನೇಕ ಉಪಯುಕ್ತವಾದ ಸಾಧನೆಗಳು ಆದುವು. ಹದಿಮೂರರಲ್ಲಿ ಹನ್ನೆರಡು ವಸಾಹತಗಳು ಈ ಕಾಲದಲ್ಲಿ ಉತ್ತರ ಅಮೆರಿಕಾದಲ್ಲಿ ಸ್ಥಾಪಿಸಲ್ಪಟ್ಟುವು.

**ಒಂದನೆ ಜೇಮ್ಸ್**, ೧೬೦೩–೧೬೨೫ : ಸ್ಕಾಟ್ಲೆಂಡಿನ ಮೇರಿ ರಾಣಿಯ ಮಗನಾದ ಆರನೇ ಜೇಮ್ಸ್ ಎಲಿಸಬೆತ್ತಳ ನಂತರ ಒಂದನೆ ಜೇಮ್ಸ್ ಎಂಬ ಹೆಸರಿನಿಂದ ಇಂಗ್ಲೆಂಡಿನ ಪಟ್ಟಕ್ಕೆ ತನ್ನ ಮೂವತ್ತೇಳನೆ ವಯಸ್ಸಿನಲ್ಲಿ ಬಂದನು. ಇವನು ವಿದ್ಯಾವಂತನಾದರೂ ಮೊಂಡು ಸ್ವಭಾವದವನು. ಅದಕ್ಕಾಗಿಯೆ ಅವನನ್ನು ನವಾರ್ ಎಂಬ ಪ್ರದೇಶದ ರಾಜನಾದ ಹೆನ್ರಿಯು ಕ್ರಿಶ್ಚಿಯನ್ ದೇಶದಲ್ಲೆಲ್ಲಾ ಅತ್ಯಂತ ಜಾಣನಾದ ಅವಿವೇಕಿ (Wisest fool in Christendom) ಎಂದು ಕರೆದನು. ಇವನಿಗೆ ಆತ್ಮಾಭಿಮಾನವು ಹೆಚ್ಚಾಗಿತ್ತು. ರಾಜನಿಗೆ ರಾಜತ್ವವು ದೇವದತ್ತವಾದುದೆಂದು ಇವನ ದೃಢನಂಬಿಕೆ. "ದೇವರು ಮಾಡಿದ್ದನ್ನು ಟೀಕೆ ಮಾಡುವುದು ಹೇಗೆ ಪಾಪಕರವೊ ಹಾಗೆಯೆ ರಾಜನು ಮಾಡುವ ಕೆಲಸಗಳನ್ನು ಪ್ರಜೆಗಳು ಟೀಕಿಸುವುದು ಪಾಪಕರವು" ಎಂದು ಒಂದನೆ ಜೇಮ್ಸ್ ಹೇಳುತ್ತಿದ್ದನು. ಇವನಿಗೂ ಎಲಿಸಬೆತ್ತಳಿಗೂ ಒಂದು ದೊಡ್ಡ ವ್ಯತ್ಯಾಸವಿತ್ತು. ರಾಜಕೀಯದಲ್ಲಿ ತನ್ನ ಪ್ರತಿಕಕ್ಷಿಗಳ ಕೈ ಯಾವಾಗ ಮೇಲಾಗುವುವೋ ಆಗ ತಾನು ಗಾಂಭೀರ್ಯದಿಂದ ತನ್ನ ಸಮ್ಮತಿಯನ್ನು ಎಲಿಸಬೆತ್ ಸೂಚಿಸುತ್ತಿದ್ದಳು. ಆದರೆ ಒಂದನೆ ಜೇಮ್ಸ್ ತನ್ನ ಪ್ರತಿಕಕ್ಷಿಗಳು ಎಷ್ಟು ಅತೃಪ್ತಿಯನ್ನು ಸೂಚಿಸಿದರೂ ಲೆಕ್ಕಿಸುತ್ತಿರಲಿಲ್ಲ. ಆಗ ತಾನೆ ಹೆಚ್ಚು ಪ್ರವರ್ಧಮಾನಕ್ಕೆ ಬರುತ್ತಿದ್ದ ಪ್ಯೂರಿಟನ್ನರು ಒಂದನೆ ಜೇಮ್ಸ್

ಇಂಗ್ಲೆಂಡಿನ ರಾಜನಾದುದಕ್ಕೆ ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು. ಏಕೆಂದರೆ ಒಂದನೆ ಜೇಮ್ಸ್ ಪ್ರಿಸ್ಬಿಟೇರಿಯನ್ ಮತದ ಪ್ರಗತಿಯನ್ನು ಸಾಧಿಸಿದ್ದ ಸ್ಕಾಟ್ಲೆಂಡ್ ದೇಶದವನಾಗಿದ್ದನು. ಅನೇಕ ಪ್ಯೂರಿಟನ್ ಪಾದ್ರಿಗಳು ಪ್ಯೂರಿಟನ್ ಮತದ ಪದ್ಧತಿಗಳನ್ನು ಆಚರಣೆಗೆ ತರಲು ಅವಕಾಶವನ್ನು ಕೊಡಬೇಕೆಂದು ಒಂದು ಬೇಡಿಕೆಯ ಪತ್ರವನ್ನು ಸಲ್ಲಿಸಿದ್ದರು. ಸಾವಿರಾರು ಪಾದ್ರಿಗಳು ಸಹಿಹಾಕಿದ್ದುದರಿಂದ ಇದಕ್ಕೆ "ಮಿಲ್ಲಿನರಿ ಪೆಟಿಷನ್" (Millenary Petition) ಎಂದು ಹೆಸರು. ಒಂದನೆ ಜೇಮ್ಸ್ ಹಾಂಪ್ಟನ್ ಕೋರ್ಟ್ ಎಂಬಲ್ಲಿ ಒಂದು ಸಭೆಯನ್ನು (Hampton Court Conference) ಸೇರಿಸಿದನು. ಪ್ಯೂರಿಟನ್ನರು ಚರ್ಚಿನಲ್ಲಿ ಆಡಳಿತಕ್ಕಾಗಿ ಚುನಾಯಿತ ಸಭೆಗಳಿರಬೇಕೆಂದೂ, ಮತ್ತು ಅದು ಮಠಾಧಿಪತಿಗಳ ಆಡಳಿತದಲ್ಲಿರಕೂಡದೆಂದೂ ಒತ್ತಿ ಹೇಳಿದಾಗ ಒಂದನೆ ಜೇಮ್ಸನಿಗೆ ಕೋಪವುಂಟಾಯಿತು. ಪ್ಯೂರಿಟನ್ನರು ಮಾಡಿದ ಈ ಸಲಹೆಯು ದೇವರಿಗೂ ಮತ್ತು ದೆವ್ವಕ್ಕೂ ಎಷ್ಟು ವ್ಯತ್ಯಾಸವಿದೆಯೋ ಅಷ್ಟೇ ವ್ಯತ್ಯಾಸವು ಅದಕ್ಕೂ ಮತ್ತು ರಾಜತ್ವಕ್ಕೂ ಇದೆ ಎಂದು ಜೇಮ್ಸ್ ಹೇಳಿದನು. ಈಗ ಮಠಾಧಿಪತಿ ಬೇಡ; ಮುಂದೆ ರಾಜನೂ ಬೇಡ ಎನ್ನುವ ಅಭಿಪ್ರಾಯವು ಬರಬಹುದೆಂದೂ ವಾದಿಸಿದನು.

ಮೊದಮೊದಲು ಒಂದನೆ ಜೇಮ್ಸ್ ರೋಮನ್ ಕ್ಯಾಥಲಿಕರಿಗೆ ಸಹಾನುಭೂತಿಯನ್ನು ತೋರಿಸಿದನು. ಆದರೆ ಬಹು ಬೇಗ ಅವನು ಎಲಿಸಬೆತ್ತಳು ಹಾಕಿಕೊಟ್ಟ ಮೇಲ್ಪಂಕ್ತಿಯನ್ನು ಅವರ ವಿಚಾರದಲ್ಲಿ ಅನುಸರಿಸಬೇಕಾಯಿತು. ಇದರ ಫಲವಾಗಿ ಬಂದೂಕಿನ ಮದ್ದಿನ ಪಿತೂರಿ ನಡೆಯಿತು. ಪಿತೂರಿಗಾರರು ರಾಜನನ್ನೂ, ಪಾರ್ಲಿಮೆಂಟಿನ ಸದಸ್ಯರನ್ನೂ ಬಂದೂಕದ ಮದ್ದಿನಿಂದ ಹಾರಿಸಿ ಬಿಡಬೇಕೆಂದು ಪ್ರಯತ್ನ ನಡೆಸಿದರು. ಲಾರ್ಡ್ಸ್ ಸಭಾ ಭವನದ ಒಳನೆಲಮಾಳಿಗೆಯಲ್ಲಿ ಬಂದೂಕದ ಮದ್ದನ್ನು ತುಂಬಿದರು. ಪಾರ್ಲಿಮೆಂಟ್ ನಡೆಯುತ್ತಿದ್ದಾಗ ಗೈಫಾಕ್ಸ್ (Guy Fawkes) ಎಂಬುವನು ಬೆಂಕಿಯನ್ನು ಹತ್ತಿಸಬೇಕೆಂದು ಏರ್ಪಾಡಾಗಿತ್ತು. ಆದರೆ ಪಿತೂರಿಗಾರರಲ್ಲಿ ಒಬ್ಬನಾದ ಟ್ರೆಷಾಮ್ (Tresham) ಎಂಬುವನು ತನ್ನ ನೆಂಟನಾದ ಮಾಂಟೀಗಲ್

(Monteagle) ಎಂಬುವನಿಗೆ ಆ ದಿವಸ ಪಾರ್ಲಿಮೆಂಟಿಗೆ ಬರಕೂಡ ದೆಂದು ಹೇಳಿಕಳುಹಿಸಿದನು. ಮಾಂಟೀಗಲ್ ಸರ್ಕಾರಕ್ಕೆ ಸೂಚನೆ ಕೊಟ್ಟನು. ಗೈಫಾಕ್ಸ್ ಮತ್ತು ಅವನ ಅನುಯಾಯಿಗಳು ತಕ್ಷಣವೇ ಹಿಡಿಯಲ್ಪಟ್ಟರು. ಈಗಲೂ ಇಂಗ್ಲೆಂಡಿನಲ್ಲಿ ನವಂಬರ್ ಐದನೆ ತಾರೀಖಿನ ದಿವಸ ಗೈಫಾಕ್ಸನ ದಿನವನ್ನು ಆಚರಿಸುತ್ತಾರೆ.

**ಒಂದನೆ ಜೇಮ್ಸ್ ಮತ್ತು ಪಾರ್ಲಿಮೆಂಟ್:** ಒಂದನೆ ಜೇಮ್ಸ್ ಮತ್ತು ಅವನ ಮಗ ಒಂದನೆ ಚಾರ್ಲ್ಸ್ ಇವರುಗಳ ಕಾಲದಲ್ಲಿ ಪಾರ್ಲಿ ಮೆಂಟಿನೊಡನೆ ತಿಕ್ಕಾಟವು ಪ್ರಾರಂಭವಾಯಿತು. ಈ ತಿಕ್ಕಾಟಕ್ಕೆ ಅನೇಕ ಕಾರಣಗಳಿದ್ದವು : ಒಂದನೆಯದು ದೈವದತ್ತವಾದ ರಾಜತ್ವದಲ್ಲಿ ಒಂದನೇ ಜೇಮ್ಸನಿಗೆ ಇದ್ದ ನಂಬಿಕೆ. ಎರಡನೆಯದು ಮತೀಯ ವಿಚಾರದಲ್ಲಿ ಭಿನ್ನಾ ಭಿಪ್ರಾಯ. ಮೂರನೆಯದು ಹೊಸ ತೆರಿಗೆ ಸುಂಕಾದುವುಗಳನ್ನು ಹಾಕಲು ರಾಜನಿಗಿದ್ದ ಹಕ್ಕು. ಇವುಗಳಲ್ಲದೆ ಇನ್ನೂ ಕೆಲವು ಬೇರೆ ಕಾರಣಗಳಿ ದ್ದುವು. ಆಗತಾನೆ ಹೊರಗಿನ ಅಪಾಯದಿಂದ ಇಂಗ್ಲೆಂಡ್ ಪಾರಾಗಿತ್ತು. ಎಲಿಸಬೆತ್ತಳ ಕಾಲದಲ್ಲಿ ಇಂಗ್ಲಿಷ್ ಸರ್ಕಾರ ಮತ್ತು ಜನಾಂಗ ಹೊರಗಿನ ಅಪಾಯದಿಂದ ರಕ್ಷಿಸಿಕೊಳ್ಳುವ ಮನೋಭಾವದಲ್ಲೇ ಮುಳುಗಿತ್ತು. ಪ್ರತಿ ಯೊಬ್ಬರಿಗೂ ಆಗ ಹಕ್ಕುಬಾಧ್ಯತೆಗಳ ವಿಚಾರವಾಗಿ ಚರ್ಚೆ ಮಾಡುವು ದಕ್ಕೆ ಕಾಲ ಸರಿಯಾದದ್ದಲ್ಲವೆಂದು ಅರಿವಾಗಿತ್ತು. ಆದರೆ ಕ್ರಿ. ಶ. ೧೬೦೩ ರಿಂದ ಆಚೆಗೆ ಈ ಪರಿಸ್ಥಿತಿ ಬದಲಾಯಿಸಿಹೋಗಿತ್ತು. ಕ್ರಿ. ಶ. ೧೫೮೮ ರಲ್ಲಿ "ಸ್ಪಾನಿಷ್ ಆರ್ಮೆಡ" ಒಂದೇ ಸೋತುಹೋಗಲಿಲ್ಲ. ಅದರೊಂದಿಗೆ ಟ್ಯೂಡರ್ ನಿರಂಕುಶಪ್ರಭುತ್ವವೂ ಸೋತುಹೋಯಿತು. ಪ್ರಜೆಗಳು ತಮ್ಮ ದೃಷ್ಟಿಯನ್ನು ಸರ್ಕಾರದ ರೀತಿನೀತಿಗಳನ್ನು ವಿಮರ್ಶಿಸಲು ತೊಡಗಿ ದರು. ಹದಿನಾರನೆ ಶತಮಾನದಲ್ಲಿ ಇಂಗ್ಲೆಂಡಿನಲ್ಲಿ ಒಂದು ಆಧುನಿಕ ಜನಾಂಗವು ನಿರ್ಮಿತವಾಯಿತೆಂದು ಹೇಳಬಹುದು, ನವಚೈತನ್ಯ, ಸಮುದ್ರದಮೇಲೆ ಸಾರ್ವಭೌಮತ್ವ. ಹೊಸ ಸಾಹಿತ್ಯ ಇವೆಲ್ಲವೂ ಇಂಗ್ಲೆಂಡಿನ ಜನರಲ್ಲಿ ಒಂದು ವಿಮರ್ಶಾತ್ಮಕ ದೃಷ್ಟಿಯನ್ನು ತಂದಿದ್ದುವು. ಇದರಿಂದ ಜನಗಳಿಗೆ ಸರ್ಕಾರದ ಆಡಳಿತದಲ್ಲಿ ಹೆಚ್ಚು ಆಸಕ್ತಿಯನ್ನು

ಹೊಂದಲು ಅವಕಾಶವಾಯಿತು. ಅದರಲ್ಲೂ "ಮಧ್ಯಮ ತರಗತಿಯ ಜನರು" ಹೆಚ್ಚು ಜಾಗ್ರತರಾಗಿದ್ದರು. ಇಂಗ್ಲೆಂಡಿನಲ್ಲಿ ಪಾರ್ಲಿಮೆಂಟಿನ ಸ್ವಾತಂತ್ರ್ಯಕ್ಕಾಗಿ ಹದಿನೇಳನೆಯ ಶತಮಾನದಲ್ಲಿ ಹೋರಾಡಿದವರ ಪೈಕಿ ಶ್ರೀಮಂತರಾಗಲೀ ಮತ್ತು ಸಾಮಾನ್ಯ ಜನರಾಗಲೀ ಅಷ್ಟು ಮುಖ್ಯ ಪಾತ್ರ ವಹಿಸಲಿಲ್ಲ. ವರ್ತಕರು, ಲಾಯರುಗಳು, ಜಮೀನುದಾರರು ಇವರೇ ಇದರಲ್ಲಿ ಪ್ರಮುಖರು. ಇವರು ಟ್ಯೂಡರ್ ಕಾಲದಲ್ಲೇ ಅಭಿವೃದ್ಧಿಗೆ ಬಂದಿದ್ದರು. ಮೊದಲು ಮೊದಲು ಕಾಮನ್ಸ್ ಸಭೆಯಲ್ಲಿ ಲಾಯರುಗಳು ವಾಕ್ ಯುದ್ಧದಲ್ಲಿ ಪ್ರಮುಖರಾಗಿದ್ದರು. ಬೇಕನ್ ಹೇಳಿದಂತೆ ಅವರೇ ಸಭೆಯ 'ಸ್ವರಗಳು' (vowels). ಮಿಕ್ಕವರು 'ವ್ಯಂಜನಗಳು' (consonants). ಆದರೆ ಯುದ್ಧ ಪ್ರಾರಂಭವಾದಾಗ ಪ್ರಾಮುಖ್ಯತೆಯನ್ನು ವಹಿಸಿದವರು ಜಮೀನುದಾರರು (Squires).

ರಾಜನ ಕೆಲಸ ಕಾರ್ಯಗಳನ್ನು ಟೀಕೆಮಾಡಲು ಪಾರ್ಲಿಮೆಂಟಿಗೆ ಯಾವ ಹಕ್ಕೂ ಇಲ್ಲವೆಂದು ಒಂದನೇ ಜೇಮ್ಸ್ ವಾದಿಸಿದನು ತಾನು ಇಂಗ್ಲೆಂಡಿಗೆ ಬಂದಾಗ ಪಾರ್ಲಿಮೆಂಟ್ ಸ್ಥಾಪಿತವಾಗಿತ್ತು. ಆದುದರಿಂದ ಅದರ ಇರುವಿಕೆಯನ್ನು ತಾನು ಸಹಿಸಿಕೊಳ್ಳಬೇಕಾಗಿತ್ತೆಂದು ಹೇಳುತ್ತಿದ್ದನು. ಪಾರ್ಲಿಮೆಂಟ್ ಸೇರುವುದು ಮತ್ತು ಅದು ಕೆಲಸಮಾಡುವುದು ತನ್ನ ಕೃಪೆಯಿಂದಲೆಂದು ಜೇಮ್ಸ್ ತನ್ನ ಆಳ್ವಿಕೆಯಲ್ಲಿ ಸೇರಿದ ಮೊಟ್ಟ ಮೊದಲನೆಯ ಪಾರ್ಲಿಮೆಂಟಿಗೆ (ಕ್ರಿ. ಶ. ೧೬೦೪–೧೬೧೦) ಹೇಳಿದನು.

ಗುಡ್‌ವಿನ್ ಎಂಬುವನ ಚುನಾವಣೆಯ ವಿಚಾರದಲ್ಲಿ ಪಾರ್ಲಿಮೆಂಟಿಗೂ ಮತ್ತು ಜೇಮ್ಸನಿಗೂ ಜಗಳ ಹತ್ತಿತು. ಕಾಮನ್ಸ್ ಸಭೆಯ ಚುನಾವಣೆಯ ವಿಷಯದಲ್ಲಿ ಯಾವ ಅಧಿಕಾರವೂ ರಾಜನಿಗೆ ಇಲ್ಲವೆಂದು ಸದಸ್ಯರು ವಾದಿಸಿದರು. ರಾಜನಿಗೆ ಸಲ್ಲುತ್ತಿದ್ದ ಹಣದ ವಿಚಾರದಲ್ಲಿ ವಾದ ವಿವಾದವು ಪ್ರಾರಂಭವಾಯಿತು. ಮಧ್ಯಮ ಯುಗದಲ್ಲಿ ರಾಜನ ಆದಾಯವು ಅನೇಕ ವಿಧಗಳಲ್ಲಿ ಬರುತ್ತಿತ್ತು. ಫ್ಯೂಡಲ್ ಪದ್ಧತಿಗೆ ಸೇರಿದ ಕೆಲವು ತೆರಿಗೆಗಳು (Fuedal dues), ರಾಜನ ಜಮೀನುಗಳಿಂದ ಬರುತ್ತಿದ್ದ ಗುತ್ತಿಗೆ ಹಣ (Rents from Crown

Lands), ಸಾಮಾನುಗಳ ಮೇಲೆ ಹಾಕುತ್ತಿದ್ದ ಸುಂಕ (Duties paid on goods), ಟನೇಜ್ ಮತ್ತು ಪೌಂಡೇಜ್ (Tunnage and poundage) ಎಂಬ ತೆರಿಗೆ ಇವುಗಳೇ ಅವುಗಳಲ್ಲಿ ಮುಖ್ಯವಾದುವುಗಳು.* ಮೊದಲನೆ ಎಡ್ವರ್ಡನ ಕಾಲದಿಂದ ಚರ್ಮ ಮತ್ತು ಉಣ್ಣೆ ಇವುಗಳಿಗೆ ಹಾಕುತ್ತಿದ್ದ ಸುಂಕ ರಾಜನಿಗೆ ಸೇರುತ್ತಿತ್ತು. ದೇಶದೊಳಕ್ಕೆ ಆಮದಾಗಿ ಬರುತ್ತಿದ್ದ ಪ್ರತಿಯೊಂದು ಟರ್ ದ್ರಾಕ್ಷಾರಸದಮೇಲೂ, ಆಮದು, ರಫ್ತು ಆಗುತ್ತಿದ್ದ ಪ್ರತಿಯೊಂದು (£) ಬೆಲೆ ಬಾಳುವ ಪದಾರ್ಥದ ಮೇಲೆ ಬರುತ್ತಿದ್ದ ಆದಾಯವನ್ನೂ ಪಾರ್ಲಿಮೆಂಟ್ ರಾಜನು ಸಿಂಹಾಸನಕ್ಕೆ ಬರುವಾಗ ಅವನ ಜೀವಮಾನ ಪರ್ಯಂತ ಕೊಡುತ್ತಿತ್ತು. ಆದರೆ ಇವುಗಳಿಂದ ಬಂದ ಆದಾಯ ದುಂದುವೆಚ್ಚಗಾರನಾದ ಜೇಮ್ಸನಿಗೆ ಸಾಕಾಗುತ್ತಿರಲಿಲ್ಲ. ಅದೂ ಅಲ್ಲದೆ ಚಿನ್ನ ಮತ್ತು ಬೆಳ್ಳಿ ಆಗ ಹೆಚ್ಚು ಹೆಚ್ಚಾಗಿ ಇಂಗ್ಲೆಂಡಿಗೆ ಬರಲಾರಂಭಿಸಿದ್ದುದರಿಂದ ಹಣದ ಬೆಲೆ ಒಂದು ಶತಮಾನದ ಹಿಂದೆ ಇದ್ದುದಕ್ಕಿಂತ ಅರ್ಧದಷ್ಟಾಗಿತ್ತು. ಸರ್ಕಾರದ ವೆಚ್ಚವೂ ಹೆಚ್ಚಾಗುತ್ತಿತ್ತು. ಈ ಕಾರಣಗಳಿಗಾಗಿ ಒಂದನೆ ಜೇಮ್ಸನು ಹಣಕ್ಕಾಗಿ ಬೇರೆ ಬೇರೆ ದಾರಿಗಳನ್ನು ಹುಡುಕಬೇಕಾಯಿತು. ಪಾರ್ಲಿಮೆಂಟಿನ ಒಪ್ಪಿಗೆ ಇಲ್ಲದೆ ಅವನು ದೇಶದೊಳಕ್ಕೆ ಬರುತ್ತಿದ್ದ ಇನ್ನೂ ಕೆಲವು ಪದಾರ್ಥಗಳ ಮೇಲೆ ಹೊಸ ತೆರಿಗೆಗಳನ್ನು ಹಾಕಿದನು. ಬೇಟ್ ಎಂಬ ಒಬ್ಬ ವರ್ತಕನು ಹೀಗೆ ಒಣದ್ರಾಕ್ಷಿಯ (Currants) ಮೇಲೆ ಹಾಕಿದ ಹೊಸ ತೆರಿಗೆಯನ್ನು ಕೊಡಲೊಪ್ಪಲಿಲ್ಲ. ಆದರೆ ನ್ಯಾಯಾಧಿಪತಿಗಳು, ರಾಜ್ಯದಲ್ಲಿದ್ದ ರೇವುಪಟ್ಟಣಗಳು ರಾಜನ ಅಧೀನಕ್ಕೊಳಗಾಗಿದ್ದುದರಿಂದ ಈ ಹೊಸ ತೆರಿಗೆಯನ್ನು ಹಾಕಲು ರಾಜನಿಗೆ ಅಧಿಕಾರವುಟೆಂದು ತೀರ್ಪನ್ನು ಕೊಟ್ಟರು. ಒಂದನೆ ಜೇಮ್ಸ್ ತನ್ನ ಮೊದಲನೆ ಪಾರ್ಲಿಮೆಂಟನ್ನು ಕ್ರಿ. ಶ. ೧೬೧೦ ರಲ್ಲಿ ರದ್ದುಮಾಡಿದನು.

---

* ಟನೇಜ್ ಎಂದರೆ ಆಮದಾಗುತ್ತಿದ್ದ ಪ್ರತಿಯೊಂದು ಟರ್ ದ್ರಾಕ್ಷಾರಸದ ಮೇಲೆ ಹಾಕಿದ್ದ ಎರಡು ಷಿಲಿಂಗ್ ತೆರಿಗೆ. ಪೌಂಡೇಜ್ ಎಂದರೆ ಆಮದು ಮತ್ತು ರಫ್ತಾಗುತ್ತಿದ್ದ ಪದಾರ್ಥಗಳ ಮೇಲೆ ಪ್ರತಿಯೊಂದು ಪೌಂಡ್ (£) ಬೆಲೆಗೆ ಮೂರು ಪೆನ್ನಿಯಂತೆ ವಿಧಿಸುತ್ತಿದ್ದ ತೆರಿಗೆ.

ಪಾರ್ಲಿಮೆಂಟ್ ಸಭೆ ಸೇರಿಸದೆ ಒಂದನೆ ಜೇಮ್ಸ್ ತನ್ನ ಆಡಳಿತ ವನ್ನು ಕ್ರಿ. ಶ. ೧೬೨೧ ರವರೆಗೂ ಮುಂದುವರಿಸಿದನು. ಕ್ರಿ. ಶ. ೧೬೧೪ ರಲ್ಲಿ ಒಂದು ಪಾರ್ಲಿಮೆಂಟೇನೋ ಸಭೆ ಸೇರಿತು. ಆದರೆ ಅದು ಒಂದು ಕಾನೂನನ್ನೂ ಜಾರಿಗೆ ತರದೆ ಎರಡೇ ತಿಂಗಳಲ್ಲಿ ಮುಕ್ತಾಯಗೊಂಡಿತು. ಆದುದರಿಂದ ಇದಕ್ಕೆ "ಆಡಲ್ಡ್ ಪಾರ್ಲಿಮೆಂಟ್" (Addled parliament) ಎಂದು ಹೆಸರಾಯಿತು. ಕ್ರಿ. ಶ. ೧೬೨೧ ರಲ್ಲಿ ಒಂದನೇ ಜೇಮ್ಸ್ ಪಾರ್ಲಿಮೆಂಟನ್ನು ಪುನಃ ಕರೆಯಬೇಕಾಯಿತು. ಅವನ ಅಳಿಯ ನಾದ ಫ್ರೆಡರಿಕ್ (Frederick) ಎಂಬುವನು ಯೂರೋಪಿನಲ್ಲಿ ಮೂವತ್ತು ವರ್ಷಗಳ ಯುದ್ಧದಲ್ಲಿ ತನ್ನ ರಾಜ್ಯವಾದ ಪೆಲಾಟಿನೆಟ್ (Palatinate) ಎಂಬುದನ್ನು ಕಳೆದುಕೊಂಡಿದ್ದನು. ಕ್ರಿ. ಶ. ೧೬೧೮ ರಲ್ಲಿ ಯೂರೋಪಿನ ಪ್ರಾಟೆಸ್ಟೆಂಟರು ಬೊಹಿಮಿಯ (Bohemia) ಎಂಬ ದೇಶಕ್ಕೆ ಫ್ರೆಡರಿಕ್ಕನನ್ನು ರಾಜನನ್ನಾಗಿ ಮಾಡಿದರು. ರೋಮನ್ ಕ್ಯಾಥಲಿಕ್ ರಾಜರು ಇದಕ್ಕಾಗಿ ಪ್ರಾಟೆಸ್ಟೆಂಟ್ ಮತಕ್ಕೆ ಸೇರಿದ ಫ್ರೆಡರಿಕ್ಕನ ಮೇಲೆ ದಂಡೆತ್ತಿ ಹೋಗಿ, ವೈಟ್ ಮೌಂಟನ್ (White mountain) ಎಂಬಲ್ಲಿ ಅವನನ್ನು ಸೋಲಿಸಿ, ಬೊಹಿಮಿಯದಿಂದ ಓಡಿಸಿದ್ದೂ ಅಲ್ಲದೆ, ಅವನ ಸ್ವಂತ ರಾಜ್ಯವಾದ ಪೆಲಾಟಿನೆಟ್ ಎಂಬು ದನ್ನೂ ಆಕ್ರಮಿಸಿಕೊಂಡರು. ಇಂಗ್ಲೆಂಡ್ ಫ್ರೆಡರಿಕ್ಕನಿಗೆ ಸಹಾಯ ಮಾಡಲು ತುಂಬಾ ಕಾತುರವಾಗಿತ್ತು. ಅದಕ್ಕೆ ಹಣ ಒದಗಿಸಲು ಪಾರ್ಲಿಮೆಂಟ್ ಸೇರಿದಾಗ ಸದಸ್ಯರು ಒಂದನೆ ಜೇಮ್ಸನ ಆಡಳಿತವನ್ನು ಕಟುವಾಗಿ ಟೀಕೆಮಾಡಲಾರಂಭಿಸಿದರು. ರಾಜನ ಅಧಿಕಾರಿಗಳನ್ನೂ ಮತ್ತು ಮಂತ್ರಿಗಳನ್ನೂ ಖಂಡಿಸುವ ಪದ್ಧತಿಯನ್ನು ಪುನರುಜ್ಜೀವನ ಗೊಳಿಸಿದರು. ಈ ಪದ್ಧತಿಯು ಮಧ್ಯಮಯುಗದಲ್ಲೇ ಬಳಕೆಗೆ ಬಂದಿತ್ತು. ಇದನ್ನು ಕಿ. ಶ. ೧೪೫೯ ರಿಂದ ಉಪಯೋಗಿಸಿರಲಿಲ್ಲ. ಸ್ಟುವರ್ಟ್ ಕಾಲದ ಪಾರ್ಲಿಮೆಂಟಿಗೆ ಇದೊಂದು ಒಳ್ಳೆಯ ಆಯುಧ ಸಿಕ್ಕಿದಂತಾ ಯಿತು. ಪಾರ್ಲಿಮೆಂಟ್, ರಾಜನ ಅಧಿಕಾರವನ್ನು ಕಾನೂನಿನ ಬಲದ ಮೇಲೆ ವ್ಯವಸ್ಥೆಗೊಳಿಸಲು ಪ್ರಯತ್ನಿಸಿದ್ದ ನ್ಯಾಯಾಧಿಪತಿ ಸರ್ ಫ್ರಾನ್ಸಿಸ್ ಬೇಕನ್ ಎಂಬುವನನ್ನು ಅಧಿಕಾರದಿಂದ ತೆಗೆದುಹಾಕಿತು. ಇದರಲ್ಲಿ

ಹೆಚ್ಚು ಪ್ರಾಮುಖ್ಯತೆಯನ್ನು ವಹಿಸಿದವನು ಸರ್ ಎಡ್ವರ್ಡ್ ಕೋಕ್ (Sir Edward Coke) ಎಂಬುವನು. ಬೇಕನ್ ಲಂಚವನ್ನು ತೆಗೆದುಕೊಳ್ಳುತ್ತಿದ್ದನೆಂದು ಪಾರ್ಲಿಮೆಂಟ್ ಆಪಾದನೆಯನ್ನು ತಂದಿತು.

ಒಂದನೇ ಜೇಮ್ಸ್ ತನ್ನ ಮಗನಾದ ಒಂದನೇ ಚಾರ್ಲ್ಸ್‌ನಿಗೆ ಸ್ಪೇನ್ ದೇಶದ ರಾಜಕುಮಾರಿಯನ್ನು ವಿವಾಹ ಮಾಡಿಸಬೇಕೆಂಬ ಅಭಿಲಾಷೆ ಹೊಂದಿದ್ದನು. ಆದರೆ ಪಾರ್ಲಿಮೆಂಟ್ ಇದನ್ನು ತೀವ್ರವಾಗಿ ವಿರೋಧಿಸಿತು. ಪಾರ್ಲಿಮೆಂಟ್ ಪ್ರಾಟೆಸ್ಟೆಂಟ್ ಮತಕ್ಕೆ ಸೇರಿದ ಬೇರೆ ಯಾವ ರಾಜ ಕುಮಾರಿಯನ್ನಾದರೂ ಚಾರ್ಲ್ಸ್ ಮದುವೆಯಾಗಲೆಂದು ರಾಜನಿಗೆ ಮನವಿಮಾಡಿಕೊಂಡಿತು. ಆದರೆ ಒಂದನೆ ಜೇಮ್ಸ್ ಇದನ್ನು ಅಂಗೀ ಕರಿಸಲಿಲ್ಲ. ಅಷ್ಟೇ ಅಲ್ಲದೆ ಒಂದನೇ ಜೇಮ್ಸ್ ಪಾರ್ಲಿಮೆಂಟಿನ ಸದಸ್ಯ ರಿಗೆ ಇಂತಹ ಗಹನ ವಿಷಯಗಳು ಅವರ ಚರ್ಚೆಯೊಳಗೆ ಬರಲು ಅವ ಕಾಶವಿಲ್ಲವೆಂದು ಹೇಳಿದನು. ಆದರೆ ಪಾರ್ಲಿಮೆಂಟ್ ತನ್ನ ವಾಕ್ ಸ್ವಾತಂತ್ರ್ಯವನ್ನು ಬಿಟ್ಟುಕೊಡಲಿಲ್ಲ. ಅದು ತನ್ನ ಪ್ರತಿಭಟನೆಯನ್ನು ಸೂಚಿಸಿ, ಕಾಮನ್ಸ್ ಸಭೆಯ ದಿನಚರಿಯ ಪುಸ್ತಕದಲ್ಲಿ ಅದನ್ನು ಬರೆಯಿತು. ಒಂದನೆ ಜೇಮ್ಸ್ ಕೋಪಗೊಂಡು, ಪಾರ್ಲಿಮೆಂಟನ್ನು ಮುಕ್ತಾಯ ಗೊಳಿಸಿ, ಅದರ ಕೆಲವು ಸದಸ್ಯರನ್ನು ಸೆರೆಯಲ್ಲಿಡಿಸಿದನು. ವಾಕ್ ಸ್ವಾತಂತ್ರ್ಯವನ್ನು ಎತ್ತಿಹಿಡಿದು ಬರೆಯಲಾಗಿದ್ದ ಪ್ರತಿಭಟನೆಯನ್ನು ಕಾಮನ್ಸ್ ಸಭೆಯ ಪುಸ್ತಕದಿಂದ ತಾನೇ ಹರಿದು ಹಾಕಿದನು. ಈ ಪಾರ್ಲಿಮೆಂಟಿನಲ್ಲಿ ಒಂದನೆ ಜೇಮ್ಸ್, ಸಾಬೂನು, ಹೊಗೆಸೊಪ್ಪು, ಉಪ್ಪು ಮತ್ತು ದ್ರಾಕ್ಷಾರಸ ಇವುಗಳ ಮಾರಾಟವನ್ನು ಕೇವಲ ಕೆಲವು ವ್ಯಕ್ತಿಗಳೇ ಮಾಡತಕ್ಕದ್ದೆಂದು ವಿಧಿಸಿದ್ದನ್ನು ಖಂಡಿಸಲಾಯಿತು. ಅದನ್ನು ಪಾರ್ಲಿ ಮೆಂಟ್ ವಜಾ ಮಾಡಿತು.

**ಒಂದನೆ ಜೇಮ್ಸ್‌ನ ವಿದೇಶಾಂಗ ನೀತಿ :** ಒಂದನೆ ಜೇಮ್ಸ್‌ನು ಯೂರೋಪಿನಲ್ಲಿ ಶಾಂತಿಯನ್ನುಂಟುಮಾಡಲು ವಿವಾಹ ಸಂಬಂಧವನ್ನು ಕೈಗೊಂಡನು (Peace making by match making). ತನ್ನ ಮಗಳಾದ ಎಲಿಸಬೆತ್ತಳನ್ನು ರ್ಹೈನ್ (Rhine) ನದಿಯ ಪೆಲಾಟಿ ನೆಟ್ ಎಂಬ ದೇಶದ ರಾಜನಾದ ಫ್ರೆಡರಿಕ್ಕನಿಗೆ ಕೊಟ್ಟು ವಿವಾಹಮಾಡಿ

ದ್ದನು. ಫ್ರೆಡರಿಕ್ಕನು ಮೂವತ್ತು ವರ್ಷಗಳ ಯುದ್ಧದಲ್ಲಿ ತನ್ನ ರಾಜ್ಯ ವನ್ನು ಕಳೆದುಕೊಂಡಿದ್ದನು. ಕ್ಯಾಥಲಿಕ್ ದೇಶಗಳಲ್ಲಿ ಅತ್ಯಂತ ಪ್ರಮುಖ ವಾದ ಸ್ಪೇನ್, ಒಂದನೆ ಜೇಮ್ಸನ ಕಾಲದಲ್ಲಿ ತನ್ನ ಪ್ರಭಾವವನ್ನು ಇಂಗ್ಲೆಂಡಿನ ಮೇಲೆ ಬೀರಲು ಹವಣಿಸುತ್ತಿತ್ತು. ತನ್ನ ಅಳಿಯನು ಕಳೆದು ಕೊಂಡಿದ್ದ ರಾಜ್ಯವನ್ನು ಸ್ಪೇನ್, ಯೂರೋಪಿನ ಕ್ಯಾಥಲಿಕ್ ದೇಶಗಳ ಮೇಲೆ ತನ್ನ ಅಧಿಕಾರವನ್ನು ಪ್ರದರ್ಶಿಸಿ, ದೊರಕಿಸಿಕೊಡುವುದೆಂದು ಒಂದನೆ ಜೇಮ್ಸ್ ಭಾವಿಸಿದ್ದನು. ಆದರೆ ಸ್ಪೇನ್ ಯಾವ ಸಹಾಯವನ್ನೂ ಮಾಡಲಿಲ್ಲ. ಒಂದನೆ ಚಾರ್ಲ್ಸ್ ಸ್ಪೇನಿನ ರಾಜಕುಮಾರಿಯನ್ನು ಮದುವೆಯಾಗಲು ತನ್ನ ಸ್ನೇಹಿತನಾದ ಬಕಿಂಗ್‌ಹ್ಯಾಮ್ (Bucking-ham) ಎಂಬುವನೊಡನೆ ಮೆಡ್ರಿಡ್ (Madrid) ಪಟ್ಟಣಕ್ಕೆ ಹೋಗಿ ವಿಫಲನಾಗಿ ಹಿಂದಿರುಗಿದನು. ತನ್ನ ಆಳ್ವಿಕೆಯ ಮೊದಲಿನಲ್ಲಿ ಪಿತೂರಿ ನಡೆಸಿದ್ದನೆಂದು ಸರ್ ವಾಲ್ಟರ್ ರ್ಯಾಲೆಯನ್ನು ಒಂದನೆ ಜೇಮ್ಸನು ಸೆರೆ ಯಲ್ಲಿಡಿಸಿದ್ದನು. ಕ್ರಿ. ಶ. ೧೬೧೭ ರಲ್ಲಿ ಒಂದನೆ ಜೇಮ್ಸ್ ಇವನನ್ನು ಸೆರೆಯಿಂದ ಬಿಡಿಸಿ, ಸ್ಪೇನಿನ ರೇವುಪಟ್ಟಣಗಳಿಂದ ಹಣವನ್ನು ಕೊಳ್ಳೆ ಹೊಡೆಯಲು ಕಳುಹಿಸಿದ್ದನು. ಆದರೆ ರ್ಯಾಲೆಯು (Raleigh) ಬರೀ ಕೈಲಿ ಹಿಂದಿರುಗಿದನು. ಸ್ಪೇನ್ ಇವನ ಮೇಲೆ ಅಪರಾಧವನ್ನು ಹೊರಿ ಸಿತ್ತು. ಅದಕ್ಕೆ ತೃಪ್ತಿಯನ್ನುಂಟುಮಾಡಲು ಒಂದನೆ ಜೇಮ್ಸ್ ರ್ಯಾಲೆ ಯನ್ನು ಹಿಂದೆಯೇ ಮಾಡಿದ್ದ ರಾಜದ್ರೋಹದ ಅಪಾದನೆ ಮೇಲೆ ಗಲ್ಲಿಗೆ ಹಾಕಿಸಿದನು. ಹೀಗೆ ಒಂದನೆ ಜೇಮ್ಸನು ತನ್ನ ವಿದೇಶಾಂಗ ವ್ಯವಹಾರ ದಲ್ಲಿ ಏನನ್ನೂ ಸಾಧಿಸಲಿಲ್ಲ. ಅವನ ವಿದೇಶಾಂಗ ನೀತಿಯು ಸಫಲ ವಾಗಲಿಲ್ಲ.

### ಒಂದನೆ ಚಾರ್ಲ್ಸ್, ೧೬೨೫–೧೬೪೯

ಒಂದನೆ ಜೇಮ್ಸನ ಮಗನಾದ ಒಂದನೆ ಚಾರ್ಲ್ಸ್‌ನು ಅನೇಕ ಒಳ್ಳೆಯ ಗುಣಗಳನ್ನು ಹೊಂದಿದ್ದನು. ಆದರೆ ಅವನಿಗೆ ತನ್ನ ಪ್ರಜೆಗಳ ಮನಸ್ಸನ್ನು ತಿಳಿದುಕೊಳ್ಳುವ ಶಕ್ತಿಯಾಗಲಿ, ಆಸಕ್ತಿಯಾಗಲಿ ಇರಲಿಲ್ಲ. ಅವನಿಗೂ ಚಿಕ್ಕಂದಿನಿಂದಲೂ ದೈವದತ್ತವಾದ ರಾಜತ್ವದಲ್ಲಿ ನಂಬಿಕೆ. ಚಾರ್ಲ್ಸ್‌ನಿಗೆ ತನ್ನ ಮನಸ್ಸನ್ನು ಅರಿತುಕೊಳ್ಳುವುದಕ್ಕೆ ಆಗುತ್ತಿರಲಿಲ್ಲ.

ವೆಂದು ಹೇಳಬೇಕು. ಏಕೆಂದರೆ ಅವನು ಹೆಚ್ಚು ಹೆಚ್ಚಾಗಿ ಇತರರ ನಿರ್ಧಾರದ ಮೇಲೆಯೇ ನಡೆಯುತ್ತಿದ್ದನು. ತನ್ನ ಸ್ನೇಹಿತನಾದ ಡ್ಯೂಕ್ ಆಫ್ ಬಕಿಂಗ್‌ಹ್ಯಾಮ್‌ನಲ್ಲಿ ಇವನಿಗೆ ತುಂಬಾ ವಿಶ್ವಾಸ. ಅದೂ ಅಲ್ಲದೆ ಚಾರ್ಲ್ಸ್‌ನು ತಾನುಮಾಡಿದ ವಾಗ್ದಾನಕ್ಕೆ ಯಾವ ಬೆಲೆಯನ್ನೂ ಕೊಡುತ್ತಿರಲಿಲ್ಲ. ಚಾರ್ಲ್ಸ್‌ನು ಧೈರ್ಯಶಾಲಿ. ಕಲೆಗಳಲ್ಲಿ ತುಂಬಾ ಇವನಿಗೆ ಅಭಿಮಾನ ಮತ್ತು ಆಸಕ್ತಿ. ಅವನು ಪ್ರಖ್ಯಾತರಾದ ವಾನ್‌ಡೈಕ್ (Vandyck) ಮತ್ತು ರೂಬನ್ಸ್ (Rubens) ಎಂಬ ಚಿತ್ರಗಾರರ ಆಶ್ರಯದಾತನಾಗಿದ್ದನು. ಅವನ ನಡತೆಯಲ್ಲಿ ಗಾಂಭೀರ್ಯವೂ, ಸಹಜತೆಯೂ ಇದ್ದುವು.

ಬಕಿಂಗ್‌ಹ್ಯಾಮನ ಸಲಹೆಯ ಮೇರೆ ಚಾರ್ಲ್ಸ್‌ನು ಫ್ರಾನ್ಸಿನ ಹದಿಮೂರನೆ ಲೂಯಿಯ ಸಹೋದರಿ ಹೆನ್ರಿಯಟ ಮೇರಿಯ (Henrietta Maria) ಎಂಬುವಳನ್ನು ಮದುವೆಯಾದನು. ಅವಳೂ ರೋಮನ್ ಕ್ಯಾಥಲಿಕ್ ಮತಕ್ಕೆ ಸೇರಿದವಳಾಗಿದ್ದಳು. ಆದರೆ ಫ್ರಾನ್ಸ್ ಸ್ಪೇನಿನ ಶತ್ರುವಾಗಿತ್ತು. ಮೂವತ್ತು ವರ್ಷಗಳ ಯುದ್ಧದಲ್ಲಿ ಫ್ರಾನ್ಸಿನ ಮಂತ್ರಿಯಾದ ರಿಷಿಲಿಯು (Richelieu) ಪ್ರಾಟೆಸ್ಟೆಂಟರ ಪರವಾಗಿ ಯುದ್ಧ ಮಾಡುವುದಕ್ಕೆ ತಯಾರಾಗಿದ್ದನು. ಹೀಗೆ ಇಂಗ್ಲೆಂಡ್, ಫ್ರಾನ್ಸ್ ಮತ್ತು ಡೆನ್‌ಮಾರ್ಕ್ ಇವುಗಳು ಒಟ್ಟಿಗೆ ಸೇರಿ ರಾಜ್ಯವನ್ನು ಕಳೆದುಕೊಂಡಿದ್ದ ಫ್ರೆಡರಿಕ್ಕನಿಗೆ ಸಹಾಯಮಾಡಲು ಅನುವಾದುವು. ಆದರೆ ಕಪಟಿಯಾದ ರಿಷಿಲಿಯು ಫ್ರಾನ್ಸಿನಲ್ಲೇ ನೆಲಸಿದ್ದ ಹ್ಯೂಜ್‌ನಾಟ್ (Huguenot) ಎಂಬ ಪ್ರಾಟೆಸ್ಟೆಂಟ್ ಪಂಗಡವನ್ನು ನಾಶಮಾಡಲು ಉದ್ಯುಕ್ತನಾದಾಗ ಇಂಗ್ಲೆಂಡ್ ಫ್ರಾನ್ಸಿನ ಮೇಲೆ ಅವರ ಸಹಾಯಾರ್ಥವಾಗಿ ಯುದ್ಧಮಾಡಬೇಕಾಯಿತು. ಈ ಯುದ್ಧದ ಜೊತೆಗೆ ಆಗಲೇ ಸ್ಪೇನಿನ ಮೇಲೆ ಇಂಗ್ಲೆಂಡ್ ಯುದ್ಧವನ್ನು ಹೂಡಿತ್ತು.

ಚಾರ್ಲ್ಸ್‌ನ ಮೊದಲನೆ ಪಾರ್ಲಿಮೆಂಟ್ ಕ್ರಿ. ಶ. ೧೬೨೫ ರಲ್ಲಿ ಸೇರಿತು. ಸ್ಪೇನಿನೊಡನೆ ಯುದ್ಧಕ್ಕಾಗಿ ಒಂದು ನೂರ ನಲವತ್ತು ಸಾವಿರ ಪೌಂಡುಗಳನ್ನು ಮಾತ್ರ ಕೊಟ್ಟಿತು. ಈ ಅಲ್ಪ ಹಣದಿಂದ ಯುದ್ಧವನ್ನು ಸಾಗಿಸುವುದು ಅಸಾಧ್ಯವೆಂದು ಪಾರ್ಲಿಮೆಂಟಿಗೆ ತೋರದಿದ್ದುದು

ಆಶ್ಚರ್ಯವೇ ಸರಿ! ಹೀಗೆ ಅನೇಕವೇಳೆ ಪಾರ್ಲಿಮೆಂಟ್ ತನ್ನ ಅಗಾಧ ವಾದ ಮೌಢ್ಯವನ್ನು ಪ್ರದರ್ಶಿಸುತ್ತಿತ್ತು. ಯುದ್ಧಕಾಲದಲ್ಲಿ ಸರ್ಕಾರಕ್ಕೆ ಸರಿಯಾದ ಹಣಕಾಸಿನ ಸರಬರಾಜಿಲ್ಲದೆ ಹೋದರೆ ಯುದ್ಧದಲ್ಲಿ ಅನಾಹುತ ಸಂಭವಿಸುವುದೇ ವಿನಃ ಜಯವು ಲಭಿಸುವುದಿಲ್ಲ. ಚಾರ್ಲ್ಸ್ ಕೂಡಾ ಪಾರ್ಲಿಮೆಂಟಿಗೆ ಸರಿಯಾದ ವಿವರಗಳನ್ನು ಕೊಡುತ್ತಿರಲಿಲ್ಲ. ಈ ಕಾರಣದಿಂದ ಚಾರ್ಲ್ಸ್‌ನು ಫ್ರೆಡರಿಕ್ಕನಿಗೆ ಯುದ್ಧದಲ್ಲಿ ಸರಿಯಾದ ಸಹಾಯವನ್ನು ಮಾಡಲಾಗಲಿಲ್ಲ. ಎರಡನೆಯದಾಗಿ ಎಲ್ಲಾ ರಾಜರಿಗೂ ತಾವು ಪಟ್ಟಕ್ಕೆ ಬಂದಾಗ ಕೊಡುತ್ತಿದ್ದಂತೆ "ಟನೇಜ್ ಮತ್ತು ಪೌಂಡೇಜ್" ಎಂಬ ತೆರಿಗೆಗಳಿಂದ ಬರುವ ಆದಾಯವನ್ನು ಪಾರ್ಲಿಮೆಂಟ್ ಚಾರ್ಲ್ಸ್‌ನಿಗೆ ಜೀವಾವಧಿ ಕೊಡದೆ ಒಂದು ವರ್ಷಕ್ಕೆ ಮಾತ್ರ ಕೊಟ್ಟಿತು. ಇದರಿಂದ ಚಾರ್ಲ್ಸ್‌ನಿಗೆ ಹಣದ ಕೊರತೆ ಒಂದೇ ಅಲ್ಲದೆ ತುಂಬಾ ಅವಮಾನವೂ ಆಯಿತು. ಹೀಗೆ ಮಾಡಲು ಪಾರ್ಲಿಮೆಂಟಿಗೆ ಒಂದು ಉದ್ದಿಶ್ಯವಿತ್ತು. ರಾಜನಿಗೆ ಕೊಡುವ ಹಣದ ಮೇಲೆ ಪಾರ್ಲಿಮೆಂಟಿನ ಹತೋಟಿಯಿದ್ದರೆ (Power of the Purse) ರಾಜನನ್ನು ಪಾರ್ಲಿಮೆಂಟಿನ ಅಧೀನತೆಗೆ ಒಳಪಡಿಸಬಹುದೆಂಬ ನಂಬಿಕೆಯಿತ್ತು.

ಸ್ಪೇನಿನೊಡನೆ ಹೂಡಿದ ಯುದ್ಧವು ಇಂಗ್ಲೆಂಡಿಗೆ ಅಪಕೀರ್ತಿಯನ್ನು ತಂದಿತು. ಕ್ರಿ. ಶ. ೧೬೨೬ ರಲ್ಲಿ ಚಾರ್ಲ್ಸ್‌ನು ತನ್ನ ಎರಡನೆ ಪಾರ್ಲಿಮೆಂಟನ್ನು ಕರೆಯಿಸಿದನು. ಈ ಪಾರ್ಲಿಮೆಂಟಿನಲ್ಲಿ ಅನೇಕ ಪ್ರಮುಖರು ಇದ್ದರು. ಸರ್ ಜಾರ್ಜ್ ಇಲಿಯಟ್ (Sir Jhon Eliot), ಸರ್ ಥಾಮಸ್ ವೆಂಟ್‌ವರ್ತ್ (Sir Thomas Wentworth) ಮತ್ತು ಜಾರ್ಜ್ ಪಿಮ್ (John Pym) ಮೊದಲಾದ ಪ್ರಮುಖ ವ್ಯಕ್ತಿಗಳು ಈ ಪಾರ್ಲಿಮೆಂಟಿನಲ್ಲಿ ಭಾಗ ವಹಿಸಿದ್ದರು. ಬಕಿಂಗ್‌ಹ್ಯಾಮನು ಯುದ್ಧದಲ್ಲಿ ತೋರಿದ ಅಸಮರ್ಥತೆಯನ್ನು ಖಂಡಿಸಿ ಭಾಷಣಮಾಡುತ್ತಾ, ಇಲಿಯಟ್, "ನಮ್ಮ ಮರ್ಯಾದೆಯು ಹಾಳಾಯಿತು. ನಮ್ಮ ಹಡಗುಗಳು ಮುಳುಗಿದುವು. ನಮ್ಮ ಸೈನಿಕರು ನಾಶವಾದರು. ಶತ್ರುವಿನಿಂದಲ್ಲ; ನಾವು ಯಾರನ್ನು ನಂಬಿದ್ದೆವೋ ಅವರಿಂದ" ಎಂದು ಹೇಳಿದನು. ಚಾರ್ಲ್ಸ್

ಬಕಿಂಗ್‌ಹ್ಯಾಮನನ್ನು ಬಿಟ್ಟುಕೊಡಲು ಇಷ್ಟಪಡದೆ ಪಾರ್ಲಿಮೆಂಟನ್ನು ರದ್ದು ಮಾಡಿದನು.

ಈ ಮಧ್ಯೆ ಫ್ರಾನ್ಸಿನೊಡನೆ ಕ್ರಿ. ಶ. ೧೬೨೭ ರಲ್ಲಿ ಯುದ್ಧ ಒದಗಿತು. ಬಕಿಂಗ್‌ಹ್ಯಾಮ್ ಲಾರೋಷೇಲ್ (La Rochelle) ಎಂಬಲ್ಲಿ ಮುತ್ತಿಗೆಗೊಳಗಾಗಿದ್ದ ಹ್ಯೂಜ್‌ನಾಟರನ್ನು ಬಿಡಿಸಲು ಹಡಗು ಸೈನ್ಯದೊಂದಿಗೆ ಹೋಗಿ, ವಿಫಲನಾಗಿ ಹಿಂದಿರುಗಿದ್ದನು. ಈ ಯುದ್ಧದ ಖರ್ಚಿಗಾಗಿ ಚಾರ್ಲ್ಸ್‌ನು ಅನೇಕ ರೀತಿಯಲ್ಲಿ ಹಣವನ್ನು ಒದಗಿಸಲು ಪ್ರಯತ್ನಿಸಿದ್ದನು. ಇದರಲ್ಲಿ ಒತ್ತಾಯದ ಸಾಲವೇ (Forced Loan) ಬಹು ಮುಖ್ಯವಾದುದು. ಚಾರ್ಲ್ಸ್‌ನು ತನ್ನ ಮೂರನೆ ಪಾರ್ಲಿಮೆಂಟನ್ನು ಕ್ರಿ. ಶ. ೧೬೨೮–೨೯ ರಲ್ಲಿ ಸೇರಿಸಿದನು. ಪುನಃ ಸರ್ ಜಾರ್ಜ್ ಇಲಿಯಟ್‌ನ ವಾಕ್ ಝರಿ ಪ್ರಾರಂಭವಾಯಿತು. ಪಾರ್ಲಿಮೆಂಟಿನ ಹಕ್ಕು ಬಾಧ್ಯತೆಗಳ ವಿಚಾರವಾಗಿ ವಾಕ್ ಯುದ್ಧ ಮುಂದುವರಿಯಿತು. ಪಾರ್ಲಿಮೆಂಟ್ ತನಗೆ ಹಣವನ್ನು ಒದಗಿಸದಿದ್ದರೆ ದೇವರು ತನಗೆ ತೋರಿಸಿದ ಮಾರ್ಗವನ್ನೆಲ್ಲಾ ಹಣಸಂಪಾದನೆಗಾಗಿ ಉಪಯೋಗಿಸಬೇಕಾಗುತ್ತೆಂದು ಚಾರ್ಲ್ಸ್ ಹೇಳಿದನು. "ಇದನ್ನು ಬೆದರಿಕೆಯೆಂದು ತಿಳಿಯಬೇಡಿ. ಏಕೆಂದರೆ ನನಗೆ ಸರಿಸಮಾನರಾದವರನ್ನು ಬೆದರಿಸಲು ನನಗೆ ಇಷ್ಟವಿಲ್ಲ" ಎಂದನು. ಚಾರ್ಲ್ಸ್‌ನು ಬಲಾತ್ಕಾರದ ಸಾಲವನ್ನು ಕೊಡಲು ನಿರಾಕರಿಸಿದ ಐದು ಜನ ಜಮೀನ್ದಾರರನ್ನು (Knights) ಸೆರೆಯಲ್ಲಿಡಿಸಿದ್ದನು. ಮೂರನೆ ಪಾರ್ಲಿಮೆಂಟ್ ಈ ಕುಂದು ಕೊರತೆಗಳನ್ನೆಲ್ಲಾ ನಿವಾರಿಸಲು ಒಂದು ಪತ್ರವನ್ನು ತಯಾರಿಸಿತು. ಇದಕ್ಕೆ ಪೆಟಿಷನ್ ಆಫ್ ರೈಟ್ (Petition of Right) ಎಂದು ಹೆಸರು. ಇದರಲ್ಲಿ ನಾಲ್ಕು ಮುಖ್ಯ ಷರತ್ತುಗಳಿದ್ದುವು : (೧) ಯಾವ ಪ್ರಜೆಯೇ ಆಗಲಿ ರಾಜನಿಗೆ ಬಲಾತ್ಕಾರದ ಸಾಲವನ್ನಾಗಲಿ ಮತ್ತು ಪಾರ್ಲಿಮೆಂಟಿನ ಅನುಮೋದನೆ ಇಲ್ಲದೆ ಇತರ ಯಾವ ತೆರಿಗೆಯನ್ನಾಗಲಿ ಕೊಡಕೂಡದು. (೨) ಸ್ವೇಚ್ಛೆಯಾಗಿ ಯಾವ ಕಾರಣವೂ ಇಲ್ಲದೆ ಯಾರನ್ನೂ ಸೆರಮನೆಗೆ ಒಯ್ಯಕೂಡದು. (೩) ಸೈನಿಕರನ್ನು ಯಾರ ಮನೆಗಳಲ್ಲಿಯೂ (Billetting) ಬಲಾತ್ಕಾರವಾದ ಅತಿಥಿ

ಗಳನ್ನಾಗಿ * ಮಾಡಕೂಡದು. (೪) ಶಾಂತಿಯು ಕಾಲದಲ್ಲಿ ಸಾಮರಿಕ ಕಾನೂನನ್ನು (Martial Law) ಬಳಕೆಗೆ ತರಕೂಡದು. ಪೆಟಿಷನ್ ಆಫ್ ರೈಟ್, ಮಾಗ್ನಕಾರ್ಟ ಅಥವಾ ಬಿಲ್ ಆಫ್ ರೈಟ್ಸ್ ಇವುಗಳಂತೆ ಒಂದು ಕಾನೂನಿನ ಮಟ್ಟಕ್ಕೆ ಏರತಕ್ಕದ್ದಲ್ಲ. ಅದು ರಾಜ್ಯಾಂಗದ ಕೆಲವು ತತ್ವಗಳನ್ನು ವಿಸ್ತರಿಸಿ, ರಾಜನ ಒಪ್ಪಿಗೆಯನ್ನು ಪಡೆದ ಒಂದು ಹೇಳಿಕೆ (Statement of Constitutional Principles). ಸಮಯ ಬಂದಾಗ ಇದನ್ನು ಹಿಂದಿನ ಉದಾಹರಣೆಯಾಗಿ (Precedent) ರಾಜ್ಯಾಂಗದ ವಿಚಾರದಲ್ಲಿ ವಿವಾದ ಬಂದಾಗ ಎತ್ತಿ ಹಿಡಿಯಬಹುದಾಗಿತ್ತು. ಬ್ರಿಟಿಷ್ ರಾಜ್ಯಾಂಗದ ಬೆಳವಣಿಗೆಯ ಚರಿತ್ರೆಯಲ್ಲಿ "ಪೆಟಿಷನ್ ಆಫ್ ರೈಟ್" ಒಂದು ಮಹತ್ತರವಾದ ಸ್ಥಾನವನ್ನು ಹೊಂದಿದೆ. ಚಾರ್ಲ್ಸನು ಇದಕ್ಕೆ ಒಪ್ಪಿಗೆ ಕೊಟ್ಟರೂ ಅದರಂತೆ ನಡೆಯಲಿಲ್ಲ.

ಚಾರ್ಲ್ಸನ ಮೂರನೆ ಪಾರ್ಲಿಮೆಂಟ್ ನಾಟಕದೋಪಾದಿಯಲ್ಲಿ ಮುಕ್ತಾಯಗೊಂಡಿತು. ಪೆಟಿಷನ್ ಆಫ್ ರೈಟ್‌ಗೆ ಒಪ್ಪಿಗೆಯನ್ನು ಕೊಟ್ಟ ನಂತರ ಬಂದ ಹಣದಲ್ಲಿ ಫ್ರಾನ್ಸಿನಲ್ಲಿ ಹ್ಯೂಜ್‌ನಾಟ್ಸ್ ಎಂಬ ಪ್ರಾಟೆಸ್ಟೆಂಟ್ ಗುಂಪಿನ ಸಹಾಯಕ್ಕೆ ಮತ್ತೊಂದು ಸೈನ್ಯವನ್ನು ಬಕಿಂಗ್‌ಹ್ಯಾಮನ ಮುಖಂಡತ್ವದಲ್ಲಿ ಕಳುಹಿಸಲು ಸಿದ್ಧತೆಯಾಗುತ್ತಿದ್ದಾಗ, ಬಕಿಂಗ್‌ಹ್ಯಾಮನಿಗೆ ಶತ್ರುವಾಗಿದ್ದ ಫೆಲ್‌ಟನ್ (Felton) ಎಂಬುವನು ಅವನನ್ನು ಕೊಂದನು. ಅವನ ಸಾವಿಗಾಗಿ ಲಂಡನ್ನಿನಲ್ಲಿ ಅನೇಕ ಸಂತೋಷ ಪ್ರದರ್ಶನಗಳು ನಡೆದುವು. ತನ್ನ ಸ್ನೇಹಿತನ ಮರಣವು ಚಾರ್ಲ್ಸನಿಗೆ ತುಂಬಾ ದುಃಖವನ್ನುಂಟುಮಾಡಿತು. ಪುನಃ ಪಾರ್ಲಿಮೆಂಟಿಗೂ, ಚಾರ್ಲ್ಸನಿಗೂ ಬಿಕ್ಕಟ್ಟು ಪ್ರಾರಂಭವಾಯಿತು. ಚಾರ್ಲ್ಸನು ಪಾರ್ಲಿಮೆಂಟನ್ನು ರದ್ದುಗೊಳಿಸಬೇಕೆಂದು ಯೋಚಿಸುತ್ತಿದ್ದನು. ಇದನ್ನರಿತು

* ಪರದೇಶದ ಮೇಲೆ ಯುದ್ಧಕ್ಕಾಗಿ ಸೇರಿಸಿಕೊಂಡ ಸೈನಿಕರಿಗೆ ಆಗಿಂದಾಗ್ಗೆ ಗೃಹಸ್ಥರ ಮನೆಗಳಲ್ಲಿ ಆಶ್ರಯ ಕೊಡಲಾಗುತ್ತಿತ್ತು. ಸೈನಿಕರ ನಡತೆಯು ಅನೇಕ ವೇಳೆ ಅಸಮರ್ಪಕವಾಗಿತ್ತು. ಅವರು ಕುರ್ಚಿ, ಮೇಜ ಮೊದಲಾದುವುಗಳನ್ನು ಅಡಿಗೆಯು ರುಚಿಯಾಗಿಲ್ಲದಿದ್ದರೆ ಒಡೆಯುತ್ತಿದ್ದುದಲ್ಲದೆ, ಆಹಾರವನ್ನೂ ನೆಲದ ಮೇಲೆ ಎರಚಿಬಿಡುತ್ತಿದ್ದರು.

ಪಾರ್ಲಿಮೆಂಟಿನ ಸದಸ್ಯರ ಪೈಕಿ ಇಬ್ಬರು, ಸಭಾಧ್ಯಕ್ಷನು ಹೊರಡಲನುವಾದಾಗ ಅವನನ್ನು ಹಿಡಿದು ಕುರ್ಚಿಯೊಳಗೆ ಒತ್ತಾಯ ಪೂರ್ವಕವಾಗಿ ಕುಳ್ಳಿರಿಸಿ, ಇಲಿಯಟ್ಟನ ಮುಖಂಡತ್ವದಲ್ಲಿ "ಯಾರು ಪ್ರಾಟಿಸ್ಟೆಂಟ್ ಮತದಲ್ಲಿ ಬದಲಾವಣೆಗಳನ್ನು ಮಾಡಲು ಪ್ರಯತ್ನಿಸುವರೋ, ಯಾರು ಪಾರ್ಲಿಮೆಂಟಿನ ಒಪ್ಪಿಗೆಯಿಲ್ಲದೆ ಟನೇಜ್ ಮತ್ತು ಪೌಂಡೇಜ್ ಹಾಕುವರೋ ಮತ್ತು ಯಾರು ಅವುಗಳನ್ನು ಕೊಡುವರೋ ಅವರು ದೇಶದ್ರೋಹಿಗಳು" ಎಂಬುದಾಗಿ ಕ್ರಿ. ಶ. ೧೬೨೯ ರ ಮಾರ್ಚಿಯಲ್ಲಿ ಮೂರು ನಿರ್ಣಯಗಳನ್ನು ಮಾಡಿದರು. ಚಾರ್ಲ್ಸನು ಈ ನಿರ್ಣಯಗಳಿಗೆ ಮುಖಂಡರಾದ ಇಲಿಯಟ್ ಮೊದಲಾದವರನ್ನು ಸೆರೆಮನೆಗೆ ಕಳುಹಿಸಿದನು ಮೂರುವರ್ಷಗಳ ನಂತರ ಇಲಿಯಟ್ ಸೆರೆಮನೆಯಲ್ಲಿ ಸತ್ತುಹೋದನು.

**ಹನ್ನೊಂದು ವರ್ಷಗಳ ದಬ್ಬಾಳಿಕೆ: ಕ್ರಿ. ಶ. ೧೬೨೯–೧೬೪೦.**

ಚಾರ್ಲ್ಸನು ಹನ್ನೊಂದು ವರ್ಷಗಳಕಾಲ ಪಾರ್ಲಿಮೆಂಟನ್ನು ಸೇರಿಸದೆ ರಾಜ್ಯವನ್ನಾಳಿದನು. ಇದನ್ನು ಚರಿತ್ರೆಕಾರರು "ಹನ್ನೊಂದು ವರ್ಷಗಳ ದಬ್ಬಾಳಿಕೆ (Eleven years tyranny)" ಎಂದು ಕರೆದಿದ್ದಾರೆ. ಎಂಟನೆ ಹೆನ್ರಿಯ ಕಾಲದ ಆಳ್ವಿಕೆಗೆ ಇದನ್ನು ಹೋಲಿಸಿದರೆ ಇದು ಅಷ್ಟೇನೂ ಕಷ್ಟತರವಾದುದಾಗಿರಲಿಲ್ಲ. ಮರಣದಂಡನೆಯಾಗಲಿ, ಚಿತ್ರಹಿಂಸೆಯಾಗಲಿ (Torture) ಈ ಕಾಲದಲ್ಲಿ ನಡೆಯಲಿಲ್ಲ. ಚಿತ್ರಹಿಂಸೆಯು ಇಂಗ್ಲೆಂಡಿನಲ್ಲಿ ಗೈಫಾಕ್ಸಿನೊಂದಿಗೆ ಮುಕ್ತಾಯವಾಯಿತು. ದೇಶದಲ್ಲಿ ವ್ಯಾಪಾರ ಮತ್ತು ಐಶ್ವರ್ಯ ಹೆಚ್ಚುತ್ತಿತ್ತು.

ಈ ಕಾಲದಲ್ಲಿ ಚಾರ್ಲ್ಸನಿಗೆ ಹಣದ ಕೊರತೆ ಹೆಚ್ಚಾಗಿ ಇದ್ದುದ್ದರಿಂದ ಫ್ರಾನ್ಸಿನೊಂದಿಗೂ ಮತ್ತು ಸ್ಪೇನಿನೊಂದಿಗೂ ಒದಗಿದ್ದ ಯುದ್ಧವನ್ನು ಮುಕ್ತಾಯಗೊಳಿಸಬೇಕಾಯಿತು. ಚಾರ್ಲ್ಸನು ಹಣಕ್ಕಾಗಿ ಅನೇಕ ಉಪಾಯಗಳನ್ನು ಹುಡುಕಿದನು. ಬಲಾತ್ಕಾರದ ಸಾಲ, ಬಲಾತ್ಕಾರದ ದಾನ (Forced gifts), ಕೆಲವು ಕಂಪನಿಗಳೇ ಕೆಲವು ಪದಾರ್ಥಗಳ ಮಾರಾಟದ ಬೆಲೆಯನ್ನು ನಿಷ್ಕರ್ಷಿಸಿ ತಾವೇ ಮಾರುವ ಹಕ್ಕನ್ನು ಪಡೆದುಕೊಳ್ಳುವುದರ ಮೂಲಕ ಬರುತ್ತಿದ್ದ ಹಣ (Granting of Monopoly), ರಾಜನ ಜಮೀನುಗಳಿಂದ ಬರುತ್ತಿದ್ದ ಗುತ್ತಿಗೆ ಹಣ

(Rents from Crown Lands) ಇವೇ ಅವುಗಳಲ್ಲಿ ಮುಖ್ಯವಾದುವು. ಇವಲ್ಲದೆ ಚಾರ್ಲ್ಸನು ಕೆಲವು ಫ್ಯೂಡಲ್ ಪದ್ಧತಿಗೆ ಸೇರಿದ ತೆರಿಗೆಗಳನ್ನೂ ಪುನರುಜ್ಜೀವನಗೊಳಿಸಿದನು. ವರ್ಷಕ್ಕೆ ೪೦ ಪೌಂಡು ಆದಾಯಕ್ಕಿಂತ ಹೆಚ್ಚು ವರಮಾನವಿದ್ದ ಜಮೀನ್ದಾರರು ಕಡ್ಡಾಯವಾಗಿ ನೈಟ್ ಪದವಿಯನ್ನು ಹೊಂದಿ, ಆ ಗೌರವಕ್ಕಾಗಿ ರಾಜನಿಗೆ ಹಣವನ್ನು ಕೊಡಬೇಕೆಂದು ವಿಧಿಸಿದನು. ಅದಕ್ಕೆ ಅವರು ಒಪ್ಪದಿದ್ದಲ್ಲಿ ದಂಡವನ್ನು ತೆರಬೇಕಾಗಿತ್ತು. ಇದು ಒಂದನೆ ಎಡ್ವರ್ಡನ ಕಾಲದಲ್ಲಿದ್ದ ಪದ್ಧತಿ. ರಾಜನಿಗೆ ಸೇರಿದ ಕಾಡುಗಳನ್ನು ಅನೇಕರು ಆಕ್ರಮಿಸಿಕೊಂಡಿದ್ದರು. ಅವರಿಂದೆಲ್ಲಾ ದಂಡವನ್ನು ಹಣದ ರೂಪದಲ್ಲಿ ವಸೂಲ್ಮಾಡಿದನು. ಇವೆಲ್ಲಕ್ಕಿಂತ ಹೆಚ್ಚು ಅನರ್ಥಕ್ಕೆ ಕಾರಣವಾದ ತೆರಿಗೆ ಎಂದರೆ "ಹಡಗಿನ ಹಣ" (Ship money). ಹಡಗಿನ ಹಣವನ್ನು ತೆಗೆದುಕೊಳ್ಳುವ ಪದ್ಧತಿ ಹೊಸದೇನೂ ಅಲ್ಲ. ಹಡಗುಗಳ ನಿರ್ಮಾಣಕ್ಕಾಗಿಯೂ, ಹಳೆಯ ಹಡಗುಗಳನ್ನು ಸರಿಪಡಿಸುವುದಕ್ಕಾಗಿಯೂ ಈ ಹಣವನ್ನು ಸರ್ಕಾರವು ಆಗಿಂದಾಗ್ಗೆ ಯುದ್ಧಕಾಲದಲ್ಲಿ ರೇವುಪಟ್ಟಣಗಳಿಂದ ತೆಗೆದುಕೊಳ್ಳುತ್ತಿತ್ತು. ಕ್ರಿ. ಶ. ೧೬೩೪ ರಲ್ಲಿ ಚಾರ್ಲ್ಸನು ಈ ತೆರಿಗೆಯನ್ನು ರೇವುಪಟ್ಟಣಗಳ ಮೇಲೆ ಹಾಕಿದನು. ಕ್ರಿ. ಶ. ೧೬೩೫ ರಲ್ಲಿ ರೇವುಪಟ್ಟಣಗಳ ಮೇಲಲ್ಲದೆ ದೇಶದಾದ್ಯಂತ ಈ ತೆರಿಗೆಯನ್ನು ವಿಧಿಸಿದನು. ಇದು ಪಾರ್ಲಿಮೆಂಟಿನ ಒಪ್ಪಿಗೆ ಇಲ್ಲದೆ ಹಾಕಿದ ತೆರಿಗೆಯಾದ್ದರಿಂದ ಜಾನ್ ಹ್ಯಾಂಪ್ಡನ್ (John Hampden) ಎಂಬುವನು ಈ ತೆರಿಗೆಯನ್ನು ಕೊಡಲು ನಿರಾಕರಿಸಿದನು ನ್ಯಾಯಾಧಿಪತಿಗಳು ಈ ತೆರಿಗೆಯನ್ನು ವಸೂಲ್ಮಾಡಲು ಅತ್ಯಾವಶ್ಯಕ ಸಮಯದಲ್ಲಿ ರಾಜನಿಗೆ ಅಧಿಕಾರವಿದೆಯೆಂದು ತೀರ್ಪಿತ್ತರು.

ಚಾರ್ಲ್ಸನಿಗೆ ಈ ಕಾಲದಲ್ಲಿ ಇಬ್ಬರು ಆಪ್ತ ಸಲಹೆಗಾರರಾಗಿದ್ದರು. ಮಹಾಮಠಾದಿಪತಿಯಾಗಿದ್ದ ವಿಲಿಯಂ ಲಾಡ್ (William Laud, ೧೫೭೩–೧೬೪೫) ಮತೀಯ ವಿಚಾರಗಳಲ್ಲಿ ರಾಜನಿಗೆ ಸಹಾಯಕನಾಗಿದ್ದನು. ಮೊದಲು ಲಾಡ್ ಆಕ್ಸ್‌ಫರ್ಡಿನ ಸೆಂಟ್‌ಜಾನ್ ಕಾಲೇಜಿನಲ್ಲಿ ಅಧ್ಯಕ್ಷನಾಗಿದ್ದನು. ನಂತರ ಲಂಡನ್ನಿನ ಮಠಾಧಿಪತಿಯಾದನು (Bishop of London). ಕ್ರಿ. ಶ. ೧೬೩೩ ರಲ್ಲಿ ಕ್ಯಾಂಟರ್‌ಬರಿಯ

ಮಹಾ ಮಠಾಧಿಪತಿಯಾದನು. (Archibishop of Canter-bury). ರಾಜಕೀಯದಲ್ಲಿ ಚಾರ್ಲ್ಸ್‌ನಿಗೆ ಸರ್ ಥಾಮಸ್ ವೆಂಟ್‌ವರ್ತ್ (Sir Thomas Went Worth, ೧೫೯೩–೧೬೪೧) ಎಂಬುವನು ಸಲಹೆಗಾರನಾಗಿದ್ದನು. ಸರ್ ಥಾಮಸ್ ವೆಂಟ್‌ವರ್ತ್ ಮೊದಮೊದಲು ಪಾರ್ಲಿಮೆಂಟಿನ ಸಭೆಯಲ್ಲಿ ಬಹಳ ಪ್ರಮುಖ ಪಾತ್ರವನ್ನು ವಹಿಸಿದ್ದನು. ಬಕಿಂಗ್‌ಹ್ಯಾಮನನ್ನು ಖಂಡಿಸಿದವರಲ್ಲಿ ಇವನೇ ಪ್ರಮುಖನಾಗಿದ್ದನು. "ಪೆಟಿಷನ್ ಆಫ್ ರೈಟ್" ಬರಲು ಇವನೂ ಸಹಾಯಕನಾಗಿದ್ದನು. ಆದರೆ ಪಾರ್ಲಿಮೆಂಟ್ ಹೆಚ್ಚು ಹೆಚ್ಚು ಪ್ಯೂರಿಟನ್ನರ ಆಳ್ವಿಕೆಗೆ ಒಳಗಾಗುತ್ತಿದ್ದುದು ಇವನಿಗೆ ಸರಿಬೀಳಲಿಲ್ಲ. ಕ್ರಿ. ಶ. ೧೬೨೮ ರಲ್ಲಿ ಇವನು ಚಾರ್ಲ್ಸ್‌ನ ಪಕ್ಷವನ್ನು ಸೇರಿದನು. ಮೊದಲು ಉತ್ತರದ ಸಮಿತಿಯ (Council of North) ಅಧ್ಯಕ್ಷನಾಗಿದ್ದನು. ಅನಂತರ ಐರ್ಲೆಂಡಿನ ಮುಖ್ಯಾಧಿಕಾರಿಯಾದನು. ಅಲ್ಲಿ ಒಂದು ಸೈನ್ಯವನ್ನು ಕಟ್ಟಿ ಬಹಳ ದಕ್ಷತೆಯಿಂದ ರಾಜ್ಯಭಾರ ಮಾಡಿದನು. ಈ ಪದ್ಧತಿಗೆ "ಥರೋ" (Thorough) ಎಂದು ಹೆಸರು.

ಲಾಡ್ ಇಂಗ್ಲಿಷ್ ಚರ್ಚಿನಲ್ಲಿ ಶಿಸ್ತನ್ನು ತಂದನು. ಪ್ರಾರ್ಥನಾ ಪುಸ್ತಕವನ್ನು ಉಪಯೋಗಿಸುವುದು, ಪಾದ್ರಿಗಳು ಬೋಧನೆ ಮಾಡುತ್ತಿದ್ದಾಗ ಅಲಂಕಾರಯುಕ್ತವಾದ ವಿಶೇಷ ರೀತಿಯ ಮೇಲ್ಬಟ್ಟೆಯನ್ನು ಹಾಕಿಕೊಳ್ಳುವುದು, ಚರ್ಚಿನ ಆಡಳಿತವನ್ನು ನೋಡಿಕೊಳ್ಳಲು ಮಠಾಧಿಪತಿಯ ನೇಮಕ ಇವೇ ಮೊದಲಾದುವು ಪ್ರಾಟೆಸ್ಟೆಂಟ್ ಮತದಲ್ಲಿ ಶ್ರದ್ಧೆ ಹೊಂದಿದ್ದ ಲಾಡನಿಗೆ ಪ್ರಿಯಕರವಾಗಿದ್ದರೂ ಪ್ಯೂರಿಟನ್ನರಿಗೆ ಸಹನೀಯವಾಗಿರಲಿಲ್ಲ. ಅವರಿಗೆ ಚರ್ಚುಗಳ ಆಡಳಿತವನ್ನು ಮಠಾಧಿಪತಿಯಿಂದ ತಪ್ಪಿಸಿ, ಚುನಾಯಿತವಾದ ಸಮಿತಿಗಳೇ ನಡೆಸಬೇಕೆಂದು ಅಭಿಪ್ರಾಯವಿತ್ತು. ಚರ್ಚಿನಲ್ಲಿದ್ದ ಅಲಂಕಾರ ಮೊದಲಾದುವು ಅವರಿಗೆ ಸರಿಬೀಳುತ್ತಿರಲಿಲ್ಲ. ಲಾಡ್ ಟ್ಯೂಡರ್ ಕಾಲದಲ್ಲಿ ಸ್ಥಾಪಿತವಾಗಿದ್ದ ಹೈಕಮಿಷನ್ ಮತ್ತು ಸ್ಟಾರ್ ಛೇಂಬರ್ ಮೊದಲಾದ ನ್ಯಾಯಾಲಯಗಳ ಮೂಲಕ ಅನೇಕ ಪ್ಯೂರಿಟನ್ನರುಗಳನ್ನು ಶಿಕ್ಷೆಗೆ ಗುರಿಪಡಿಸಿದನು. ಲಾಡನ ಚರ್ಚ್ ಪದ್ಧತಿಗೆ ಒಳಗಾಗುವುದಕ್ಕಿಂತ ದೇಶಬಿಟ್ಟು ಹೋಗುವುದೇ ಲೇಸೆಂದು

ಅನೇಕ ಪ್ಯೂರಿಟನ್ನರು ಉತ್ತರ ಅಮೆರಿಕ ಮೊದಲಾದ ಕಡೆಗೆ ವಲಸೆ ಹೋದರು. ಕ್ರಿ. ಶ. ೧೬೩೭ ರಲ್ಲಿ ಪ್ರಿನ್ನ್ (Prynne), ಬರ್ಟನ್ (Burton) ಮತ್ತು ಬಾಸ್ಟ್ವಿಕ್ (Bastwick) ಮೊದಲಾದ ಪ್ಯೂರಿಟನ್ನರನ್ನು ಲಾಡ್ ಶಿಕ್ಷೆಗೆ ಗುರಿಪಡಿಸಿದಾಗ, ಜನಗಳು ಅವರಿಗೆ ಅದ್ಭುತ ಬೆಂಬಲವನ್ನು ಕೊಟ್ಟರು. ಗ್ಲಾಡ್‌ಸ್ಟನ್ನನ ಅಭಿಪ್ರಾಯದಲ್ಲಿ ಲಾಡ್ ಇಂಗ್ಲೆಂಡಿನ ಚರ್ಚನ್ನು ಕಾಪಾಡಿದನು. ಇದು ನಿರ್ವಿವಾದವಾದ ಅಭಿಪ್ರಾಯವಲ್ಲದಿದ್ದರೂ ಲಾಡನ ವರ್ತನೆಯನ್ನು ಅವಲೋಕಿಸಿದರೆ ಅವನು ಯೂರೋಪಿನ ಬೇರೆ ಬೇರೆ ರಾಷ್ಟ್ರಗಳಲ್ಲಿ ಮತದ ಹೆಸರಿನಲ್ಲಿ ನಡೆಯುತ್ತಿದ್ದ ರಕ್ತಪಾತದ ಹೊಣೆಗೆ ಇಂಗ್ಲೆಂಡಿನಲ್ಲಿ ಕಾರಣನಾಗಲಿಲ್ಲ ವೆಂಬುದು ವ್ಯಕ್ತವಾಗುವುದು.

ಆದರೆ ಲಾಡ್ ಮತ್ತು ಚಾರ್ಲ್ಸ್ ಸ್ಕಾಟ್ಲೆಂಡಿನ ಚರ್ಚಿನಲ್ಲಿ ಪ್ರಾರ್ಥನಾ ಪುಸ್ತಕವನ್ನು ಉಪಯೋಗಿಸುವಂತೆ ಮಾಡಿದುದು ತೊಂದರೆಗೀಡಾಯಿತು. ಸ್ಕಾಟ್ಲೆಂಡ್, ಕ್ಯಾಲ್ವಿನ್ ಸ್ಥಾಪಿಸಿದ ಮತದ (Puritanism) ಅನುಯಾಯಿಯಾಗಿತ್ತು. ಆದುದರಿಂದ ಅಲ್ಲಿ ಪ್ರತಿಭಟನೆ ಮೊದಲಾಯಿತು. ಇದೂ ಅಲ್ಲದೆ ಸ್ಕಾಟ್ಲೆಂಡಿನ ಚರ್ಚಿನಲ್ಲಿ ಮಠಾಧಿಪತಿಗಳು ಆಡಳಿತ ನಡೆಸುವಂತೆ ಮಾಡಿದ ಲಾಡನ ಏರ್ಪಾಡು ಸ್ಕಾಟರನ್ನು ಕೆರಳಿಸಿತು. ಇದರಿಂದ ಸ್ಕಾಟ್ಲೆಂಡಿಗೂ ಮತ್ತು ಚಾರ್ಲ್ಸ್‌ನಿಗೂ ಕ್ರಿ. ಶ. ೧೬೩೯ ರಲ್ಲಿ ಒಂದನೆ ಮಠಾಧಿಪತಿಗಳ ಯುದ್ಧ (First Bishop's war) ನಡೆಯಿತು. ಚಾರ್ಲ್ಸ್‌ನು ಬರ್‌ವಿಕ್ (Berwick) ಕೌಲಿನಿಂದ ಯುದ್ಧ ಮುಕ್ತಾಯಗೊಳಿಸಿ, ಐರ್ಲೆಂಡಿನಲ್ಲಿದ್ದ ವೆಂಟ್‌ವರ್ತ್‌ನನ್ನು ಕರೆಯಿಸಿ, ಅವನ ಸಲಹೆ ಪ್ರಕಾರ ಪಾರ್ಲಿಮೆಂಟ್ ಸಭೆಯನ್ನು ಸೇರಿಸಿದನು. ಕ್ರಿ. ಶ. ೧೬೪೦ ನೇ ಏಪ್ರಿಲ್‌ನಲ್ಲಿ ಸೇರಿದ ಪಾರ್ಲಿಮೆಂಟಿಗೆ "ಷಾರ್ಟ್ ಪಾರ್ಲಿಮೆಂಟ್" (Short parliament) ಎಂದು ಹೆಸರು. ಆದರೆ ಚಾರ್ಲ್ಸ್ ಬಹುಬೇಗ ಈ ಪಾರ್ಲಿಮೆಂಟನ್ನು ರದ್ದುಮಾಡಿದನು. ವೆಂಟ್‌ವರ್ತ್‌ನನ್ನು ಅರ್ಲ್ ಆಫ್ ಸ್ಟ್ರಾಫರ್ಡ್ (Earl of Strafford) ಪದವಿಗೇರಿಸಿದನು.

ಈ ಮಧ್ಯೆ ಸ್ಕಾಟರು ಇಂಗ್ಲೆಂಡಿನ ಮೇಲೆ ಬಿದ್ದರು. ಅವರಿಗೆ ಸ್ಟ್ರಾಫರ್ಡನ ಮೇಲೆ ಸಂಶಯ ಹುಟ್ಟಿತ್ತು. ಐರ್ಲೆಂಡನ್ನು ಸೈನ್ಯದ ಸಹಾಯದಿಂದ ಆಳಿದಂತೆ ತಮ್ಮ ಮೇಲೂ ಸೈನ್ಯವನ್ನು ಕಟ್ಟಿ ನುಗ್ಗಬಹುವೆಂಬ ಊಹೆಯಿಂದ ಅವರು ತಾವೇ ಮೊದಲು ಇಂಗ್ಲೆಂಡನ್ನು ಮುತ್ತಿದರು. ಇದಕ್ಕೆ ಎರಡನೆ ಮಠಾಧಿಪತಿಗಳ ಯುದ್ಧವೆಂದು ಹೆಸರು. ಚಾರ್ಲ್ಸನು ರಿಪ್ಪನ್ ಕೌಲಿನ ಪ್ರಕಾರ ಸ್ಕಾಟ್ಲೆಂಡಿನ ಸೈನ್ಯಕ್ಕೆ ಖರ್ಚಿಗಾಗಿ ದಿವಸಕ್ಕೆ ೮೫೦ ಪೌಂಡು ಕೊಡುವುದಾಗಿ ಒಪ್ಪಂದ ಮಾಡಿಕೊಂಡನು. ಇದಕ್ಕಾಗಿ ಚಾರ್ಲ್ಸನು ಮತ್ತೊಂದು ಪಾರ್ಲಿಮೆಂಟನ್ನು ಕರೆಯಬೇಕಾಯಿತು. ಇದೇ ಚರಿತ್ರೆಯಲ್ಲಿ ಪ್ರಸಿದ್ಧವಾದ ಲಾಂಗ್ ಪಾರ್ಲಿಮೆಂಟ್.

**ಲಾಂಗ್ ಪಾರ್ಲಿಮೆಂಟ್ ಮತ್ತು ಅದರ ಕೆಲಸ:** ಲಾಂಗ್ ಪಾರ್ಲಿಮೆಂಟ್ ನವಂಬರ್ ೧೬೪೦ ರಲ್ಲಿ ಸೇರಿತು. ಕ್ರಿ. ಶ. ೧೬೪೨ ರ ಆಗಸ್ಟ್ ವೇಳೆಗೆ ಪಾರ್ಲಿಮೆಂಟಿಗೂ ಮತ್ತು ಚಾರ್ಲ್ಸನಿಗೂ ಅಂತಯುರ್ದ್ಧ (Civil War) ಪ್ರಾರಂಭವಾಯಿತು. ಸುಮಾರು ಈ ಎರಡು ವರ್ಷಗಳಲ್ಲಿ ಲಾಂಗ್ ಪಾರ್ಲಿಮೆಂಟ್ ಅನೇಕ ಕೆಲಸಗಳನ್ನು ಸಾಧಿಸಿತು. ಲಾಂಗ್ ಪಾರ್ಲಿಮೆಂಟಿನ ಚರಿತ್ರೆಯನ್ನು ನೋಡಿದರೆ ಅದರಲ್ಲಿ ಎರಡು ಅಧಿವೇಶನಗಳು (Sessions) ಕಂಡುಬರುವುವು. ಮೊದಲನೆಯ ಅಧಿವೇಶನದಲ್ಲಿ ಕಾಮನ್ಸ್ ಸಭೆಯು ಒಗ್ಗಟ್ಟಿನಿಂದ ಕೂಡಿ ರಾಜನ ದಬ್ಬಾಳಿಕೆಗೆ ಸಹಾಯಕವಾಗಿದ್ದ ಸಾಧನಗಳನ್ನೆಲ್ಲಾ ಮುರಿದುಹಾಕಿತು. ಎರಡನೆಯ ಅಧಿವೇಶನದಲ್ಲಿ ಪಾರ್ಲಿಮೆಂಟಿನಲ್ಲಿ ಒಗ್ಗಟ್ಟಿರಲಿಲ್ಲ. ಅದರಲ್ಲಿ "ಕೆವಿಲಿಯರ್ಸ್" (Cavaliers) ಮತ್ತು "ರೌಂಡ್ ಹೆಡ್ಸ್" (Round heads) ಎಂಬ ಎರಡು ಪಂಗಡಗಳು ನಿರ್ಮಾಣವಾದುವು.

ಒಂಬತ್ತು ತಿಂಗಳ ಕಾಲದಲ್ಲಿ ಲಾಂಗ್ ಪಾರ್ಲಿಮೆಂಟ್ ತನ್ನ ಮೊದಲನೆಯ ಅಧಿವೇಶನದಲ್ಲಿ ರಾಜನ ಮತ್ತು ಪಾರ್ಲಿಮೆಂಟಿನ ಮಧ್ಯೆ ಎದ್ದಿದ್ದ ಅನೇಕ ರಾಜ್ಯಾಂಗ ಸಮಸ್ಯೆಗಳನ್ನು ಪರಿಹರಿಸಿತು. ರಾಜನ ದಬ್ಬಾಳಿಕೆಯನ್ನು ರದ್ದುಮಾಡಿತು. ಈ ಪಾರ್ಲಿಮೆಂಟಿನಲ್ಲಿ ಮುಖ್ಯಪಾತ್ರ ವಹಿಸಿದ್ದವನು ಪಿಮ್ ಎಂಬುವನು. ಪಿಮ್ ಸಾಮರ್‌ಸೆಟ್‌ಷೈರ್ ಪ್ರದೇಶದಿಂದ ಪಾರ್ಲಿಮೆಂಟಿಗೆ ಚುನಾಯಿತನಾಗಿ ಬಂದಿದ್ದನು. ಅವನು ಪ್ರಚಂಡ

ವಾಗ್ಮಿ. ಎರಡು ಗಂಟೆಗಳ ಕಾಲ ಒಂದೇ ಸಮನಾಗಿ ಚಾರ್ಲ್ಸ್‌ನ ಹನ್ನೊಂದು ವರ್ಷಗಳ ದಬ್ಬಾಳಿಕೆಯ ವಿಚಾರವಾಗಿ ಮಾತನಾಡಿ, ಚಾರ್ಲ್ಸ್‌ನು ಆ ಕಾಲದಲ್ಲಿ ಹಣಕ್ಕಾಗಿ ಉಪಯೋಗಿಸಿದ ಮಾರ್ಗಗಳನ್ನು ತೀವ್ರವಾಗಿ ಖಂಡಿಸಿದನು. ಅವನ ಪ್ರಭಾವವು ಪಾರ್ಲಿಮೆಂಟಿನಲ್ಲಿ ಅತ್ಯಧಿಕವಾಗಿದ್ದುದರಿಂದ ಅವನ ಶತ್ರುಗಳು ಅವನನ್ನು "ಕಿಂಗ್ ಪಿಮ್" (King Pym) ಎಂದು ಕರೆಯುತ್ತಿದ್ದರು. ಮೊಟ್ಟಮೊದಲು ಪಾರ್ಲಿಮೆಂಟ್ ತನ್ನ ಒಪ್ಪಿಗೆಯಿಲ್ಲದೆ ಯಾರೂ ಅದನ್ನು ರದ್ದುಮಾಡಕೂಡದೆಂದು ಒಂದು ಕಾನೂನನ್ನು ಜಾರಿಗೆ ತಂದಿತು. ಮತ್ತು ಇನ್ನು ಮುಂದೆ ಮೂರು ವರ್ಷಕ್ಕೊಂದುಸಲವಾದರೂ ಪಾರ್ಲಿಮೆಂಟನ್ನು ಸೇರಿಸಬೇಕೆಂದು ನಿರ್ಣಯಮಾಡಿತು. ಇದಕ್ಕೆ ಟ್ರಿಯನಿಯಲ್ ಆಕ್ಟ್ (Triennial Act) ಎಂದು ಹೆಸರು. ಅನಂತರ ದಬ್ಬಾಳಿಕೆಗೆ ಸಹಾಯಕವಾಗಿದ್ದ ಹೈಕಮಿಷನ್ ನ್ಯಾಯಾಲಯ, ಸ್ಟಾರ್ ಛೇಂಬರ್ ನ್ಯಾಯಾಲಯ, ಉತ್ತರದ ಸಮಿತಿ (Council of North) ಮತ್ತು ವೇಲ್ಸಿನ ಸಮಿತಿ (Council of Wales) ಇವುಗಳನ್ನು ರದ್ದುಮಾಡಿತು.

ರಾಜನಿಗೆ ಸಲಹೆಗಾರರಾಗಿದ್ದ ಲಾರ್ಡ್ ಸ್ಟ್ರಾಫರ್ಡ್ ಮತ್ತು ಲಾಡ್ ಇವರುಗಳನ್ನು ಖಂಡಿಸಿತು. ಸ್ಟ್ರಾಫರ್ಡನನ್ನು ಹೇಗೆ ಶಿಕ್ಷಿಸಬೇಕೆಂಬುದು ಪಾರ್ಲಿಮೆಂಟಿಗೆ ಒಂದು ಸಮಸ್ಯೆಯಾಯಿತು. ಮೊದಲು ಅವನ ಮೇಲೆ ರಾಜದ್ರೋಹದ ಆಪಾದನೆಯನ್ನು ತರಲಾಯಿತು. ಆದರೆ ಆ ಆಪಾದನೆಯು ನ್ಯಾಯಾಲಯದಲ್ಲಿ ಖಚಿತವಾಗುವುದಿಲ್ಲವೆಂಬ ಸಂಶಯದಿಂದ ಪಿಮ್ ಬೇರೆ ದಾರಿಯನ್ನು ಹುಡುಕಬೇಕಾಯಿತು. ಫಾರ್ಲಿಮೆಂಟ್ ಯಾರ ಹೆಸರನ್ನು ತನ್ನ ಕಾನೂನಿನಿಂದ ನಮೂದಿಸಿರುವುದೋ ಅಂಥಹವರನ್ನು ಮರಣದಂಡನೆಗೆ ಗುರಿಪಡಿಸಬೇಕೆಂಬ ಒಂದು ನಿರ್ಣಯವನ್ನು ತಂದಿತು. ಇಂತಹ ಸಂದರ್ಭಗಳಲ್ಲಿ ಕಾನೂನಿನಲ್ಲಿ ನಮೂದಿಸಲ್ಪಟ್ಟವನಿಗೆ ವಿಚಾರಣೆಯ ಹಕ್ಕು ಇರಲಿಲ್ಲ. ಇದಕ್ಕೆ ಬಿಲ್ ಆಫ್ ಅಟೆಂಡರ್ (Bill of Attainder) ಎಂದು ಹೆಸರು. ಕ್ರಿ.ಶ. ೧೬೪೧ ನೇ ಮೇ ನಲ್ಲಿ ಸ್ಟ್ರಾಫರ್ಡನ ಶಿರಚ್ಛೇದನವಾಯಿತು. ಈ ಕಾನೂನಿಗೆ ಚಾರ್ಲ್ಸ್‌ನು ಮೊಟ್ಟಮೊದಲು ತನ್ನ ಸಹಿಯನ್ನು ಹಾಕಲಿಲ್ಲ.

ಆದರೆ ಪರಿಸ್ಥಿತಿಯು ತುಂಬಾ ಉಲ್ಬಣಾವಸ್ಥೆಗೆ ಏರಿತು. ಜನಗಳು ಸ್ಟ್ರಾಫರ್ಡನ ಮರಣವನ್ನು ಬಯಸುವವರಾಗಿದ್ದರು. ಅಲ್ಲಲ್ಲಿ ಜನಗಳ ದೊಡ್ಡ ಗುಂಪು ಚಾರ್ಲ್ಸ್‌ನ ಅರಮನೆಯ ಹತ್ತಿರ ಗಲಭೆ ಮಾಡುತ್ತಿತ್ತು. ಕ್ಯಾಥಲಿಕ್ ಮತಕ್ಕೆ ಸೇರಿದ ತನ್ನ ರಾಣಿಯ ರಕ್ಷಣೆಗಾಗಿ, ಚಾರ್ಲ್ಸ್‌ನು ತನ್ನ ಸ್ನೇಹಿತನ ಮರಣದ ಕಾನೂನಿಗೆ ಬಹಳ ದುಃಖದಿಂದ ರುಜು ಮಾಡಿದನು. ನಾಲ್ಕು ವರ್ಷಗಳ ನಂತರ ಸೆರೆಮನೆಯಲ್ಲಿದ್ದ ಲಾಡ್ ಎಂಬುವನಿಗೂ ಇದೇ ಗತಿಯಾಯಿತು.

ಈ ಮಧ್ಯೆ ಕೆಲವು ಪಾರ್ಲಿಮೆಂಟ್ ಸದಸ್ಯರು ಚರ್ಚಿನ ಆಡಳಿತವನ್ನು ಮಠಾಧಿಪತಿಗಳ ಹಿಡಿತದಿಂದ ತಪ್ಪಿಸಲು "ಬೇರು ಮತ್ತು ಶಾಖೆ"ಯ ಮಸೂದೆಯನ್ನು (Root and Branch Bill) ತಂದರು. ಪ್ಯೂರಿಟನ್ ಸದಸ್ಯರು ಎಲಿಸಬೆತ್ತಳ ಕಾಲದಲ್ಲಿದ್ದ ಚರ್ಚ್ ಪದ್ಧತಿಯನ್ನು ಬೇರು ಮತ್ತು ಶಾಖೆಯ ಸಹಿತ ಕತ್ತರಿಸಿ ಹಾಕಬೇಕೆಂದು ಪ್ರಯತ್ನ ಮಾಡಿದರು. ಆದರೆ ಅದು ಪಾರ್ಲಿಮೆಂಟಿನ ಒಪ್ಪಿಗೆಯನ್ನು ಪಡೆಯಲಿಲ್ಲ. ಇಲ್ಲಿಯವರೆಗೆ ಪಾರ್ಲಿಮೆಂಟಿನಲ್ಲಿ ಒಮ್ಮತವಿತ್ತು. ಈ ಒಮ್ಮತದಿಂದಲೇ ಪಾರ್ಲಿಮೆಂಟ್ ರಾಜನ ದಬ್ಬಾಳಿಕೆಯನ್ನು ಮುರಿದು ಹಾಕಿತು. ಆದರೆ ಮತೀಯ ವಿಚಾರ ಪಾರ್ಲಿಮೆಂಟಿನ ಮುಂದೆ ಬಂದಾಗ ಅದರ ಒಗ್ಗಟ್ಟು ಮಾಯವಾಯಿತು. ಅನೇಕ ಸದಸ್ಯರು (Members) ಮತೀಯ ವಿಚಾರದಲ್ಲಿ ಅತಿರೇಕಕ್ಕೆ ಹೋಗುವುದು ಅವಿವೇಕವೆಂದು ಭಾವಿಸಿದ್ದರು. ಇದರ ಫಲವಾಗಿ ಪಾರ್ಲಿಮೆಂಟಿನಲ್ಲಿ ರೌಂಡ್ ಹೆಡ್ ಮತ್ತು ರಾಯಲಿಸ್ಟ್ ಎಂಬ ಎರಡು ಪಂಗಡಗಳ ಮೊಳಕೆ ಉದ್ಭವಿಸಿತು. ರೌಂಡ್ ಹೆಡ್ಸ್ ಪಾರ್ಟಿಯ ಪ್ರಮುಖರಾಗಿದ್ದವರು ಪಿಮ್, ಹ್ಯಾಂಪ್ಡನ್ ಮತ್ತು ಆಲಿವರ್ ಕ್ರಾಮ್‌ವೆಲ್. ವಿರೋಧ ಪಕ್ಷಕ್ಕೆ ಸೇರಿದವರಲ್ಲಿ ಪ್ರಮುಖರಾಗಿದ್ದವರು ಸರ್ ಎಡ್ವರ್ಡ್ ಹೈಡ ಮತ್ತು ಲಾರ್ಡ್ ಫಾಕ್‌ಲಾಂಡ್ (Sir Edward Hyde and Lord Falkland).

ಹೀಗೆ ಪಾರ್ಲಿಮೆಂಟ್ ತನ್ನ ಮೊದಲನೆಯ ಅಧಿವೇಶನದಲ್ಲಿ ಬಹಳ ಯಶಸ್ವಿಯಾಗಿ ಕೆಲಸ ಮಾಡಿತು. ಅದು ಮಾಡಿದ ಕೆಲಸ ಇಂಗ್ಲೆಂಡಿನಲ್ಲಿ ಶಾಶ್ವತವಾಗಿ ಉಳಿದುಕೊಂಡಿತು. ಎರಡನೆ ಚಾರ್ಲ್ಸ್‌ನ ಕಾಲದಲ್ಲಿ

ಇಂಗ್ಲೆಂಡಿನಲ್ಲಿ ಪುನಃ ರಾಜತ್ವವು ಸ್ಥಾಪಿತವಾದರೂ (Restoration) ಅದರ ಜೊತೆಯಲ್ಲಿ ಸ್ಟಾರ್ ಛೇಂಬರಾಗಲಿ ಅಥವಾ ಸ್ಟ್ರಾಫರ್ಡಾಗಲಿ ಪುನರುಜ್ಜೀವನವಾಗಲಿಲ್ಲ. ರಾಜನೇನೋ ಪಾರ್ಲಿಮೆಂಟನ್ನು ರದ್ದು ಮಾಡುವ ಪದ್ಧತಿಯನ್ನು ಪುನಃ ಆಚರಣೆಗೆ ತಂದನು. ಆದರೆ ಅದು ರಾಜನ ಇಷ್ಟಕ್ಕಿಂತ ಅವನ ಪ್ರಧಾನ ಮಂತ್ರಿಯ ಸಲಹೆ ಮತ್ತು ಇಷ್ಟಗಳ ಮೇಲೆ ಅವಲಂಬಿಸಿರುತ್ತಿತ್ತು. ಅದೂ ಅಲ್ಲದೆ ಪ್ರಧಾನ ಮಂತ್ರಿಯು ಪಾರ್ಲಿಮೆಂಟಿನಲ್ಲಿ ಹೆಚ್ಚು ಸಂಖ್ಯೆಯಿಂದ ಕೂಡಿದ್ದ ಪಂಗಡದ (Majority party) ನಾಯಕನಾಗಿದ್ದುದರಿಂದ ಆ ಪಂಗಡದ ಅಭಿಪ್ರಾಯದಂತೆ ನಡೆದುಕೊಳ್ಳಬೇಕಾಗಿತ್ತು.

ಆರು ತಿಂಗಳುಗಳ ಕಾಲ ಪಾರ್ಲಿಮೆಂಟ್ ವಿರಾಮವನ್ನು ಹೊಂದಿತು. ಈ ಕಾಲದಲ್ಲಿ ಐರ್ಲೆಂಡಿನಲ್ಲಿ ದಂಗೆಯಾಗಿ ರೋಮನ್ ಕ್ಯಾಥಲಿಕ್ ದಂಗೆಕಾರರು ಅಲ್ಲಿ ನೆಲೆಸಿದ್ದ ಪ್ರಾಟೆಸ್ಟೆಂಟರನೇಕರನ್ನು ಕೊಲೆ ಮಾಡಿದರು. ಏಕೆಂದರೆ—ಹೆಚ್ಚುಹೆಚ್ಚಾಗಿ ಐರ್ಲೆಂಡಿನಲ್ಲಿದ್ದ ಜಮೀನುಗಳೆಲ್ಲಾ ಅವರ ಕೈವಶವಾಗಿದ್ದುವು. ಇನ್ನೊಂದು ಘಟನೆಯು ನಡೆಯಿತು. ಚಾರ್ಲ್ಸನು ಸ್ಕಾಟ್ಲೆಂಡಿಗೆ ಭೇಟಿಯಿತ್ತು ಅಲ್ಲಿ ಸ್ನೇಹಿತರನ್ನು ಸಂಪಾದಿಸಲು ಪ್ರಯತ್ನ ಮಾಡಿದ್ದನು.

ಕ್ರಿ. ಶ. ೧೬೪೧ರ ಅಕ್ಟೋಬರ್ ಕೊನೆಯಲ್ಲಿ ಪಾರ್ಲಿಮೆಂಟ್ ಪುನಃ ಸಭೆ ಸೇರಿದಾಗ ಐರ್ಲೆಂಡಿನ ಕಗ್ಗೊಲೆಯು (Massacre) ಪ್ಯೂರಿಟನ್ ಪಂಗಡದ ಮುಖಂಡರಲ್ಲಿ, ರಾಜನ ಕೈಯಿಂದ ಎಲ್ಲಾ ಅಧಿಕಾರವನ್ನೂ ಕಿತ್ತುಕೊಳ್ಳಬೇಕೆಂಬ ದೃಢನಿಶ್ಚಯವನ್ನು ತಂದಿತು. ಐರ್ಲೆಂಡಿನಲ್ಲಿ ಶಿಸ್ತು ಮತ್ತು ಶಾಂತಿಯನ್ನು ತರಲು ಸೈನ್ಯವನ್ನು ಕೂಡಿಸಬೇಕಾಗಿತ್ತು. ಆ ಸೈನ್ಯವು ಪಾರ್ಲಿಮೆಂಟಿನ ಅಧೀನದಲ್ಲಿರಬೇಕೇ ? ಅಥವಾ ರಾಜನ ಅಧೀನದಲ್ಲಿರಬೇಕೇ ? ಎಂಬ ಪ್ರಶ್ನೆಯು ಎದ್ದಿತು. ರಾಜನಿಗೇ ಸೈನ್ಯದ ಮೇಲಿನ ಹತೋಟಿಯನ್ನು ಬಿಟ್ಟರೆ ಅವನು ತಮ್ಮ ಮೇಲೇ ಅದನ್ನು ಉಪಯೋಗಿಸಬಹುದೆಂದು ಪಿಮ್ ಮತ್ತು ಅವನ ಅನುಯಾಯಿಗಳು ಶಂಕಿಸಿ, "ಮಿಲಿಷಿಯಾ ಬಿಲ್" (Militia Bill) ಎಂಬ ಕಾನೂ

ನನ್ನು ಜಾರಿಗೆ ತಂದು, ಸೈನ್ಯದ ಹತೋಟಿಯು ಪಾರ್ಲಿಮೆಂಟಿನ ವಶದಲ್ಲಿರುವಂತೆ ಮಾಡಿದರು.

ಗ್ರಾಂಡ್ ರಿಮಾನ್ಸ್ಟ್ರೆನ್ಸ್ (Grand Remonstrance) ಎಂಬ ಮತ್ತೊಂದು ಕಾನೂನನ್ನು ಪಾರ್ಲಿಮೆಂಟ್ ತಂದಿತು. ಇದರಲ್ಲಿ ಚಾರ್ಲ್ಸ್ ತನ್ನ ದಬ್ಬಾಳಿಕೆಯಲ್ಲಿ ನಡೆಸಿದ ಅನೇಕ ಅಂಶಗಳನ್ನು ನಮೂದಿಸಲಾಗಿತ್ತು. ಇದರಲ್ಲಿ ಒಟ್ಟು ೨೦೧ ಅಂಶಗಳಿದ್ದುವು. ಹೀಗೆ ಪಾರ್ಲಿಮೆಂಟ್ ರಾಜನ ಅಧಿಕಾರವನ್ನೆಲ್ಲಾ ಕಿತ್ತುಕೊಳ್ಳಲು ಇದರಿಂದ ಪ್ರಯತ್ನಿಸಿತು. ಈ ಕಾನೂನನ್ನು ಚರ್ಚಿಸುವಾಗ ಪಾರ್ಲಿಮೆಂಟ್ ಬಹುಮತವಿಲ್ಲದೆ ಕೇವಲ ೧೧ ಓಟುಗಳಿಂದ ಜಯವನ್ನು ಗಳಿಸಿತು.

ಚಾರ್ಲ್ಸ್, ಕ್ರಿ. ಶ. ೧೬೪೨ ನೇ ಜನವರಿ ೪ ರಲ್ಲಿ ಕಾಮನ್ಸ್ ಸಭೆಯಲ್ಲಿ ಮುಖಂಡರಾಗಿದ್ದ ಪಿಮ್, ಹ್ಯಾಂಪ್‌ಡೆನ್ ಮೊದಲಾದ ಐದು ಜನರನ್ನು ದಸ್ತಗಿರಿ ಮಾಡಲು ೪೦೦ ಜನ ಸಿಪಾಯಿಗಳೊಂದಿಗೆ ಬಂದನು. ಆದರೆ ಈ ಗುಟ್ಟನ್ನು ಮೊದಲೇ ತಿಳಿದಿದ್ದ ಅವರು ಪರಾರಿಯಾಗಿದ್ದರು. ಹಕ್ಕಿಗಳು ಹಾರಿಹೋಗಿದ್ದುದನ್ನು ಕಂಡು, ಚಾರ್ಲ್ಸ್‌ನು ಸಭೆಯ ಅಧ್ಯಕ್ಷನನ್ನು "ಅವರೆಲ್ಲಿ?" ಎಂದು ಕೇಳಿದನು. ಸಭೆಯಿಂದ ಯಾವ ಉತ್ತರವೂ ಬರಲಿಲ್ಲ. ಹೀಗೆ ಚಾರ್ಲ್ಸ್‌ನು ಕಾಮನ್ಸ್ ಸಭೆಯ ಹಕ್ಕುಗಳನ್ನು ಉಲ್ಲಂಘಿಸಿದನು. ಇದರಿಂದ ಇಂಗ್ಲೆಂಡಿನಲ್ಲಿ ಪಾರ್ಲಿಮೆಂಟಿಗೂ ಮತ್ತು ರಾಜನಿಗೂ ಯುದ್ಧ ಪ್ರಾರಂಭವಾಗಲು ಅವಕಾಶವಾಯಿತು. ಆರು ದಿನಗಳ ನಂತರ ಅವನು ಲಂಡನ್ ನಗರವನ್ನು ಬಿಟ್ಟು ಹೊರಟನು. ಈ ಮಧ್ಯೆ ರಾಜನಿಗೂ ಪಾರ್ಲಿಮೆಂಟಿಗೂ ಶಾಂತಿಗಾಗಿ ಸಂಧಾನವೇನೋ ನಡೆಯಿತು. ಪಾರ್ಲಿಮೆಂಟ್, ರಾಜನ ಮುಂದೆ ೧೯ ಸಲಹೆಗಳನ್ನು (19 Propositions) ಇಟ್ಟಿತು. ಇದರಿಂದ ರಾಜನ ವಿದೇಶಾಂಗ ನೀತಿ. ಭೂಸೈನ್ಯ ಮತ್ತು ಹಡಗಿನ ಪಡೆಗಳ ಮೇಲಿನ ಹತೋಟಿ, ಮತೀಯ ವಿಚಾರದಲ್ಲಿ ಕೊನೆಯ ತೀರ್ಮಾನ, ನ್ಯಾಯಾಧಿಪತಿಗಳನ್ನು ಮತ್ತು ಮಂತ್ರಿಗಳನ್ನು ನೇಮಕಮಾಡುವುದು—ಇವೆಲ್ಲವೂ ಪಾರ್ಲಿಮೆಂಟಿನ ಅಧಿಕಾರಕ್ಕೊಳಪಟ್ಟಿರಬೇಕೆಂದು ಸೂಚಿತವಾಗಿತ್ತು. ಆದರೆ ಚಾರ್ಲ್ಸ್ ಇದಕ್ಕೆ ಒಪ್ಪಲಿಲ್ಲ.

**ಅಂತರ್ಯುದ್ಧ** (Civil war, ೧೬೪೨–೪೯): ಯುದ್ಧ ಪ್ರಾರಂಭವಾದಾಗ ಇಂಗ್ಲೆಂಡಿನ ಉತ್ತರ ಮತ್ತು ಪಶ್ಚಿಮ ಪ್ರದೇಶಗಳು




ಚಾರ್ಲ್ಸ್‌ನ ಪರ ಭಾಗವಹಿಸಿದುವು. ಪಾರ್ಲಿಮೆಂಟಿನ ಕಡೆ ದಕ್ಷಿಣ

ಮತ್ತು ಪೂರ್ವಭಾಗಗಳು ಸೇರಿಕೊಂಡುವು. ಲಂಡನ್ ಮತ್ತು ಹಡಗು ಪಡೆ ಪಾರ್ಲಿಮೆಂಟಿನ ಕಡೆ ಸೇರಿತು. ಚಾರ್ಲ್ಸ್‌ನ ಸೈನ್ಯಗಳು ಅವನ ಸಹೋದರಿಯ ಮಗನಾದ ರೂಪರ್ಟ್ (Rupert) ಎಂಬುವನ ಮುಖಂಡತ್ವದಲ್ಲಿದ್ದುವು. ಪಾರ್ಲಿಮೆಂಟಿನ ಸೇನಾಧಿಪತಿ (Earl of Essex). ಚಾರ್ಲ್ಸ್‌ನು ಲಂಡನ್ ಪಟ್ಟಣವನ್ನು ಹಿಡಿಯಲು ನುಗ್ಗಿದನು. ಎಡ್ಜ್-ಹಿಲ್ (Edgehill) ಎಂಬಲ್ಲಿ ಕದನವು ನಡೆಯಿತು. ಲಂಡನ್ ಚಾರ್ಲ್ಸ್‌ನ ಕೈವಶವಾಗದೆ ಆಕ್ಸ್‌ಫರ್ಡ್ ಅವನ ಪಕ್ಷದ ಕೇಂದ್ರವಾಯಿತು. ಷಾಲ್‌ಗ್ರೋವ್‌ಫೀಲ್ಡ್ (Chalgrovefield) ಎಂಬಲ್ಲಿ ನಡೆದ ಒಂದು ಸಣ್ಣ ಕದನದಲ್ಲಿ ಪ್ಯೂರಿಟನ್ ಮುಖಂಡನಾಗಿದ್ದ ಜಾನ್ ಹಾಂಪ್‌ಡನ್ ಮಡಿದನು. ಕ್ರಿ. ಶ. ೧೬೪೩ ರಲ್ಲಿ ಲಂಡನ್ನನ್ನು ಕೈವಶ ಮಾಡಿಕೊಳ್ಳಲು ಮೂರು ಕಡೆಯಿಂದ ಚಾರ್ಲ್ಸ್‌ನ ಸೈನ್ಯಗಳು ನುಗ್ಗಿದವು. ನ್ಯೂಬರಿ (Newbury) ಎಂಬಲ್ಲಿ ನಡೆದ ಕದನದಲ್ಲಿ ಲಾರ್ಡ್ ಫಾಕ್-ಲಾಂಡ್ ಮಡಿದನು. ಇವನಿಗೆ ತನ್ನ ದೇಶದ ಜನಗಳ ರಕ್ತವನ್ನು ಚೆಲ್ಲಲು ಸ್ವಲ್ಪವೂ ಇಷ್ಟವಿರಲಿಲ್ಲ. ನ್ಯೂಬರಿ ಕದನದಲ್ಲಿ ಅವನು ತನ್ನ ಕತ್ತಿಯನ್ನು ಒರೆಯಿಂದ ತೆಗೆಯಲೇ ಇಲ್ಲ. ಪ್ಯೂರಿಟನ್ ಸೈನಿಕನೊಬ್ಬನ ಗುಂಡು ಅವನ ಉದಾತ್ತ ಜೀವನವನ್ನು ಕೊನೆಗಾಣಿಸಿತು.

ಈ ಮಧ್ಯೆ ಚಾರ್ಲ್ಸ್‌ನ ಪ್ರಾಬಲ್ಯವನ್ನಡಗಿಸಲು ಪಿಮ್ ಒಂದು ಯೋಚನೆಯನ್ನು ಮಾಡಿದನು. ಪ್ಯೂರಿಟನ್ ಮತಕ್ಕೆ ಸೇರಿದ ಸ್ಕಾಟ್ಲೆಂಡ್, ಪಾರ್ಲಿಮೆಂಟಿನ ಸಹಾಯಕ್ಕಾಗಿ ಸೈನ್ಯವನ್ನು ಕಳುಹಿಸುವಂತೆಯೂ, ಅದಕ್ಕಾಗಿ ಇಂಗ್ಲಿಷ್ ಚರ್ಚಿನಲ್ಲಿ ಪ್ಯೂರಿಟನ್ ಮತಕ್ಕೆ ಸಂಬಂಧಪಟ್ಟ ಅನೇಕ ಸುಧಾರಣೆಗಳನ್ನು ಜಾರಿಗೆ ತರುವಂತೆಯೂ ಒಂದು ಒಪ್ಪಂದ ಸ್ಕಾಟ್ಲೆಂಡಿನೊಡನೆ ಆಯಿತು. ಇದಕ್ಕೆ "ಸಾಲಮ್ ಲೀಗ್ ಮತ್ತು ಕೊವೆನೆಂಟ್" (Solemn League and Cove-nant) ಎಂದು ಹೆಸರು. ಇದು ಪಿಮ್ ಮಾಡಿದ ಕೊನೆಯ ಕೆಲಸ. ಕೆಲವು ತಿಂಗಳಲ್ಲಿಯೇ ಅವನು ಯೋಚನೆ ಮತ್ತು ಹೆಚ್ಚು ದುಡಿಮೆ ಇವುಗಳ ಫಲವಾಗಿ ಕಾಲವಾದನು.

ಎರಡನೆಯದಾಗಿ ಆಲಿವರ್ ಕ್ರಾಮ್‌ವೆಲ್ (೧೫೯೯–೧೬೫೮) ಸೈನ್ಯದಲ್ಲಿ ಕೆಲವು ಸುಧಾರಣೆಗಳನ್ನು ಮಾಡಿ, ಸೈನ್ಯದಲ್ಲಿ ಶಿಸ್ತನ್ನು ಮತ್ತು ದಕ್ಷತೆಯನ್ನು ತಂದನು. ಕ್ರಾಮ್‌ವೆಲ್ ಪ್ಯೂರಿಟನ್ ಪಂಗಡಕ್ಕೆ ಸೇರಿದ ಒಬ್ಬ ಶ್ರೀಮಂತ. ಅವನು ಹಂಟಿಂಗ್‌ಡನ್ ಷೈರಿಗೆ (Huntingdon Shire) ಸೇರಿದವನು. ಅಂತರ್ಯುದ್ಧ ಪ್ರಾರಂಭವಾದಾಗ ಅವನಿಗೆ ೪೩ ವರ್ಷ. ಅವನಿಗೆ ಆಗ ಯಾವ ಸೈನಿಕ ಶಿಕ್ಷಣವೂ ಇಲ್ಲದೆ ಪಾರ್ಲಿಮೆಂಟಿನ ಸದಸ್ಯತ್ವ ಮಾತ್ರ ಇತ್ತು. ಆದರೆ ಅವನು ಸ್ವಲ್ಪಕಾಲದಲ್ಲಿಯೇ ಅತ್ಯುತ್ತಮನಾದ ಸೈನಿಕನಾದನು. ಎಡ್ಜ್ ಹಿಲ್ ಕದನವಾದಾಗ ೬೦ ಕುದುರೆ ಸವಾರರ ನಾಯಕನಾಗಿದ್ದನು. ಅವನ ಸೈನಿಕರು ಪ್ಯೂರಿಟನ್ ಮತಕ್ಕೆ ಸೇರಿದವರಾಗಿ, ಸರಳವಾದ ಜೀವನದಿಂದ ಕೂಡಿದ್ದರು. ದೈವಭಕ್ತಿಯಿಂದ ಕೂಡಿದ ಇವರಲ್ಲಿ ಕುಡಿತ, ಜೂಜು ಮೊದಲಾದುವುಗಳು ಇರಲಿಲ್ಲ. ಹೀಗೆ ದಕ್ಷತೆಯಿಂದ ಕೂಡಿದ ಸೈನಿಕರಿಗೆ '' ಐರನ್ ಸೈಡ್ಸ್ (Iron sides) ಎಂದು ಹೆಸರಾಯಿತು. ಕ್ರಿ. ಶ. ೧೬೪೪ ರಲ್ಲಿ ಚಾರ್ಲ್ಸ್‌ನ ಸೈನ್ಯವು ಮಾರ್‌ಸ್ಟನ್ ಮೂರ್ (Marston Moor) ಎಂಬಲ್ಲಿ ಇವನಿಗೆ ಸೋತು ಹೋಯಿತು. ಆದರೆ ಪಾರ್ಲಿಮೆಂಟಿನ ಕಡೆಯ ಮತ್ತೊಬ್ಬ ಸೈನ್ಯಾಧಿಪತಿ ಲಾರ್ಡ್ ಮಾಂಚೆಸ್ಟರ್ (Lord Manchester) ಎಂಬುವನು ಎರಡನೆ ನ್ಯೂಬರಿ ಕದನದಲ್ಲಿ ಸೋತುಹೋದನು. ಅಶಕ್ತರಾಗಿದ್ದ ಸೈನ್ಯಾಧಿಪತಿಗಳಾದ ಎಸೆಕ್ಸ್ ಮತ್ತು ಮ್ಯಾಂಚೆಸ್ಟರ್ ಮೊದಲಾದವರನ್ನು ತೆಗೆದುಹಾಕಲು ಕ್ರಾಂವೆಲ್ಲನು ಪಾರ್ಲಿಮೆಂಟಿನಲ್ಲಿ " ಸೆಲ್ಫ್ ಡಿನೈಯಿಂಗ್ ಆರ್ಡಿನೆನ್ಸ್" (Self denying Ordinance) ಎಂಬ ಕಾನೂನನ್ನು ಜಾರಿಗೆ ತಂದನು. ಇದರಿಂದ ಪಾರ್ಲಿಮೆಂಟಿನ ಸದಸ್ಯರು ಸೈನ್ಯಾಧಿಪತಿಗಳಾಗಕೂಡದೆಂದು ವಿಧಾಯಕವಾಯಿತು. ಕ್ರಾಮ್‌ವೆಲ್ ಒಂದು ಹೊಸ ಸೈನ್ಯವನ್ನು ತಯಾರಿಸಿದನು. ಇವನು ಮತ್ತು ಫೇರ್ ಫಾಕ್ಸ್ (Fair Fox) ಎಂಬುವನು ಯುದ್ಧದ ಮುಂದುವರಿಕೆಯನ್ನು ವಹಿಸಿಕೊಂಡರು. ನೇಸ್ಬಿ (Naseby) ಎಂಬಲ್ಲಿ ಕದನ ನಡೆದು ೧೬೪೫ ರಲ್ಲಿ ಚಾರ್ಲ್ಸ್‌ನು ಸೋಲಿಸಲ್ಪಟ್ಟನು. ಲಾಂಗ್‌ಪೋರ್ಟ್ (Longport) ಎಂಬಲ್ಲಿ ಮತ್ತೊಂದು ಸೋಲಾಯಿತು. ಈ ಮಧ್ಯೆ ಚಾರ್ಲ್ಸ್‌ನ ಸಹಾಯಕ್ಕೆ

ಸ್ಕಾಟ್ಲೆಂಡಿನ ಬೆಟ್ಟಪ್ರದೇಶದ ಜನಗಳ (High landers) ಸೈನ್ಯವೊಂದನ್ನು ಕಟ್ಟಿ, ಇಂಗ್ಲೆಂಡಿನ ಮೇಲೆ ನುಗ್ಗಲು ಹವಣಿಸುತ್ತಿದ್ದ



ಅರ್ಲ್ ಆಫ್ ಮಾಂಟ್ರೋಸ್ (Montrose) ಎಂಬುವನು ಫಿಲಿಪ್

ಹಾಗ್ (Philiphaugh) ಎಂಬಲ್ಲಿ ಕ್ರಿ. ಶ. ೧೬೪೫ ರಲ್ಲಿ ಸೋಲಿಸಲ್ಪಟ್ಟನು. ಕ್ರಿ. ಶ ೧೬೪೬ ರಲ್ಲಿ ಆಕ್ಸ್‌ಫರ್ಡ್ ಪಾರ್ಲಿಮೆಂಟಿನ ಕೈವಶವಾಯಿತು. ಚಾರ್ಲ್ಸ್ ಯುದ್ಧಮಾಡಲು ಅಶಕ್ತನಾಗಿ ಸ್ಕಾಟ್ಲೆಂಡ್ ದೇಶದ ಸೈನ್ಯಕ್ಕೆ ಶರಣಾಗತನಾದನು.

**ಸೈನಿಕ ಕ್ರಾಂತಿ ೧೬೪೬--೧೬೫೩ :** ಅಂತರ್ಯುದ್ಧವೇನೋ ಮುಗಿಯಿತು. ಆದರೆ ಪಾರ್ಲಿಮೆಂಟ್ ಮತ್ತು ಸೈನ್ಯ—ಇವುಗಳಿಗೆ ಒಮ್ಮತವಿರಲಿಲ್ಲ. ಇದಲ್ಲದೆ ಸ್ಕಾಟ್ಲೆಂಡಿನ ಸೈನ್ಯವು ಚಾರ್ಲ್ಸ್‌ನೊಡನೆ ಒಪ್ಪಂದ ಮಾಡಿಕೊಳ್ಳುವ ಮನಸ್ಸಿನಿಂದ ಕೂಡಿತ್ತು. ಇಂಗ್ಲೆಂಡಿನಲ್ಲಿ ಪ್ರಿಸ್ಬಿಟೇರಿಯನ್ ಮತಕ್ಕೆ ಉತ್ತೇಜನ ಕೊಡುವುದೊಂದೇ ಅಲ್ಲದೆ, ಅವನು ಸ್ಕಾಟ್ಲೆಂಡಿನ ಮತೀಯ ವ್ಯವಸ್ಥೆಯನ್ನು ಬದಲಾಯಿಸದೆ, ಅದನ್ನು ಒಪ್ಪಿಕೊಳ್ಳಬೇಕೆಂದು ಅದು ಒತ್ತಾಯಪಡಿಸುತ್ತಿತ್ತು. ಚಾರ್ಲ್ಸ್‌ನು ಪಾರ್ಲಿಮೆಂಟ್ ಮತ್ತು ಸೈನ್ಯ ಇವುಗಳ ಮಧ್ಯೆ ಮನಸ್ತಾಪವನ್ನು ತಂದು ಹಾಕಿ, ತಾನು ಗೆಲ್ಲಬೇಕೆಂದು ಪ್ರಯತ್ನಿಸಿದನು. ಸ್ವಲ್ಪಕಾಲ ಪಾರ್ಲಿಮೆಂಟಿಗೂ ಮತ್ತು ಸೈನ್ಯಕ್ಕೂ ತಿಕ್ಕಾಟವಾಯಿತು. ಕೊನೆಗೆ ಸೈನ್ಯವು ಆಲಿವರ್ ಕ್ರಾಮ್‌ವೆಲ್ಲನ ಮುಖಂಡತ್ವದಲ್ಲಿ ಕ್ರಾಂತಿ ನಡೆಸಿ ಪಾರ್ಲಿಮೆಂಟಿನ ಅಧಿಕಾರವನ್ನೆಲ್ಲಾ ಕಿತ್ತುಕೊಂಡಿತು. ಸ್ಕಾಟ್ ಸೈನ್ಯವು ಚಾರ್ಲ್ಸ್‌ನು ಯಾವ ನಿರ್ಧಾರಕ್ಕೂ ಬಾರದಿದ್ದುದರಿಂದ ಅವನನ್ನು ಪಾರ್ಲಿಮೆಂಟಿನ ವಶಕ್ಕೆ ಒಪ್ಪಿಸಿ, ತಮಗೆ ಬರಬೇಕಾಗಿದ್ದ ಹಣವನ್ನು ತೆಗೆದುಕೊಂಡು ಹೊರಟು ಹೋಯಿತು. ಕ್ರಿ. ಶ. ೧೬೪೭ ರಲ್ಲಿ ಸೈನ್ಯವು ಕಾರ್‌ನೆಟ್ ಜಾಯ್ಸ್ (Cornet Joyce) ಎಂಬುವನನ್ನು ಕಳುಹಿಸಿ ಚಾರ್ಲ್ಸ್‌ನನ್ನು ತನ್ನ ವಶಕ್ಕೆ ತೆಗೆದುಕೊಂಡಿತು. ಸೈನ್ಯವು ಕರ್ನಲ್ ಐರ್‌ಟನ್ (Colonel Ireton) ಎಂಬುವನ ಮುಖಂಡತ್ವದಲ್ಲಿ ಕೆಲವು ರಾಜಕೀಯ ಸಲಹೆಗಳನ್ನು ರಾಜನ ಮುಂದಿಟ್ಟಿತು. ಇದಕ್ಕೆ "ಹೆಡ್ಸ್ ಆಫ್ ದಿ ಪ್ರಪೋಸಲ್ಸ್" (Heads of the proposals) ಎಂದು ಹೆಸರು. ಪಾರ್ಲಿಮೆಂಟಿನ ಅಧೀನತೆಗೊಳಪಟ್ಟ ರಾಜತ್ವವು (Constitutional Monarchy) ಸ್ಥಾಪಿತವಾಗಬೇಕೆಂಬುದೇ ಇದರ ಮುಖ್ಯೋದ್ದೇಶ. ಒಟ್ಟಿನಲ್ಲಿ ಪ್ರಾಟೆಸ್ಟೆಂಟ್ ಚರ್ಚು ಇದ್ದಾಗ್ಯೂ ಬೇರೆ ಬೇರೆ ಪ್ರಾಟೆಸ್ಟೆಂಟ್ ಗುಂಪುಗಳಿಗೆ

ಪೂಜಾ ಸ್ವಾತಂತ್ರ್ಯ (Freedom of worship) ವನ್ನು ಕೊಡಬೇಕೆಂದೂ ಮತ್ತು ೧೦ ವರ್ಷಗಳ ಕಾಲ ಸೈನ್ಯವು ಪಾರ್ಲಿಮೆಂಟಿನ ಕೈವಶದಲ್ಲಿರಬೇಕೆಂದೂ ಇದರಲ್ಲಿ ನಮೂದಿಸಲಾಗಿತ್ತು. ಆದರೆ ಚಾರ್ಲ್ಸ್ ಚರ್ಚೆಯನ್ನು ಇನ್ನೂ ಮುಂದುವರಿಸುತ್ತಲೇ ಹೋಗುತ್ತಿದ್ದುದರಿಂದ ಸೈನ್ಯಾಧಿಪತಿಗಳಿಗೆ ಬೇಸರ ಹುಟ್ಟಿತು. ಒಂದು ದಿನ ಚಾರ್ಲ್ಸ್‌ನು ವೈಟ್ ದ್ವೀಪಕ್ಕೆ (Isle of wight) ಓಡಿಹೋದನು. ಅಲ್ಲಿಂದ ಅವನು ಸ್ಕಾಟ್ಲೆಂಡ್, ಇಂಗ್ಲೆಂಡಿಗೆ ಮುತ್ತಿಗೆಯನ್ನು ಹಾಕುವಂತೆ ಒಪ್ಪಂದವನ್ನು ಮಾಡಿಕೊಂಡನು. ಇದರಿಂದ ಇಂಗ್ಲೆಂಡಿನಲ್ಲಿ ಎರಡನೆ ಅಂತರ್ಯುದ್ಧವು ಪ್ರಾರಂಭವಾಯಿತು. ಕ್ರಾಮ್‌ವೆಲ್ ಸ್ಕಾಟರನ್ನು ಪ್ರೆಸ್ಟನ್ (Preston) ಎಂಬಲ್ಲಿ ಸೋಲಿಸಿದನು. ಈ ಮಧ್ಯೆ ಚಾರ್ಲ್ಸ್‌ನು ಪಾರ್ಲಿಮೆಂಟಿನೊಂದಿಗೆ ಸಂಧಾನವನ್ನು ಪ್ರಾರಂಭಿಸಿದ್ದನು. ಆದರೆ ಸೈನ್ಯವು ಯುದ್ಧ ಮುಕ್ತಾಯವಾದೊಡನೆಯೇ ಕರ್ನಲ್ ಪ್ರೈಡ್ (Colonel pride) ಎಂಬುವನ ಮುಖಂಡತ್ವದಲ್ಲಿ ಕ್ರಿ. ಶ. ೧೬೪೮ ರಲ್ಲಿ ಪಾರ್ಲಿಮೆಂಟಿನ ಭವನಕ್ಕೆ ನುಗ್ಗಿ ಸುಮಾರು ೧೪೫ ಮಂದಿ ಸದಸ್ಯರನ್ನು ಹೊರದೂಡಿತು. ಇದಕ್ಕೆ "ಪ್ರೈಡ್ಸ್ ಪರ್ಜ್" (Pride's purge) ಎಂದು ಹೆಸರು. ಕಾಮನ್ಸ್ ಸಭೆ ಉಳಿದ ಸದಸ್ಯರೊಡನೆ, ರಕ್ತಪಾತವನ್ನು ಅನಾವಶ್ಯಕವಾಗಿ ಮಾಡಿದ ಚಾರ್ಲ್ಸ್‌ನನ್ನು ವಿಚಾರಣೆಗೆ ಗುರಿಪಡಿಸಲು ಒಂದು ವಿಶೇಷ ನ್ಯಾಯಾಲಯವನ್ನು ಸೇರಿಸಿತು. ಲಾರ್ಡ್ಸ್ ಸಭೆಯು ಇದನ್ನು ಅನುಮೋದಿಸದೆ ಇದ್ದುದರಿಂದ ಸೈನ್ಯವು ಲಾರ್ಡ್ಸ್ ಸಭೆಯನ್ನೇ ಮುಚ್ಚಿತು. ಈ ನ್ಯಾಯಾಲಯವು ಚಾರ್ಲ್ಸ್‌ನನ್ನು ಮರಣದಂಡನೆಗೆ ಗುರಿಪಡಿಸಿತು. ಕ್ರಿ.ಶ. ೧೬೪೯ ಜನವರಿ ೩೦ ರಲ್ಲಿ ಚಾರ್ಲ್ಸ್‌ನ ಶಿರಚ್ಛೇದನವಾಯಿತು. ಸಾಯುವ ಕೆಲವು ದಿನಗಳ ಮುನ್ನ ಚಾರ್ಲ್ಸ್‌ನ ವರ್ತನೆಯು ಗಾಂಭೀರ್ಯದಿಂದಲೂ ಮತ್ತು ಶಾಂತತೆಯಿಂದಲೂ, ಉದಾತ್ತತೆಯಿಂದಲೂ ಕೂಡಿತ್ತು. ಅವನ ಮರಣವು ಇಂಗ್ಲೆಂಡಿನ ಅನೇಕ ಜನರಿಗೆ ಶೋಕವನ್ನುಂಟುಮಾಡಿತು.

ಚಾರ್ಲ್ಸ್‌ನ ಮರಣಾನಂತರ ಇಂಗ್ಲೆಂಡಿನಲ್ಲಿ ಪ್ಯೂರಿಟನ್ನರ ಗಣರಾಜ್ಯ (Republic) ಸ್ಥಾಪನೆಯಾಯಿತು. ಇದರಲ್ಲಿ ಸೈನ್ಯಕ್ಕೆ ಹೆಚ್ಚು ಅಧಿಕಾರವಿತ್ತು. ಪಾರ್ಲಿಮೆಂಟ್ ತನ್ನ ಅನೇಕ ಸದಸ್ಯರನ್ನು "ಪ್ರೈಡ್ಸ್

ವರ್ಜಿಸಿಂದ” ಕಳೆದುಕೊಂಡಿತ್ತು. ಉಳಿದ ಅಲ್ಪಸಂಖ್ಯಾತರು ಸೈನ್ಯದ ಪ್ರಭಾವಕ್ಕೊಳಗಾಗಿದ್ದರು. ಈ ಪಾರ್ಲಿಮೆಂಟಿಗೆ “ ರಂಪ್ (Rump) ” ಎಂದು ಹೆಸರು. ರಾಜ್ಯಾಡಳಿತವನ್ನು ನೋಡಿಕೊಳ್ಳಲು ೪೧ ಸದಸ್ಯರಿಂದ ಕೂಡಿದ ಒಂದು ಸಮಿತಿಯು (Council of State) ಸ್ಥಾಪಿಸಲ್ಪಟ್ಟಿತು.

ಕ್ರಾಮ್‌ವೆಲ್ಲನು ಐರ್ಲೆಂಡಿನಲ್ಲಿ ಒದಗಿದ್ದ ದಂಗೆಯನ್ನು ಅಡಗಿಸಲು ಒಂದು ಸೈನ್ಯದೊಡನೆ ಹೋದನು. ಡ್ರೊಘೆಡ (Drogheda) ಮತ್ತು ವೆಕ್ಸ್‌ಫರ್ಡ್ (Wexford) ಎಂಬ ಕ್ಯಾಥಲಿಕರ ಬಲವಾದ ಸ್ಥಳಗಳನ್ನು ವಶಪಡಿಸಿಕೊಂಡು ಅಲ್ಲಿಯ ಜನಗಳನ್ನು ಸಾವಿಗೀಡು ಮಾಡಿಸಿದನು. ಯಾರನ್ನೂ ಉಳಿಸಲಿಲ್ಲ. ಐರ್ಲೆಂಡಿನ ಜಮೀನುಗಳನ್ನು ಕ್ಯಾಥಲಿಕರ ಕೈಯಿಂದ ತಪ್ಪಿಸಿ ಪ್ರಾಟೆಸ್ಟೆಂಟರಿಗೆ ಕೊಡಿಸಿದನು. ಐರ್ಲೆಂಡು ಇಂಗ್ಲಿಷ್ ಪಾರ್ಲಿಮೆಂಟಿಗೆ ಸದಸ್ಯರನ್ನು ಆರಿಸುವಂತಾಯಿತು. ಈ ಸದಸ್ಯತ್ವವು ಪ್ರಾಟೆಸ್ಟೆಂಟರಿಗೆ ಮಾತ್ರ ಅನ್ವಯಿಸುತ್ತಿತ್ತು. ಕ್ರಾಮ್‌ವೆಲ್ಲನ ಪ್ರಾಟೆಸ್ಟೆಂಟ್ ಜಮೀನುದಾರರು ಐರ್ಲೆಂಡಿನಲ್ಲಿ ಹುಟ್ಟಿಸಿದ ಅನೇಕ ಜಮೀನಿನ ಸಮಸ್ಯೆಗಳು ಕ್ರಿ. ಶ. ೧೯೨೩ ರವರೆಗೂ ಪರಿಹಾರವಾಗಲಿಲ್ಲ.

ಸ್ಕಾಟ್ಲೆಂಡಿನಲ್ಲಿ ಒಂದು ಪ್ರಶ್ನೆಯು ಈ ಮಧ್ಯೆ ಎದ್ದಿತು. ಚಾರ್ಲ್ಸನ ಮಗನಾದ ಎರಡನೆ ಚಾರ್ಲ್ಸನು ಸ್ಕಾಟ್ಲೆಂಡಿನಲ್ಲಿದ್ದ ಬೆಟ್ಟಪ್ರದೇಶದ ಜನಗಳಿಗೆ ಪ್ರಿಯನಾಗಿದ್ದನು. ಇದೂ ಅಲ್ಲದೆ ತಮಗೆ ವಾಗ್ದಾನ ಮಾಡಿದ್ದಂತೆ ಇಂಗ್ಲೆಂಡ್ ಪ್ರಿಸ್ಬಿಟೇರಿಯನ್ ಮತವನ್ನು ಸ್ಥಾಪಿಸದೆ ಇದ್ದುದು ಸ್ಕಾಟರಿಗೆ ಅಸಮಾಧಾನವನ್ನು ತಂದಿತ್ತು. ರಾಜನನ್ನು ಕೊಲ್ಲಿಸಿದ್ದುದೂ ಅವರಿಗೆ ಕೋಪವನ್ನುಂಟುಮಾಡಿತ್ತು. ಕ್ರಾಮ್‌ವೆಲ್ ಸ್ಕಾಟ್ಲೆಂಡಿನ ಮೇಲೆ ನುಗ್ಗಿ “ಡನ್‌ಬಾರ್” (Dunbar) ಕದನದಲ್ಲಿ ಅವರನ್ನು ಕ್ರಿ. ಶ. ೧೬೫೮ ರಲ್ಲಿ ಸೋಲಿಸಿದನು. ಆದರೆ ಎರಡನೆ ಚಾರ್ಲ್ಸನು ರಾಜನ ಅನೇಕ ಸ್ನೇಹಿತರು (Royalists) ತನಗೆ ಸಹಾಯ ಮಾಡುವರೆಂಬ ಭರವಸೆಯಿಂದ ಯುದ್ಧಮಾಡಲು ಹೊರಟನು. ಆದರೆ ವೋರ್‌ಸೆಸ್ಟರ್ (Worcester) ಎಂಬಲ್ಲಿ ಕ್ರಾಮ್‌ವೆಲ್ಲನಿಂದ ಸೋಲಿಸಲ್ಪಟ್ಟನು.

ತನ್ನ ಪ್ರಾಣವನ್ನುಳಿಸಿಕೊಳ್ಳಲು ವೇಷ ಮರೆಸಿಕೊಂಡು ಫ್ರಾನ್ಸಿಗೆ ಓಡಿ ಹೋದನು.

ಅಂತರ್ಯುದ್ಧ ಮುಗಿದಮೇಲೆ ೧ನೆ ಚಾರ್ಲ್ಸ್‌ನ ಸೈನ್ಯಾಧಿಪತಿಯಾಗಿದ್ದ ರೂಪರ್ಟ್ ಸಮುದ್ರದ ಮೇಲೆ ವ್ಯಾಪಾರಮಾಡುತ್ತಿದ್ದ ಹಡಗುಗಳನ್ನು ಕೊಳ್ಳೆಹೊಡೆಯುತ್ತಿದ್ದನು. ಅವನನ್ನಡಗಿಸಲು ಬ್ಲೇಕ್ (Blake) ಎಂಬುವನನ್ನು ರಂಪ್ ನೇಮಿಸಿತು. ಬ್ಲೇಕನ ಜಯದಿಂದ ಹರ್ಷಗೊಂಡ ರಂಪ್ ಸರ್ಕಾರ ಅವನನ್ನು ಡಚ್ಚರ ಮೇಲೆ (೧೬೫೨-೫೪) ಯುದ್ಧಕ್ಕೆ ಕಳುಹಿಸಿತು ಡಚ್ಚರು ಇಂಗ್ಲಿಷ್ ವಸಾಹತುಗಳೊಡನೆ ವ್ಯಾಪಾರ ಮಾಡಕೂಡದೆಂದು ನಿರ್ಬಂಧಿಸಿದುದೇ ಈ ಯುದ್ಧಕ್ಕೆ ಕಾರಣವಾಯಿತು. ಡಚ್ಚರು ಅನೇಕ ದೇಶಗಳ ಸಾಮಾನುಗಳನ್ನು ತಮ್ಮ ಹಡಗುಗಳಲ್ಲಿ ತೆಗೆದುಕೊಂಡು ಹೋಗುತ್ತಿದ್ದರು (Carrying Trade). ಆದರೆ ಇಂಗ್ಲೆಂಡಿಗೆ ಸಾಮಾನುಗಳು ಇಂಗ್ಲಿಷ್ ಹಡಗುಗಳಲ್ಲಾಗಲಿ, ಅಥವಾ ಯಾವ ದೇಶವು ಆ ಸಾಮಾನುಗಳನ್ನು ಕಳುಹಿಸುವುದೋ ಆ ದೇಶದ ಹಡಗಿನಲ್ಲಾಗಲೀ ಬರಬೇಕೆಂದು ಕ್ರಿ. ಶ. ೧೬೫೧ರಲ್ಲಿ ವಿಧಾಯಕ ವಾಯಿತು (Navigation Act). ಇಂಗ್ಲಿಷರ ಬ್ಲೇಕ್ ಮತ್ತು ಡಚ್ಚರ ವಾನ್‌ಟ್ರಾಂಪ್ (Blake and Vantromp) ಇವರಿಬ್ಬರೂ ಸಮರ್ಥರಾದ ನೌಕಾಧಿಪತಿಗಳಾಗಿದ್ದರು. ಕ್ರಿ. ಶ. ೧೬೫೪ ರಲ್ಲಿ ಡಚ್ಚರು ಇಂಗ್ಲಿಷರೊಂದಿಗೆ ಶಾಂತಿಯನ್ನು ಮಾಡಿಕೊಂಡರು.

ರಂಪ್ ಪಾರ್ಲಿಮೆಂಟ್ ತನ್ನ ಅಳ್ವಿಕೆಯನ್ನು ಮುಂದುವರಿಸಿಕೊಂಡು ಹೋಗಬೇಕೆಂಬ ಅಭಿಲಾಷೆಯಿಂದ ಕೂಡಿತ್ತು. ಹೊಸ ಚುನಾವಣೆಯಿಂದ ಬೇರೆ ಪಾರ್ಲಿಮೆಂಟನ್ನು ಸೇರಿಸಲು ಕ್ರಾಮ್‌ವೆಲ್ ಮತ್ತು ಅವನ ಅನುಯಾಯಿಗಳು ಇಷ್ಟಪಡಲಿಲ್ಲ. ಏಕೆಂದರೆ ಅದು ಇಂಗ್ಲೆಂಡಿನಲ್ಲಿ ಪುನಃ ರಾಜತ್ವವನ್ನು (Kingship) ಸ್ಥಾಪಿಸುವುದೆಂದು ಖಚಿತವಾಗಿತ್ತು. ಆದುದರಿಂದ ಕ್ರಾಮ್‌ವೆಲ್ ಇಂಗ್ಲೆಂಡಿನಲ್ಲಿ ಸೈನಿಕ ಸರ್ಕಾರವನ್ನು (Military Rule) ಸ್ಥಾಪಿಸಲುದ್ಯುಕ್ತನಾದನು. ಅವನು ಕ್ರಿ. ಶ. ೧೬೫೩ ನೇ ಏಪ್ರಿಲ್ ೨೦ ರಲ್ಲಿ ಪಾರ್ಲಿಮೆಂಟ್ ಭವನಕ್ಕೆ ನುಗ್ಗಿ ತಮ್ಮ ಅಧಿಕಾರವನ್ನು ಮುಂದುವರಿಸಿಕೊಂಡು ಹೋಗಬೇಕೆಂದಿದ್ದ ಆ ಸದಸ್ಯರು

ಗಳನ್ನೆಲ್ಲಾ ಆಚೆಗೆ ಓಡಿಸಿದನು. ಪಾರ್ಲಿಮೆಂಟಿನ ಪರಮಾಧಿಕಾರದ ಚಿಹ್ನೆಯಾಗಿದ್ದ ಗದೆಯನ್ನು ಒಬ್ಬ ಸೈನಿಕನ ಹಸ್ತದಿಂದ ತೆಗೆಸಿ ಬಿಸಾಡಿಸಿದನು.

**ಕ್ರಾಮ್‌ವೆಲ್ :** ಕ್ರಾಮ್‌ವೆಲ್ ಕ್ರಿ. ಶ. ೧೬೫೩ ರಿಂದ ೧೬೫೮ರ ವರಗೆ ಇಂಗ್ಲೆಂಡಿನ ರಾಜ್ಯದ ಸೂತ್ರಗಳನ್ನು ತನ್ನಕೈಯಲ್ಲಿಟ್ಟುಕೊಂಡಿದ್ದನು. ಈ ಕಾಲದಲ್ಲಿ ಅವನು ತನ್ನ ಆಳ್ವಿಕೆಗೆ ಪಾರ್ಲಿಮೆಂಟಿನ ಅನುಮೋದನೆಯನ್ನು ನೆಪಮಾತ್ರಕ್ಕಾದರೂ ಸಂಪಾದಿಸಿಕೊಳ್ಳಬೇಕೆಂಬ ಮನಸ್ಸುಳ್ಳವನಾಗಿದ್ದನು. ಅದರೆ ಪ್ಯೂರಿಟನ್ ಮತದ ಅನುಯಾಯಿಗಳು ಇದು ಕಾರ್ಯಗತವಾಗಲು ಅವಕಾಶ ಕೊಡಲಿಲ್ಲ. ೧೪೦ ಜನರಿಂದ ಕೂಡಿದ ಒಂದು ಪಾರ್ಲಿಮೆಂಟನ್ನು ಕ್ರಾಮ್‌ವೆಲ್ ಸೇರಿಸಿದನು. ಇದಕ್ಕೆ "ಬೇರ್ ಬೋನ್ಸ್ ಪಾರ್ಲಿಮೆಂಟ್" (Barebones Parliment) ಎಂದು ಹೆಸರು. ಏಕೆಂದರೆ, ಇದರ ಮುಖಂಡನ ಹೆಸರು ಬೇರ್‌ಬೋನ್ ಎಂದು. ಬೇರ್‌ಬೋನ್ ಮತ್ತು ಅವನ ಸ್ನೇಹಿತರಿಗೆ ರಾಜಕೀಯದಲ್ಲಿ ಯಾವ ಅನುಭವವೂ ಇರಲಿಲ್ಲ. ಅವರಿಗೆ ಮತೀಯ ಆಸಕ್ತಿಯೊಂದು ಮಾತ್ರ ಅಪರಿಮಿತವಾಗಿತ್ತು. ಆಡಳಿತದ ಪರಿಜ್ಞಾನವೂ ಅವರಿಗಿರಲಿಲ್ಲ. ಕ್ರಾಮ್‌ವೆಲ್ ಸ್ವಲ್ಪಕಾಲವಾದನಂತರ ಈ ಪಾರ್ಲಿಮೆಂಟನ್ನು ರದ್ದುಮಾಡಿದನು.

ಕ್ರಿ. ಶ. ೧೬೫೩ರ ಕೊನೆಯಲ್ಲಿ ಸೈನ್ಯಸಮಿತಿಯೊಂದು ಸೈನ್ಯಾಧಿಪತಿ ಲ್ಯಾಂಬರ್ಟ್ (Lambert) ಎಂಬುವನ ಮುಖಂಡತ್ವದಲ್ಲಿ "ಇನ್‌ಸ್ಟ್ರುಮೆಂಟ್ ಆಫ್ ಗೌರ್ನಮೆಂಟ್"(Instrument of Government) ಎಂಬ ಮಸೂದೆಯನ್ನು ಕ್ರಾಮ್‌ವೆಲ್ಲನ ಮುಂದೆ ಇಟ್ಟಿತು. ಈ ಮಸೂದೆಯ ಪ್ರಕಾರ ಕ್ರಾಮ್‌ವೆಲ್ ಹಿಂದೆ ರಾಜನು ಹೊಂದಿದ್ದ ಅಧಿಕಾರಗಳನ್ನು ಸ್ವೀಕರಿಸಿ, ರಾಜ್ಯದ ರಕ್ಷಕನಾಗಬೇಕೆಂದು (Lord Protector) ಸೂಚಿತವಾಗಿತ್ತು. ಇವನ ಸಹಾಯಕ್ಕಾಗಿ ಪಾರ್ಲಿಮೆಂಟ್ ಇರಬೇಕೆಂದು ಗೊತ್ತಾಯಿತು. ಕ್ರಿ. ಶ. ೧೬೫೪ ರಲ್ಲಿ ಇದರ ಪ್ರಕಾರ ಪಾರ್ಲಿಮೆಂಟ್ ಸೇರಿತು. ಆದರೆ ಅದಕ್ಕೂ ಕ್ರಾಮ್‌ವೆಲ್ಲನಿಗೂ ಸರಿಬೀಳಲಿಲ್ಲ. ಕ್ರಿ. ಶ. ೧೬೫೬ ರಲ್ಲಿ ಮತ್ತೊಂದು ಪಾರ್ಲಿಮೆಂಟ್ ಸಭೆ ಸೇರಿ

"ವಿನಯಪೂರ್ವಕ ಅರ್ಜಿ ಮತ್ತು ಸಲಹೆಯನ್ನು" (Humble Petition and Advice) ಕ್ರಾಮ್‌ವೆಲ್ಲನ ಮುಂದಿಟ್ಟಿತು. ಇದರಿಂದ ಕ್ರಾಮ್‌ವೆಲ್ಲನು ರಾಜನೆಂಬ ಬಿರುದನ್ನು ಹೊಂದಬೇಕೆಂದೂ, ಹೌಸ್ ಆಫ್ ಲಾರ್ಡ್ಸ್‌ನ್ನು ಪುನಃ ಸ್ಥಾಪಿಸಬೇಕೆಂದೂ ಮತ್ತು ಪಾರ್ಲಿಮೆಂಟ್ ಚುನಾಯಿತ ಸದಸ್ಯರಿಂದ ಕೂಡಿರಬೇಕೆಂದೂ ನಿಯಾಮಕವಾಯಿತು. ಆದರೆ ಕ್ರಾಮ್‌ವೆಲ್ಲನು ರಾಜನಾದ ಚಾರ್ಲ್ಸ್‌ನಿಗಿಂತ ಹೆಚ್ಚು ಅಧಿಕಾರವನ್ನು ಪಡೆದಿದ್ದರೂ ರಾಜನೆಂಬ ಬಿರುದನ್ನು ಸ್ವೀಕರಿಸಲಿಲ್ಲ. ಏಕೆಂದರೆ ಸೈನ್ಯವು ಅದನ್ನು ಅನುಮೋದಿಸುವುದಿಲ್ಲವೆಂದು ಅವನಿಗೆ ಮನವರಿಕೆಯಾಗಿತ್ತು. ಕ್ರಿ. ಶ. ೧೬೫೮ ರಲ್ಲಿ ಪಾರ್ಲಿಮೆಂಟ್ ಪುನಃ ಕ್ರಾಮ್‌ವೆಲ್ಲನೊಂದಿಗೆ ಜಗಳವಾಡಿತು. ಅದರಲ್ಲಿ ೧೬ ವರ್ಷಗಳ ಹಿಂದೆ ಮುಖ್ಯಪಾತ್ರ ವಹಿಸಿದ್ದ "ಐದು ಸದಸ್ಯರ" ಪೈಕಿ ಒಬ್ಬನಾಗಿದ್ದ ಹೆಸಲ್‌ರಿಗ್ (Haslerig) ಮತ್ತು ಆಷ್ಲಿಕೂಪರ್ (Ashley Cooper)— ಇವನೇ ಮುಂದೆ ಎರಡನೆ ಚಾರ್ಲ್ಸ್‌ನ ಕಾಲದಲ್ಲಿ ಅರ್ಲ್ ಆಫ್ ಷಾಫ್ಟ್ಸ್‌ಬರಿ (Earl of Shaftsbury) ಯಾಗಿ, ವ್ಹಿಗ್ ಪಂಗಡದ (Whig Party) ಮುಖಂಡನಾದವನು— ಇವರೇ ಪ್ರಮುಖರು. ಕ್ರಾಮ್‌ವೆಲ್ ಸೇರಿಸಿದ ಪಾರ್ಲಿಮೆಂಟುಗಳಲ್ಲಿ ರಾಜತ್ವದ ಅನುಯಾಯಿಗಳನ್ನೆಲ್ಲಾ (Royalists) ಜಾಗರೂಕತೆಯಿಂದ ಹೊರಗಿಡಲಾಗಿತ್ತು.

ಹೀಗೆ ಪಾರ್ಲಿಮೆಂಟಿನ ಸಹಕಾರವನ್ನು ಪಡೆಯಲಾಗದೆ ಹೋದ ಕ್ರಾಮ್‌ವೆಲ್ ರಾಜ್ಯವನ್ನು ಹತ್ತು ಭಾಗಗಳನ್ನಾಗಿ ಮಾಡಿ ಪ್ರತಿಯೊಂದು ಭಾಗಕ್ಕೂ ಒಬ್ಬೊಬ್ಬ ಸೈನ್ಯಾಧಿಪತಿಯನ್ನು (Major General) ಆಡಳಿತ ನಡೆಸಲು ನಿಯಮಿಸಿದನು. ಕುದುರೆ ಪಂದ್ಯ, ನಾಟಕಶಾಲೆಗಳು, ಪಾನಶಾಲೆಗಳು ಇವುಗಳನ್ನು ನಿಲ್ಲಿಸಿದನು. ಇವುಗಳ ಜೊತೆಗೆ ಕಳ್ಳಕಾಕರ ಭೀತಿಯೂ ತೊಲಗಿತು. ಅವನು ರಾಜ್ಯವನ್ನು ದರ್ಪದಿಂದಲೂ, ಬಿಗಿಯಿಂದಲೂ ಆಳಿದನು. ಜನರಿಗೆ ಸುಲಭ ಖರ್ಚಿನಲ್ಲಿ ನ್ಯಾಯ ದೊರಕಿಸಲು ಕೆಲವು ಸುಧಾರಣೆಗಳನ್ನು ಜಾರಿಗೆ ತಂದನು. ಆಗಿನ ಯೂರೋಪಿನ ದೇಶಗಳಲ್ಲಿ ಇಂಗ್ಲೆಂಡ್ ಎಲ್ಲಾ ದೇಶಕ್ಕಿಂತಲೂ ಹೆಚ್ಚು ಪ್ರಗತಿಯನ್ನು

ಈ ವಿಚಾರದಲ್ಲಿ ಸಾಧಿಸಿತ್ತು. ಆದರೆ ಎರಡನೆ ಚಾರ್ಲ್ಸ್ ಪಟ್ಟಕ್ಕೆ ಬಂದ ಕೂಡಲೆ ಇದು ರದ್ದಾಯಿತು.

**ಕ್ರಾಮ್‌ವೆಲ್ಲನ ವಿದೇಶಾಂಗ ನೀತಿ** : ಕ್ರಾಮ್‌ವೆಲ್ ಇಂಗ್ಲೆಂಡಿನ ಪ್ರಭಾವವನ್ನು ಯೂರೋಪಿಯನ್ ರಾಷ್ಟ್ರಗಳಲ್ಲಿ ಹೆಚ್ಚಿಸಲು ಶ್ರಮಿಸಿದನು. ಪ್ರಾಟೆಸ್ಟೆಂಟ್ ಮತದ ಪರವಾಗಿ ಹೋರಾಡಿದ ಸ್ವೀಡನ್ನಿನ ರಾಜನಾದ ಗುಸ್ಟೆವಸ್ ಅಡಾಲ್‌ಫಸ್ ಎಂಬ ವೀರನು ಇವನಿಗೆ ಜೀವನದಲ್ಲಿ ಆದರ್ಶ. ಅವನಂತೆಯೇ ತಾನೂ ಆ ಮತಕ್ಕಾಗಿ ಹೋರಾಡಬೇಕೆಂಬ ಹಂಬಲ ಇವನದು. ಆದರೆ ಯೂರೋಪಿನಲ್ಲಿ ಈ ನೀತಿಯನ್ನು ಅನುಸರಿಸುವ ಕಾಲ ಮುಗಿದು ಹೋಗಿ ಇಪ್ಪತ್ತು ವರ್ಷಗಳಾಗಿತ್ತು. ಗುಸ್ಟೆವಸ್ ಅಡಾಲ್‌ಫಸ್ ಯೂರೋಪಿನಲ್ಲಿ ಕ್ಯಾಥಲಿಕ್ ಮತ್ತು ಪ್ರಾಟೆಸ್ಟೆಂಟ್ ಮತಗಳ ತಿಕ್ಕಾಟದ ಫಲವಾಗಿ ಒದಗಿದ ಮೂವತ್ತು ವರ್ಷಗಳ ಯುದ್ಧದಲ್ಲಿ ಮುಖ್ಯಪಾತ್ರ ವಹಿಸಿದ್ದನು. ಮೂವತ್ತು ವರ್ಷಗಳ ಯುದ್ಧದಲ್ಲಿ ನಾಲ್ಕು ಹಂತಗಳಿವೆ :

1) ಬೊಹಿಮಿಯನ್ ಹಂತ (Bohemian phase, ೧೬೧೮–೧೬೨೨) ಇಂಗ್ಲೆಂಡಿನ ಒಂದನೆ ಜೇಮ್ಸ್ ಎಂಬುವನ ಅಳಿಯ ಫ್ರೆಡರಿಕ್, ಬೊಹಿಮಿಯದ ಪ್ರಾಟೆಸ್ಟೆಂಟರ ಪರವಾಗಿ ಬೊಹಿಮಿಯದ ರಾಜ್ಯವನ್ನು ಸ್ವೀಕರಿಸಿ, ತನ್ನ ಸ್ವಂತ ರಾಜ್ಯವನ್ನೇ ಕಳೆದುಕೊಂಡುದ್ದು.

2) ಡೆನ್‌ಮಾರ್ಕ್ ರಾಜನಾದ ಕ್ರಿಶ್ಚಿಯನ್ ಎಂಬುವನ ಪಾತ್ರ (Danish phase, ೧೬೨೪–೧೬೩೦).

3) ಸ್ವೀಡನ್ನಿನ ರಾಜನಾದ ಗುಸ್ಟೆವಸ್ ಅಡಾಲ್‌ಫಸ್ ಎಂಬುವನ ಪಾತ್ರ (Swedish phase, ೧೬೩೦–೧೬೩೨).

4) ರಿಷಲಿಯುವಿನ ನೇತೃತ್ವದಲ್ಲಿ ಫ್ರಾನ್ಸಿನ ಪಾತ್ರ (French phase, ೧೬೩೫–೧೬೪೩).

ಕ್ರಾಮ್‌ವೆಲ್ ಸರ್ವಾಧಿಕಾರತ್ವಕ್ಕೆ ಬರುವ ವೇಳೆಗೆ ಯೂರೋಪಿನ ಸನ್ನಿವೇಶವು ಬದಲಾವಣೆಯಾಗಿತ್ತು. ಆಗ ಪ್ರಾಟೆಸ್ಟೆಂಟ್ ಮತ್ತು ಕ್ಯಾಥಲಿಕ್ ಮತಗಳ ಯುದ್ಧ ಮುಕ್ತಾಯವಾಗಿತ್ತು. ಕ್ಯಾಥಲಿಕ್ ಫ್ರಾನ್ಸ್ ಕ್ಯಾಥಲಿಕ್ ಸ್ಪೇನಿನೊಡನೆ ಯುದ್ಧ ಪ್ರಾರಂಭಮಾಡಿತ್ತು.

ತನ್ನ ವಿದೇಶಾಂಗ ನೀತಿಯಲ್ಲಿ ಕ್ರಾಮ್‌ವೆಲ್ ಎಲಿಸಬೆತ್ತಳ ಮೇಲ್ಪಂಕ್ತಿಯನ್ನು ಅನುಸರಿಸಿದನೆಂದು ಹೇಳಬಹುದು. ಸರ್ ವಾಲ್ಟರ್ ರ್‍ಯಾಲೆಯಂತೆ ಕ್ರಾಮ್‌ವೆಲ್ ಸ್ಪೇನಿನೊಡನೆ ಯುದ್ಧಮಾಡಲು ಅನುವಾದನು. ಸ್ಪೇನಿನ ವಸಾಹತುಗಳೊಡನೆ ಇಂಗ್ಲೆಂಡ್ ವ್ಯಾಪಾರ ಸ್ವಾತಂತ್ರ್ಯವನ್ನು (Freedom of Trade) ಮತ್ತು ಸ್ಪೇನ್ ರಾಜ್ಯದಲ್ಲಿದ್ದ ಇಂಗ್ಲಿಷರಿಗೆ ಮತೀಯ ಸ್ವಾತಂತ್ರ್ಯವನ್ನು ಕೊಡಬೇಕೆಂದೂ ಅಪೇಕ್ಷಿಸಿತು. ಇವುಗಳನ್ನು ಅಪೇಕ್ಷಿಸುವುದು "ನನ್ನ ಯಜಮಾನನ ಎರಡು ಕಣ್ಣುಗಳನು ಕೇಳಿದಂತೆ" ಎಂದು ಸ್ಪೇನಿನ ರಾಯಭಾರಿಯು ಉತ್ತರಕೊಟ್ಟನು.

ಕ್ರಾಮ್‌ವೆಲ್ ಫ್ರಾನ್ಸಿನಲ್ಲಿ ರಿಷಿಲಿಯು ಕಾಲವಾದ ನಂತರ ಅಧಿಕಾರಕ್ಕೆಬಂದ ಮಾಜರಿನ್ (Mazarin) ಎಂಬುವನೊಡನೆ ಸ್ಪೇನಿನ ವಿರುದ್ಧವಾಗಿ ಒಪ್ಪಂದ ಮಾಡಿಕೊಂಡನು. ಫ್ರಾನ್ಸ್, ಕ್ರಾಮ್‌ವೆಲ್ಲನ ಕೋರಿಕೆಯಂತೆ ಪೀಡ್‌ಮಾಂಟ್‌ನಲ್ಲಿದ್ದ ಪ್ರಾಟೆಸ್ಟೆಂಟರನ್ನು, ಕ್ರೂರಿಯಾದ ಡ್ಯೂಕ್ ಆಫ್ ಸವಾಯ್ ಕೊಲ್ಲಿಸುತ್ತಿದ್ದುದನ್ನು ನಿಲ್ಲಿಸುವಂತೆ ಮಾಡಿತು. ಫ್ರಾನ್ಸ್ ಮತ್ತು ಇಂಗ್ಲೆಂಡ್ ಡ್ಯೂನ್ಸ್ ಕದನದಲ್ಲಿ (Battle of Dunes, ೧೬೫೮) ಸ್ಪೇನನ್ನು ಸೋಲಿಸಿದುವು. ಅದರ ಹಿಂದಿನ ವರ್ಷ (೧೬೫೭), ಬ್ಲೇಕ್ (Blake) ನೌಕಾ ಯುದ್ಧದಲ್ಲಿ ಸಂತಕ್ರೂಸ್ Santa cruz) ಎಂಬಲ್ಲಿ ಸ್ಪೇನಿನ ಅನೇಕ ಹಡಗುಗಳನ್ನು ನಾಶ ಮಾಡಿದ್ದನು. ಡೂನ್ಸ್ ಕದನದ ವಿಜಯದ ಫಲವಾಗಿ ಇಂಗ್ಲೆಂಡಿಗೆ ಡನ್‌ಕರ್ಕ್ (Dunkirk) ದೊರಕಿತು. ಸ್ಪೇನಿಗೆ ಸೇರಿದ ಪಶ್ಚಿಮ ಇಂಡೀಸ್ ದ್ವೀಪವಾದ ಹಿಸ್ಪಾನಿಯೋಲಾ (Hispaniola) ವನ್ನು ಇಂಗ್ಲಿಷ್ ನೌಕಾಪಡೆ ೧೬೫೫ ರಲ್ಲಿ ಮುತ್ತಿತ್ತು. ಅದು ಸಫಲವಾಗದಿದ್ದರೂ ಜಮೈಕವು ಇಂಗ್ಲಿಷರ ಕೈಸೇರಿತು.

೧೬೫೮ ರಲ್ಲಿ ಕ್ರಾಮ್‌ವೆಲ್ ಕಾಲವಾದನು. ಫ್ರಾನ್ಸಿಗೂ ಸ್ಪೇನಿಗೂ ಯುದ್ಧ ಮುಗಿದು ೧೬೫೯ ರಲ್ಲಿ ಶಾಂತಿಯಾಯಿತು. ೧೬ ನೇ ಶತಮಾನದಲ್ಲಿ ಯೂರೋಪಿನಲ್ಲಿ ಅತ್ಯಂತ ಪ್ರಬಲ ರಾಷ್ಟ್ರವಾಗಿದ್ದ ಸ್ಪೇನ್ ತನ್ನ ಪ್ರಾಮುಖ್ಯತೆಯನ್ನು ಕಳೆದುಕೊಂಡಿತ್ತು. ಫ್ರಾನ್ಸ್ ೧೭ ನೆ

ಲೂಯಿಯ ಕೈಕೆಳಗೆ ಯೂರೋಪಿನ ಅತ್ಯಂತ ಪ್ರಬಲ ರಾಷ್ಟ್ರವಾಗಲು ಕಾರಣವಾಯಿತು.

ಕ್ರಾಮ್‌ವೆಲ್ ಒಳಾಡಳಿತದಲ್ಲಿಯೂ ಮತ್ತು ವಿದೇಶಾಂಗ ನೀತಿಯಲ್ಲಿಯೂ ಇಂಗ್ಲೆಂಡು ಯಶಸ್ವಿಯಾಗುವಂತೆ ಮಾಡಿದನು. ಸ್ಟುವರ್ಟ್ ರಾಜರ ಕಾಲದಲ್ಲಿ ಇಂಗ್ಲೆಂಡ್ ಅಂತರ ರಾಷ್ಟ್ರೀಯ ರಾಜಕೀಯದಲ್ಲಿ ಯಾವ ಪ್ರಗತಿಯನ್ನೂ ಸಾಧಿಸಿರಲಿಲ್ಲ. ಕ್ರಾಮ್‌ವೆಲ್ ಇಂಗ್ಲೆಂಡ್ ಯೂರೋಪಿಯನ್ ರಾಷ್ಟ್ರಗಳಲ್ಲಿ ಪ್ರಖ್ಯಾತಿಯನ್ನು ಹೊಂದುವಂತೆ ಮಾಡಿದನು. ರಾಜತ್ವದ ಪಂಗಡಕ್ಕೆ ಸೇರಿದ (Royalist) ಚರಿತ್ರೆಕಾರನಾದ ಕ್ಲಾರೆಂಡನ್ ಕೂಡ "ಕ್ರಾಮ್‌ವೆಲ್ಲನ ಒಳಾಡಳಿತದ ಮಹತ್ವವು ಅವನ ಹೊರಾಡಳಿತದ ಒರಿ ನೆರಳಿನಂತೆ ಇದೆ" ಎಂದು ಬರೆದನು.

ಚರಿತ್ರೆಯಲ್ಲಿ ಕ್ರಾಮ್‌ವೆಲ್ ಪಾರ್ಲಿಮೆಂಟಿನ ಮತ್ತು ಸ್ಟುವರ್ಟ್ ರಾಜರ ದಬ್ಬಾಳಿಕೆಯ ಶತ್ರುವೆಂದು ಪರಿಗಣಿಸಲ್ಪಟ್ಟಿದ್ದಾನೆ. ಅವನು "ದೈವದತ್ತವಾದ ರಾಜತ್ವ" ವನ್ನು ನಾಶಮಾಡಿದನು. ಪಾರ್ಲಿಮೆಂಟ್ ಸ್ವಲ್ಪ ಕಾಲದಲ್ಲೇ ಪುನಃ ತಾನು ಕಳೆದುಕೊಂಡಿದ್ದ ಸ್ಥಾನವನ್ನು ಪಡೆಯಿತು. ತಾನು ಸರ್ವಾಧಿಕಾರಿಯಾಗಿದ್ದರೂ ಪಾರ್ಲಿಮೆಂಟನ್ನು ಆಗಾಗ್ಗೆ ಸಭೆ ಸೇರಿಸಿ, ಅದನ್ನು ಆಡಳಿತ ನಡೆಸುವುದರಲ್ಲಿ ತನ್ನ ಜೊತೆಗೆ ಸೇರಿಸಿಕೊಳ್ಳಲು ಪ್ರಯತ್ನಪಟ್ಟುದ್ದನ್ನು ನೋಡಿದರೆ ಕ್ರಾಮ್‌ವೆಲ್ ಪಾರ್ಲಿಮೆಂಟಿನ 'ಸಾರ್ವಭೌಮತ್ವಕ್ಕೆ' (Supremacy of Parliament) ತನ್ನ ಮನಸ್ಸಿನಲ್ಲಾದರೂ ತಲೆ ಬಾಗಿದಂತೆ ಭಾಸವಾಗುತ್ತದೆ. ೧೮ ನೇ ಶತಮಾನದ ಕೊನೆಯವರೆಗೂ ಚರಿತ್ರೆಕಾರರು ಕ್ರಾಮ್‌ವೆಲ್ ಕಪಟಿಯೂ (Hypocrite) ಮತ್ತು ಪ್ರಜಾಪೀಡಕನೂ (Tyrant) ಆಗಿದ್ದನೆಂಬ ಅಭಿಪ್ರಾಯವನ್ನು ಹೊಂದಿದ್ದರು. ೧೯ ನೇ ಶತಮಾನದ ಚರಿತ್ರೆಕಾರರು ಕ್ರಾಮ್‌ವೆಲ್ಲನ ನಿಜವಾದ ವ್ಯಕ್ತಿತ್ವವನ್ನು ಹೊರಗೆಡವಿ, ಬ್ರಿಟನ್ನಿನ ಚರಿತ್ರೆಯಲ್ಲಿ ಅವನು ಸಾಧಿಸಿದ ಮಹತ್ಕಾರ್ಯಗಳನ್ನು ಬೆಳಕಿಗೆ ತಂದರು. ಒಳಾಡಳಿತದಲ್ಲಿ ಶಾಂತಿ, ದಕ್ಷತೆ ಮತ್ತು ಸ್ವಲ್ಪಮಟ್ಟಿಗೆ ಮತೀಯ ಸಹಿಷ್ಣುತೆ, ಹೊರಾಡಳಿತದಲ್ಲಿ ಇಂಗ್ಲೆಂಡಿನ ಯಶಸ್ಸನ್ನು ಹೆಚ್ಚಿಸುವಿಕೆ—ಇವೇ ಮೊದಲಾದುವುಗಳನ್ನು ಕ್ರಾಮ್‌ವೆಲ್ ಸಾಧಿಸಿದನು.

## ಎರಡನೆ ಚಾರ್ಲ್ಸ್, ೧೬೬೦ - ೧೬೮೫ : "ಪುನಸ್ಥಾಪನೆ."

ಕ್ರಾಮ್‌ವೆಲ್ ಕಾಲವಾದನಂತರ ಅವನ ಮಗ ರಿಚರ್ಡ್ ಅವನ ಸ್ಥಾನಕ್ಕೆ ಬಂದನು. ಆದರೆ ಅವನಿಗೂ ಮತ್ತು ಸೈನ್ಯಾಧಿಕಾರಿಗಳಿಗೂ ಜಗಳವು ಪ್ರಾರಂಭವಾಗಿ ರಿಚರ್ಡ್ ತನ್ನ ಪದವಿಗೆ ರಾಜಿನಾಮೆ ಕೊಟ್ಟನು. ಪರಿಸ್ಥಿತಿಯನ್ನು ಹತೋಟಿಗೆ ತರಲು, ಸ್ಕಾಟ್ಲೆಂಡಿನ ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ಆಲಿವರ್ ಕ್ರಾಮ್‌ವೆಲ್ ನಿಯಮಿಸಿದ್ದ ಸೈನ್ಯಾಧಿಪತಿ ಮಾಂಕ್ ಎಂಬುವನು ಇಂಗ್ಲೆಂಡಿಗೆ ಬಂದು ಅಲ್ಲಿ ಒಂದು ಹೊಸ, ಮತ್ತು ನಿಜವಾಗಿಯೂ ಸ್ವಾತಂತ್ರ್ಯದಿಂದ ಕೂಡಿದ (Free parliament) ಪಾರ್ಲಿಮೆಂಟನ್ನು ಕರೆಯಿಸಿದನು. ಈ ಪಾರ್ಲಿಮೆಂಟು ಕ್ರಿ. ಶ. ೧೬೬೦ ರಲ್ಲಿ ಮಾಂಕ್ ಏರ್ಪಡಿಸಿದ ಹೊಸ ಚುನಾವಣೆಯ ಫಲವಾಗಿ ಸೇರಿತು. ಈ ಪಾರ್ಲಿಮೆಂಟು ಇಂಗ್ಲೆಂಡಿನಲ್ಲಿ ಪುನಸ್ಥಾಪನೆಯನ್ನು (Restoration) ತಂದಿತು. ಇದರಿಂದ ಇಂಗ್ಲೆಂಡಿನಲ್ಲಿ ಪುನಃ ರಾಜತ್ವವು ಸ್ಥಾಪನೆಯಾಯಿತು. ಒಂದನೆ ಚಾರ್ಲ್ಸ್‌ನ ಮಗನಾದ ಎರಡನೆ ಚಾರ್ಲ್ಸ್‌ನಿಗೆ ರಾಜ್ಯವನ್ನು ಒಪ್ಪಿಸಿತು. ಪುನಸ್ಥಾಪನೆಯಿಂದ ಕೇವಲ ರಾಜತ್ವ ಮಾತ್ರ ಇಂಗ್ಲೆಂಡಿಗೆ ಬರಲಿಲ್ಲ. ಅದರ ಜೊತೆಯಲ್ಲಿ ಪಾರ್ಲಿಮೆಂಟ್ ಮತ್ತು ಎಲಿಸಬೆತ್ ಸ್ಥಾಪಿಸಿದ್ದ ಚರ್ಚು (ಮತೀಯ ಏರ್ಪಾಡು) ಬಂದುವು.

ಪಟ್ಟಕ್ಕೆ ಬರುವ ಮುನ್ನ ಚಾರ್ಲ್ಸ್ ಬ್ರಿಡಾ ಘೋಷಣೆಯನ್ನು ಹೊರಡಿಸಿದನು (Declaration of Breda). ಆಗ ಅವನು ಹಾಲೆಂಡಿನಲ್ಲಿದ್ದ ಬ್ರಿಡಾ ಎಂಬಲ್ಲಿ ನೆಲಸಿದ್ದನು. ಇದರಿಂದ ಸೈನಿಕರಿಗೆ ಸಂಬಳದ ಬಾಕಿಯನ್ನು ಕೊಟ್ಟು ಅದನ್ನು ರದ್ದುಮಾಡುವಂತೆಯೂ, ಒಂದನೆ ಚಾರ್ಲ್ಸ್‌ನ ಮೇಲೆ ಯುದ್ಧ ಮಾಡಿದ್ದವರನ್ನು ಕ್ಷಮಿಸುವಂತೆಯೂ, ಜಮೀನಿನ ಮತ್ತು ಮತೀಯ ವಿಚಾರಗಳಲ್ಲಿ ಸರಿಯಾದ ವ್ಯವಸ್ಥೆ ಮಾಡುವಂತೆಯೂ ಎರಡನೆ ಚಾರ್ಲ್ಸ್ ವಾಗ್ದಾನ ಮಾಡಿದನು.

ಎರಡನೆ ಚಾರ್ಲ್ಸ್‌ನ ಆಳ್ವಿಕೆಯನ್ನು ಈ ಕೆಳಕಂಡ ರೀತಿಯಲ್ಲಿ ಭಾಗಗಳನ್ನಾಗಿ ಮಾಡಬಹುದು :

(೧) ಕ್ಲಾರೆಂಡನ ಮಂತ್ರಿತ್ವ, ೧೬೬೦—೧೬೬೭,

(೨) ಕೆಬಾಲ್ (Cabal) ಮಂತ್ರಿತ್ವ, ೧೬೬೭—೧೬೭೩,

(೩) ಡಾನ್‌ಬಿಯ (Danby) ಮಂತ್ರಿತ್ವ, ೧೬೭೩—೧೬೭೮.

(೪) ವಿಗ್ಸ್ ಪಂಗಡದ ಮುಖಂಡನಾದ ಷಾಫ್ಟ್ಸ್‌ಬರಿ ಮತ್ತು ಅವನ ಅನುಯಾಯಿಗಳ ಪಿತೂರಿ, ೧೬೭೯—೧೬೮೫.

ಕ್ಲಾರೆಂಡನ ಮಂತ್ರಿತ್ವದಲ್ಲಿ ಪ್ಯೂರಿಟನ್ನರ ಪ್ರಭಾವವು ನಾಶವಾಗಿ, ಅವರಿಗೆ ಹಿಂಸೆಯು ಪ್ರಾರಂಭವಾಯಿತು. ೧೬೪೦ ರಲ್ಲಿ ಸೇರಿದ ಲಾಂಗ್ ಪಾರ್ಲಿಮೆಂಟಿನ ಮುಖ್ಯ ಸದಸ್ಯರಲ್ಲೊಬ್ಬನಾದ ಎಡ್ವರ್ಡ್ ಹೈಡ್ ಎಂಬುವನು ಎರಡನೆ ಚಾರ್ಲ್ಸ್ ಪಟ್ಟಕ್ಕೆ ಬರುವುದಕ್ಕಿಂತ ಮುನ್ನ ಅರ್ಲ್ ಆಫ್ ಕ್ಲಾರೆಂಡನ್ ಪದವಿಗೆ ಏರಿದ್ದನು. ಆಗ ಅವನು ರಾಜನಿಗೂ ಮತ್ತು ಪಾರ್ಲಿಮೆಂಟಿಗೂ ರಾಜ್ಯಾಡಳಿತದಲ್ಲಿ ಸರಿಸಮವಾದ ಪಾಲುಗಾರಿಕೆ ಇರಬೇಕೆಂದು ಅವನ ಪ್ರತಿಕಕ್ಷಿಗಳಾದ ಪಿಮ್ ಮತ್ತು ಹ್ಯಾಂಪ್‌ಡನ್ ಇವರುಗಳೊಡನೆ ವಾದಿಸಿದ್ದನು. ಪಾರ್ಲಿಮೆಂಟ್ ಇವನ ಮುಖಂಡತ್ವದಲ್ಲಿ ಕೆಲವು ಕಾನೂನುಗಳನ್ನು ಜಾರಿಗೆ ತಂದಿತು. ಇವುಗಳೆಲ್ಲವನ್ನೂ ಒಟ್ಟು ಸೇರಿಸಿ "ಕ್ಲಾರೆಂಡನ್ ಕೋಡ್" ಎಂಬುದಾಗಿ ಚರಿತ್ರೆಕಾರರು ಕರೆದಿದ್ದಾರೆ. ಇದರಲ್ಲಿ ಮೊದಲನೆಯದು "ಕಾರ್‌ಪೊರೇಷನ್ ಆಕ್ಟ್" (Corporation Act, ೧೬೬೧). ಈ ಕಾನೂನಿನಿಂದ ಪೌರಸಭೆಯಲ್ಲಿ ಸದಸ್ಯರಾಗುವವರು ಎಲಿಸಬೆತ್ ಸ್ಥಾಪಿಸಿದ್ದ ಮತೀಯ ವ್ಯವಸ್ಥೆಗೆ ಒಳಪಟ್ಟಿರಬೇಕೆಂದು ವಿಧಾಯಕವಾಯಿತು. ಇದರಿಂದ ಪ್ಯೂರಿಟನ್ ಮೊದಲಾದ ಮತೀಯ ಗುಂಪುಗಳಿಗೆ ಸೇರಿದ ಪ್ರಜೆಗಳಿಗೆ ಸದಸ್ಯರಾಗಲು ಅವಕಾಶವಿಲ್ಲದಂತಾಯಿತು. ಎರಡನೆಯದು "ಯೂನಿಫಾರ್ಮಿಟಿ" ಕಾನೂನು (Uniformity Act, ೧೬೬೨). ಇದರಿಂದ ಇಂಗ್ಲೆಂಡಿನ ಚರ್ಚಿನಲ್ಲಿ ಎಲ್ಲಾ ಪಾದ್ರಿಗಳೂ ಪ್ರಾರ್ಥನಾ ಪುಸ್ತಕವನ್ನು ಉಪಯೋಗಿಸಬೇಕಾಯಿತು. ಮಠಾಧಿಪತಿಗಳಿಂದ ನಿಯಮಿಸಲ್ಪಟ್ಟವರಲ್ಲದೆ ಇತರ ಪಂಗಡದವರಿಗೆ ಚರ್ಚಿನಲ್ಲಿ ಕೆಲಸಗಳು ಸಿಕ್ಕುವಂತಿರಲಿಲ್ಲ. ಪ್ಯೂರಿಟನ್ ಪಂಗಡದವರು ಉಪಾಧ್ಯಾಯರಾಗಲೂ ಕೂಡ ಅವಕಾಶವಿರಲಿಲ್ಲ.

ಏಕೆಂದರೆ ಇದಕ್ಕೂ ಮಠಾಧಿಪತಿಗಳ (Bishops) ಅನುಮತಿ (Licence) ಬೇಕಾಗಿತ್ತು. ಇದರಿಂದ ಸುಮಾರು ೨೦೦೦ ಪ್ಯೂರಿಟನ್ ಪಾದ್ರಿಗಳು ಕೆಲಸ ಕಳೆದುಕೊಂಡರು. ಮೂರನೆಯದು "ಕನ್ವೆಂಟಿಕಲ್ ಆಕ್ಟ್" (Conventicle Act, ೧೬೬೪). ಯಾವ ಮತೀಯ ಸಮಾರಂಭದಲ್ಲಿಯೂ ಎಲಿಸಬೆತ್ ಸ್ಥಾಪಿಸಿದ್ದ ಚರ್ಚಿಗೆ ಸೇರಿದವರಿಗೇನೇ (Anglicanism) ಪ್ರವೇಶದ ಹಕ್ಕಿತ್ತು; ಇತರರಿಗಿರಲಿಲ್ಲ. ನಾಲ್ಕನೆಯದು "ಐದು ಮೈಲಿ ಕಾನೂನು" (Five mile Act, ೧೬೬೫). ಇದು ಪಾದ್ರಿಗಳು ಮತ್ತು ಶಾಲಾ ಉಪಾಧ್ಯಾಯರುಗಳು ಪಟ್ಟಣಗಳಿಗೆ ಬರಲು ಐದು ಮೈಲಿ ದೂರದಲ್ಲೇ ತಾವು ಚರ್ಚಿನಲ್ಲಾಗಲಿ ಅಥವಾ ಸರ್ಕಾರದಲ್ಲಾಗಲಿ (Church and State) ಯಾವ ಬದಲಾವಣೆಗೂ ಪ್ರಯತ್ನಪಡುವುದಿಲ್ಲವೆಂದು ಘೋಷಿಸಬೇಕಾಗಿತ್ತು. ಈ ಕಾನೂನುಗಳಿಗೆ ಕ್ಲಾರೆಂಡನ ಹೆಸರನ್ನು ಕೊಟ್ಟಿರುವುದು ಅಷ್ಟೇನೂ ಸರಿಯಲ್ಲ. ಏಕೆಂದರೆ ಪ್ಯೂರಿಟನ್ನರನ್ನು ಹಿಂಸೆಗೆ ಗುರಿಪಡಿಸುವ ಮನಸ್ಸು ಕ್ಲಾರೆಂಡನಿಗಿರಲಿಲ್ಲ. ಎರಡನೆ ಚಾರ್ಲ್ಸ್‌ನಿಗೂ ಇದು ಸಮ್ಮತವಿರಲಿಲ್ಲ. ಆದರೆ ೧೬೬೧ ರಲ್ಲಿ ಸೇರಿದ ಕೆವಿಲಿಯರ್ (Cavalier) ಪಾರ್ಲಿಮೆಂಟ್ ಇದಕ್ಕೆ ಕಾರಣ.

ಕ್ಲಾರೆಂಡನ ಮಂತ್ರಿತ್ವದಲ್ಲಿ ಮತ್ತೊಂದು ಘಟನೆಯು ನಡೆಯಿತು. ಇಂಗ್ಲಿಷರಿಗೂ ಡಚ್ಚರಿಗೂ ಎರಡನೆ ಸಲ ಯುದ್ಧ ಪ್ರಾರಂಭವಾಯಿತು (Second Dutch War, ೧೬೬೫–೬೭). ಪ್ರಿನ್ಸ್ ರೂಪರ್ಟ್ ಮತ್ತು ಎರಡನೆ ಜೇಮ್ಸ್, ಕ್ರಾಮ್‌ವೆಲ್ಲನಂತೆಯೇ ಇಂಗ್ಲೆಂಡಿನ ವಾಣಿಜ್ಯವನ್ನು ಹೆಚ್ಚು ಅಭಿವೃದ್ಧಿಗೆ ಬರುವಂತೆ ಮಾಡಲು ಇಷ್ಟವುಳ್ಳವರಾಗಿದ್ದರು. ಇಂಗ್ಲೆಂಡ್, ಅಮೆರಿಕಾದಲ್ಲಿ ಡಚ್ಚರು ಸ್ಥಾಪಿಸಿದ್ದ ಹೊಸ ಆಮ್‌ಸ್ಟರ್‌ಡಾಮ್ ಎಂಬ ವಸಾಹತನ್ನು ಹಿಡಿದು, ಅದಕ್ಕೆ ನ್ಯೂಯಾರ್ಕ್ ಎಂಬ ಹೆಸರನ್ನಿಟ್ಟರು. ಡಚ್ಚರು ಥೇಮ್ಸ್ ನದಿ ಒಳಹೊಕ್ಕು ಹಾವಳಿಮಾಡಲಾರಂಭಿಸಿದರು. ಕೆಲವು ಕದನಗಳಾದ ಬಳಿಕ ೧೬೬೭ರಲ್ಲಿ ಬ್ರಿಡಾ ಕೌಲಿನಿಂದ ಯುದ್ಧ ಮುಕ್ತಾಯವಾಯಿತು. ಇಂಗ್ಲೆಂಡ್ ನ್ಯೂಯಾರ್ಕನ್ನು ಇದರಿಂದ ಉಳಿಸಿಕೊಂಡಿತು.

ಕ್ಲಾರೆಂಡನ ಕಾಲದಲ್ಲಿ ಇಂಗ್ಲೆಂಡಿನಲ್ಲಿ ಕೆಲವು ಅನಾಹುತಗಳು ಸಂಭವಿಸಿದವು. ಲಂಡನ್ನಿನಲ್ಲಿ ದೊಡ್ಡ ಪ್ಲೇಗು ಮತ್ತು ದೊಡ್ಡ ಬೆಂಕಿ (The great plague and the great fire of London) ಉಂಟಾದುವು. ಕ್ರಿ. ಶ. ೧೬೬೫ ರಲ್ಲಿ ದೊಡ್ಡ ಪ್ಲೇಗು ಪ್ರಾರಂಭವಾಗಿ ಲಂಡನ್ನಿನಲ್ಲಿ ಸುಮಾರು ಐದನೆ ಒಂದು ಭಾಗ ಜನರನ್ನು ಮರಣಕ್ಕೆ ಗುರಿ ಮಾಡಿತು. ಮಾರನೆ ವರ್ಷ ಸಂಭವಿಸಿದ ದೊಡ್ಡ ಬೆಂಕಿಯು ಅನಾಹುತ ಲಂಡನ್ನಿನ ಮೂರನೆ ಎರಡು ಭಾಗದಷ್ಟು ಮನೆಗಳನ್ನು ಸುಟ್ಟುಹಾಕಿತು. ಅನೇಕ ಚರ್ಚ್ ಕಟ್ಟಡಗಳೂ ಕೂಡ ಇದರಿಂದ ನಾಶವಾದವು. ಲಂಡನ್ನಿನ ಕಟ್ಟಡಗಳನ್ನು ಪುನರ್ರಚಿಸಲು ಸರ್ ಕ್ರಿಸ್ಟಫರ್ ರೆನ್ (Sir christopher wren) ಎಂಬುವನು ತನ್ನ ಬುದ್ಧಿ ಚಾತುರ್ಯಗಳನ್ನು ಉಪಯೋಗಿಸಿದನು. ಸುಟ್ಟುಹೋಗಿದ್ದ ಸೆಂಟ್‌ಪಾಲ್ ಚರ್ಚ್ (St Paul) ಕಟ್ಟಡವನ್ನು ಕ್ರಿಸ್ಟಫರ್ ರೆನ್ ಸುಂದರವಾಗಿ ಪುನಃ ಕಟ್ಟಿದನು. ದೊಡ್ಡ ಪ್ಲೇಗು ಮತ್ತು ದೊಡ್ಡ ಬೆಂಕಿ ಇವುಗಳಲ್ಲದೆ ಕ್ರಿ. ಶ. ೧೬೬೭ ರಲ್ಲಿ ಡಚ್ಚರೊಡನೆ ಸಂಭವಿಸಿದ ಯುದ್ಧದ ಫಲವಾಗಿ ಡಚ್ಚರು ಥೇಮ್ಸ್ ನದಿಯೊಳಗೆ ನುಗ್ಗಿ ಅನೇಕ ಇಂಗ್ಲಿಷ್ ಹಡಗುಗಳನ್ನು ನಾಶ ಮಾಡಿದ್ದರು. ಈ ಅನಾಹುತಗಳಿಗೆ ಕ್ಲಾರೆಂಡನ್ ಕಾರಣವಲ್ಲದಿದ್ದರೂ ಜನಗಳು ಅವನನ್ನು ತಪ್ಪಿತಸ್ಥನೆಂದು ಪರಿಗಣಿಸಲಾರಂಭಿಸಿದರು. ಎರಡನೆ ಚಾರ್ಲ್ಸ್‌ನು ಅವನನ್ನು ಪಾರ್ಲಿಮೆಂಟಿನ ಪಕ್ಷಪಾತಿಯೆಂದು ತಿಳಿದುಕೊಂಡರೆ, ಪಾರ್ಲಿಮೆಂಟು ಅವನನ್ನು ರಾಜನ ಪಕ್ಷಪಾತಿ ಎಂದು ಪರಿಗಣಿಸಿತು. ಆದುದರಿಂದ ಚಾರ್ಲ್ಸ್‌ನು ಕ್ಲಾರೆಂಡನನ್ನು ಮಂತ್ರಿತ್ವದಿಂದ ವಜಾ ಮಾಡಿದನು. ಪಾರ್ಲಿಮೆಂಟ್ ಅವನನ್ನು ಖಂಡಿಸಿತು (Impeached). ಕ್ಲಾರೆಂಡನು ದೇಶಭ್ರಷ್ಟನಾಗಿ, ತನ್ನ ಈ ವಿಶ್ರಾಂತಿಯ ಕಾಲದಲ್ಲಿ ಇಂಗ್ಲೆಂಡಿನಲ್ಲಿ ಒಂದನೆ ಚಾರ್ಲ್ಸ್ ಕಾಲದಲ್ಲಿ ನಡೆದ ದೊಡ್ಡ ದಂಗೆಯ ಚರಿತ್ರೆಯನ್ನು (History of the great Rebellion) ಬರೆದನು. ಅವನು ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯಕ್ಕೆ ಬೇಕಾದಷ್ಟು ಸಹಾಯ ಮಾಡಿದ್ದನು. ಈ ಕಾರಣದಿಂದಲೇ ಆ ವಿಶ್ವವಿದ್ಯಾನಿಲಯದ ಮುದ್ರಣ ಶಾಲೆಗೆ ಅವನ ಹೆಸರನ್ನೇ ಕೊಟ್ಟಿದೆ.

**ಕೆಬಾಲ್ ಮಂತ್ರಿತ್ವ:** ಕೆಬಾಲ್ ಎಂದರೆ ಒಂದು ಗುಟ್ಟಾದ ಸಮಿತಿ ಎಂದರ್ಥ. ಅನೇಕ ಚರಿತ್ರೆಗಾರರು ಇದು ಆಧುನಿಕ ಮಂತ್ರಿ ಸಂಪುಟದ (Cabinet) ತತ್ವಗಳನ್ನು ಹೊಂದಿತ್ತೆಂದು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಇದು ಒಮ್ಮತದಿಂದಾಗಲಿ, ಪಾರ್ಲಿಮೆಂಟಿನ ಅನು ಮೋದನೆಯಿಂದಾಗಲೀ ಕೆಲಸಮಾಡಲಿಲ್ಲ. ಇದರಲ್ಲಿ ಸೇರಿದ್ದ ಐದು ಜನಗಳ ಹೆಸರಿನ ಮೊದಲಿನ ಅಕ್ಷರಗಳನ್ನು ಒಟ್ಟಿಗೆ ಸೇರಿಸಿದರೆ ಕೆಬಾಲ್ ಎಂಬ ಪದವಾಗುವುದು. ಕ್ಲಿಫರ್ಡ್ ಮತ್ತು ಆರ್ಲಿಂಗ್‌ಟನ್ (Clifford and Arlington) ರೋಮನ್ ಕ್ಯಾಥಲಿಕ್ ಪಂಗಡಕ್ಕೆ ಸೇರಿದ್ದವರಾಗಿ ದ್ದರು. ಬಕಿಂಗ್‌ಹ್ಯಾಮ್ ಪ್ಯೂರಿಟನ್ನರ ಪಕ್ಷದವನು. ಅಷ್ಲಿ (Ashley) ಯಾವ ಪಂಗಡಕ್ಕೂ ಸೇರದೆ ಮತಸಹಿಷ್ಣುತೆಯ ಪಕ್ಷಪಾತಿ ಯಾಗಿದ್ದನು. ಲಾಡರ್‌ಡೇಲ್ (Lauderdale) ಐದನೆಯವನು. ಈ ಕಾಲದಲ್ಲಿ ಎರಡನೆ ಚಾರ್ಲ್ಸ್ ಫ್ರಾನ್ಸಿನ ಹದಿನಾಲ್ಕನೆಯ ಲೂಯಿಯ ಸಹಾಯದಿಂದ ಗುಟ್ಟಾಗಿ ತನ್ನ ಅಧಿಕಾರವನ್ನು ಹೆಚ್ಚಿಸಿಕೊಂಡು ದಬ್ಬಾ ಳಿಕೆಯನ್ನು ಸ್ಥಾಪಿಸಬೇಕೆಂಬ ಆಸೆಯುಳ್ಳವನಾಗಿದ್ದನು. ಡೋವರ್ (Dover) ಒಪ್ಪಂದವು ಗುಟ್ಟಿನಲ್ಲಿ ಹದಿನಾಲ್ಕನೆಯ ಲೂಯಿಗೂ ಎರಡನೆ ಚಾರ್ಲ್ಸ್‌ನಿಗೂ ಆಯಿತು. ಇದರಿಂದ ಲೂಯಿಯು ಚಾರ್ಲ್ಸ್‌ನಿಗೆ ಹಣ ವನ್ನು ಕೊಡುವಂತೆಯೂ, ಮತ್ತು ಚಾರ್ಲ್ಸ್‌ನು ಲೂಯಿಗೆ ಹಾಲೆಂಡನ್ನು ಗೆಲ್ಲಲು ಯುದ್ಧದಲ್ಲಿ ಸಹಾಯ ಮಾಡಬೇಕೆಂದೂ ಗೊತ್ತಾಯಿತು. ಚಾರ್ಲ್ಸ್‌ನಿಗೆ ಹಣದ ಕೊರತೆ ಅಪಾರವಾಗಿತ್ತು. ಅವನ ಆಸ್ಥಾನವು ದುಂದು ವೆಚ್ಚಗಳಿಗೆ ಹೆಸರುವಾಸಿಯಾಗಿತ್ತು. ಡನ್‌ಕರ್ಕ್ ಆಗಲೇ ಅವ ನಿಂದ ಲೂಯಿಗೆ ಮಾರಲ್ಪಟ್ಟಿತ್ತು. ಚಾರ್ಲ್ಸ್‌ನು ೧೬೭೨ ರಲ್ಲಿ ಒಂದು ಹಂಗಾಮಿ ಘೋಷಣೆಯನ್ನು ಹೊರಡಿಸಿ, ಪ್ಯೂರಿಟನ್ನರು ಮತ್ತು ರೋಮನ್ ಕ್ಯಾಥಲಿಕರು ತೊಂದರೆಗೀಡಾಗಿದ್ದ ಕಾನೂನುಗಳನ್ನು ರದ್ದುಮಾಡಿದನು. ಇದೂ ಅಲ್ಲದೆ ಹಾಲೆಂಡಿನ ಮೇಲೆ ಯುದ್ಧವನ್ನು, ಫ್ರಾನ್ಸಿನ ಜೊತೆ ಸೇರಿ ಕೊಂಡು ಪ್ರಾರಂಭಿಸಿದನು. ಆದರೆ ಇಂಗ್ಲೆಂಡಿನಲ್ಲಿ ಇದರಿಂದ ಜನಗಳಲ್ಲಿ ಅತ್ಯಂತ ಅಸಮಾಧಾನ ಉಂಟಾಯಿತು. ಫ್ರಾನ್ಸ್ ಅತ್ಯಂತ ಪ್ರಬಲ ವಾದ ರಾಷ್ಟ್ರವಾಗಿ, ಅಪಾಯಕಾರಿಯಾಗುವುದೆಂದು ಅವರಿಗೆ ಅರಿವಾ

ಯಿತು. ಆದುದರಿಂದ ಚಾರ್ಲ್ಸ್‌ನು ೧೬೭೩ ರಲ್ಲಿ ತನ್ನ ಹಂಗಾಮಿ ಘೋಷಣೆಯನ್ನು ರದ್ದು ಮಾಡಿ, ಟೆಸ್ಟ್ ಆಕ್ಟನ್ನು (Test Act) ಜಾರಿಗೆ ತಂದನು. ಇದರಿಂದ ರೋಮನ್ ಕ್ಯಾಥಲಿಕ್ ಪಂಗಡದವರಿಗೆ ಸೈನ್ಯ ದಲ್ಲಾಗಲಿ, ಸರ್ಕಾರದಲ್ಲಾಗಲಿ ಹುದ್ದೆಯು ಸಿಕ್ಕದಂತಾಯಿತು. ೧೬೭೪ ರಲ್ಲಿ ಚಾರ್ಲ್ಸ್‌ನು ಡಚ್ಚರೊಂದಿಗೆ ಯುದ್ಧವನ್ನು ನಿಲ್ಲಿಸಿದನು. ಟೆಸ್ಟ್ ಆಕ್ಟಿನಿಂದ ಕೆಬಾಲಿನಲ್ಲಿದ್ದ ಇಬ್ಬರು ಕ್ಯಾಥಲಿಕ್ಕರು ತಮ್ಮ ಅಧಿಕಾರವನ್ನು ತ್ಯಜಿಸಬೇಕಾಯಿತು.

ಕೆಬಾಲ್ ಮುಕ್ತಾಯವಾದ ನಂತರ ಚಾರ್ಲ್ಸ್‌ನು ಡಾನ್‌ಬಿ ಎಂಬುವನನ್ನು ಮಂತ್ರಿಯನ್ನಾಗಿ ಮಾಡಿದನು. ಚಾರ್ಲ್ಸ್‌ನಿಗೆ ನಿರಂಕುಶ ಪ್ರಭುತ್ವವನ್ನು ಸ್ಥಾಪಿಸುವುದರಲ್ಲಿ ಇಷ್ಟವಿತ್ತಾದರೂ ಅವನು ಅದಕ್ಕಾಗಿ ರಾಜ್ಯವನ್ನು ಕಳೆದುಕೊಳ್ಳಲು ಸಿದ್ಧನಾಗಿರಲಿಲ್ಲ. ಪುನಃ ಇದಕ್ಕಾಗಿ "ಪ್ರವಾಸಿಗನಂತೆ" ದೇಶ ವೇಶಗಳಲ್ಲಿ ಅಲೆದಾಡಲು ಸಿದ್ಧನಾಗಿರಲಿಲ್ಲ. ೧೬೬೧ ರಲ್ಲಿ ಸೇರಿದ್ದ ಪಾರ್ಲಿಮೆಂಟ್ ಚಾರ್ಲ್ಸ್‌ನಿಗೆ ಬೆಂಬಲಿಗರಾಗಿದ್ದ ಮತ್ತು ರಾಜತ್ವದಲ್ಲಿ ನಂಬಿಕೆಯಿದ್ದ ಅನೇಕ ಸದಸ್ಯರಿಂದ ಕೂಡಿತ್ತು. ಚಾರ್ಲ್ಸ್ ಅದನ್ನು ಆದಷ್ಟುಕಾಲ ಮುಂದುವರಿಸಿಕೊಂಡು ಹೋಗಲು ಇಷ್ಟವುಳ್ಳವನಾಗಿದ್ದನು. ಹಿಂದಿನ ಕಾಲದಲ್ಲಿ ಪಾರ್ಲಿಮೆಂಟ್ ಸೇರಿದ ಸ್ವಲ್ಪ ಕಾಲದಲ್ಲೆ (ಲಾಂಗ್ ಪಾರ್ಲಿಮೆಂಟ್ ವಿನಃ) ಅದು ರಾಜನಿಂದ ರದ್ದಾಗುತ್ತಿತ್ತು. ಆದರೆ ಈ "ಕೆವಿಲಿಯರ್" ಪಾರ್ಲಿಮೆಂಟನ್ನು ಹೇಗೆ ರದ್ದು ಮಾಡಿಸಬೇಕೆಂಬುವೇ ಒಂದು ಸಮಸ್ಯೆಯಾಯಿತು. ಕೆಬಾಲಿನಲ್ಲಿ ಒಬ್ಬ ಸದಸ್ಯನಾಗಿದ್ದ ಷಾಫ್ಟ್ಸ್‌ಬರಿ ಈ ಪಾರ್ಲಿಮೆಂಟನ್ನು ರದ್ದುಮಾಡಿಸಲು ಮತ್ತು ಹೊಸ ಚುನಾವಣೆಯನ್ನು ತರಲು ಬಹಳ ಪ್ರಯತ್ನಪಡುತ್ತಿದ್ದನು. ಅವನು ದೇಶದಾದ್ಯಂತ ಇದಕ್ಕಾಗಿ ತನ್ನ ಅನುಯಾಯಿಗಳನ್ನು ನಿಯಮಿಸಿ ಆಧುನಿಕ ರಾಜಕೀಯದಲ್ಲಿರುವಂತೆ ಪಕ್ಷದ ರಚನೆಗೆ (Party Organization) ಕಾರಣಕರ್ತನಾದನು. ಇವನಿಗೆ ವಿರುದ್ಧ ಪಕ್ಷವನ್ನು ಕಟ್ಟಲು ಡಾನ್‌ಬಿಯು ಸಾಹಸಮಾಡುತ್ತಿದ್ದನು. ೧೬೭೮ ರಲ್ಲಿ ನಡೆದ ಘಟನೆಯಿಂದ ರಾಜತ್ವದಲ್ಲಿ ನಂಬಿಕೆಯಿದ್ದ ಪಾರ್ಲಿಮೆಂಟ್ ಸದಸ್ಯರಲ್ಲೂ ಸ್ವಲ್ಪಮಟ್ಟಿಗೆ ಚಾರ್ಲ್ಸ್‌ನ ವಿಚಾರದಲ್ಲಿ ಅಸಮಾಧಾನವುಂಟಾಗಿತ್ತು.

ಡಾನ್‌ಬಿಯು ಲಂಚ ಮುಂತಾದುವುಗಳಿಂದ ತನ್ನ ಪಕ್ಷವನ್ನು ಹೆಚ್ಚು ಹೆಚ್ಚು ಬಲಗೊಳಿಸಲು ಪ್ರಯತ್ನಮಾಡುತ್ತಿದ್ದನು. ಚರಿತ್ರೆಯಲ್ಲಿ ಸರ್ ರಾಬರ್ಟ್ ವ್ಯಾಲ್‌ಪೋಲ್ ಈ ಕಾರ್ಯಾಚರಣೆಯಲ್ಲಿ ನಿಸ್ಸೀಮನಾಗಿದ್ದ ನೆಂದು ಹೇಳಿದೆ. ಆದರೆ ಇದನ್ನು ರಾಜಕೀಯದಲ್ಲಿ ಮೊದಲು ಪ್ರಾರಂಭಿಸಿದವನು ಡಾನ್‌ಬಿ ಎಂದು ಹೇಳಬಹುದು.

ಹೀಗೆ ಎರಡು ಪಕ್ಷಗಳು ಹುಟ್ಟಿದುವು. ಷಾಫ್ಟ್ಸ್‌ಬರಿಯ ಪಕ್ಷಕ್ಕೆ "ವಿಗ್" ಎಂದು ಹೆಸರು. ಡಾನ್‌ಬಿಯ ಪಕ್ಷಕ್ಕೆ "ಟೋರಿ" ಎಂದು ಹೆಸರಾಯಿತು. ವಿಗ್ ಎಂಬ ಪದವು ಸ್ಕಾಟ್ಲೆಂಡ್ ದೇಶದ ಪ್ರೆಸ್ಬಿಟೇರಿಯನ್ ಸಂಗಡಕ್ಕೆ ಸೇರಿದ ರಾಜದ್ರೋಹಿಗಳಿಗೆ ಕೊಡಲಾಗಿತ್ತು. ಟೋರಿ ಎಂಬ ಪದವು ಐರ್ಲೆಂಡ್ ದೇಶದ ಕ್ಯಾಥಲಿಕ್ ದೇಶಭ್ರಷ್ಟರ ಹೆಸರನ್ನು ಸೂಚಿಸುತ್ತಿತ್ತು. ಹೀಗೆ ಈ ಎರಡು ಸಂಗಡಗಳು ಇಂಗ್ಲೆಂಡ್ ದೇಶದ ಎರಡು ರಾಜಕೀಯ ಪಕ್ಷಗಳಿಗೆ ಹೆಸರಾಯಿತು. ಇದಕ್ಕೆ ಮೊದಲೇ 'ರೌಂಡ್‌ಹೆಡ್' ಮತ್ತು 'ಕೆವಿಲಿಯರ್' ಎಂಬ ಪದಗಳು ಒಂದನೇ ಚಾರ್ಲ್ಸ್‌ನ ಆಳ್ವಿಕೆಯ ಕೊನೆಯಲ್ಲಿ ಬಳಕೆಗೆ ಬಂದಿದ್ದುವು. ಟೋರಿ ಪಾರ್ಟಿಯನ್ನು ಆಸ್ಥಾನದ ಪಾರ್ಟಿ (Court Party) ಎಂದು ಹೇಳಬಹುದು. ವಿಗ್ ಪಾರ್ಟಿಗೆ ಹಳ್ಳಿಯ ಪಾರ್ಟಿ (Country Party) ಎಂದು ಹೇಳಬಹುದು.

ಈ ಪರಿಸ್ಥಿತಿಯಲ್ಲಿ ಟೈಟಸ್ ಓಟ್ಸ್ ಎಂಬುವನು ಕ್ರಿ. ಶ. ೧೬೭೮ ರಲ್ಲಿ ಕ್ಯಾಥಲಿಕರು ಪಿತೂರಿಯಲ್ಲಿ ತೊಡಗಿರುವರೆಂದೂ (Popish Plot), ರಾಜನನ್ನು ಕೊಂದು ಕ್ಯಾಥಲಿಕ್ ಮತಕ್ಕೆ ಸೇರಿದ್ದ ಅವನ ಸಹೋದರನಾದ ಜೇಮ್ಸ್‌ನನ್ನು ಸಿಂಹಾಸನಕ್ಕೆ ತರುವರೆಂದೂ ಮತ್ತು ಹದಿನಾಲ್ಕನೇ ಲೂಯಿಯ ಸಹಾಯದಿಂದ ಕ್ಯಾಥಲಿಕ್ ಮತವನ್ನು ಇಂಗ್ಲೆಂಡಿನಲ್ಲಿ ಹರಡುವರೆಂದೂ ಒಂದು ಕಥೆಯನ್ನು ಹುಟ್ಟಿಸಿದನು. ಟೈಟಸ್ ಓಟ್ಸ್ ಸುಳ್ಳು ಹೇಳುವುದರಲ್ಲಿ ಆ ಶತಮಾನದಲ್ಲೇ ನಿಸ್ಸೀಮನಾಗಿದ್ದನು. ಆದರೂ ಜನಗಳು ಕಳವಳದಿಂದ ಅವನು ಹೇಳಿದ್ದನ್ನು ನಂಬಿದರು. ಇದರ ಫಲವಾಗಿ ಅನೇಕ ನಿರ್ದೋಷಿಗಳಾಗಿದ್ದ ಕ್ಯಾಥಲಿಕರನ್ನು ಜನಗಳ ಗುಂಪು ಕೊಂದುಹಾಕಿತು. ಡೋವರ್ ಕೌಲಿನ ಷರತ್ತುಗಳಲ್ಲಿ ಸ್ವಲ್ಪಮಟ್ಟಿಗೆ

ಇದಕ್ಕೆ ಸೇರಿದಂತೆ ಆಧಾರವಿದ್ದಿತಾದರೂ ಟೈಟಸ್ ಓಟ್ಸ್ ರಚಿಸಿದ ಸುಳ್ಳುಕಂತೆಗಳು ಜನರನ್ನು ಉದ್ರೇಕಗೊಳಿಸಿ ಅವರನ್ನು ಮೋಸಕ್ಕೊಳ ಪಡಿಸಿದುವು. ಷಾಫ್ಟ್ಸ್‌ಬರಿ ಇದನ್ನೆಲ್ಲಾ ಪಾರ್ಲಿಮೆಂಟಿನಲ್ಲಿ ಉಪಯೋಗಿಸಿಕೊಂಡು ಡಾನ್‌ಬಿಯು ಹದಿನಾಲ್ಕನೆ ಲೂಯಿಯ ಜೊತೆಯಲ್ಲಿ ಗುಟ್ಟಾಗಿ ವ್ಯವಹರಿಸುತ್ತಿದ್ದನೆಂದು ಆಪಾದಿಸಿ, ಅವನನ್ನು ಪಾರ್ಲಿಮೆಂಟ್ ಖಂಡಿಸಬೇಕೆಂಬ (Impeach) ಮಸೂದೆಯನ್ನು ಮಂಡಿಸಿದನು. ಡಾನ್‌ಬಿಯನ್ನು ಕಾಪಾಡಲು ಚಾರ್ಲ್ಸನು ಕೆವಿಲಿಯರ್ ಪಾರ್ಲಿಮೆಂಟನ್ನು ಕ್ರಿ. ಶ. ೧೬೭೯ ರಲ್ಲಿ ರದ್ದು ಮಾಡಿದನು.

ಕ್ರಿ. ಶ. ೧೬೭೯ ರಿಂದ ೧೬೮೧ ರ ತನಕ ಮೂರು ಪಾರ್ಲಿಮೆಂಟುಗಳು ಸಭೆ ಸೇರಿದುವು. ಈ ಮೂರು ಪಾರ್ಲಿಮೆಂಟುಗಳಲ್ಲಿಯೂ ಹೆಚ್ಚಾಗಿ ವಿಗ್ ಪಂಗಡದ ಸದಸ್ಯರೇ ಇದ್ದರು. ಕ್ರಿ. ಶ. ೧೬೭೯ ರಲ್ಲಿ ಸೇರಿದ ಪಾರ್ಲಿಮೆಂಟ್ ಡಾನ್‌ಬಿಯನ್ನು ಸೆರೆಮನೆಗೆ ಕಳುಹಿಸಿತು. ಎರಡನೆಯದಾಗಿ "ಹೆಬಿಯಸ್ ಕಾರ್ಪಸ್" ಕಾನೂನನ್ನು ಜಾರಿಗೆ ತಂದಿತು. ಇದು ಸೆರೆಮನೆಗೆ ಒಯ್ಯಲ್ಪಡುವ ಪ್ರತಿಯೊಬ್ಬನಿಗೂ ವಿಚಾರಣೆಯನ್ನು ಆದಷ್ಟು ಬೇಗ ಏರ್ಪಡಿಸಬೇಕೆಂದು ವಿಧಿಸಿತು. ಈ ಮೂರು ಪಾರ್ಲಿಮೆಂಟುಗಳಲ್ಲಿ ವಿಗ್ ಪಕ್ಷವು ಮುಖ್ಯವಾಗಿ "ನಿರಾಕರಣೆಯ ಕಾನೂನನ್ನು (Exclusion Bill) ತರಲು ಪ್ರಯತ್ನಿಸಿತು. ಇದರಿಂದ ಷಾಫ್ಟ್ಸ್‌ಬರಿ ಮತ್ತು ಅವನ ಅನುಯಾಯಿಗಳು ಎರಡನೆ ಚಾರ್ಲ್ಸ್‌ನ ಸಹೋದರನಾದ ಮತ್ತು ರೋಮನ್ ಕ್ಯಾಥಲಿಕ್ ಮತಕ್ಕೆ ಸೇರಿದ್ದ ಎರಡನೇ ಜೇಮ್ಸ್‌ನಿಗೆ ರಾಜ್ಯವನ್ನು ತಪ್ಪಿಸಿ, ಪ್ರಾಟೆಸ್ಟೆಂಟ್ ಮತಕ್ಕೆ ಸೇರಿದ್ದ ಚಾರ್ಲ್ಸ್‌ನ ಅನೌರಸ ಪುತ್ರನಾದ ಡ್ಯೂಕ್ ಆಫ್ ಮಾನ್‌ಮತ್ ಎಂಬುವನನ್ನು ಪಟ್ಟಕ್ಕೆ ತರಬೇಕೆಂದು ಗೊತ್ತುಮಾಡಿಕೊಂಡಿದ್ದರು. ಆದರೆ ಈ ವೇಳೆಗೆ ಟೈಟಿಸ್ ಓಟ್ಸ್ ಒಬ್ಬ ದಗಾಕೋರನೆಂದು ಜನಗಳಿಗೆ ಗೊತ್ತಾಗಿ, ನಿರ್ದೋಷಿಗಳಾದ ಕ್ಯಾಥಲಿಕರನ್ನು ಹಿಂಸಿಸಿದ್ದುದಕ್ಕಾಗಿ ಅವರು ಪಶ್ಚಾತ್ತಾಪಗೊಂಡಿದ್ದರು. ವಿಗ್ ಪಕ್ಷವು ಟೈಟಸ್ ಓಟ್ಸನ ಬಲೆಗೆ ಬಿದ್ದುದರಿಂದ ಅದರ ಪ್ರಭಾವವು ಕುಗ್ಗಿಹೋಯಿತು. ಚಾರ್ಲ್ಸನು ಹಾಲಿಫಾಕ್ಸ್ ಎಂಬುವನ ಸಹಾಯದಿಂದ ವಿಗ್ ಪಕ್ಷದ ಬಲವನ್ನು ಮುರಿದುಹಾಕಿದನು.

ಷಾಫ್ಟ್ಸ್‌ಬರಿಯು ದೇಶಬಿಟ್ಟು ಓಡಿಹೋದನು. ಕೆಲವು ವಿಗ್ ಪಕ್ಷದ ಸದಸ್ಯರು ರಾಜನನ್ನು ಕೊಲೆಮಾಡಲು ಒಂದು ಒಳಸಂಚನ್ನು ನಡೆಸಿದರು. ಚಾರ್ಲ್ಸ್‌ನು ನ್ಯೂಮಾರ್ಕೆಟ್ ಕುದುರೆ ಪಂದ್ಯದಿಂದ ಹಿಂತಿರುಗುತ್ತಿದ್ದಾಗ ರೈ ಹೌಸ್ (Rye House) ಎಂಬಲ್ಲಿ ಅವನನ್ನು ಕೊಲ್ಲಬೇಕೆಂದು ಗೊತ್ತಾಗಿತ್ತು. ಅದರೆ ಅದು ಫಲಕಾರಿಯಾಗಲಿಲ್ಲ. ಲಾರ್ಡ್ ರಸಲ್ ಮತ್ತು ಆಲ್‌ಜರ್‌ನನ್ ಸಿಡ್ನಿ ಎಂಬ ಪ್ರಮುಖ ವಿಗ್ ನಾಯಕರನ್ನು ಚಾರ್ಲ್ಸ್‌ನು ಮರಣದಂಡನೆಗೆ ಗುರಿಪಡಿಸಿದನು. ಹೀಗೆ ವಿಗ್ ಪಕ್ಷ ಚಾರ್ಲ್ಸ್‌ನ ರಾಜಕೀಯ ನೈಪುಣ್ಯತೆಯಿಂದ ಮುರಿದುಬಿತ್ತು.

**ಎರಡನೆ ಜೇಮ್ಸ್, ೧೬೮೫–೧೬೮೮ :** ಎರಡನೆ ಚಾರ್ಲ್ಸ್‌ನು ಕಾಲವಾದಮೇಲೆ ಅವನ ಸಹೋದರನಾದ ಡ್ಯೂಕ್ ಆಫ್ ಯಾರ್ಕ್ ಆಗಿದ್ದ ಎರಡನೇ ಜೇಮ್ಸ್‌ನು ತನ್ನ ಆಳ್ವಿಕೆಯನ್ನು ಪ್ರಾರಂಭಿಸಿದಾಗ, ಅವನಿಗೆ ಅನುಕೂಲವಾದ ವಾತಾವರಣವು ಒದಗಿಬಂದಿತ್ತು. ಅವನಿಗೆ ಸಣ್ಣ ಸೈನ್ಯವೊಂದಿತ್ತು. ಇದು ಬೇರಾವ ರಾಜನಿಗೂ ಹಿಂದೆ ಕೊಡಲ್ಪಟ್ಟಿರಲಿಲ್ಲ. ಪಾರ್ಲಿಮೆಂಟಿನಲ್ಲಿ ಟೋರಿ ಪಕ್ಷಕ್ಕೆ ಸೇರಿದ ಸದಸ್ಯರೇ ಹೆಚ್ಚಾಗಿದ್ದು ಇವನಿಗೆ ಅನುಕೂಲರಾಗಿದ್ದರು. ಜೊತೆಗೆ ಹದಿನಾಲ್ಕನೆ ಲೂಯಿಯ ಸಹಾಯವಂತೂ ಇದ್ದೇ ಇತ್ತು.

ಡ್ಯೂಕ್ ಆಫ್ ಮಾನ್‌ಮತ್ ಅಳಿದುಳಿದ ವಿಗ್ ಪಕ್ಷದ ಸಹಾಯದಿಂದ ದಂಗೆಯೆದ್ದನು. ಸೆಡ್ಜ್‌ಮೂರ್ (Sedgemoor) ಎಂಬಲ್ಲಿ ಕದನ ನಡೆದು ಮಾನ್‌ಮತ್ ಮತ್ತು ಅವನ ಅನುಯಾಯಿಗಳು ಜೇಮ್ಸ್‌ನ ಸೈನಿಕರ ಕೈಗೆ ಸಿಕ್ಕಿಬಿದ್ದರು. ಕಿರ್ಕ್ ಎಂಬ ಸೈನ್ಯಾಧಿಪತಿಯು ತನ್ನ ಕೈಗೆ ಸಿಕ್ಕಿಬಿದ್ದ ಅಸಹಾಯಕ ರೈತಾಪಿ ದಂಗೆಕಾರರನ್ನು ಸದೆಬಡಿದನು. ಇದೂ ಅಲ್ಲದೆ ನ್ಯಾಯಾಧೀಶನಾದ ಜೆಫ್‌ರೀಸ್ (Jeffreys) ಎಂಬುವನು ದಂಗೆಗೆ ಸಹಾಯಕರಾಗಿದ್ದ ೩೦೦ ಜನರನ್ನು ಗಲ್ಲಿಗೆ ಹಾಕಿಸಿ ೮೦೦ ಜನರನ್ನು ಗಡಿಪಾರ್ ಮಾಡಿಸಿದನು. ಇವನಷ್ಟು ಕ್ರೂರಿಯಾದ ನ್ಯಾಯಾಧಿಪತಿಯು ಚರಿತ್ರೆಯಲ್ಲೇ ವಿರಳ.

ದಂಗೆಯನ್ನು ಅಡಗಿಸುವ ನೆಪದಿಂದ ೨ ನೇ ಜೇಮ್ಸ್ ತನ್ನ ಸೈನ್ಯವನ್ನು ೬,೦೦೦ ದಿಂದ ೩೦,೦೦೦ ಕ್ಕೆ ಹೆಚ್ಚಿಸಿ, ಲಂಡನ್ ಪಟ್ಟಣಿಗರನ್ನು

ಹೆದರಿಸುವುದಕ್ಕೋ ಏನೋ ಎಂಬಂತೆ ಅದರ ಹತ್ತಿರದಲ್ಲೇ ಇದ್ದ ಹೌನ್ಸ್ಲೊ (Hounslow) ಎಂಬ ಶಿಬಿರದಲ್ಲಿ ಅದನ್ನು ಇಟ್ಟಿದ್ದನು. ದಂಗೆಯನ್ನು ಅಡಗಿಸಿದ ಮೇಲೆ ಜೇಮ್ಸನು ತನ್ನ ದಬ್ಬಾಳಿಕೆಯನ್ನು ಪ್ರಾರಂಭಿಸಿದನು. ಇಂಗ್ಲಿಷ್ ಚರಿತ್ರೆಯಲ್ಲಿ ಜೇಮ್ಸನು ಅತ್ಯಂತ ಜನಪ್ರಿಯರಲ್ಲದ ಮೇರಿ ಟ್ಯೂಡರ್ ಮತ್ತು ಆಲಿವರ್ ಕ್ರಾಮ್‌ವೆಲ್ ಇವರುಗಳಿಬ್ಬರ ನೀತಿಯನ್ನು ಒಟ್ಟಿಗೆ ಸೇರಸಿ ಪ್ರತಿಪಾದಿಸಲು ಪ್ರಯತ್ನಿಸಿ ವಿಫಲನಾದನು. ಮೇರಿಯು ಕ್ಯಾಥಲಿಕ್ ಮತವನ್ನು ಪುನರುಜ್ಜೀವನಗೊಳಿಸಲು ಬದ್ಧಕಂಕಣೆಯಾಗಿದ್ದಳು; ಆಲಿವರ್ ಕ್ರಾಮ್‌ವೆಲ್ಲನ ಹೆಸರು ಸೈನ್ಯದ ಆಳ್ವಿಕೆಯ ಜೊತೆಗೆ ಸಂಯೋಜಿತವಾಗಿತ್ತು. ಟೆಸ್ಟ್ ಆಕ್ಟಿಗೆ ವಿರೋಧವಾಗಿ ಜೇಮ್ಸನು ಕ್ಯಾಥಲಿಕರನ್ನು ಸೈನ್ಯದಲ್ಲೂ ಮತ್ತು ಆಡಳಿತದಲ್ಲೂ ನೇಮಿಸಲು ಉದ್ಯುಕ್ತನಾದನು.

ಮೊದಲಿನಿಂದಲೂ ವಿಶ್ವವಿದ್ಯಾನಿಲಯಗಳು ರಾಜನಲ್ಲಿ ಭಕ್ತಿಯುಳ್ಳವಾಗಿದ್ದುವು. ಆದರೆ ಜೇಮ್ಸ್ ಅವುಗಳ ಆಡಳಿತದಲ್ಲೂ ಕೈಹಾಕಿ ಅಪಕೀರ್ತಿಗೆ ಗುರಿಯಾದನು, ಆಕ್ಸ್‌ಫರ್ಡಿನ ಕ್ರೈಸ್ತ ಚರ್ಚ್ ಕಾಲೇಜಿಗೆ ಮುಖ್ಯಾಧಿಕಾರಿಯಾಗಿ ಒಬ್ಬ ಕ್ಯಾಥಲಿಕನನ್ನು ನಿಯಮಿಸಿದನು. ೧೬೮೭ ರಲ್ಲಿ ಆಕ್ಸ್‌ಫರ್ಡಿನ ಮಾಡಲೀ (Magdalen) ಕಾಲೇಜಿನ ಅಧ್ಯಕ್ಷ ಕಾಲವಾಗಲು, ಜೇಮ್ಸನು ಒಬ್ಬ ಕ್ಯಾಥಲಿಕನನ್ನು ಅದಕ್ಕೆ ಅಧ್ಯಕ್ಷನನ್ನಾಗಿ ಮಾಡಿಸಿದನು. ಇದಕ್ಕೆ ಒಪ್ಪದಿದ್ದ ಅನೇಕ ವಿದ್ವಾಂಸರನ್ನು ಓಡಿಸಿದನು.

೧೬೮೭ ರಲ್ಲಿ ಜೇಮ್ಸ್ "ಇಂಡಲ್‌ಜೆನ್‌ಸಸ್" ಘೋಷಣೆಯನ್ನು ಹೊರಡಿಸಿದನು. ಇದರಿಂದ ಜೇಮ್ಸ್ ರೋಮನ್ ಕ್ಯಾಥಲಿಕರಿಗೂ ಮತ್ತು ಪ್ಯೂರಿಟನ್ ಗುಂಪಿಗೆ ಸೇರಿದವರಿಗೂ ಇದ್ದ ಅನಾನುಕೂಲವಾದ ಕಾನೂನುಗಳನ್ನು ಹಂಗಾಮಿಯಾಗಿ ರದ್ದುಮಾಡುವ ಮತ್ತು ವಜಾಮಾಡುವ ಹಕ್ಕನ್ನು (Suspending and dispensing power of the existing Laws) ಕೈಗೊಂಡನು. ಆದರೆ ಜನಗಳಿಗೆ ಜೇಮ್ಸಿನ ಮನಸ್ಸು ಏನೆಂಬುದು ಚೆನ್ನಾಗಿ ಅರ್ಥವಾಗಿತ್ತು. ರೋಮನ್ ಕ್ಯಾಥಲಿಕರ ಉನ್ನತಿಗಾಗಿ ಹೊರಡಿಸಿದ ಘೋಷಣೆಯು ಇದೆಂದು ಅವರು ಮನಗಂಡರು. ಎರಡನೆ ಚಾರ್ಲ್ಸನು ಇದೇ ತರಹ ಪ್ರಯತ್ನ ಮಾಡಿ, ಜನಗಳ ಪ್ರತಿಭಟನೆಯನ್ನು ನೋಡಿ, ಚಾತುರ್ಯದಿಂದ 'ಇಂಡಲ್‌ಜೆನ್‌ಸಸ್,

ಘೋಷಣೆಯನ್ನು ಹಿಂದಕ್ಕೆ ತೆಗೆದುಕೊಂಡಿದ್ದನು. ಇದೇ ೧೬೮೮ ರ ಕ್ರಾಂತಿಯ ನಾಟಕದಲ್ಲಿ ಮೊದಲನೆ ಅಂಕವೆಂದು ಹೇಳಬಹುದು.

ಜೇಮ್ಸ್ ಅನೇಕ ಹಿತೈಷಿಗಳನ್ನು ತನ್ನ ಈ ನೀತಿಯಿಂದ ಕಳೆದು ಕೊಂಡಿದ್ದನು. ಎರಡನೆ ಚಾರ್ಲ್ಸ್‌ನಿಗೆ ಅತ್ಯಂತ ಸಹಾಯಕನಾಗಿದ್ದ ಹಾಲಿಫಾಕ್ಸನ ಸ್ನೇಹವನ್ನು ಜೇಮ್ಸ್ ಹಾಳುಮಾಡಿಕೊಂಡಿದ್ದನು. ಹೀಗೆ ಜೇಮ್ಸ್ ಟೋರಿ ಪಕ್ಷ ಮತ್ತು ವಿಗ್ ಪಕ್ಷದ ಅನೇಕ ಪ್ರಮುಖರ ಅವಿಶ್ವಾಸಕ್ಕೆ ಪಾತ್ರನಾದನು. ೧೬೮೮ ರ ಕ್ರಾಂತಿಯು ಕೇವಲ ವಿಗ್ ಪಕ್ಷದ ಕಾರ್ಯಾಚರಣೆಯ ಫಲವಾಗಿ ಜರುಗಲಿಲ್ಲ. ಜೇಮ್ಸ್ ರಾಜಕೀಯದಲ್ಲಿ ಬದಲಾವಣೆಗಳನ್ನು (Despotism) ಮಾಡಲು ಪ್ರಾರಂಭಿಸಿದುದು ವಿಗ್ ಪಕ್ಷದವರಿಗೆ ಸರಿಬೀಳಲಿಲ್ಲ. ಇಂಗ್ಲಿಷ್ ಪ್ರಾಟೆಸ್ಟೆಂಟ್ ಚರ್ಚ್ ವ್ಯವಸ್ಥೆಯನ್ನು ಬದಲಾಯಿಸಿ, ರೋಮನ್ ಕ್ಯಾಥಲಿಕರಿಗೆ ಅನುಕೂಲಮಾಡಲು ಪ್ರಯತ್ನಿಸಿದುದು ಟೋರಿ ಪಕ್ಷದವರಿಗೆ ಸರಿಬೀಳಲಿಲ್ಲ.

೧೬೮೮ ರಲ್ಲಿ ಜೇಮ್ಸ್ ಪುನಃ ಇಂಡಲ್‌ಜೆನ್‌ಸಸ್ ಘೋಷಣೆಯನ್ನು ಮಾಡಿ, (Second Declaration of Indulgence) ಅದನ್ನು ಮಠಾಧಿಪತಿಗಳು ತಮ್ಮ ಚರ್ಚುಗಳಲ್ಲಿ ಜನಗಳಿಗೆ ಪ್ರಕಟಪಡಿಸಬೇಕೆಂದು ಆಜ್ಞೆಮಾಡಿದನು. ಆದರೆ ಮಹಾಮಠಾಧಿಪತಿಯಾದ ಸಾನ್‌ಕ್ರಾಫ್ಟ್ (Sancroft) ನೊಂದಿಗೆ ಕೂಡಿದ ಏಳು ಜನ ಮಠಾಧಿಪತಿಗಳು ಇದನ್ನು ನಿರಾಕರಿಸಿದರು. ಅವರನ್ನು ನ್ಯಾಯಾಸ್ಥಾನದಲ್ಲಿ ನಿರ್ದೋಷಿಗಳೆಂದು ತೀರ್ಮಾನಿಸಲಾಯಿತು. ದೇಶದಾದ್ಯಂತ ಅವರ ಬಿಡುಗಡೆಯಿಂದ ಅತ್ಯಂತ ಸಂತೋಷವಾಯಿತು. ಸೈನ್ಯವೂ ಕೂಡಾ ಇದರಲ್ಲಿ ತನ್ನ ಉತ್ಸಾಹವನ್ನು ವ್ಯಕ್ತಪಡಿಸಿತು. ಇದರಿಂದ ಜೇಮ್ಸನ ಗೌರವವು ತುಂಬಾ ಕಳೆಗುಂದಿತು.

ಜನಗಳು ಜೇಮ್ಸನ ಕಾಲಾನಂತರ ಪ್ರಾಟೆಸ್ಟೆಂಟ್ ರಾಜ್ಯವು ಪುನಃ ಬರುವುದೆಂದು ನಂಬಿದ್ದರು. ಜೇಮ್ಸನ ಮೊದಲನೆ ಹೆಂಡತಿ ಕ್ಲಾರೆಂಡನ್ನಿನ ಮಗಳಾದ ಆನಿಹೈಡ್ (Anne Hyde) ಎಂಬುವಳಿಗೆ ಮೇರಿ ಮತ್ತು ಆನ್ (Mary and Anne) ಎಂಬ ಇಬ್ಬರು ಹೆಣ್ಣುಮಕ್ಕಳಿದ್ದರು. ಮೇರಿಯು ಹಾಲೆಂಡಿನ ರಾಜನಾದ ವಿಲಿಯಂ ಆಫ್ ಆರೆಂಜ್ ಎಂಬುವನನ್ನು ಮದುವೆಯಾಗಿದ್ದಳು. ಇವನು ಪ್ರಾಟೆಸ್ಟೆಂಟ್ ಮತಕ್ಕೆ ಸೇರಿದವನಾ

ಗಿದ್ದುದಲ್ಲದೆ, ಆಗ್ಗೆ ಯೂರೋಪಿನಲ್ಲೇ ಅತ್ಯಂತ ಪ್ರಬಲನಾಗಿದ್ದ ಹದಿನಾಲ್ಕನೆ ಲೂಯಿಯ ಪ್ರಾಬಲ್ಯವನ್ನು ಕಡಿಮೆ ಮಾಡಬೇಕೆಂದು ದೃಢಮನಸ್ಕನಾಗಿದ್ದನು. ಜೇಮ್ಸನ ಕಾಲಾನಂತರ ಇವನೇ ಇಂಗ್ಲೆಂಡಿನ ಪಟ್ಟಕ್ಕೆ ಬರುವನೆಂಬ ಆಸೆ ಜನಗಳಲ್ಲಿತ್ತು. ಆದರೆ ಆನಿಹೈಡ್ ಕಾಲವಾದ ಬಳಿಕ ಜೇಮ್ಸ್ ಕ್ಯಾಥಲಿಕ್ ಮತಕ್ಕೆ ಸೇರಿದ ಮೇರಿ ಆಫ್ ಮೊಡೆನ ಎಂಬುವಳನ್ನು ಪುನಃ ಮದುವೆಯಾಗಿದ್ದನು. ಅನೇಕ ವರ್ಷಗಳ ತನಕ ಈ ಎರಡನೆ ಹೆಂಡತಿಯಲ್ಲಿ ಮಕ್ಕಳಿಲ್ಲದಿದ್ದುದ್ದರಿಂದ ಜೇಮ್ಸನಿಗೆ ಮಕ್ಕಳಾಗುವ ಸಂಭವವಿಲ್ಲವೆಂದು ಜನರು ತಿಳಿದಿದ್ದರು. ಆದರೆ ೧೬೮೮ ರಲ್ಲಿ ಜೇಮ್ಸನಿಗೆ ಒಂದು ಗಂಡು ಮಗುವು ಜನಿಸಿದ್ದುದ್ದರಿಂದ ಜನಗಳಲ್ಲಿ ನಿರಾಶೆಯು ಪ್ರಾರಂಭವಾಯಿತು. ಕ್ಯಾಥಲಿಕ್ ರಾಜಪರಂಪರೆಯು ಮುಂದುವರಿಯುವುದೆಂದು ಅವರಿಗೆ ಅರಿವಾಯಿತು. ಆದುದರಿಂದ ಎರಡು ಪಕ್ಷಗಳಿಗೂ ಸೇರಿದ ಕೆಲವು ಮುಖಂಡರು ಧೈರ್ಯಮಾಡಿ ವಿಲಿಯಂ ಆಫ್ ಆರೆಂಜನನ್ನು, ಇಂಗ್ಲೆಂಡಿಗೆ ಬಂದು ರಾಜ್ಯವನ್ನು ವಹಿಸಿಕೊಳ್ಳಬೇಕೆಂದು ಪ್ರಾರ್ಥಿಸಿಕೊಂಡರು. ವಿಲಿಯಂ ತನ್ನ ದೇಶವನ್ನು ನುಂಗಬೇಕೆಂದು ಹವಣಿಸುತ್ತಿದ್ದ ಹದಿನಾಲ್ಕನೆ ಲೂಯಿಯ ಸೈನ್ಯದೊಂದಿಗೆ ಹೋರಾಡುತ್ತಿದ್ದನು. ಇಂಗ್ಲೆಂಡಿನ ಸಿಂಹಾಸನವು ಸಿಕ್ಕಿದರೆ ಫ್ರಾನ್ಸಿನ ಬಲವನ್ನು ಎದುರಿಸಲು ಅನುಕೂಲವಾಗುವುದೆಂದು ಅವನು ಎಣಿಸಿದ್ದನು. ಲೂಯಿಯು, ವಿಲಿಯಂ ಇಂಗ್ಲೆಂಡಿನ ರಾಜನಾಗುವುದರಿಂದ ತನಗೆ ಒದಗಿದ್ದ ಕಂಟಕವು ತಪ್ಪಿಹೋಗಿ ವಿಲಿಯಂ ತನ್ನ ಜೀವಮಾನವನ್ನೆಲ್ಲಾ ಇಂಗ್ಲೆಂಡಿನಲ್ಲಿ ಒದಗಬಹುದಾದ ಅಂತರ್ಯುದ್ಧದಲ್ಲಿ ಕಳೆಯಬೇಕಾಗುವುದೆಂದೂ, ಆಗ ತಾನು ಹಾಲೆಂಡನ್ನು ಸುಲಭವಾಗಿ ಗೆದ್ದು ಬಿಡಬಹುದೆಂದೂ ಊಹಿಸಿದ್ದನು. ಆದರೆ ಅವನು ಎಣಿಸಿದಂತೆ ಆಗಲಿಲ್ಲ. ಇಂಗ್ಲೆಂಡಿಗೆ ವಿಲಿಯಂ ಬಂದಿಳಿದ ಸುದ್ದಿಯನ್ನು ಕೇಳಿ ಜೇಮ್ಸ್ ಫ್ರಾನ್ಸಿಗೆ ಓಡಿದನು. ಇದರಿಂದ ಇಂಗ್ಲೆಂಡಿಗೆ ಮತ್ತೂ ಅನುಕೂಲವಾಯಿತು. ರಕ್ತಪಾತವಿಲ್ಲದ ಕ್ರಾಂತಿ ನಡೆಯಿತು. ಖಾಲಿಯಾದ ಸಿಂಹಾಸನಕ್ಕೆ ಪಾರ್ಲಿಮೆಂಟ್ ಮೇರಿ ಮತ್ತು ವಿಲಿಯಂ ಇವರನ್ನು ಏರಿಸಿತು (Joint Sovereign).

ಜೇಮ್ಸ್ನನ ಪತನವು ಇಷ್ಟು ಸುಲಭವಾಗಿ ರಕ್ತಪಾತವಿಲ್ಲದೆ ನಡೆಯಲು ಮುಖ್ಯಕಾರಣನಾದವನು ಜಾನ್ ಚರ್ಚಿಲ್ ಇವನೇ ಮುಂದೆ ಅದ್ವಿತೀಯ ಸೈನ್ಯಾಧಿಕಾರಿಯಾದ ಡ್ಯೂಕ್ ಆಫ್ ಮಾರ್ಲ್‌ಬರೋ ಆದವನು. ಸಮಯ ಸಾಧಿಸಿ ಅವನು ಜೇಮ್ಸ್ನನ ಕೈಬಿಟ್ಟನು. ಹೀಗೆ ಇಂಗ್ಲೆಂಡಿನ ಚರಿತ್ರೆಯಲ್ಲಿ ದಬ್ಬಾಳಿಕೆ ಮತ್ತು ರೋಮನ್ ಕ್ಯಾಥಲಿಕ್ ಮತ ಇವುಗಳನ್ನು ಪುನರುಜ್ಜೀವನಗೊಳಿಸಲು ಪ್ರಯತ್ನಿಸಿ, ಜೇಮ್ಸ್ ೧೬೮೮ ರ ಕ್ರಾಂತಿಗೆ ಕಾರಣನಾದನು.

## ವಿಲಿಯಂ ಮತ್ತು ಮೇರಿ.

**ಕ್ರಿ. ಶ. ೧೬೮೮ ನೇ ಕ್ರಾಂತಿಯ ಫಲಿತಾಂಶಗಳು :** ವಿಲಿಯಂ ಮತ್ತು ಮೇರಿಯನ್ನು ಪಟ್ಟಕ್ಕೆ ಬರುವಂತೆ ಆಹ್ವಾನಿಸಿದ ಪಾರ್ಲಿಮೆಂಟ್ ಇಂಗ್ಲೆಂಡಿನಲ್ಲಿ ದೈವದತ್ತ ರಾಜತ್ವವನ್ನು ಕೊನೆಗಾಣಿಸಿತು. ಅದರ ಬದಲು ಸಾಮಾಜಿಕ, ಕಾನೂನುಬದ್ಧ (Social Contract) ರಾಜತ್ವವು ಸ್ಥಾಪಿಸಲ್ಪಟ್ಟಿತು. ರಾಜತ್ವದಲ್ಲಿ ಜನಗಳು ಮತ್ತು ರಾಜನು ಪಾಲುದಾರರೆಂಬ ತತ್ವವು ಕ್ರಿ. ಶ. ೧೬೮೮ ರಲ್ಲಿ ನಡೆದ ರಕ್ತಪಾತವಿಲ್ಲದ ಕ್ರಾಂತಿಯ ಫಲಿತಾಂಶವೆನ್ನಬಹುದು. ಈ ತತ್ವವನ್ನು ಪ್ರತಿಪಾದಿಸಿ ಪ್ರಕಟಣೆಗೆ ತಂದವನು ಜಾನ್ ಲಾಕ್ (John Locke). ಕ್ರಿ. ಶ. ೧೭೦೨ ರಲ್ಲಿ ವಿಲಿಯಂ ಕಾಲವಾದನಂತರ ಆನ್ (Anne) ಮತ್ತು ಅವಳ ನಂತರ ಒಂದನೆ ಜೇಮ್ಸ್ನನ ಮೊಮ್ಮಗಳಾದ ಸೊಫಿಯಾ ಎಂಬುವಳ ಮಗ ಹಾನೋವರಿನ ಒಂದನೆ ಜಾರ್ಜ್ ಪಟ್ಟಕ್ಕೆ ಬಂದದ್ದು ಈ ತತ್ವದ ಆಧಾರದ ಮೇಲೆಯೇ. ಕ್ರಿ. ಶ. ೧೬೮೮ ರ ಕ್ರಾಂತಿಯಿಂದ ಮತ್ತೊಂದು ತತ್ವವು ಆಚರಣೆಗೆ ಬಂದಿತು. ಇಂಗ್ಲೆಂಡಿನ ಪಟ್ಟಕ್ಕೆ ಪ್ರಾಟೆಸ್ಟೆಂಟ್ ಮತಕ್ಕೆ ಸೇರಿದವರೇ ಬರಬೇಕೆಂಬ ಕಾನೂನು ವಿಧಾಯಕವಾಯಿತು.

ಕ್ರಿ. ಶ. ೧೬೮೯ ರಲ್ಲಿ ಬಳಕೆಗೆ ಬಂದ 'ಬಿಲ್ ಆಫ್ ರೈಟ್ಸ್' (Bill of Rights) ಸ್ಟುವರ್ಟ್ ರಾಜರು ಆಚರಣೆಗೆ ತಂದಿದ್ದ ಪದ್ಧತಿಗಳನ್ನು ತೊಡೆದುಹಾಕಿತು. ಬಳಕೆಯಲ್ಲಿದ್ದ ಕಾನೂನುಗಳನ್ನು ಹಂಗಾಮಿಯಾಗಿ ಅಥವಾ ಖಾಯಂ ಆಗಿ (Suspending and

dispensing of Laws) ರದ್ದುಮಾಡುವುದು, ಪಾರ್ಲಿಮೆಂಟಿನ ಒಪ್ಪಿಗೆ ಇಲ್ಲದೆ ತೆರಿಗೆಗಳನ್ನು ವಿಧಿಸುವುದು, ಮತ್ತು ಪಾರ್ಲಿಮೆಂಟಿನ ಒಪ್ಪಿಗೆ ಇಲ್ಲದೆ ಸೈನ್ಯವನ್ನು ಇಟ್ಟುಕೊಳ್ಳುವುದು ಅಕ್ರಮವೆಂದು ಬಿಲ್ ಆಫ್ ರೈಟ್ಸ್ ಸಾರಿತು. ಸೈನ್ಯವು ಆಲಿವರ್ ಕ್ರಾಮ್‌ವೆಲ್ಲನ ಕಾಲದಲ್ಲಿ ಇಂಗ್ಲೆಂಡಿನ ಸ್ವಾತಂತ್ರ್ಯವನ್ನು ತೊಡೆದುಹಾಕಿದ್ದುದು ಜನಗಳ ಮನಸ್ಸಿನಿಂದ ಅಳಿಸಿಹೋಗಿರಲಿಲ್ಲ. ಆದರೆ ಫ್ರಾನ್ಸಿನ ಹದಿನಾಲ್ಕನೆ ಲೂಯಿಯೊಂದಿಗೆ ಯುದ್ಧ ಮಾಡಲು ಸೈನ್ಯದ ಆವಶ್ಯಕತೆಯು ವಿಲಿಯಂನಿಗೆ ಇದ್ದುದರಿಂದ ಪಾರ್ಲಿಮೆಂಟ್ ವಿಲಿಯಂ ಒಂದು ವರ್ಷಕಾಲ ಸೈನ್ಯವನ್ನು ಇಟ್ಟುಕೊಳ್ಳಲು ಅನುಮತಿಯನ್ನು ಕೊಟ್ಟಿತು. ಪ್ರತಿ ವರ್ಷವೂ ಈ ಕಾನೂನನ್ನು ಪುನಶ್ಚೇತನಗೊಳಿಸಬೇಕಾಗಿದ್ದುದರಿಂದ (Renew) ಸೈನ್ಯದ ಇರುವಿಕೆಯು ಪಾರ್ಲಿಮೆಂಟಿನ ಅಧೀನಕ್ಕೆ ಒಳಪಟ್ಟಿತ್ತು.

ಕ್ರಿ. ಶ. ೧೬೮೮ ರ ಕ್ರಾಂತಿಗೆ ರಾಜಕೀಯ ಮತ್ತು ಮತೀಯ ಕಾರಣಗಳು ಇದ್ದುವೆಂದು ಹಿಂದೆಯೇ ತಿಳಿಸಿದೆ. ಇದಕ್ಕಾಗಿ ಮತಸಹಿಷ್ಣುತೆಯ ಕಾನೂನೊಂದು (Toleration Act) ಬಳಕೆಗೆ ಬಂದಿತು. ಇದರಿಂದ ಪ್ಯೂರಿಟನ್ ಪಂಗಡಕ್ಕೆ ಸೇರಿದವರಿಗೆ ಪೂಜಾ ಸ್ವಾತಂತ್ರ್ಯವು ಸಿಕ್ಕಿತು. ಆದರೆ ಇದರಿಂದ ಮತೀಯ ಸಮತ್ವವೇನೂ ಬರಲಿಲ್ಲ.

ಹಣಕಾಸಿನ ವಿಚಾರದಲ್ಲೂ ೧೬೮೮ ರ ಕ್ರಾಂತಿಯು ಕೆಲವು ಮಹತ್ತರ ಫಲಿತಾಂಶಗಳನ್ನು ತಂದಿತು. ರಾಜನ ಆದಾಯವನ್ನು ಎರಡು ಭಾಗಗಳನ್ನಾಗಿ ಮಾಡಲಾಯಿತು. ಮೊದಲನೆಯದು ಅವನ ಸ್ವಂತ ಜಮೀನು ಮತ್ತು ಇತರ ಆಸ್ತಿಗಳಿಂದ ಬರುತ್ತಿದ್ದ ಆದಾಯ. ಎರಡನೆಯದು ತೆರಿಗೆ ಮೊದಲಾದುವುಗಳಿಂದ ಬಂದ ಆದಾಯವನ್ನು ಪಾರ್ಲಿಮೆಂಟ್ ರಾಜನಿಗೆ ಜೀವಾವಧಿ ಕೊಡುವಂತೆ ಕಾನೂನಾಯಿತು. ಇದರಿಂದ ಅಧಿಕಾರಿಗಳು, ಮಂತ್ರಿಗಳು ಇವರೇ ಮೊದಲಾದವರಿಗೆ ಸಂಬಳ ಕೊಡುವ ಮೊಬಲಗನ್ನು (Civil List) ಬೇರ್ಪಡಿಸಲಾಯಿತು. ಪಾರ್ಲಿಮೆಂಟ್ ಆಯಾ ಬಾಬುಗಳಿಗೆ ಒದಗಿಸಿದ ಹಣವನ್ನು ಅದೇ ಬಾಬುಗಳಿಗೇ ವೆಚ್ಚ ಮಾಡಬೇಕೆಂಬ ನಿಯಮವನ್ನು ತಂದಿತು.

ಇದೇ ಕಾಲದಲ್ಲೇ ಫ್ರಾನ್ಸಿನೊಂದಿಗೆ ಯುದ್ಧ ಒದಗಿದ ಪ್ರಯುಕ್ತ ಹಣದ ಆವಶ್ಯಕತೆ ಹೆಚ್ಚಾಗಿ ಇದ್ದುದರಿಂದ ಮಾಂಟೆಗ್ ಎಂಬ ಹಣಕಾಸಿನ ಮಂತ್ರಿಯು ರಾಷ್ಟ್ರೀಯ ಸಾಲವನ್ನು (National debt) ಕ್ರಿ. ಶ. ೧೬೯೩ ರಲ್ಲಿ ಸ್ಥಾಪಿಸಿದನು. ಇಲ್ಲಿಯತನಕ ರಾಜನು ತನ್ನ ಜವಾಬ್ದಾರಿಯಮೇಲೆ ಸಾಲವನ್ನು ಹೆಚ್ಚು ಬಡ್ಡಿ ದರದಮೇಲೆ ಎತ್ತುತ್ತಿದ್ದನು. ಆದರೆ ಇಲ್ಲಿಂದಾಚೆಗೆ ಪಾರ್ಲಿಮೆಂಟ್ ಮತ್ತು ದೇಶ ಈ ಜವಾಬ್ದಾರಿಯನ್ನು ತೆಗೆದುಕೊಂಡಿತು. ಬಡ್ಡಿಯನ್ನು ಶೇಕಡ ಹನ್ನೆರಡರಿಂದ ಶೇಕಡ ಎಂಟಕ್ಕೆ ಇಳಿಸಿತು. ಮಾರನೆ ವರ್ಷವೇ ಇಂಗ್ಲೆಂಡಿನ ಬ್ಯಾಂಕ್ ಸ್ಥಾಪಿತವಾಯಿತು.

ಕ್ರಿ. ಶ. ೧೬೯೫ ರಲ್ಲಿ ಪತ್ರಿಕೆಗಳ ಮೇಲೆ ಇದ್ದ ಪ್ರತಿಬಂಧಕಾಜ್ಞೆಗಳು (Censorship of the Press) ರದ್ದಾದುವು. ಕ್ರಿ. ಶ. ೧೬೮೮ ಕ್ರಾಂತಿಯ ಫಲವಾಗಿ ನ್ಯಾಯಾಧಿಪತಿಗಳ ಸ್ಥಾನದಲ್ಲಿ ಒಂದು ದೊಡ್ಡ ಪರಿವರ್ತನೆಯಾಯಿತು. ಸ್ಟುವರ್ಟ್ ರಾಜರ ಕಾಲದಲ್ಲಿ ನ್ಯಾಯಾಧಿಪತಿಗಳನ್ನು ರಾಜರು ನಿಯಮಿಸುತ್ತಿದ್ದರು. ಆದುದರಿಂದ ಅವರು ರಾಜರಿಗೆ ಒತ್ತಾಸೆ ಮಾಡುತ್ತಿದ್ದರು. ಆದರೆ ಕ್ರಿ. ಶ. ೧೭೦೧ ರಲ್ಲಿ ನ್ಯಾಯಾಧಿಪತಿಗಳನ್ನು ಪಾರ್ಲಿಮೆಂಟಿನ ಎರಡು ಸಭೆಗಳ (Both-houses of the Parliament) ಅನುಮತಿಯಿಲ್ಲದೆ ವಜಾಮಾಡಕೂಡದೆಂಬ ಕಾನೂನು ಬಂದಿತು. ಇದರಿಂದ ನ್ಯಾಯಾಧಿಪತಿಗಳು ಪಕ್ಷಪಾತವಿಲ್ಲದೆ ತೀರ್ಪುಕೊಡಲು ಅನುಕೂಲವಾಯಿತು.

ಕ್ರಿ. ಶ. ೧೬೯೪ ರಲ್ಲಿ ಆಚರಣೆಗೆ ಬಂದ 'ಟ್ರಿಯನಿಯಲ್ ಆಕ್ಟ್' (Triennial act) ಒಂದು ಪಾರ್ಲಿಮೆಂಟ್ ಮೂರು ವರ್ಷಕ್ಕಿಂತಲೂ ಹೆಚ್ಚಾಗಿ ಅಧಿವೇಶನದಲ್ಲಿ ಇರಕೂಡದೆಂದು ವಿಧಿಸಿತ್ತು. ಕೆವಿಲಿಯರ್ ಪಾರ್ಲಿಮೆಂಟ್ ಕ್ರಿ. ಶ. ೧೬೬೧ ರಲ್ಲಿ ಸೇರಿ ೧೬೭೯ ರ ತನಕ ಮುಂದುವರಿಯುತ್ತಲೇ ಹೋಗಿ ದೀರ್ಘಕಾಲ ಹೊಸ ಚುನಾವಣೆಗೆ ಅವಕಾಶವಿಲ್ಲದಂತೆ ಮಾಡಿತ್ತು. ಆದರೆ ಕ್ರಿ. ಶ. ೧೬೮೮ ರ ಕ್ರಾಂತಿಯ ಫಲವಾಗಿ ಪ್ರತಿವರ್ಷವೂ ಪಾರ್ಲಿಮೆಂಟ್ ಸೇರಬೇಕೆಂದು ವಿಧಾಯಕವಾಯಿತು.

**ಸ್ಕಾಟ್ಲೆಂಡ್ :** ಕ್ರಿ. ಶ. ೧೬೮೮ ರ ಕ್ರಾಂತಿಯು ಸ್ಕಾಟ್ಲೆಂಡಿನಲ್ಲಿ ಕೆಲವು ಬಲವಾದ ಪರಿಣಾಮಗಳನ್ನುಂಟುಮಾಡಿತು. ಅಲ್ಲಿಯ ಪಾರ್ಲಿಮೆಂಟ್ ಸ್ವತಂತ್ರವಾಗಿ ತಾನೇ ಕಾನೂನುಗಳನ್ನು ರಚಿಸುವ ಅಧಿಕಾರವನ್ನು ಹೊಂದಿತು. ಆದರೆ ಸ್ಕಾಟ್ಲೆಂಡಿನ ಬೆಟ್ಟದ ಪ್ರಾಂತ್ಯಗಳು (Highlands) ವಿಲಿಯಂನಿಗೆ ವಿರುದ್ಧವಾಗಿ ಪ್ರತಿಭಟಿಸಿದವು. ಅವುಗಳ ಸೈನ್ಯದ ಮುಖಂಡನಾದ ಗ್ರಹಾಮ್ (Graham) ಎಂಬುವನು ಕಿಲ್ಲಿ ಕ್ರಾಂಕಿ (Killie crankie) ಎಂಬಲ್ಲಿ ವಿಲಿಯಂನ ಸೈನ್ಯವನ್ನು ಸೋಲಿಸಿದನು. ಆದರೆ ಈ ಜಯವು ಯಾವ ಉಪಯೋಗಕ್ಕೂ ಬರಲಿಲ್ಲ. ಏಕೆಂದರೆ ಗ್ರಹಾಮ್ ಯುದ್ಧದಲ್ಲಿ ಮಡಿದು ಹೋದನು. ಅವನ ಅನುಯಾಯಿಗಳು ಚದುರಿಹೋದರು. ಬೆಟ್ಟದ ಪ್ರಾಂತ್ಯದ ಜನಗಳು ವಿಲಿಯಂನನ್ನು ತಮ್ಮ ರಾಜನನ್ನಾಗಿ ಒಪ್ಪಿಕೊಂಡರು. ಆದರೆ ಗ್ಲೆಂಕೊ (Glencoe) ಎಂಬ ಪ್ರದೇಶದ ಮಾಕ್ ಡೊನಾಲ್ಡ್ಸ್ (Macdonalds) ಎಂಬ ಗುಂಪು ಮಾತ್ರ ಸ್ವಲ್ಪ ತಡಮಾಡಿ ವಿಲಿಯಂನ ರಾಜತ್ವವನ್ನು ಒಪ್ಪಿಕೊಂಡಿದ್ದುದರಿಂದ ಅವರನ್ನು ಕೊಲೆಮಾಡಿಸ ಲಾಯಿತು. ಅವರನ್ನು ಕೊಲೆಮಾಡಿದ ೧೨೦ ಸೈನಿಕರು ಅವರ ಶತ್ರುಗಳಾದ ಮತ್ತೊಂದು ಗುಂಪಿಗೆ (Clan) ಸೇರಿದವರಾಗಿದ್ದರು. ಸುಮಾರು ೧೫ ದಿನಗಳು ಅವರು ಅವರ ಅಥಿತಿಗಳಾಗಿ ಸತ್ಕರಿಸಲ್ಪಟ್ಟರು. ಒಂದು ದಿನ ಬೆಳಗ್ಗೆ ಆ ಸೈನ್ಯವು ಅತಿಥಿಸತ್ಕಾರವನ್ನೆಸಗಿದ ಮಾಕ್ಡೊನಾಲ್ಡ್ ಗುಂಪಿನ ಮೇಲೆ ಬಿದ್ದು ಅದರ ಮುಖಂಡನನ್ನೂ ಮತ್ತು ೩೭ ಜನ ಇತರರನ್ನೂ ಕೊಂದುಹಾಕಿತು ಮಿಕ್ಕವರು ಭಯಪಟ್ಟು ಬೆಟ್ಟಗಳಿಗೆ ಓಡಿಹೋದರು. ಈ ಕೊಲೆಯಾದಾಗ ವಿಲಿಯಂ ಹಾಲೆಂಡಿನಲ್ಲಿದ್ದಾಗ್ಯೂ, ಅವನಿಗೂ ಅವನ ಸರ್ಕಾರಕ್ಕೂ ಕಳಂಕವು ತಪ್ಪಲಿಲ್ಲ.

**ಐರ್ಲೆಂಡ್ :** ಕ್ರಾಮ್‌ವೆಲ್ ಐರ್ಲೆಂಡಿಗೆ ಅತ್ಯಂತ ಅಪಕಾರವನ್ನೂ ಮತ್ತು ಉಪಕಾರವನ್ನೂ ಮಾಡಿದ್ದನೆಂದು ಹೇಳಬಹುದು. ಅವನು ಕ್ಯಾಥಲಿಕರಿಂದ ಜಮೀನುಗಳನ್ನು ಕಿತ್ತುಕೊಂಡು, ಪ್ರಾಟೆಸ್ಟೆಂಟ್ ವಸಾಹತುದಾರರಿಗೆ (Colonists) ಕೊಡಿಸಿ ಐರ್ಲೆಂಡಿನಲ್ಲಿ ಅನಾಹುತಕ್ಕೆ ಕಾರಣನಾದನು. ಇದೇ ಅವನ ಅಪಕಾರ. ಐರ್ಲೆಂಡಿಗೂ ಮತ್ತು

ಸ್ಕಾಟ್ಲೆಂಡಿಗೂ ಸುಂಕವಿಲ್ಲದ ವ್ಯಾಪಾರವು ಇವನ ಕಾಲದಲ್ಲಿ ವ್ಯವಸ್ಥೆಯಾಯಿತು. ಇದು ಅವನು ಮಾಡಿದ ಉಪಕಾರ. ಎರಡನೆ ಚಾರ್ಲ್ಸ್‌ನು ಪಟ್ಟಕ್ಕೆ ಬಂದಮೇಲೆ ಅಪಕಾರವು ಮಾತ್ರ ಉಳಿದುಬಂದು ಉಪಕಾರವು ಅಳಿಸಿಹೋಯಿತು. ಓಡಿಹೋಗಿದ್ದ ಎರಡನೆ ಜೇಮ್ಸ್‌ನು ಕ್ಯಾಥಲಿಕ್ ಮತಸ್ಥರಿಂದ ತುಂಬಿದ್ದ ಐರ್ಲೆಂಡಿಗೆ ಬಂದಿಳಿದನು. ಅವನ ಸೈನ್ಯಕ್ಕೂ ಮತ್ತು ವಿಲಿಯಂನ ಸೈನ್ಯಕ್ಕೂ ಬಾಯ್ನ್ (Boyne) ನದಿಯಮೇಲೆ ಯುದ್ಧ ನಡೆದು ಜೇಮ್ಸ್‌ನ ಸೈನ್ಯವು ಸೋತುಹೋಯಿತು. ಇದಕ್ಕೆ ಮೊದಲೇ ಕ್ಯಾಥಲಿಕರು ಪ್ರಾಟೆಸ್ಟೆಂಟರ ಮುಖ್ಯ ಪಟ್ಟಣವಾದ ಲಂಡರ್ ಡೆರಿಯನ್ನು ಮುತ್ತಿ, ಹೊರಗಿನಿಂದ ಯಾವ ಸಹಾಯವೂ ಅದಕ್ಕೆ ಒದಗದಂತೆ ಮಾಡಿದ್ದರು. ಕ್ಯಾಥಲಿಕರ ಮುಖ್ಯಪಟ್ಟಣವಾದ ಲಿಮರಿಕ್ ಪತನವಾಗಿ ಯುದ್ಧವು ಐರ್ಲೆಂಡಿನಲ್ಲಿ ಮುಕ್ತಾಯವಾಯಿತು. ವಿಲಿಯಂನ ಜಯದಿಂದ ಐರ್ಲೆಂಡಿಗೆ ಯಾವ ಸುಖವೂ ಲಭಿಸಲಿಲ್ಲ. ಪ್ರಾಟೆಸ್ಟೆಂಟರಿಂದ ಕೂಡಿದ ಐರ್ಲೆಂಡಿನ ಪಾರ್ಲಿಮೆಂಟ್ ಕ್ಯಾಥಲಿಕರಿಗೆ ವಿರುದ್ಧವಾಗಿ ಕಾನೂನುಗಳನ್ನು ರಚಿಸಿ ಅವರನ್ನು ಅತಿಹಿಂಸೆಗೆ ಗುರಿಮಾಡಿತು. ಅಷ್ಟೆ ಅಲ್ಲದೆ ಇಂಗ್ಲಿಷ್ ಪಾರ್ಲಿಮೆಂಟ್ ಐರ್ಲೆಂಡಿನ ಸ್ವತಂತ್ರ ವ್ಯಾಪಾರಕ್ಕೆ (Free trade) ಅಡ್ಡಿ ಆತಂಕಗಳನ್ನು ತಂದೊಡ್ಡಿತು.

**೧೪ ನೆ ಲೂಯಿಯೊಡನೆ ಯುದ್ಧ:** ಫ್ರಾನ್ಸ್ ೧೪ ನೇ ಲೂಯಿಯ ಕಾಲದಲ್ಲಿ ದಬ್ಬಾಳಿಕೆಯ ತೌರುಮನೆಯಾಗಿದ್ದರೂ ಯೂರೋಪಿನಲ್ಲಿ ಅದು ಹೆಚ್ಚು ಪ್ರಗತಿಯನ್ನು ಸಾಧಿಸಿತ್ತು. ಕಾಲ್‌ಬರ್ಟ್ ವ್ಯಾಪಾರ ಮತ್ತು ವ್ಯವಸಾಯ (Trade and Agriculture) ರಂಗದಲ್ಲಿ ಒಂದು ಹೊಸ ಹುರುಪನ್ನು ತಂದಿದ್ದನು. ಮತ್ತೊಬ್ಬ ಮಂತ್ರಿ ಲುವಾಯ್ (Louvois) ಯೂರೋಪಿನಲ್ಲೆಲ್ಲಾ ಅತ್ಯಂತ ಪ್ರಸಿದ್ಧವಾದ ಸೈನ್ಯವನ್ನು ಕಟ್ಟಿ ಸಿದ್ಧಮಾಡಿದ್ದನು. ಟುರಾನೆ (Turenne) ಮತ್ತು ಕಾಂಡೆ (Conde) ಯಂತಹ ವೀರಯೋಧರಿಂದಲೂ ಮತ್ತು ಅಪಾರವಾದ ಸಂಪತ್ತಿನಿಂದಲೂ ಕೂಡಿದ ಫ್ರಾನ್ಸ್ ಆಗಿನ ಕಾಲದಲ್ಲೆ ಯೂರೋಪಿನಲ್ಲಿ ಅತ್ಯಂತ ಪ್ರಬಲವಾದ ರಾಷ್ಟ್ರವಾಗಿದ್ದುದರಲ್ಲಿ ಆಶ್ಚರ್ಯವೇನೂ ಇಲ್ಲ. ಲೂಯಿಯು ನಾಲ್ಕು ಯುದ್ಧಗಳನ್ನು ಮಾಡಿದನು.

**ಒಂದನೇ ಜೇಮ್ಸ್ ೧೬೦೩—೧೬೨೫.**

೧ನೇ ಚಾರ್ಲ್ಸ್ ೧೬೨೫—೪೯

ಎಲಿಸಬೆತ್ = ಪೆಲಾಟಿನೇಟ್ ಪ್ರದೇಶದ ರಾಜ ಫ್ರೆಡರಿಕ್

೨ನೇ ಚಾರ್ಲ್ಸ್ ೧೬೬೦—೮೫

೨ನೇ ಜೇಮ್ಸ್ ೧೬೮೫—೮೮
(೧) ಆನ್‌ಹೈಡ್ (೨) ಮೊಡೆನಾವಿನ ಮೇರಿ

ಸೂಫಿಯ = ಹ್ಯಾನೂವರ್ ರಾಜ

ರೂಪರ್ಟ್

ಮೇರಿ = ೩ನೇ ವಿಲಿಯಂ ೧೬೮೯—೧೭೦೨

ರಾಣಿ ಆನ್ ೧೭೦೨—೧೪

೩ನೇ ಜೇಮ್ಸ್ (old pretender)

ಚಾರ್ಲ್ಸ್ (young pretender)

ಜಾರ್ಜ್ (ಇಂಗ್ಲೆಂಡಿನ ೧ನೇ ಜಾರ್ಜ್, ೧೭೧೪—೨೭,

(೧) ಕ್ರಿ.ಶ. ೧೬೬೭ ರಲ್ಲಿ ಇಂಗ್ಲೆಂಡ್ ಮತ್ತು ಹಾಲೆಂಡ್ ಯುದ್ಧ ಮಾಡುತ್ತಿದ್ದಾಗ ಲೂಯಿಯು ಸ್ಪೇನಿಗೆ ಸೇರಿದ ನೆದರ್‌ಲ್ಯಾಂಡ್ (Belgium) ಮೇಲೆ ದಾಳಿಮಾಡಿ ಅದನ್ನು ವಶಮಾಡಿಕೊಳ್ಳಲು ಪ್ರಯತ್ನಮಾಡಿದನು. ಆದರೆ ಇಂಗ್ಲೆಂಡ್ ಮತ್ತು ಹಾಲೆಂಡ್ ತಮ್ಮ ಯುದ್ಧ ನಿಲ್ಲಿಸಿ ಲೂಯಿಯ ಆಟ ಸಾಗದಂತೆ ಸ್ವೀಡ್ನ ಜೊತೆಯಲ್ಲಿ ಒಂದು ಒಪ್ಪಂದ (Tripple Alliance) ಮಾಡಿಕೊಂಡವು. ಆದಾಗ್ಯೂ ಲೂಯಿಯು ಹನ್ನೊಂದು ಕೋಟೆಗಳನ್ನು ತನ್ನ ವಶದಲ್ಲಿಟ್ಟುಕೊಂಡು ಮಿಕ್ಕ ರಾಜ್ಯವನ್ನು ಬಿಟ್ಟುಕೊಟ್ಟನು.

(೨) ಡೋವರ್ ಒಪ್ಪಂದದಿಂದ ಹಾಲೆಂಡಿನ ಪಕ್ಷವನ್ನು ಇಂಗ್ಲೆಂಡ್ ತ್ಯಜಿಸಿ, ಫ್ರಾನ್ಸ್ ಮತ್ತು ಇಂಗ್ಲೆಂಡ್ ಹಾಲೆಂಡಿನ ಮೇಲೆ ಯುದ್ಧ ಪ್ರಾರಂಭಿಸಿತು. ಆದರೆ ವಿಲಿಯಂ (William of Orange) ತನ್ನ ದೇಶವಾದ ಹಾಲೆಂಡನ್ನು ಕಾಪಾಡಲು ದೇಶದೊಳಗೆ ಸಮುದ್ರವು ನುಗ್ಗ ದಂತೆ ಮಾಡಿದ್ದ ಕಟ್ಟೆಗಳನ್ನು (Dykes) ಒಡೆದು, ಫ್ರೆಂಚ್ ಸೈನ್ಯ ಹಿಮ್ಮೆಟ್ಟುವಂತೆ ಮಾಡಿದನು. ಇಂಗ್ಲೆಂಡ್ ಫ್ರಾನ್ಸಿನ ಸ್ನೇಹವನ್ನು ಬಿಡಬೇಕಾಯಿತು.

(೩) ಎರಡನೇ ಜೇಮ್ಸ್ ಫ್ರಾನ್ಸಿಗೆ ಓಡಿಹೋಗಿ ೧೪ ನೇ ಲೂಯಿಯ ಆಶ್ರಯ ಪಡೆದನು. ಅವನನ್ನು ಇಂಗ್ಲೆಂಡಿನ ರಾಜನನ್ನಾಗಿ ಪುನಃ ಮಾಡಲು ೧೪ ನೇ ಲೂಯಿಯು ಯುದ್ಧ ಪ್ರಾರಂಭಿಸಿದನು (War of the English succession, ೧೬೮೯–೧೬೯೭). ಜೇಮ್ಸ್ ಒಂದು ಸೈನ್ಯದೊಡನೆ ಐರ್ಲೆಂಡಿಗೆ ಬಂದಿಳಿದನು. ಬೀಕಿ ಹೆಡ್ (Beachy Head) ಎಂಬ ನೌಕಾ ಕದನದಲ್ಲಿ ಫ್ರಾನ್ಸ್ ಗೆದ್ದರೂ, ಬಾಯಿನ್ ನದಿ ಕದನದಲ್ಲಿ ವಿಲಿಯಂ ಜಯಗಳಿಸಿದನು. ಲಾಹೋಗ್ (La Hogue, ಕ್ರಿ. ಶ. ೧೬೯೨) ಕದನದಲ್ಲಿ ಟೂರ್‌ವಿಲ್ (Tourville) ನಂತಹ ನೌಕಾಧಿಪತಿಯನ್ನು ಹೊಂದಿದ್ದರೂ ಫ್ರಾನ್ಸಿಗೆ ಅಪ ಜಯವಾಯಿತು. ಯೂರೋಪಿನಲ್ಲಿ ಫ್ರೆಂಚರು ಅನೇಕವೇಳೆ ವಿಲಿಯಂನ ಸೈನ್ಯವನ್ನು ಸೋಲಿಸಿದರೂ ವಿಲಿಯಂ ಕಂಗೆಡದೆ ಲೂಯಿಯನ್ನು ಎದು

ರಿಸುತ್ತಲೇ ಇದ್ದನು. ಕ್ರಿ. ಶ. ೧೬೯೭ ರಲ್ಲಿ ರಿಸ್‌ವಿಕ್ ಒಪ್ಪಂದದಿಂದ ಫ್ರಾನ್ಸ್ ವಿಲಿಯಂ ಇಂಗ್ಲೆಂಡಿನ ರಾಜನೆಂದು ಒಪ್ಪಿಕೊಂಡಿತು.

(೪) **ಸ್ಪೇನಿನ ರಾಜ್ಯಕ್ಕಾಗಿ ಯುದ್ಧ:** (War of the Spanish succession). ಹ್ಯಾಪ್ಸ್‌ಬರ್ಗ್ ವಂಶದ ಕೊನೆಯ ರಾಜನಾದ ೨ನೆ ಚಾರ್ಲ್ಸ್‌ನಿಗೆ ಮಕ್ಕಳಿಲ್ಲದೆ (೧೬೬೫–೧೭೦೦) ಯೂರೋಪಿನ ರಾಜಕೀಯದಲ್ಲಿ ಕಳವಳ ಹುಟ್ಟಿತು. ವಿಪುಲವಾದ ಸ್ಪೇನಿನ ಚಕ್ರಾಧಿಪತ್ಯಕ್ಕೆ ಅನೇಕ ಹಕ್ಕುದಾರರಿದ್ದರು. ೧೪ ನೆ ಲೂಯಿಯ ಮೊಮ್ಮಗ ಐದನೆ ಫಿಲಿಪ್ ಮತ್ತು ಆಸ್ಟ್ರಿಯಾ ಚಕ್ರವರ್ತಿಯ ಮಗ ಆರ್ಚ್ ಡ್ಯೂಕ್ ಚಾರ್ಲ್ಸ್ ಇವರಲ್ಲಿ ಮುಖ್ಯಸ್ಥರು. ೧೪ ನೆ ಲೂಯಿ ಮತ್ತು ಆಸ್ಟ್ರಿಯಾ ಚಕ್ರವರ್ತಿ ಲಿಯೋ ಪೋಲ್ಡ್ (Leopold) ಸ್ಪೇನಿನ ರಾಜ ಎರಡನೇ ಚಾರ್ಲ್ಸ್‌ನ ಸಹೋದರಿ ಮೇರಿಯಾ ಮತ್ತು ಮಾರ್ಗರೆಟ್ ಎಂಬುವರನ್ನು ಮದುವೆಯಾಗಿದ್ದರು. ನೇಪಲ್ಸ್, ಮಿಲನ್, ಸಿಸಲಿ ಮತ್ತು ಸಾರ್ಡಿನಿಯ ನೆದರ್‌ಲ್ಯಾಂಡ್ಸ್ ಮತ್ತು ಅಮೆರಿಕಾದಲ್ಲಿದ್ದ ಇತರ ಪ್ರದೇಶಗಳು ಇವೆಲ್ಲವೂ ಒಬ್ಬ ಹಕ್ಕುದಾರನಿಗೆ ಸೇರಿದರೆ ಯೂರೋಪಿನಲ್ಲಿ ಅವನು ಅತ್ಯಂತ ಪ್ರಬಲನಾಗಿ, ಯೂರೋಪಿನ ರಾಜಕೀಯ ಪರಿಸ್ಥಿತಿಯೇ ಹದಗೆಡುವುದೆಂದು (Balance of power) ಅನೇಕ ರಾಜತಂತ್ರಜ್ಞರು ಚಿಂತೆಗೆ ಒಳಗಾಗಿದ್ದರು. ಅವರಲ್ಲಿ ಮೂರನೇ ವಿಲಿಯಂ ಒಬ್ಬ. ಸ್ಪೇನಿನ ಚಕ್ರಾಧಿಪತ್ಯವನ್ನು ಈ ಹಕ್ಕುದಾರರುಗಳಿಗೆ ಹಂಚುವುದರ ಮೂಲಕ ಈ ಅಪಾಯವನ್ನು ತಪ್ಪಿಸಲು ವಿಲಿಯಂ ಲೂಯಿಯೊಡನೆ ಸಂಧಾನ ಪ್ರಾರಂಭಿಸಿದನು. ಈ ಹಂಚಿಕೆ ಒಪ್ಪಂದವು (Partition Treaty ೧೬೧೮) ಲೂಯಿಗೆ ಅಪ್ರಿಯಕರವಾಗಿರಲಿಲ್ಲ. ಅವನ ಸೈನಿಕ ಬಲವು ಯುದ್ಧಗಳಿಂದ ಕುಗ್ಗಿ ಹೋಗಿತ್ತು. ಮೊದಲನೆ ಹಂಚಿಕೆಯ ಒಪ್ಪಂದದ ಪ್ರಕಾರ ಲಿಯಾಪೋಲ್ಡನ ಮೊಮ್ಮಗ ಜೋಸೆಫ್ ಫರ್ಡಿನಾಂಡ್ (Joseph Ferdinand) ಸ್ಪೇನಿನ ರಾಜನಾಗಬೇಕೆಂದೂ, ಸಿಸಲಿ ಮತ್ತು ನೇಪಲ್ಸ್ ಫ್ರಾನ್ಸಿಗೆ ಸೇರಬೇಕೆಂದೂ ಗೊತ್ತಾಯಿತು. ಆದರೆ ಜೋಸೆಫ್ ಫರ್ಡಿನಾಂಡ್ ದುರದೃಷ್ಟವಶಾತ್ ಕ್ರಿ. ಶ. ೧೬೯೯ ರಲ್ಲಿ ಕಾಲವಾದನು. ಲೂಯಿಗೆ ಯುದ್ಧವಿಲ್ಲದೆ ಸ್ಪೇನಿನ ಚಕ್ರಾಧಿಪತ್ಯದಲ್ಲಿ ಸ್ವಲ್ಪ ಭಾಗವನ್ನು

ಪಡೆಯಲು ಇಷ್ಟವಿದ್ದುದರಿಂದ ಅವನು ಎರಡನೆ ಹಂಚಿಕೆಯ ಕರಾರಿಗೆ (Second partition Treaty, ೧೬೯೯) ಒಪ್ಪಿಕೊಂಡನು. ಆಸ್ಟ್ರಿಯದ ಆರ್ಚ್ ಡ್ಯೂಕ್ ಚಾರ್ಲ್ಸ್‌ನು ಸ್ಪೇನಿಗೆ ರಾಜನಾಗಬೇಕೆಂದೂ ಮತ್ತು ಫ್ರಾನ್ಸ್ ಮೊದಲಿನ ಕರಾರಿನಂತೆ ನೇಪಲ್ಸ್, ಸಿಸಲಿ ಮತ್ತು ಮಿರ್ಲನ್ ಪಡೆಯಬೇಕೆಂದೂ ತೀರ್ಮಾನವಾಯಿತು. ಆದರೆ ಎರಡನೆ ಚಾರ್ಲ್ಸ್ ೧೭೦೦ ರಲ್ಲಿ ತಾನು ಸಾಯುವಾಗ ಬರೆದ ಮರಣಶಾಸನದಲ್ಲಿ ಸ್ಪೇನಿನ ಚಕ್ರಾಧಿಪತ್ಯವು ವಿಭಾಗವಾಗದೆ ಎಲ್ಲವೂ ಲೂಯಿಯ ಮೊಮ್ಮಗ ಐದನೆ ಫಿಲಿಪ್‌ಗೆ ಸೇರಬೇಕೆಂದು ಮಾಡಿದ್ದುದರಿಂದ ಲೂಯಿಯು ಸಂತೋಷದಿಂದ ಇನ್ನುಮೇಲೆ 'ಪಿರನೀಸ್ ಪರ್ವತ ಇಲ್ಲ' ಎಂದು ಹೇಳಿ ಎರಡನೆ ಹಂಚಿಕೆಯ ಕರಾರನ್ನು ಕಸದ ಬುಟ್ಟಿಯಲ್ಲಿ ಹಾಕಿದನು.

ಇದರಿಂದ ಯೂರೋಪಿನಲ್ಲಿ ಯುದ್ಧ ಪ್ರಾರಂಭವಾಗಲು ಕಾರಣವಾಯಿತು. ಇಂಗ್ಲೆಂಡಾಗಲಿ, ಆಸ್ಟ್ರಿಯವಾಗಲಿ ೫ ನೇ ಫಿಲಿಫ್ ಅವಿಭಕ್ತ ಸ್ಪೇನಿನ ರಾಜ್ಯಕ್ಕೆ ಒಡೆಯನಾಗಲು, ಅವನು ಫ್ರಾನ್ಸಿನ ಸಿಂಹಾಸನದ ಹಕ್ಕನ್ನು ತ್ಯಜಿಸಲು ಸಿದ್ಧವಾಗಿದ್ದರೂ ಸಮ್ಮತಿಸಲಿಲ್ಲ. ಇದೂ ಅಲ್ಲದೆ ೨ ನೆ ಜೇಮ್ಸನು ೧೭೦೧ ರಲ್ಲಿ ಕಾಲವಾದ ನಂತರ ಲೂಯಿಯು ಅವನ ಮಗ ಜೇಮ್ಸನನ್ನು ಇಂಗ್ಲೆಂಡಿನ ರಾಜನೆಂದು ಸಾರಿದನು. ಇದರಿಂದ ಇಂಗ್ಲೆಂಡಿನಲ್ಲಿ ಟೋರಿ ಮತ್ತು ವಿಗ್ ಪಂಗಡಗಳ ಮುಖಂಡರಲ್ಲಿದ್ದ ಭಿನ್ನಾಭಿಪ್ರಾಯ ಸಡಲಿ ಐಕಮತ್ಯತೆ ಮೂಡಿತು. ಸ್ಪೇನಿಗೆ ಸೇರಿದ ಅಮೇರಿಕದೊಡನೆ ಇಂಗ್ಲೆಂಡಿಗೆ ವ್ಯಾಪಾರವಾದ ಹಕ್ಕಿಲ್ಲವೆಂದು ಹೇಳಿದುದರಿಂದ ವರ್ತಕ ಜನಾಂಗವಾದ ಇಂಗ್ಲಿಷರಿಗೆ ಇದು ಸಹಿಸಲಿಲ್ಲ. ಯುದ್ಧ ಖಚಿತವಾಯಿತು. ಆದರೆ ಈ ವೇಳೆಗೆ ವಿಲಿಯಂ ಶ್ವಾಶಕೋಶದ ಖಾಯಿಲೆಯಿಂದ ನರಳುತ್ತಿದ್ದರೂ, ಯುದ್ಧವನ್ನು ತನ್ನ ಬದಲು ಸರಿಯಾಗಿ ನಡೆಸಬಲ್ಲವನು ಜಾನ್ ಚರ್ಚಿಲ್ (ಡ್ಯೂಕ್ ಆಫ್ ಮಾರ್ಲ್‌ಬರೂ) ಎಂದು ನಿರ್ಧರಿಸಿ ಅವನನ್ನು ಹಾಲೆಂಡಿಗೆ ಕಳುಹಿಸಿದನು. ಅವನು ಅಲ್ಲಿ ಲೂಯಿಗೆ ವಿರುದ್ಧವಾಗಿ ಯುದ್ಧಮಾಡಲು ಹಾಲೆಂಡ್, ಆಸ್ಟ್ರಿಯ ಮತ್ತು ಕೆಲವು ಜರ್ಮನಿಯ ರಾಜ್ಯಗಳು ಇಂಗ್ಲೆಂಡಿನೊಡನೆ ಮಿತ್ರ ರಾಷ್ಟ್ರಗಳಾಗಿ ೧೭೦೧

## ಸ್ಪೇನಿನ ರಾಜ್ಯಕ್ಕಾಗಿ ಯುದ್ಧ (Spanish Succession War, ೧೭೦೨–೧೭೧೪)



ರಲ್ಲಿ ಸೇರಿಕೊಳ್ಳುವಂತೆ ಮಾಡಿದನು (Grand Alliance). ಯುದ್ಧ ಪ್ರಾರಂಭವಾಗುವುದರಲ್ಲಿ ವಿಲಿಯಂ ಕುದುರೆಯಿಂದ ಕೆಳಗೆ ಬಿದ್ದು ಸತ್ತನು.

**ರಾಣಿ ಆನ್** (Queen Anne), **೧೭೦೨-೧೭೧೪ :** ಸ್ಪೇನಿನ ರಾಜ್ಯಕ್ಕಾಗಿ ನಡೆದ ಯುದ್ಧವು ಇಂಗ್ಲೆಂಡಿನ ಚರಿತ್ರೆಯಲ್ಲಿ ಬಹಳ ಮುಖ್ಯವಾದುದು. ಯುದ್ಧವು ಸ್ಪೇನ್, ಇಟಲಿ, ನೆದರ್‌ಲಾಂಡ್ಸ್, ಡಾನ್ಯೂಬ್ ನದಿಯ ಮೇಲ್ಭಾಗ ಮತ್ತು ಸಮುದ್ರ ಮೊದಲಾದುವುಗಳಿಗೆ ಹರಡಿತು. ಆಸ್ಟ್ರಿಯದ ಸೈನ್ಯದ ಮುಖಂಡನಾದ ಯೂಜಿನಿ ರಾಜಕುಮಾರನು (Prince Eugene) ಮತ್ತು ಮಾರಲ್‌ಬರೊ ಮಿತ್ರರಾಷ್ಟ್ರಗಳ ಮುಖ್ಯ ಸೇನಾನಾಯಕರು. ೧೭೦೪ ರಲ್ಲಿ ಇಂಗ್ಲೆಂಡ್ ಸ್ಪೇನಿನ ನೌಕೆಯನ್ನು ನಾಶಮಾಡಿ ಮೈನಾರ್ಕ ಮತ್ತು ಜಿಬ್ರಾಲ್ಟರ್‌ಗಳನ್ನು ವಶಪಡಿಸಿಕೊಂಡಿತು. ಮಾರಲ್‌ಬರೊ ಫ್ರಾನ್ಸಿನ ಮತ್ತು ಸ್ಪೇನಿನ ಸೈನ್ಯವನ್ನು ಅದೇ ವರ್ಷ ಬ್ಲೆನ್‌ಹಿಮ್ (Blenheim) ಎಂಬಲ್ಲಿ ಸೋಲಿಸಿ ಆಸ್ಟ್ರಿಯವನ್ನು ರಕ್ಷಿಸಿದನು. ಫ್ರಾನ್ಸಿಗೆ ಯೂರೋಪಿನಲ್ಲಿ ಇಂತಹ ಅಪಜಯವು ೫ ನೇ ಹೆನ್ರಿಯ ಕಾಲದಿಂದೀಚೆಗೆ ಸಂಭವಿಸಿರಲಿಲ್ಲವೆಂದು ಹೇಳಬಹುದು. ಕ್ರಿ. ಶ. ೧೭೦೬ ರಲ್ಲಿ ಮಾರಲ್‌ಬರೋ ರಾಮಿಲೀಸ್ (Ramillies) ಎಂಬಲ್ಲಿ ಫ್ರೆಂಚರನ್ನು ಸೋಲಿಸಿ, ಸ್ಪೇನಿನ ನೆದರ್‌ಲ್ಯಾಂಡ್ಸಿನಿಂದ ಅವರನ್ನು ಓಡಿಸಿದನು. ಯೂಜಿನಿಯು ಟ್ಯೂರಿನ್ ಬಳಿ ನಡೆದ ಕದನದಲ್ಲಿ ಜಯಗಳಿಸಿ ಫ್ರೆಂಚರನ್ನು ಇಟಲಿಯಿಂದ ಓಡಿಸಿದನು. ೧೭೦೭ ರಲ್ಲಿ ಸ್ಪೇನಿನಲ್ಲಿ ನಡೆದ ಆಲ್‌ಮಾಂಜಾ (Almanza) ಎಂಬ ಕದನದಲ್ಲಿ ಮಿತ್ರರಾಷ್ಟ್ರಗಳಿಗೆ ಸೋಲಾಯಿತು. ಆದರೆ ೧೭೦೮ ರಲ್ಲಿ ಮಾರಲ್‌ಬರೋ ಸ್ಪೇನಿನ ನೆದರ್‌ಲಾಂಡ್ಸ್‌ನಲ್ಲಿ ನಡೆದ ಓಡೆನಾರ್ಡೆ (Oudenarde) ಮತ್ತು ೧೭೦೯ ರಲ್ಲಿ ಮಾಲ್‌ಪ್ಲಕೆಟ್ (Malplaquet) ಎಂಬ ಕದನಗಳಲ್ಲಿ ಜಯಗಳಿಸಿ, ಫ್ರೆಂಚರಿಗೆ ಸೇರಿದ ಲಿಲಿ (Lille) ಎಂಬ ಕೋಟೆಯನ್ನು ವಶಪಡಿಸಿಕೊಂಡನು. ಲೂಯಿಯು ಶಾಂತಿಗಾಗಿ ಸಂಧಾನಮಾಡಿದನು. ಆದರೆ ಮಿತ್ರರಾಷ್ಟ್ರಗಳು ಅದಕ್ಕೆ ಒಪ್ಪಲಿಲ್ಲ.

ಕ್ರಿ. ಶ. ೧೭೧೦ ರಿಂದ ೧೭೧೩ ರ ವರೆಗೆ ಫ್ರೆಂಚರ ಸ್ಥಿತಿ ಉತ್ತಮಗೊಂಡಿತು. ಇಂಗ್ಲೆಂಡಿನಲ್ಲಿ ಟೋರಿ ಮಂತ್ರಿತ್ವವು ಬಂದು, ಏನಾದರೂ

ಮಾಡಿ ಯುದ್ಧವನ್ನು ನಿಲ್ಲಿಸಿ ಶಾಂತಿಯನ್ನು ಸ್ಥಾಪಿಸಬೇಕೆಂಬ ಅಭಿಪ್ರಾಯದಿಂದ ಕೂಡಿತ್ತು. ಇದರಲ್ಲಿ ಮುಖ್ಯರಾಗಿದ್ದವರು ಹಾರ್ಲಿ ಮತ್ತು ಸೇಂಟ್ ಜಾನ್. ೧೭೧೧ ರ ವೇಳೆಗೆ ಆಸ್ಟ್ರಿಯಾದಲ್ಲಿ ಜೋಸೆಫ್ ಕಾಲವಾಗಿ ಅವನ ಸಹೋದರ ಆರ್ಚ್ ಡ್ಯೂಕ್ ಚಾರ್ಲ್ಸ್ ಚಕ್ರವರ್ತಿಯಾದನು. ಅವನನ್ನು ಸ್ಪೇನಿನಲ್ಲಿ ರಾಜನನ್ನಾಗಿ ಮಾಡಲು ಮಿತ್ರರಾಷ್ಟ್ರಗಳು ಯುದ್ಧವನ್ನು ಮುಂದುವರಿಸುತ್ತಿದ್ದುದು ಪ್ರಯೋಜನಕಾರಿಯಾಗಿರಲಿಲ್ಲ. ಸ್ಪೇನಿನ ಮತ್ತು ಆಸ್ಟ್ರಿ



ಯೂರೋಪ್ ೧೭೨೦ (ಸ್ಪಾನಿಷ ಚಕ್ರಾಧಿಪತ್ಯದ ವಿಭಜನೆ)

ಯದ ರಾಜ್ಯಗಳು ಒಟ್ಟುಗೂಡಿದರೆ ಯೂರೋಪಿನಲ್ಲಿ ಆಸ್ಟ್ರಿಯವೇ ಪ್ರಾಬಲ್ಯವಾದ ರಾಷ್ಟ್ರವಾಗಿ, ಯೂರೋಪಿನ ರಾಷ್ಟ್ರಗಳಲ್ಲಿ ಸಮಾನಬಲತೆಯು (Balance of Power) ತಪ್ಪುತ್ತಿತ್ತು. ಅದೂ ಅಲ್ಲದೆ ಸ್ಪೇನಿನಲ್ಲಿ

ಸಿಂಹಾಸನವನ್ನೇರಿದ್ದ ೫ನೇ ಫಿಲಿಪ್ಪನನ್ನು ಮಿತ್ರರಾಷ್ಟ್ರಗಳಿಗೆ ಕೆಳಕ್ಕಿಳಿಸಲು ಸಾಧ್ಯವಾಗಲಿಲ್ಲ. ಇವುಗಳನ್ನೆಲ್ಲಾ ಪ್ರಸಿದ್ಧ ಬರಹಗಾರನಾದ ಸ್ವಿಫ್ಟ್ (Swift) ಎಂಬುವನು "ದಿ ಕಾಂಡಕ್ಟ್ ಆಫ್ ದಿ ಅಲೈಸ್" (The conduct of the Allies) ಎಂಬ ಒಂದು ಸಣ್ಣ ಪ್ರಕಟಣೆಯಲ್ಲಿ ಹೊರಗೆಡವಿದುದರ ಫಲವಾಗಿ ೧೭೧೧ ರಲ್ಲಿ ಮಾರಲ್‌ಬರೋ ಕೆಲಸದಿಂದ ವಜಾಮಾಡಲ್ಪಟ್ಟನು. ೧೭೧೩ ರಲ್ಲಿ ಯುದ್ಧವು ಮುಕ್ತಾಯಗೊಂಡು ಯೂರೋಪಿನಲ್ಲಿ ಶಾಂತಿಯು ಯುಟ್ರೆಕ್ಟ್ ಒಪ್ಪಂದದಿಂದ (Utrecht) ಸ್ಥಾಪನೆಯಾಯಿತು. ಇದರಿಂದ ೫ ನೇ ಫಿಲಿಪ್ಪನು ಸ್ಪೇನಿನ ರಾಜನಾಗಿಯೂ, ಸ್ಪೇನಿಗೆಸೇರಿದ ನೆದರ್‌ಲ್ಯಾಂಡ್ಸ್ ಮತ್ತು ಇಟಲಿಯಲ್ಲಿ ಸ್ಪೇನಿಗೆ ಸೇರಿದ ಮಿಲನ್, ಸಾರ್ಡಿನಿಯ ಮತ್ತು ನೇಪಲ್ಸ್ ಆಸ್ಟ್ರಿಯದ ಚಕ್ರವರ್ತಿಗೆ ಸೇರಬೇಕೆಂದೂ, ಇಂಗ್ಲೆಂಡಿಗೆ ಜಿಬ್ರಾಲ್ಟರ್ ಮತ್ತು ಮೈನಾರ್ಕ, ಅಮೆರಿಕಾದಲ್ಲಿ ನ್ಯೂಫೌಂಡ್‌ಲ್ಯಾಂಡ್, ನವಸ್ಕೋಷಿಯ ಮತ್ತು ಹಡ್‌ಸನ್ ಬೆ ಸೇರಬೇಕೆಂದೂ ಇಂಗ್ಲೆಂಡಿಗೆ ಸ್ಪೇನಿನ ವಸಾಹತುಗಳ ವ್ಯಾಪಾರಕ್ಕಾಗಿ ವರ್ಷಕ್ಕೊಂದು ಹಡಗು ಕಳುಹಿಸುವ ಹಕ್ಕು ಮತ್ತು ಅವುಗಳಿಗೆ ನೀಗ್ರೋ ಗುಲಾಮರನ್ನು ಮಾರುವ ಹಕ್ಕು (Asiento Right) ಗೊತ್ತಾಯಿತು.

**ಸ್ಕಾಟ್ಲೆಂಡಿನ ಐಕ್ಯತೆಯ ಕಾನೂನು** (Act of union of Scotland, ೧೭೦೭) ಸ್ಕಾಟ್ಲೆಂಡಿನಲ್ಲಿ ಸ್ವತಂತ್ರವಾದ ಪಾರ್ಲಿಮೆಂಟ್ ಇತ್ತೆಂದು ಹಿಂದೆಯೇ ಹೇಳಿದೆ. ಅಲ್ಲಿನ ಪಾರ್ಲಿಮೆಂಟ್, ಇಂಗ್ಲಿಷ್ ಮತ್ತು ಸ್ಕಾಟ್ ವರ್ತಕರನ್ನೊಳಗೊಂಡ ಡೇರಿಯನ್ ಕಂಪನಿಯು ಆಫ್ರಿಕಾ ದೇಶದಲ್ಲಿ ವಸಾಹತುಗಳನ್ನು ಸ್ಥಾಪಿಸಲು ೧೬೯೫ ರಲ್ಲಿ ಕಾನೂನೊಂದನ್ನು ತಂದಿತು. ಆದರೆ ಈಸ್ಟಿಂಡಿಯಾ ಕಂಪನಿಯ ವ್ಯಾಪಾರಕ್ಕೆ ಧಕ್ಕೆ ಬರುವುದೆಂಬ ಸಂಶಯ ಮತ್ತು ಅಸೂಯೆಯಿಂದ ಇಂಗ್ಲಿಷ್ ಪಾರ್ಲಿಮೆಂಟ್ ಇದನ್ನು ಆಗಗೊಡಲಿಲ್ಲ. ಇಂಗ್ಲಿಷ್ ಪಾರ್ಲಿಮೆಂಟಿನ ಪ್ರಭಾವದಿಂದ ಇಂಗ್ಲಿಷ್ ವರ್ತಕರು ಡೇರಿಯನ್ ಕಂಪನಿಯಿಂದ ಹೊರಬಂದರು. ಸ್ಕಾಟ್ ವರ್ತಕರು ಪನಾಮದ ಹತ್ತಿರ ಇರುವ ಡೇರಿಯನ್ ಎಂಬಲ್ಲಿ ಒಂದು ವಸಾಹತನ್ನು ವ್ಯಾಪಾರಕ್ಕಾಗಿ ಸ್ಥಾಪಿಸಿದರು. ಸ್ಪೇನಿನ ಶತ್ರುತ್ವ ಒಂದು ಕಡೆ,

ಮಲೇರಿಯಾ ಹವ ಮತ್ತೊಂದು ಕಡೆ ಸೇರಿ ಡೇರಿಯನ್ ವಸಾಹತು ಕ್ಷೀಣ ವಾಗಿ ವರ್ತಕರ ಬಂಡವಾಳವೆಲ್ಲಾ ನಷ್ಟವಾಯಿತು. ಸ್ಕಾಟ್‌ಲೆಂಡ್ ಇದು ಇಂಗ್ಲೆಂಡಿನ ಉದಾಸೀನತೆಯ ಫಲವೆಂದು ಅಸಮಾಧಾನ ಹೊಂದಿತು.

ಇದಕ್ಕಾಗಿ ೧೭೦೪ ರಲ್ಲಿ ಸ್ಕಾಟ್ಲೆಂಡಿನ ಪಾರ್ಲಿಮೆಂಟ್ ಆನಿಯ ಮರ ಣಾನಂತರ ಹಾನೋವರ್ (Hanover) ವಂಶದ ರಾಜರು ಸ್ಕಾಟ್ಲೆಂಡಿಗೆ ರಾಜರಲ್ಲವೆಂದು ಕಾನೂನೊಂದನ್ನು ತಂದಿತು. ಆದರೆ ಇದು ಇಂಗ್ಲಿಷ್ ಪಾರ್ಲಿಮೆಂಟ್ ೧೭೦೧ ರಲ್ಲಿ ಜಾರಿಗೆ ತಂದಿದ್ದ 'ಆಕ್ಟ್ ಆಫ್ ಸೆಟಲ್ ಮೆಂಟ್' ಎಂಬ ಕಾನೂನಿಗೆ ವಿರುದ್ಧವಾಗಿತ್ತು. ಹೀಗೆಯೇ ಸ್ಕಾಟ್ಲೆಂಡಿನ ಪಾರ್ಲಿಮೆಂಟಿಗೆ ಸ್ವಾತಂತ್ರ್ಯವಿದ್ದರೆ ಪುನಃ ಸ್ಕಾಟ್ಲೆಂಡ್ ಮಧ್ಯಮಯುಗ ದಲ್ಲಿದ್ದಂತೆ ಇಂಗ್ಲೆಂಡಿನ ಶತ್ರುವಾಗುವುದೆಂದು ಅರಿತು ೧೭೦೭ ರಲ್ಲಿ ಸ್ಕಾಟ್ಲೆಂಡಿನ ಪಾರ್ಲಿಮೆಂಟ್ ಇಂಗ್ಲೆಂಡಿನ ಪಾರ್ಲಿಮೆಂಟ್ ಎರಡೂ ಒಂದಾಯಿತು. ಒಂದನೇ ಜೇಮ್ಸ್‌ನ ಕಾಲದಲ್ಲಿ ಸ್ಕಾಟ್ಲೆಂಡ್ ಮತ್ತು ಇಂಗ್ಲೆಂಡಿಗೆ ಒಬ್ಬನೇ ರಾಜನಾದನು. ಆನಿಯ ಕಾಲದಲ್ಲಿ ಸ್ಕಾಟ್ಲೆಂಡ್ ಮತ್ತು ಇಂಗ್ಲೆಂಡ್ ಪಾರ್ಲಿಮೆಂಟುಗಳು ಒಟ್ಟುಗೂಡಿದುವು. ಸ್ಕಾಟ್ಲೆಂಡ್ ಕಾಮನ್ಸ್ ಸಭೆಗೆ ೪೫ ಪ್ರತಿನಿಧಿಗಳನ್ನೂ ಮತ್ತು ಲಾರ್ಡ್ಸ್ ಸಭೆಗೆ ೧೬ ಪ್ರತಿನಿಧಿಗಳನ್ನೂ ಕಳುಹಿಸಬೇಕೆಂದು ಗೊತ್ತಾಯಿತು. ಜಮೀನಿನ ಕಂದಾಯದಲ್ಲಿ ೧/೪೦ ಭಾಗವನ್ನು ಮತ್ತು ರಾಷ್ಟ್ರೀಯ ಸಾಲದಲ್ಲಿ ತನ್ನ ಭಾಗವನ್ನೂ ವಹಿಸಿಕೊಳ್ಳಬೇಕೆಂದು ತೀರ್ಮಾನವಾಯಿತು. ಸ್ಕಾಟ್ಲೆಂಡ್ ಮತ್ತು ಇಂಗ್ಲೆಂಡ್‌ಗಳ ಐಕ್ಯತೆಯಿಂದ ಸ್ಕಾಟ್ಲೆಂಡಿಗೆ ಅನೇಕ ಅನುಕೂಲ ಗಳಾದುವು. ಸ್ವತಂತ್ರ ವ್ಯಾಪಾರ ಮತ್ತು ಇಂಗ್ಲಿಷ್ ವಸಾಹತುಗಳ ಸ್ಥಾಪನೆಯಲ್ಲಿ ಭಾಗವಹಿಸುವಿಕೆ ಇವೆರಡು ಸ್ಕಾಟ್ಲೆಂಡಿನ ಪ್ರಗತಿಗೆ ಮುಖ್ಯ ಕಾರಣಗಳಾದುವು. ಸ್ಕಾಟ್ಲೆಂಡ್ ತನ್ನ ನ್ಯಾಯಾಲಯಗಳನ್ನು (Law Courts) ಮತ್ತು ಪ್ರಿಸ್ಬಿಟೇರಿಯನ್ ಮತವನ್ನು ಇಟ್ಟುಕೊಳ್ಳಲು ಐಕ್ಯ ತೆಯ ಕಾನೂನು (Act of Union) ಅಡ್ಡಬರಲಿಲ್ಲ.

ವಿಗ್ ಮತ್ತು ಟೋರಿ ಪಕ್ಷಗಳು ಆನಿಯ ಕೊನೆಯ ದಿನಗಳಲ್ಲಿ ಅಧಿಕಾರಕ್ಕಾಗಿ ಒಳಜಗಳದಲ್ಲಿ ತೊಡಗಿದ್ದುವು. ಟೋರಿಗಳು ೨ ನೇ

ಜೇಮ್ಸನ ಮಗನನ್ನು ಪಟ್ಟಕ್ಕೆ ತರಲು ಗುಟ್ಟಾಗಿ ಪ್ರಯತ್ನಿಸುತ್ತಿದ್ದರು. ವಿಗ್ ಪಂಗಡದ ಮುಖಂಡರು ಒಂದನೆ ಜಾರ್ಜ್‌ನನ್ನು ೧೭೦೧ ರ ಕಾನೂನಿನಂತೆ ಇಂಗ್ಲೆಂಡಿನ ರಾಜನನ್ನಾಗಿ ಮಾಡಲು ಹವಣಿಸುತ್ತಿದ್ದರು. ಟೋರಿ ಮಂತ್ರಿಗಳಾದ ಹಾರ್ಲಿ ಮತ್ತು ಸೆಂಟ್‌ಜಾನ್ ಪರಸ್ಪರ ಅಸೂಯೆಯಿಂದ ಕೂಡಿದ್ದರು. ಸೆಂಟ್‌ಜಾನ್ (ಬೋಲಿಂಗ್ ಬ್ರೋಕ್) ಕ್ರಿ. ಶ. ೧೭೧೪ ರ ಜುಲೈ ೨೭ ರಲ್ಲಿ ಹಾರ್ಲಿಯನ್ನು ಪಿತೂರಿಮಾಡಿ ವಜಾ ಮಾಡಿಸಿದನು. ಅವನ ಪಿತೂರಿಯು ಸಂಪೂರ್ಣವಾಗಿ ಫಲಕಾರಿಯಾಗಲು ಸ್ವಲ್ಪ ಕಾಲ ಬೇಕಾಗಿತ್ತು. ಆದರೆ ಆನಿಯು ಇದಾದ ೫ ದಿನಗಳಲ್ಲಿ ಕಾಲವಾದಳು. ಮೊದಲೇ ಗೊತ್ತಾಗಿದ್ದ ಕಾನೂನಿನಂತೆ (Act of Settlement, ೧೭೦೧) ೧ ನೇ ಜಾರ್ಜ್ ಇಂಗ್ಲೆಂಡಿನ ರಾಜನಾದನು.

# ಬ್ರಿಟಿಷ್ ಸಾಮ್ರಾಜ್ಯದ ಬೆಳವಣಿಗೆ

ಬ್ರಿಟಿಷ್ ಸಾಮ್ರಾಜ್ಯದ ಮೊಳಕೆಯನ್ನು ನಾವು ಎಲಿಸಬೆತ್ತಳ ಆಳ್ವಿಕೆಯಲ್ಲಿ ಕಾಣಬಹುದು. ಸುಮಾರು ಕ್ರಿ. ಶ. ೧೬೮೮ ರ ಕ್ರಾಂತಿಯ ವೇಳೆಗೆ ಅನೇಕ ಇಂಗ್ಲಿಷ್ ವಸಾಹತುಗಳು (ಜಾರ್ಜಿಯ ಮತ್ತು ಫ್ಲಾರಿಡ ವಿನಃ) ಈಗಿನ ಅಮೆರಿಕದ ಪೂರ್ವತೀರದಲ್ಲಿ ಸ್ಥಾಪಿಸಲ್ಪಟ್ಟವು. ಇವುಗಳನ್ನು ಉತ್ತರ, ಮಧ್ಯದ ಮತ್ತು ದಕ್ಷಿಣ ವಸಾಹತುಗಳೆಂದು ಮೂರು ಭಾಗಗಳನ್ನಾಗಿ ಮಾಡಬಹುದು.

ಉತ್ತರದ ವಸಾಹತುಗಳಿಗೆ ನ್ಯೂ ಇಂಗ್ಲೆಂಡ್ ಎಂದು ಹೆಸರು. ಇವುಗಳಿಗೆ ಅಸ್ತಿಭಾರ ಹಾಕಿದವರು 'ಯಾತ್ರಿಕ ತಂದೆಗಳು' (Pil-grim Fathers). ಯಾರ್ಕ್‌ಷೈರ್ ಮತ್ತು ಲಿಂಕರ್ನ್‌ಷೈರ್ ಸಮೀಪದ ಹಳ್ಳಿಗಳಿಂದ ಇವರು ಹಾಲೆಂಡಿಗೆ ಹೋಗಿ ೧೨ ವರ್ಷ ಅಲ್ಲಿ ನೆಲೆಸಿ 'ಮೇ ಫ್ಲವರ್' ಎಂಬ ತಮ್ಮ ಹಡಗಿನಲ್ಲಿ ಕ್ರಿ. ಶ. ೧೬೨೦ ರಲ್ಲಿ ಉತ್ತರ ಅಮೆರಿಕದಕಡೆಗೆ ಹೊರಟು 'ನ್ಯೂಪ್ಲಿಮತ್' ಎಂಬ ವಸಾಹತನ್ನು ಸ್ಥಾಪಿಸಿದರು. ಇವರೇ ಮತೀಯ ವಿಚಾರದಲ್ಲಿ ಇಂಗ್ಲೆಂಡಿನ ಸರ್ಕಾರದೊಂದಿಗೆ ತೀವ್ರ ಭಿನ್ನಾಭಿಪ್ರಾಯ ಹೊಂದಿದ್ದ ಪ್ಯೂರಿಟನ್ನರು. ೧೭ ನೇ ಶತಮಾನದಲ್ಲಿ ನ್ಯೂ ಇಂಗ್ಲೆಂಡಿನಲ್ಲಿ ಮಸಾಚುಸೆಟ್ಸ್, ಕನೆಕ್ಟಿಕಟ್, ನ್ಯೂಹ್ಯಾಂಪ್‌ಷೈರ್, ವರ್ಮಾಂಟ್ ಮತ್ತು ರೋಡ್ ಐಲೆಂಡ್ ಎಂಬುದಾಗಿ ಐದು ವಸಾಹತುಗಳಿದ್ದುವು. ಅಲ್ಲಿನ ಮೂಲ ನಿವಾಸಿಗಳಾದ ರೆಡ್ ಇಂಡಿಯನ್ನರನ್ನು ಈ ಪ್ಯೂರಿಟನ್ನರು ಗುಲಾಮರನ್ನಾಗಿ ಮಾಡಿಕೊಳ್ಳಲು ಹಿಂಜರಿಯಲಿಲ್ಲ. ಈ ವಸಾಹತುಗಳಲ್ಲಿ ವಿದ್ಯೆಯು ಕಡ್ಡಾಯವಾಗಿತ್ತು. ಕ್ರಿ. ಶ. ೧೬೩೬ ರಲ್ಲಿ ಹಾರ್ವರ್ಡ್ ವಿಶ್ವವಿದ್ಯಾನಿಲಯವು ಸ್ಥಾಪಿತವಾಯಿತು.

ಮಧ್ಯದ ವಸಾಹತುಗಳಲ್ಲಿ ೧೬೬೪ ರಲ್ಲಿ ಹಾಲೆಂಡಿನಿಂದ ವಶಪಡಿಸಿಕೊಂಡ ನ್ಯೂಯಾರ್ಕ್, ನ್ಯೂಜರ್ಸಿ, ಮತ್ತು ಡಿಲೇವರ್ (Newyork, New Jersey and Delaware), ಕ್ವೇಕರ್ ಗುಂಪಿಗೆ ಸೇರಿದ ವಿಲಿಯಂಪೆನ್ ಎಂಬುವನು ೧೬೮೧ ರಲ್ಲಿ ಸ್ಥಾಪಿಸಿದ ಪೆನ್‌ಸಿಲ್ವೇನಿಯ )Pennsylvania) ಮುಖ್ಯವಾದುವು. ತನ್ನ ವಸಾಹತಿನಲ್ಲಿ ಪೆನ್

(Penn) ಕ್ವೇಕರ್ ಮತಕ್ಕನುಸಾರವಾಗಿ ಕ್ರಿಶ್ಚಿಯನ್ ಮತಕ್ಕೆ ಸೇರಿದ ಎಲ್ಲಾ ಜನಾಂಗಗಳಲ್ಲಿಯೂ ಸಹಿಷ್ಣುತೆ (Toleration), ದಯೆಯಿಂದ ಕೂಡಿದ ದಂಡಶಾಸನ (Humane Criminal Law) ಮತ್ತು ರೆಡ್ ಇಂಡಿಯನ್ನರಲ್ಲಿ ಉದಾರವಾದ ವರ್ತನೆ ಮೊದಲಾದುವುಗಳನ್ನು ಆಚರಣೆಗೆ ತಂದನು.

ದಕ್ಷಿಣ ವಸಾಹತುಗಳಲ್ಲಿ ಅತ್ಯಂತ ಮುಖ್ಯವಾದುದು ವರ್ಜೀನಿಯ. ೧೬೦೮ ರಲ್ಲಿ ಜಾನ್‌ಸ್ಮಿತ್ ಎಂಬುವನು ಇದನ್ನು ಖಾಯಂ ಆಗಿ ಸ್ಥಾಪಿಸಿದನು. ರ್‍ಯಾಲೆಯು ಸ್ಥಾಪಿಸಿದ್ದ ವರ್ಜೀನಿಯವು ಆಗಲೇ ನಾಶವಾಗಿತ್ತು. ೧೬೩೩ ರಲ್ಲಿ ಮೇರಿಲ್ಯಾಂಡ್ ಎಂಬುದು ರೋಮನ್ ಕ್ಯಾಥಲಿಕರಿಗಾಗಿ ಸ್ಥಾಪಿತವಾಯಿತು. ಎರಡನೆ ಚಾರ್ಲ್ಸ್‌ನ ಆಳ್ವಿಕೆಯಲ್ಲಿ ದಕ್ಷಿಣ ಕರೋಲಿನ ಮತ್ತು ಉತ್ತರ ಕರೋಲಿನ ಸ್ಥಾಪಿತವಾದುವು. ಆಗಿನ ಕಾಲದಲ್ಲಿ ವಸಾಹತು ಮಾತೃದೇಶಕ್ಕೆ (Mother Country) ಕಚ್ಚಾಪದಾರ್ಥಗಳನ್ನು ಕಳುಹಿಸುವುದಕ್ಕೂ ಮತ್ತು ಅಲ್ಲಿಂದ ಸಿದ್ಧವಸ್ತುಗಳನ್ನು ತರಿಸಿಕೊಳ್ಳುವುದಕ್ಕೂ ಸ್ಥಾಪಿಸಲ್ಪಟ್ಟಿತ್ತೆಂಬುದು ಸಾಮಾನ್ಯವಾದ ಅಭಿಪ್ರಾಯವಾಗಿತ್ತು.

ಈಸ್ಟ್ ಇಂಡಿಯಾ ಕಂಪನಿ ಈ ಕಾಲದಲ್ಲಿ ಅಭಿವೃದ್ಧಿಗೆ ಬಂದಿತು. ಸೂರತ್, ಮದರಾಸು, ಮತ್ತು ಕಲ್ಕತ್ತಾಗಳಲ್ಲಿ ಕ್ರಮವಾಗಿ ೧೬೧೨, ೧೬೨೦ ಮತ್ತು ೧೬೪೨ ರಲ್ಲಿ ಕೋಠಿಗಳಾದುವು. ಎರಡನೆ ಚಾರ್ಲ್ಸ್‌ನ ಮದುವೆಯ ಬಳುವಳಿಯಾಗಿ ಬಂದ ಬೊಂಬಾಯಿಯು ೧೬೬೮ ರಲ್ಲಿ ಈಸ್ಟ್ ಇಂಡಿಯಾ ಕಂಪನಿಯ ವಶಕ್ಕೆ ಬಂದಿತು. ಡಚ್ಚರ ಪ್ರಾಬಲ್ಯವನ್ನು ಮುರಿದುಹಾಕಿ ಈಸ್ಟ್ ಇಂಡಿಯಾ ಕಂಪನಿ ತನ್ನ ವ್ಯಾಪಾರವನ್ನು ಹೆಚ್ಚಿಸಿಕೊಂಡಿತು. ೧೪ ನೇ ಲೂಯಿಯ ಮುತ್ತಿಗೆಗಳಿಂದ ಹಾಲೆಂಡ್ ಕಳೆಗುಂದಿ ವ್ಯಾಪಾರದಲ್ಲಿ ಹಿಂದೆ ಬಿದ್ದಿತು. ೧೬೫೩, ೧೬೮೫ ರಲ್ಲಿ ಈಸ್ಟ್ ಇಂಡಿಯಾ ಕಂಪನಿಯ ಆಮದಿನ ಬೆಲೆ (Imports) ೮೦೦೦ ಪೌಂಡಿನಿಂದ ೩,೦೦,೦೦೦ ಪೌಂಡಿಗೇರಿತು.

# ಸ್ಟುವರ್ಟ್ ರಾಜರ ಕಾಲದಲ್ಲಿ ಜನಜೀವನ

ಸ್ಟುವರ್ಟ್ ರಾಜರ ಕಾಲದಲ್ಲಿ ಪಟ್ಟಣ ಮತ್ತು ಹಳ್ಳಿ ಆಗಿನ ಸಮಾಜದಲ್ಲಿ ಎದ್ದು ಕಾಣುತ್ತಿದ್ದವು. ಇಂಗ್ಲೆಂಡಿನ ಜನಸಂಖ್ಯೆ ಫ್ರಾನ್ಸ್ ಮತ್ತು ಸ್ಪೇನ್ ಇವುಗಳ ಜನಸಂಖ್ಯೆಯಲ್ಲಿ ಅರ್ಧಕ್ಕಿಂತ ಕಮ್ಮಿಯಾಗಿತ್ತು. ಇಂಗ್ಲೆಂಡ್ ಮತ್ತು ವೇಲ್ಸ್ ಸೇರಿ ಸುಮಾರು ನಾಲ್ಕರಿಂದ ಆರು ಮಿಲಿಯನ್ ಜನಸಂಖ್ಯೆಹೊಂದಿತ್ತು. ಆನಿಯ ಕಾಲದಲ್ಲಿ ಲಂಡನ್ ಯೂರೋಪಿನ ಪಟ್ಟಣಗಳಲ್ಲೆಲ್ಲಾ ದೊಡ್ಡದಾಗಿತ್ತು. ಲಂಡನ್ ಒಂದರಲ್ಲೇ ಜನಸಂಖ್ಯೆ ಸುಮಾರು ನಾಲ್ಕನೇ ಒಂದು ಮಿಲಿಯನ್‌ನಿಂದ ಅರ್ಧಮಿಲಿಯನ್‌ಗೇರಿತ್ತು. ಇತರ ಪಟ್ಟಣಗಳು ಈ ಕಾಲದಲ್ಲಿ ಅಷ್ಟೇನೂ ದೊಡ್ಡವಾಗಿರಲಿಲ್ಲ. ಬ್ರಿಸ್ಟಲ್ ಮತ್ತು ನಾರ್ವಿಚ್ ಇವೆರಡೂ ಸುಮಾರು ಮೂವತ್ತು ಸಾವಿರ ಜನಗಳಿಂದ ಕೂಡಿದ್ದುವು. ಬೇರೆ ಯಾವ ಪಟ್ಟಣವೂ ಹತ್ತು ಸಾವಿರಕ್ಕಿಂತ ಜಾಸ್ತಿ ಜನರಿಂದ ಕೂಡಿರಲಿಲ್ಲವೆಂದು ಹೇಳಬಹುದು.

ಹದಿನೇಳನೆ ಶತಮಾನದ ಲಂಡನ್ ಹೊಲಸುಕೇರಿಯಿಂದ (Slums) ಕೂಡಿತ್ತು. ಅಲ್ಲಿಯ ಒತ್ತಾದ ಮನೆಗಳು, ಮತ್ತು ಗಾಳಿಯನ್ನು ಮಲಿನ ಮಾಡುತ್ತಿದ್ದ ಬಚ್ಚಲುಗಳು ಮಿಲ್ಟನ್ನನಿಗೆ ಕಂಡುಬಂದವು. ಎರಡನೆ ಚಾರ್ಲ್ಸ್‌ನ ಆಳ್ವಿಕೆಯ ಕೊನೆಯ ವರ್ಷದಲ್ಲಿ ಬೀದಿಯ ದೀಪಗಳನ್ನು ಹಚ್ಚುವ ಏರ್ಪಾಡಾಯಿತು. ಆದರೂ ಲಂಡನ್ನಿನಲ್ಲಿ ಸಾಮಾಜಿಕ ಜೀವನಕ್ಕೆ ಕೊರತೆ ಇರಲಿಲ್ಲ. ಇದಕ್ಕೆ ಕೇಂದ್ರ, 'ಕಾಫಿ ಮನೆ' (Coffee Houses) ಎಂದು ಹೇಳಬಹುದು. ಈ 'ಕಾಫಿ ಮನೆ' ಗಳು ಜನಪ್ರಿಯವಾಗಿದ್ದವು. ಒಂದೊಂದು ಗುಂಪಿಗೆ ಒಂದೊಂದು 'ಕಾಫಿ ಮನೆ' ಮೀಸಲಾಗಿತ್ತೆಂದು ಹೇಳಬಹುದು; ಶೀವಿಗಾರರಿಗೇ ಒಂದು, ಸಾಹಿತಿಗಳಿಗೇ ಒಂದು, ಪ್ಯೂರಿಟನ್ನರಿಗೇ ಒಂದು. ಸಾಹಿತಿಗಳ ಕಾಫಿ ಮನೆಯಲ್ಲಿ ಜನಗಳು ನಾಟಕ ಮೊದಲಾದವುಗಳ ರಚನೆಯ ನಿಬಂಧನೆಗಳನ್ನು ಚರ್ಚಿಸುವುದಕ್ಕೂ, ಡ್ರೈಡನ್ (Dryden) ನಂತಹ ಸಾಹಿತಿಯು ಕಣ್ಣಿಗೆ ಬೀಳುವುದಕ್ಕೂ ಸೇರುತ್ತಿದ್ದರು.

ನೈತಿಕ ಜೀವನದಲ್ಲಿ ಹದಿನೇಳನೇ ಶತಮಾನದ ಮೊದಲನೆಯ ಭಾಗವು ಎರಡನೆಯ ಭಾಗಕ್ಕಿಂತ ಉತ್ತಮವೆಂಬ ಭಾವನೆ ನಮಗೆ ಮೂಡುತ್ತದೆ. ಹ್ಯಾಂಪ್‍ಡೆನ್ ಮತ್ತು ಫಾಕ್ಲೆಂಡ್, ಒಂದನೆ ಚಾರ್ಲ್ಸ್ ಮತ್ತು ಕ್ರಾಮ್‍ವೆಲ್ ಇವರು ಷಾಫ್ಟ್ಸ್‌ಬರಿ ಮತ್ತು ಡ್ಯಾನ್‍ಬಿ, ಎರಡನೆ ಚಾರ್ಲ್ಸ್ ಮತ್ತು ಮಾರಲ್‍ಬರೋ ಇವರುಗಳಿಗಿಂತ ಎತ್ತರವಾದ ಪೀಠದಲ್ಲಿ ಕೂಡಲು ಅರ್ಹರೆಂದು ಹೇಳಬಹುದು.

ಪ್ಯೂರಿಟನ್ ಮತವು ಮಾಟಗಾತಿಯರ (Witchcraft) ಕೃತ್ಯದಲ್ಲಿ ದೃಢನಂಬಿಕೆಯಿಂದ ಕೂಡಿತ್ತು. ಈ ಮಾಟಗಾತಿಯರ ಬೇಟೆ ಅನೇಕ ವೇಳೆ ಅಸಹನೀಯ ಕ್ರೂರವರ್ತನೆಗೆ ಕಾರಣವಾಗಿತ್ತು. ಒಂದನೇ ಜೇಮ್ಸ್ ಮತ್ತು ಬೇಕೆನ್‍ನಂತಹ ವಿದ್ವಾಂಸರೂ ಕೂಡಾ ಈ ದೋಷದಿಂದ ಮುಕ್ತರಾಗಿರಲಿಲ್ಲ. ಲಾಂಗ್ ಪಾರ್ಲಿಮೆಂಟ್ ವೇಳೆಗೆ ಮಾಟಗಾತಿಯರ ಬೇಟೆ ಉಲ್ಬಣಸ್ಥಿತಿಗೇರಿತ್ತು. ಆನಿಯು ಸತ್ತ ಕೆಲವು ವರ್ಷಗಳಲ್ಲಿ ಮಾಟಗಾತಿಯ ಕೃತ್ಯಕ್ಕಾಗಿ ನ್ಯಾಯಾಲಯದ ಮುಂದೆ ಕೊನೆಯ ವಿಚಾರಣೆ ಇಂಗ್ಲೆಂಡಿನಲ್ಲಿ ನಡೆಯಿತು.

ಸಾಹಿತ್ಯದಲ್ಲಿ ಈ ಶತಮಾನವು ಪ್ರಗತಿಯನ್ನು ಕಂಡಿತು. ಕ್ಲಾರೆಂಡನ್ ಬರೆದ "ದೊಡ್ಡ ದಂಗೆಯ ಚರಿತ್ರೆ," ದಬ್ಬಾಳಿಕೆಯನ್ನು ಪ್ರತಿಪಾದಿಸಲು ಹಾಬ್ಸ್ ಎಂಬುವನು ಬರೆದ 'ಲೆವಿಯಥಾನ್' ಸಾಮ್ಯುಯಲ್ ಪೆಪಿಸ್ ಬರೆದ(Pepys)'ಡೈರಿ' ಇವು ಆ ಕಾಲದ ಕೆಲವು ಉತ್ತಮ ಗ್ರಂಥಗಳು. ಮತ್ತೊಬ್ಬ ಒಳ್ಳೆಯ ಬರಹಗಾರ ಜಾನ್‍ಬನಿಯನ್. ಷೇಕ್ಸ್‌ಪಿಯರ್ ಮತ್ತು ಡಿಕನ್ಸರಂತೆ ಬನಿಯನ್ ತಾನು ಬರೆದ "ಪಿಲ್‍ಗ್ರಿಮ್ಸ್ ಪ್ರೋಗ್ರೆಸ್" (Pilgrim's progress) ಎಂಬ ಪುಸ್ತಕದಲ್ಲಿ ಇಂಗ್ಲಿಷ್ ಭಾಷೆಗೆ ಅನೇಕ ಹೊಸ ಪದಗಳನ್ನು ಕೊಟ್ಟಿದ್ದಾನೆ: Slough of Despond, Vanity Fair, Giant Despair, Valley of Humiliation ಇವುಗಳನ್ನು ಉದಾಹರಣೆಯಾಗಿ ಕೊಡಬಹುದು. ಜನಪ್ರಿಯವಾದ ಈ ಪುಸ್ತಕದ ಒಂದು ಲಕ್ಷ ಪ್ರತಿಗಳು ಮೊದಲನೆ ಹತ್ತು ವರ್ಷಗಳಲ್ಲಿ ಮಾರಾಟವಾದುವು.

ಸ್ಟುವರ್ಟರ ಕಾಲದಲ್ಲಿ ವರ್ತಮಾನ ಪತ್ರಿಕೆ ಬಳಕೆಗೆ ಬಂದಿತು. ಮೊಟ್ಟಮೊದಲಿನ ದಿನಪತ್ರಿಕೆಯು ಆನಿಯ ಆಳ್ವಿಕೆಯ ಪ್ರಾರಂಭದಲ್ಲಿ ಹೊರಬಿದ್ದಿತು. ಸುಪ್ರಸಿದ್ಧ ಬರಹಗಾರರು ಮತ್ತು ಪತ್ರಿಕೋದ್ಯಮಿಗಳಾದ ಡೀಫೋ (Defoe), ಸ್ಟೀಲ್ (Steele), ಮತ್ತು ಆಡಿಸನ್ (Addison)ಇವರುಗಳ ಹೆಸರು ನಮಗೆ ಅಪರಿಚಯವೇನೂಅಲ್ಲ. ಹಾರ್ಲಿ ಮತ್ತು ಸೆಂಟ್‌ಜಾನ್ ಇವರ ಸ್ನೇಹಿತನಾದ, ಕಟು ಟೀಕೆಗಾರ ಸ್ವಿಫ್ಟ್ (Swift) ನ ಹೆಸರನ್ನು ಹಿಂದೆಯೇ ಹೇಳಿದೆ.

ಪದ್ಯಸಾಹಿತ್ಯದಲ್ಲಿ ಪೋಪ್ ಎಂಬುವನ ಹೆಸರನ್ನು ಅರಿಯದವರಿಲ್ಲ. ಅವನು ಹೋಮರ್‌ನನ್ನು ಭಾಷಾಂತರಿಸಿದಾಗ ಬೆಂಟ್ಲೆ ಎಂಬ ವಿದ್ವಾಂಸನು ಹೀಗೆ ಹೇಳಿದನಂತೆ "ಪದ್ಯವೇನೋ ಸೊಗಸಾಗಿದೆ. ಆದರೆ ಅದನ್ನು ಹೋಮರ್ ಎಂದು ಮಾತ್ರ ಕರೆಯಕೂಡದು." ಮಿಲ್ಟನ್ ಮತ್ತು ಡ್ರೈಡನ್ ಆಗಿನ ಇತರ ಶ್ರೇಷ್ಠ ಕವಿಗಳು.

ರಾಜಕೀಯ ಮತ್ತು ಸಾಹಿತ್ಯಕ್ಕೆ ಸೇರದ ಮೂರು ಜನ ಇತರ ಹಿರಿಯ ವ್ಯಕ್ತಿಗಳ ವಿಚಾರವನ್ನು ಇಲ್ಲಿ ಸೂಕ್ಷ್ಮವಾಗಿ ಹೇಳಬಹುದು. ಮೊದಲನೆಯವನು ವಿಜ್ಞಾನ ಕ್ಷೇತ್ರದಲ್ಲಿ ಅನುಪಮ ಖ್ಯಾತಿಯನ್ನು ಗಳಿಸಿದ ನ್ಯೂಟನ್ (Newton). ಎರಡನೆಯವನು ವಾಸ್ತುಶಿಲ್ಪದಲ್ಲಿ ಖ್ಯಾತಿಗಳಿಸಿ ಲಂಡನ್ನಿನ ಅನೇಕ ಕಟ್ಟಡಗಳನ್ನು ರಚಿಸಿದ ಕ್ರಿಸ್ಟಾಫರ್‌ರೆನ್. ಮೂರನೆಯವನು ಇಂಗ್ಲೆಂಡಿನಲ್ಲಿ ಸಂಗೀತ ಕ್ಷೇತ್ರದಲ್ಲಿ ಅತ್ಯಂತ ಪ್ರಸಿದ್ಧನಾಗಿ ಹೆಸರುಗಳಿಸಿ, ೧೬೯೫ ರಲ್ಲಿ ಕಾಲವಾದ ಪರ್ಸೆಲ್ (Purcell).

# ಹ್ಯಾನೂವರ್ ದೇಶದ ರಾಜರು

**೧ ನೆ ಮತ್ತು ೨ ನೇ ಜಾರ್ಜ್, ೧೭೧೪–೧೭೬೦ :** ಒಂದನೇ ಜಾರ್ಜ್ ಇಂಗ್ಲೆಂಡಿನ ಸಿಂಹಾಸನವನ್ನು ತನ್ನ ೫೪ ನೇ ವರ್ಷದಲ್ಲಿ ವಿಗ್ ಪಕ್ಷದ ಬೆಂಬಲದಿಂದ ಪಡೆದುಕೊಂಡನಷ್ಟೆ. ಅವನು ರಾಜಕೀಯದಲ್ಲಿ ಅವರನ್ನೇ ಅವಲಂಬಿಸಿದನು. ಅವನಿಗೆ ಇಂಗ್ಲೆಂಡಿನಲ್ಲಾಗಲಿ ಅಥವಾ ಅದರ ಭಾಷೆಯಲ್ಲಾಗಲಿ ಆಸಕ್ತಿ ಇರಲಿಲ್ಲ. ಇದರಿಂದ ಇಂಗ್ಲೆಂಡಿಗೂ ಮತ್ತು ಅದರ ಪಾರ್ಲಿಮೆಂಟಿಗೂ ಅನುಕೂಲವೇ ಆಯಿತು. ರಾಜನ ಅಧಿಕಾರವನ್ನು ಮೊಟಕು ಮಾಡಲು ಸುಸಂದರ್ಭ ಒದಗಿತು. ಮಂತ್ರಿ ಮಂಡಲದ ಸಮಿತಿಯಲ್ಲಿ ಒಂದನೇ ಜಾರ್ಜ್ ಮತ್ತು ೨ ನೇ ಜಾರ್ಜ್ ಅಧ್ಯಕ್ಷತೆ ವಹಿಸಲು ಇಂಗ್ಲಿಷ್ ಭಾಷೆ ಬರದೆ ಅಶಕ್ತರಾಗಿದ್ದುದರಿಂದ ಈ ಕೆಲಸವನ್ನು ಮಂತ್ರಿಗಳಲ್ಲಿ ಪ್ರಬಲನಾದವನೊಬ್ಬನು ಮಾಡಬೇಕಾಯಿತು. ಹೀಗೆ ಇಂಗ್ಲೆಂಡಿನಲ್ಲಿ 'ಮುಖ್ಯಮಂತ್ರಿಯ' ಸ್ಥಾನವು ಸ್ಥಾಪಿತವಾಯಿತು. ಇತರ ಮಂತ್ರಿಗಳ ಸ್ಥಾನವಾಗಲಿ ಅಥವಾ ಅವರು ಅನುಸರಿಸಬೇಕಾದ ನೀತಿಯಾಗಲಿ (Policy) ರಾಜನಿಂದ ನಿರ್ದೇಶಕವಾಗುವ ಬದಲು ಮುಖ್ಯಮಂತ್ರಿಯ ಪಾಲಿಗೆ ಬಂದಿತು. ಕ್ಯಾಬಿನೆಟ್ ಪದ್ಧತಿ ಹೀಗೆ ಆಚರಣೆಗೆ ಬರಲು ಅವಕಾಶವಾಯಿತು. ಮಂತ್ರಿಗಳೆಲ್ಲರೂ ಒಂದೇ ಪಕ್ಷಕ್ಕೆ ಸೇರಿದವರಾಗಿರಬೇಕೆನ್ನುವ ತತ್ವ, ಅವರಲ್ಲಿ ಸಂಯುಕ್ತ ನೀತಿ, ಜವಾಬ್ದಾರಿ, ರಾಜನ ಸಂತೋಷದ ಮೇಲೆ ಅಲ್ಲದೆ ಕಾಮನ್ಸ್ ಸಭೆಯ ಮೇಲೆ ನೆಲೆಸಿದ್ದ ಅವರ ಸ್ಥಾನಭದ್ರತೆ ಇವೆಲ್ಲವೂ ರೂಪುಗೊಂಡವು. ಆದರೆ ಈ ಬೆಳವಣಿಗೆಗಳನ್ನು ನಾವು ಗಮನಿಸುವಾಗ ಎರಡು ವಿಷಯಗಳನ್ನು ನೆನಪಿನಲ್ಲಿ ಇಡಬೇಕು. ರಾಜನ ಅಧಿಕಾರ ಸಂಪೂರ್ಣವಾಗಿ ತೊಡೆದು ಹೋಗಿರಲಿಲ್ಲ. ಎರಡನೆಯದಾಗಿ ಅಧಿಕಾರ ಜನಗಳ ಕೈಗೆ ಇನ್ನೂ ಸಿಕ್ಕಿರಲಿಲ್ಲ. ಅದು ೧೮೩೨ ರಿಂದಾಚೆಗೆ ಬಂದಿತೆಂದು ಹೇಳಬಹುದು. ಈ ಕಾಲದಲ್ಲಿ ಅಧಿಕಾರವೇನೋ ಐಶ್ವರ್ಯವಂತರಾದವರ (Oligarchy) ಕೈಗೆ ಸಿಕ್ಕಿತು.

ಅಪಾರವಾದ ಭೂಸಂಪತ್ತನ್ನು ಹೊಂದಿದ್ದ ವಿಗ್‌ಪಂಗಡವು ೧೭೧೪ ರಿಂದ ೧೭೬೦ ರವರೆಗೆ ತನ್ನ ಪರಮಾಧಿಕಾರವನ್ನು ಇಂಗ್ಲೆಂಡಿನಲ್ಲಿ ಚಲಾಯಿಸಿತು. ಇಷ್ಟು ಹೆಚ್ಚುಕಾಲ ಅವರು ಅಧಿಕಾರದಲ್ಲಿರಲು (Whig Ascendancy) ಕೆಲವು ಕಾರಣಗಳಿದ್ದುವು. ಮೊದಲನೆಯದು ರಾಜನ ಮೇಲೆ ಅವರಿಗಿದ್ದ ಹತೋಟಿ (Control of the Crown). ಎರಡನೆಯದು ಕಾಮನ್ಸ್ ಸಭೆಯ ಮೇಲಿದ್ದ ಹತೋಟಿ (Control of the House of Commons).

ಒಂದನೆ ಮತ್ತು ಎರಡನೆ ಜಾರ್ಜ್ ಇಂಗ್ಲೆಂಡಿಗಿಂತ ಹ್ಯಾನೂವರ್ ನಲ್ಲೇ ಹೆಚ್ಚು ಆಸಕ್ತರಾಗಿದ್ದರು. ಅವರು ರಾಜಕೀಯವನ್ನು ವಿಗ್ ಮುಖಂಡರಿಗೆ ಬಿಟ್ಟುಕೊಟ್ಟರು. ಇದರಿಂದ ರಾಜನ ಉದ್ಯೋಗ ಕೊಡುವ ಹಕ್ಕು (Patronage of the Crown) ಅವರಿಗೆ ಸಿಕ್ಕಿತು. ಚರ್ಚು, ಸೈನ್ಯ, ಆಡಳಿತ ಇವುಗಳಲ್ಲಿದ್ದ ಉದ್ಯೋಗಸ್ಥರು ದೊಡ್ಡ ದೊಡ್ಡ ಕೆಲಸಗಳನ್ನು ಸಂಪಾದಿಸಲು ವಿಗ್ ಪಂಗಡದ ಮುಖಂಡರ ಆಶ್ರಯ ಪಡೆಯಬೇಕಾಗಿತ್ತು. ಕಾಮನ್ಸ್ ಸಭೆಯಲ್ಲಿ ತಮಗೆ ಸದಸ್ಯರು ಬೆಂಬಲ ಕೊಡುವಂತೆ ಅವರಿಗೆ ಬೇರೆ ಉದ್ಯೋಗಗಳನ್ನು ಕಲ್ಪಿಸಲಾಗಿತ್ತು. ಈ ಪದ್ಧತಿ ಎರಡನೆ ಚಾರ್ಲ್ಸ್‌ನ ಕಾಲದಿಂದಲೇ ಪ್ರಾರಂಭವಾಗಿತ್ತಾದರೂ ವಿಗ್ ಮುಖಂಡರು ಇದನ್ನು ಹೆಚ್ಚು ಬಳಕೆಗೆ ತಂದರು. ಒಂದನೆ ಜಾರ್ಜ್‌ನ ಮೊದಲನೆ ಕಾಮನ್ಸ್ ಸಭೆಯ ೫೫೦ ಸದಸ್ಯರಲ್ಲಿ ೨೭೧ ಜನ ವೇತನ ಮತ್ತು ಉದ್ಯೋಗ ಮೊದಲಾದುವುಗಳನ್ನು (Placemen) ಹೊಂದಿದ್ದರು.

ಇದಲ್ಲದೆ ಪಾರ್ಲಿಮೆಂಟಿನ ಸದಸ್ಯರನ್ನು ಚುನಾಯಿಸುವ ವಿಧದಲ್ಲಿಂತೂ ವಿಶೇಷವಾಗಿ ಲಂಚ ಉಪಯೋಗಿಸಲ್ಪಡುತ್ತಿತ್ತು. ಜಮಿನುದಾರರು ತಮಗೆ ಬೇಕಾದವರನ್ನು ಚುನಾವಣೆಗೆ ನಾಮಕರಣ ಮಾಡುತ್ತಿದ್ದರು. ಆಗ ಚುನಾವಣೆಯ ಅಧಿಕಾರ ಹೊಂದಿದ್ದ ಊರುಗಳನ್ನು ಫ್ರೀಬರೊ (Free Borough), ರಾಟನ್‌ಬರೊ (Rotton Borough) ಮತ್ತು ಪಾಕೆಟ್‌ಬರೊ (Pocket Borough) ಎಂಬುದಾಗಿ ಮೂರು ಭಾಗವಾಗಿ ವಿಂಗಡಿಸಬಹುದು. ಫ್ರೀಬರೂವಿನಲ್ಲಿ ಮತದಾನ

ಮಾಡುವರ ಸಂಖ್ಯೆ (Voters) ಜಾಸ್ತಿ ಇದ್ದುದರಿಂದ ಅಲ್ಲಿ ಲಂಚ ಕೊಡುವುದು ಅಷ್ಟು ಸುಲಭವಾಗಿರಲಿಲ್ಲ. ರಾಟನ್‌ಬರೂಗಳಲ್ಲಿ ಮತದಾರರ ಸಂಖ್ಯೆ ಕಡಮೆಯಾಗಿತ್ತಾದ್ದರಿಂದ ಮತದಾರರಿಗೆ ಲಂಚ ಕೊಟ್ಟು ಚುನಾವಣೆಯಲ್ಲಿ ಜಯಗಳಿಸಬಹುದಾಗಿತ್ತು. ಪಾಕೆಟ್‌ಬರೂ ಒಬ್ಬ ವ್ಯಕ್ತಿಗೆ ಸೇರಿ ಅವನ ಅಧೀನದಲ್ಲಿದ್ದುದರಿಂದ ಅವನು ತನಗೆ ಬೇಕಾದವನನ್ನು ನಾಮುಕರಣ ಮಾಡುತ್ತಿದ್ದನು.

**ಜಾಕೊಬೈಟ್ ದಂಗೆ, ೧೭೧೫** : ಯುಟ್ರೆಕ್ಟ್ (Utrecht) ಕರಾರಿನಿಂದ ೧೪ ನೇ ಲೂಯಿಯು ಎರಡನೇ ಜೇಮ್ಸನ ಮಗ ಮೂರನೇ ಜೇಮ್ಸನಿಗೆ ಫ್ರಾನ್ಸಿನಲ್ಲಿ ಆಶ್ರಯ ಕೊಡದಂತೆ ಹೊರಗೆ ಹಾಕಲು ಒಪ್ಪಿಕೊಂಡಿದ್ದನು. 'ಆನಿಯು ಸಾಯುವುದಕ್ಕಿಂತ ಮುಂಚೆ ಟೋರಿ ಪಂಗಡವು ಅವನನ್ನು ಇಂಗ್ಲೆಂಡಿನ ರಾಜನನ್ನಾಗಿ ಮಾಡಲು ಸಂಧಾನ ಮಾಡುತ್ತಿತ್ತು. ಆದರೆ ಆನಿಯು ತಕ್ಷಣ ಕಾಲವಾದುದರಿಂದ ವಿಗ್ ಮುಖಂಡರು ಒಂದನೇ ಜಾರ್ಜನನ್ನು ಪಟ್ಟಕ್ಕೆ ತಂದರು. ೧೭೦೭ ರಲ್ಲಿ ಇಂಗ್ಲೆಂಡ್ ಮತ್ತು ಸ್ಕಾಟ್ಲೆಂಡಿನ ಐಕ್ಯತೆಯು ಸ್ಕಾಟ್ಲೆಂಡಿನಲ್ಲಿ ಸ್ವಲ್ಪಮಟ್ಟಿಗೆ ಅಸಮಾಧಾನವನ್ನು ಉಂಟುಮಾಡಿತ್ತು. ಮೂರನೇ ಜೇಮ್ಸ್ ಸ್ಕಾಟ್ಲೆಂಡಿಗೆ ಬಂದಿಳಿದನು. ಅಲ್ಲಿ ಬೆಟ್ಟಗುಡ್ಡಗಳ ಜನಗಳ ಮುಖಂಡನಾದ ಅರ್ಲ್ ಆಫ್ ಮಾರ್ ಎಂಬುವನು ಇವನಿಗಾಗಿ ಒಂದು ಸೈನ್ಯವನ್ನು ಸೇರಿಸಿ ಷೆರಿಫ್ ಮುಯರ್ (Sheriff muir) ಎಂಬಲ್ಲಿ ೧೭೧೫ ರಲ್ಲಿ ಯುದ್ಧ ಮಾಡಿದನು. ಜೇಮ್ಸನ ಸಹಾಯಕರಿಗೆ 'ಜಾಕೊಬೈಟ್' ಎಂದು ಹೆಸರು. ಲ್ಯಾಟಿನ್ ಭಾಷೆಯಲ್ಲಿ ಜಾಕೋಬಸ್ ಎಂದರೆ ಜೇಮ್ಸ್ ಎಂದು ಅರ್ಥ. ಪ್ರೆಸ್ಟನ್ ಎಂಬಲ್ಲಿ ಮತ್ತೊಮ್ಮೆ ಯುದ್ಧ ನಡೆದು ಜೇಮ್ಸನ ಬೆಂಬಲಿಗರಿಗೆ ಸೋಲಾಗಿ, ದಂಗೆಯು ಸುಲಭವಾಗಿ ಅಡಗಿಸಲ್ಪಟ್ಟಿತು.

**ದಕ್ಷಿಣ ಸಮುದ್ರದ ಕಂಪನಿ** (South Sea Company): ಯುಟ್ರೆಕ್ಟ್ ಕರಾರಿನ ಪ್ರಕಾರ ಇಂಗ್ಲೆಂಡಿಗೆ ಸ್ಪೇನಿನ ವಸಾಹತುಗಳೊಡನೆ ವ್ಯಾಪಾರ ಮಾಡುವ ಹಕ್ಕು ಕೊಡಲ್ಪಟ್ಟಿತ್ತೆಂದು ಹಿಂದೆಯೇ ಹೇಳಿದೆ (Asiento Right). ಈ ವ್ಯಾಪಾರವು ಅತಿ ಲಾಭದಾಯಕವೆಂದು ಪರಿಗಣಿಸಲ್ಪಟ್ಟು, ೧೭೧೧ ರಲ್ಲಿ ಹಾರ್ಲಿಯಿಂದ ಸ್ಥಾಪಿಸಲ್ಪಟ್ಟ ಈ

ಕಂಪನಿಯು ಆ ವ್ಯಾಪಾರದ ಏಕ ಸ್ವಾಮ್ಯತೆ (Monopoly) ಯನ್ನು ಪಡೆದುಕೊಂಡಿತ್ತು. ಆದರೆ ಜನಗಳು ಎಣಿಸಿದಷ್ಟು ಈ ವ್ಯಾಪಾರವು ಲಾಭದಾಯಕವಾಗಿರಲಿಲ್ಲ. ಆದಾಗ್ಯೂ ಕಂಪನಿಯು ರಾಷ್ಟ್ರೀಯ ಸಾಲದ (National debt) ಹೊರೆಯಲ್ಲಿ ಸ್ವಲ್ಪಭಾಗ ಹೊತ್ತುಕೊಳ್ಳಲು ಸರ್ಕಾರವನ್ನು ಪ್ರಾರ್ಥಿಸಿಕೊಂಡಿತು. ಇದಕ್ಕೆ ಪ್ರತಿಫಲವಾಗಿ ಕೊಡಬೇಕಾಗಿದ್ದ ೭೦೨೦೦೦೦ ಪೌಂಡು ಶುಲ್ಕವನ್ನು ಕೊಟ್ಟಿತು. ಹೀಗೆ ರಾಷ್ಟ್ರೀಯ ಸಾಲದ ಹೊರೆಯ ಭಾಗವನ್ನು ಹೊತ್ತುಕೊಳ್ಳುವುದರ ಮೂಲಕ ಕಂಪನಿಯು ಸರ್ಕಾರಕ್ಕೆ ಸಾಲಕೊಡುವ ಸಂಸ್ಥೆಯಂತೆ ಪರಿಗಣಿತವಾಯಿತು. ಇದರಿಂದ ಸಹಜವಾಗಿ ಜನಗಳಲ್ಲಿ ಕಂಪನಿಯ ಆರ್ಥಿಕ ಭದ್ರತೆಯಲ್ಲಿ ನಂಬಿಕೆಯುಂಟಾಗಿ, ಅದರ ಷೇರಿನ ಬೆಲೆ ವಿಪರೀತವಾಗಿ ಏರಿತು. ೧೭೨೦ ನೆ ಜೂನ್ ವೇಳೆಗೆ ೧೦೦ ಪೌಂಡು ಷೇರಿನ ಬೆಲೆ ೧೦೬೦ ಪೌಂಡಿಗೇರಿತು.

ರಾಷ್ಟ್ರೀಯ ಸಾಲದ ಹೊರೆಯನ್ನು ಈ ಕಂಪನಿಯು ವಹಿಸಿಕೊಳ್ಳುವಂತೆ ತಂದ ಮಸೂದೆಯನ್ನು ಪಾರ್ಲಿಮೆಂಟಿನಲ್ಲಿ ಕೆಲವರು ತೀವ್ರವಾಗಿ ವಿರೋಧಿಸಿದರು. ಅದರಲ್ಲಿ ಮುಖ್ಯನಾದವನು ಸರ್ ರಾಬರ್ಟ್ ವಾಲ್‌ಪೋಲ್ (೧೬೭೬–೧೭೪೫). ಕೆಲವು ಮಂತ್ರಿಗಳು ಕಂಪನಿಯಿಂದ ಲಂಚ ತಿಂದು ಅದಕ್ಕೆ ಸಹಾಯ ಮಾಡಿದರು. ಇದನ್ನು ನೋಡಿ ಬೇರೆಬೇರೆ ಕಂಪನಿಗಳು ಸ್ಥಾಪಿತವಾದುವು. ಇಂತಹ ಒಂದು ಕಂಪನಿಯ ಮೇಲೆ ದಕ್ಷಿಣ ಸಮುದ್ರದ ಕಂಪನಿಯು ತನ್ನ ಹಕ್ಕುಗಳನ್ನು ಅದು ಉಲ್ಲಂಘಿಸಿತೆಂದು ನ್ಯಾಯಾಲಯದಲ್ಲಿ ವ್ಯವಹಾರ ಹೂಡಿದಾಗ ಅದರ ಆಸ್ತಿಪಾಸ್ತಿಗಳ ವಿಚಾರವು ಹೊರಕ್ಕೆ ಬಂದಿತು. ಜನಗಳಲ್ಲಿ ಸಂಶಯ ಹುಟ್ಟಿ ಅದರ ಷೇರಿನ ಬೆಲೆ ಬಿದ್ದುಹೋಗಿ, ಸಾವಿರಾರು ಜನರು ತಮ್ಮ ಹಣವನ್ನು ಕಳೆದುಕೊಂಡರು. ಸರ್ಕಾರವೇ ಇದರಿಂದ ಉರುಳಿತೆಂದು ಹೇಳಬಹುದು. ಕ್ರಾಗ್ಸ್ (Craggs) ಎಂಬ ಮಂತ್ರಿ ಆತ್ಮಹತ್ಯೆ ಮಾಡಿಕೊಂಡನು. ಮತ್ತೊಬ್ಬನನ್ನು ಸೆರೆಗೊಯ್ಯಲಾಯಿತು. ಸಂಡರ್‌ಲ್ಯಾಂಡ್ ರಾಜೀನಾಮೆ ಕೊಟ್ಟನು. ಸ್ಟಾನ್‌ಹೋಪ್ ಸತ್ತನು. ಈ ಅನಾಹುತದಿಂದ ಜನರನ್ನು ಸಂತೈಸಿ, ತಹಬಂದಿಗೆ ತಂದವನು ರಾಬರ್ಟ್ ವಾಲ್‌ಪೋಲ್. ಇದರಿಂದ ಅವನೇ ಇಂಗ್ಲೆಂಡಿನ ಮುಖ್ಯಮಂತ್ರಿಯಾಗಿ ಬಂದನು.

**ವಾಲ್‌ಪೋಲನ ಮಂತ್ರಿತ್ವ, ೧೭೨೧–೧೭೪೨ :** ವಾಲ್‌ಪೋಲ್ ನಾರ್‌ಫೋಕ್ ಎಂಬಲ್ಲಿ ಜಮೀನುದಾರನಾಗಿದ್ದನು. ಅವನಿಗೆ ಹಣ ಕಾಸಿನ ವ್ಯವಸ್ಥೆಯಲ್ಲಿ ತೀವ್ರ ಪರಿಶ್ರಮವಿತ್ತು. ಇವನನ್ನು ಇಂಗ್ಲೆಂಡಿನ ಮೊದಲನೆಯ ಮುಖ್ಯಮಂತ್ರಿ ಎಂದು ಹೇಳಬಹುದು. ಆದರೆ ಅವನ ಸ್ಥಾನವು ಆಧುನಿಕ ಮುಖ್ಯಮಂತ್ರಿಗಳ ಸ್ಥಾನದಂತೆ ಇರಲಿಲ್ಲ. ಈಗ ಮುಖ್ಯಮಂತ್ರಿಯು ರಾಜನ ಆಜ್ಞೆಗೆ ಅನುಸಾರವಾಗಿ ನಡೆಯಬೇಕಾಗಿಲ್ಲ. ರಾಜನು ರಾಜಕೀಯದಲ್ಲಿ ಪ್ರವೇಶಿಸುವುದೇ ಇಲ್ಲ. ಮಂತ್ರಿ ಸಂಪುಟದಲ್ಲಿ ಆಧುನಿಕ ಮುಖ್ಯಮಂತ್ರಿಯು ಮತ್ತು ಅವನ ಸಹೋದ್ಯೋಗಿಗಳು ಒಂದೇ ನೀತಿಯಿಂದ ಕೂಡಿರಬೇಕು. ಆದರೆ ವಾಲ್‌ಪೋಲನ ಸ್ಥಾನವು ಒಂದನೇ ಜಾರ್ಜನನ್ನು ಅವಲಂಬಿಸಿತ್ತು. ಆದಾಗ್ಯೂ ವಾಲ್‌ಪೋಲನ ಕಾಲದಲ್ಲಿ ಕ್ಯಾಬಿನೆಟ್ ಪದ್ಧತಿಯ ಸಂಪ್ರದಾಯ ಬರತೊಡಗಿತು. ಅವನೇ ತನ್ನ ಮಂತ್ರಿ ಮಂಡಲವನ್ನು ರಚಿಸುತ್ತಿದ್ದುದೂ ಮತ್ತು ತನ್ನ ನೀತಿಯನ್ನೇ ಇತರರು ಅನುಸರಿಸುವಂತೆ ಒತ್ತಾಯಪಡಿಸುತ್ತಿದ್ದುದೂ ಕ್ಯಾಬಿನೆಟ್ ಪದ್ಧತಿಯ ಅಡಿಗಲ್ಲನ್ನು ಹಾಕಿತೆಂದು ಹೇಳಬಹುದು.

ಎರಡನೆ ಜಾರ್ಜ್ ಪಟ್ಟಕ್ಕೆ ಬಂದಾಗ ಅವನು ವಾಲ್‌ಪೋಲನನ್ನು ವಜಾಮಾಡಿದನು. ಆದರೆ ಪಾರ್ಲಿಮೆಂಟ್ ಬೇರೆ ಯಾರನ್ನೂ ಒಪ್ಪುವಂತಿರಲಿಲ್ಲ. ಪಾರ್ಲಿಮೆಂಟನ್ನು ಒಲಿಸಿಕೊಳ್ಳುವುದರಲ್ಲಿ ವಾಲ್‌ಪೋಲ್ ನಿಸ್ಸೀಮನಾಗಿದ್ದನು. ಅದೂ ಅಲ್ಲದೆ ಅವನು ಎರಡನೆ ಜಾರ್ಜನ ಆಸ್ಥಾನ ಮತ್ತು ನೌಕರರ ಹಾಗೂ ಗೃಹಕೃತ್ಯದ ಖರ್ಚಿಗಾಗಿ ಕೊಡುತ್ತಿದ್ದ ಹಣವನ್ನು *(Civil List) ೧೦೦,೦೦೦ ಪೌಂಡುಗಳಿಂದ ಹೆಚ್ಚಿಸಿ ಅವನ ಮೆಚ್ಚುಗೆಯನ್ನು ಸಂಪಾದಿಸಿದನು. ಎರಡನೆ ಜಾರ್ಜನ ರಾಣಿಯ ಕೃಪೆಗೆ ಅವನು ಪಾತ್ರನಾಗಿದ್ದನು. ಅವಳು ದಕ್ಷೆಯಾಗಿದ್ದು ರಾಜನಿಗೆ ಸಹಾಯಕಳಾಗಿದ್ದಳು.

ವಾಲ್‌ಪೋಲ್ ತನ್ನ ಮಂತ್ರಿಮಂಡಲದಲ್ಲಿ ಪರಮಾಧಿಕಾರವನ್ನು ಹೊಂದಿದ್ದನು. ಅವನ ಅನುಯಾಯಿಗಳಾದ ಕಾರ್ಟರೆಟ್ (Cartaret)

---

* ಒಂದನೆ ಜಾರ್ಜನ ಕಾಲದಲ್ಲಿ ೭೦೦,೦೦೦ ಸಾವಿರ ಪೌಂಡು ಕೊಡಲಾಗುತ್ತಿತ್ತು.

ಮತ್ತು ಅವನ ನೆಂಟ ಟೌನ್‌ಷೆಂಡ್ (Townshend) ಅವನೊಡನೆ ಜಗಳವಾಡಿ ವಜಾ ಮಾಡಲ್ಪಟ್ಟರು. ಇದರಿಂದ ವಾಲ್‌ಪ್ರೋಲನಿಗೆ ಶತ್ರುಗಳ ಗುಂಪು ಪಾರ್ಲಿಮೆಂಟಿನಲ್ಲಿ ಹೆಚ್ಚಾಯಿತು. ಕ್ಷಮಿಸಲ್ಪಟ್ಟು, ೧೭೨೫ ರಲ್ಲಿ ಇಂಗ್ಲೆಂಡಿಗೆ ಹಿಂದಿರುಗಲು ಅಪ್ಪಣೆ ಪಡೆದಿದ್ದ, ಟೋರಿ ಪಕ್ಷದ ಬೋಲಿಂಗ್ ಬ್ರೂಕ್ ಎಂಬುವನೊಡನೆ ವಾಲ್‌ಪ್ರೋಲನ ಶತ್ರುಗಳು ಸೇರಿಕೊಂಡರು. ಬೋಲಿಂಗ್ ಬ್ರೂಕ್ ತಾನು ಸ್ಥಾಪಿಸಿದ 'ಕ್ರಾಫ್ಟ್ಸ್‌ಮನ್' ಎಂಬ ಪತ್ರಿಕೆಯಲ್ಲಿ ವಾಲ್‌ಪ್ರೋಲನ ನೀತಿಯನ್ನು ಹತ್ತು ವರ್ಷಗಳ ಕಾಲ ಎಡಬಿಡದೆ ಖಂಡಿಸಿದನು. ವಾಲ್‌ಪ್ರೋಲನು ಪಾರ್ಲಿಮೆಂಟಿನ ಹತೋಟಿಯನ್ನು, ಲಂಚ ಮೊದಲಾದುವುಗಳಿಂದ ತನ್ನ ಹಿಡಿತದಲ್ಲಿ ಇಟ್ಟುಕೊಂಡಿದ್ದ ಪದ್ಧತಿಯನ್ನು ' ಹುಡುಗರೆಂದು ' ಅವನಿಂದ ಅಪಹಾಸ್ಯಕ್ಕೀಡಾಗಿದ್ದ ಪಂಗಡದ ಮುಖಂಡನಾದ ವಿಲಿಯಂ ಪಿಟ್ ಎಂಬುವನು ಆಗಾಗ್ಗೆ ಖಂಡಿಸುತ್ತಿದ್ದನು.

ವಾಲ್‌ಪ್ರೋಲನಿಗೆ ಶಾಂತಿಯಲ್ಲಿ ತುಂಬಾ ಪ್ರೀತಿ. ಇಂಗ್ಲೆಂಡಿನಲ್ಲಿ ಇಪ್ಪತ್ತು ವರ್ಷಗಳಕಾಲ ಶಾಂತಿಯನ್ನು ತಂದು ಅವನು ವ್ಯಾಪಾರ ಮತ್ತು ವಾಣಿಜ್ಯ ಪ್ರಗತಿಯನ್ನು ಹೊಂದುವಂತೆ ಮಾಡಿದನು. ಫ್ರಾನ್ಸಿನ ಮಂತ್ರಿಯಾಗಿದ್ದ ಫ್ಲೂರಿ (Fleury) ಎಂಬುವನ ಜೊತೆಯಲ್ಲಿ ಶಾಂತಿ ಒಪ್ಪಂದ ಮಾಡಿಕೊಂಡನು. ಫ್ಲೂರಿಯೂ ಕೂಡಾ ಶಾಂತಿಪ್ರಿಯ. ೧೭೩೩ ರಲ್ಲಿ ಯೂರೋಪಿನಲ್ಲಿ ಪೋಲೆಂಡಿನ ಸಂತತಿಯುದ್ಧ ಪ್ರಾಪ್ತವಾಯಿತು. ವಾಲ್‌ಪ್ರೋಲ್ ಹೇಳಿದಂತೆ ಆ ಯುದ್ಧದಲ್ಲಿ ೧೦೦ ಸಾವಿರ ಜನರು ಸತ್ತರು. ಆದರೆ ಅದರಲ್ಲಿ ಒಬ್ಬನೂ ಇಂಗ್ಲಿಷ್‌ನವನಾಗಿರಲಿಲ್ಲ.

೧೭೩೩ ರಲ್ಲಿ ವಾಲ್‌ಪ್ರೋಲ್ ' ಮಾದಕವಸ್ತು ಕಾನೂನು ' (Excise Bill) ಒಂದನ್ನು ಪಾರ್ಲಿಮೆಂಟಿನಲ್ಲಿ ತಂದನು. ಇದರಿಂದ ಹೊಗೆಸೊಪ್ಪು ಮತ್ತು ಮದ್ಯಗಳ ಮೇಲೆ ಸುಂಕವನ್ನು ರೇವುಪಟ್ಟಣದಲ್ಲಿಯೇ ಹಾಕುವ ಬದಲು ಇಂಗ್ಲೆಂಡಿನಲ್ಲಿ ಅವುಗಳನ್ನು ಉಪಯೋಗಿಸುವಾಗ ಹಾಕಬೇಕೆಂದು ಗೊತ್ತಾಗಿತ್ತು. ಹೀಗೆ ಮಾಡುವುದರಿಂದ ಕಳ್ಳತನದ ಸಾಗಾಣಿಕೆಯನ್ನು ತಪ್ಪಿಸಬಹುದೆಂಬುದೇ ಅವನ ಗುರಿಯಾಗಿತ್ತು. ಆದರೆ ಇದು ಜನಗಳಿಗೆ ಹಿಡಿಸಲಿಲ್ಲ. ಕಾಮನ್ಸ್ ಸಭೆಯಲ್ಲಿ ವಿರುದ್ಧ

ಪಂಗಡವು ಈ ಮಸೂದೆಯನ್ನು ಪ್ರತಿಭಟಿಸಿತು. ಇದನ್ನು ನೋಡಿ ವಾಲ್‌ಪ್ರೋಲ್ ಮಸೂದೆಯನ್ನು ಹಿಂದಕ್ಕೆ ತೆಗೆದುಕೊಂಡನು.

ಯುಟ್ರೆಕ್ಟ್ ಕರಾರಿನ ಪ್ರಕಾರ (Asiento) ಸ್ಪೇನ್ ಇಂಗ್ಲೆಂಡಿಗೆ ವರ್ಷಕೊಮ್ಮೆ ೪೮೦೦ ನೀಗ್ರೋ ಗುಲಾಮರನ್ನು ತನ್ನ ವಸಾಹತುಗಳಿಗೆ ಮಾರುವುದಕ್ಕೂ ಮತ್ತು ಒಂದು ಹಡಗು ತುಂಬ ಸಾಮಾನುಗಳನ್ನು ಕಳುಹಿಸುವುದಕ್ಕೂ ಒಪ್ಪಿಗೆಕೊಟ್ಟಿತ್ತು. ಆದರೆ ಇಂಗ್ಲಿಷ್ ವರ್ತಕರು ಹೆಚ್ಚು ಹೆಚ್ಚು ಹಡಗುಗಳನ್ನು ವ್ಯಾಪಾರಕ್ಕೆ ಕಳುಹಿಸುತ್ತಿದ್ದರು. ಸ್ಪೇನಿನ ವಸಾಹತುಗಳಿದ್ದ ಅಮೆರಿಕಾ ತೀರಪ್ರದೇಶವು ಅತ್ಯಂತ ದೊಡ್ಡದಾಗಿದ್ದುದರಿಂದ ಸ್ಪೇನಿನ ಅಧಿಕಾರಿಗಳಿಗೆ ಈ ಕಳ್ಳತನದ ಸಾಗಾಣಿಕೆಯನ್ನು ಕಂಡುಹಿಡಿಯಲು ಕಷ್ಟವಾಗಿತ್ತು. ಕೈಗೆ ಸಿಕ್ಕಿಬಿದ್ದಾಗ ಅವರು ಇಗ್ಲಿಷ್ ನಾವಿಕರನ್ನು ಕ್ರೂರವಾದ ಶಿಕ್ಷೆಗೆ ಗುರಿಪಡಿಸುತ್ತಿದ್ದರು. ಕ್ಯಾಪ್ಟನ್ ಜಂಕಿನ್ಸ್ ಎಂಬುವನು, ಸ್ಪೇನಿನವರು ತನ್ನ ಕಿವಿಯನ್ನು ಕತ್ತರಿಸಿದರೆಂದು ಕಾಮನ್ಸ್ ಸಭೆಗೆ ದೂರು ತಂದನು. ವಾಲ್ ಪೋಲನನ್ನು ವಿರುದ್ಧಪಂಗಡವು ಪಾರ್ಲಿಮೆಂಟಿನಲ್ಲಿ ಅವನ ಶಾಂತಿ ಪ್ರಿಯತೆಯನ್ನು ಹೇಡಿತನವೆಂದು ಮೂದಲಿಸಿ ೧೭೩೯ ರಲ್ಲಿ ಸ್ಪೇನಿನೊಡನೆ ಇಂಗ್ಲೆಂಡ್ ಯುದ್ಧ ಹೂಡುವಂತೆ ಮಾಡಿತು. ಇದಕ್ಕೆ 'ಜಂಕಿನ್ಸ್ ಕಿವಿಯ ಯುದ್ಧ' ಎಂದು ಹೆಸರು. ಪಾರ್ಲಿಮೆಂಟ್ ಯುದ್ಧಮಾಡಲು ತೀರ್ಮಾನಿಸಿದುದನ್ನು ಕೇಳಿ, ಸಂತೋಷದಿಂದ ಗಂಟೆಗಳನ್ನು ಬಾರಿಸುತ್ತಿದ್ದ ಲಂಡನ್ ಜನಗಳನ್ನು ನೋಡಿ ವಾಲ್‌ಪೋಲನಿಗೆ ತೀವ್ರ ವಿಷಾದವಾಯಿತು. "ಅವರು ಗಂಟೆಗಳನ್ನು ಈಗ ಬಾರಿಸುತ್ತಿದ್ದಾರೆ. ಆದರೆ ಬಹು ಬೇಗ ಅವರು ಕೈಗಳನ್ನು ಹಿಸುಕಿಕೊಳ್ಳುವರು" ಎಂದು ಅವನು ಹೇಳಿದನು. ವಾಲ್ ಪೋಲನು ಶಾಂತಿಯ ಕಾಲದ ಮಂತ್ರಿತ್ವ ನಡೆಸುವ ನಿಪುಣನಾಗಿದ್ದನು; ಯುದ್ಧ ಮಂತ್ರಿಯಲ್ಲ. ಆಧುನಿಕ ಮುಖ್ಯ ಮಂತ್ರಿಯಾಗಿದ್ದರೆ ತನ್ನ ಇಷ್ಟಕ್ಕೆ ವಿರುದ್ಧವಾಗಿ ಯುದ್ಧ ತೀರ್ಮಾನವಾದುದನ್ನು ನೋಡಿ ರಾಜೀನಾಮೆ ಕೊಡುತ್ತಿದ್ದನು. ಆದರೆ ವಾಲ್ ಪ್ರೋಲ್ ರಾಜನ ಮಂತ್ರಿಯಾಗಿದ್ದನು. ರಾಜನು ಅವನನ್ನು ಮುಂದುವರಿಯಬೇಕೆಂದು ಕೇಳಿ

ಕೊಂಡನು. ಅವನು ೧೭೪೨ ರಲ್ಲಿ ಕೊನೆಗೆ ತನ್ನ ಮಂತ್ರಿಪದವಿಗೆ ರಾಜೀನಾಮೆಯಿತ್ತನು.

ವಾಲ್‌ಪೋಲ್ ತನ್ನ ಮಂತ್ರಿತ್ವದ ಅವಧಿಯಲ್ಲಿ ಇಂಗ್ಲೆಂಡಿನ ಅಭಿವೃದ್ಧಿಯನ್ನು ಸಾಧಿಸಿದನು. ಆಡಳಿತ, ಹಣಕಾಸು ಮೊದಲಾದುವುಗಳ ವ್ಯವಸ್ಥೆಯನ್ನು ಸರಿಪಡಿಸಿ ಇಂಗ್ಲೆಂಡ್ ಮುಂದೆ ಯುದ್ಧಗಳ ಹೊಡೆತದಲ್ಲಿ ಸಿಲುಕಿದಾಗ ಅದನ್ನು ಎದುರಿಸಲು ತಕ್ಕ ಸಾಮರ್ಥ್ಯವನ್ನು ಹೊಂದುವಂತೆ ಮಾಡಿದನು.

ಬಹು ಬೇಗ ಸ್ಪೇನಿನ ಯುದ್ಧದೊಡನೆ ಮತ್ತೊಂದು ಯುದ್ಧವು ಬಂದಿತು. ಆಸ್ಟ್ರಿಯದ ಚಕ್ರವರ್ತಿ ಆರನೆ ಚಾರ್ಲ್ಸ್ ತನ್ನ ಕಾಲಾನಂತರ ರಾಜ್ಯವು ತನ್ನ ಮಗಳಾದ ಮೇರಿಯಾ ಥೆರೆಸಾ (Maria Theresa) ಎಂಬುವಳಿಗೆ ಸಿಕ್ಕಬೇಕೆಂದು ಯೂರೋಪಿನ ಪ್ರಮುಖ ರಾಜರುಗಳ ಒಪ್ಪಿಗೆಯನ್ನು ಪಡೆದಿದ್ದನು. ಈ ಒಪ್ಪಿಗೆ ಪತ್ರಕ್ಕೆ 'ಪ್ರಾಗ್‌ಮಾಟಿಕ್ ಸಾಂಕ್ಷನ್' (Pragmatic Sanction) ಎಂದು ಹೆಸರು. ಆದರೆ ಪ್ರಷ್ಯಾದೇಶದ ರಾಜನಾದ ಫ್ರೆಡರಿಕ್ ದಿ ಗ್ರೇಟ್ ಎಂಬುವನು ೧೭೪೦ ರಲ್ಲಿ ಆರನೇ ಚಾರ್ಲ್ಸ್‌ನು ಕಾಲವಾದ ಮೇಲೆ ಆಸ್ಟ್ರಿಯಾ ದೇಶಕ್ಕೆ ಸೇರಿದ ಸೈಲೀಷಿಯಾ ಎಂಬ ಪ್ರಾಂತ್ಯವನ್ನು ಕಸಿದುಕೊಳ್ಳಬೇಕೆಂಬ ಉದ್ದೇಶದಿಂದ ಅಲ್ಲಿಗೆ ತನ್ನ ಸೈನ್ಯವನ್ನು ಕಳುಹಿಸಿದನು. ಎರಡನೆ ಜಾರ್ಜ್ ತನ್ನ ದೇಶವಾದ ಹ್ಯಾನೋವರ್ ಪ್ರಷ್ಯದ ಪ್ರಾಬಲ್ಯದಿಂದ ಅಪಾಯಕ್ಕೊಳಗಾಗುವುದೆಂಬ ಭಯದಿಂದ ಇಂಗ್ಲೆಂಡ್ ಯುದ್ಧಕ್ಕೆ ಸೇರುವಂತೆ ಮಾಡಿದನು. ಫ್ರಾನ್ಸ್ ಇಂಗ್ಲೆಂಡಿಗೆ ವಿರುದ್ಧವಾಗಿ ನಿಂತಿತು. ಏಕೆಂದರೆ ಸ್ಪೇನಿಗೂ ಮತ್ತು ಫ್ರಾನ್ಸಿಗೂ ಒಂದು ಕೌಟುಂಬಿಕ ಕರಾರು (Family Compact) ಆಗಿತ್ತು. ಅದರ ಪ್ರಕಾರ ಸ್ಪೇನ್ ತಾನು ಕಳೆದುಕೊಂಡಿದ್ದ ಜಿಬ್ರಾಲ್ಟರ್ ಮತ್ತು ಮೈನಾರ್ಕ ಮೊದಲಾದುವುಗಳನ್ನು ಪುನಃ ಗೆಲ್ಲಲು ಫ್ರಾನ್ಸ್ ಸಹಾಯ ಮಾಡುವುದಾಗಿ ಒಪ್ಪಿತು. ಈ ಯುದ್ಧಕ್ಕೆ 'ಆಸ್ಟ್ರಿಯದ ಸಂತತಿಯ ಯುದ್ಧ' ವೆಂದು ಹೆಸರು.

ಇದೂ ಅಲ್ಲದೆ ಇಂಗ್ಲೆಂಡಿಗೂ ಮತ್ತು ಫ್ರಾನ್ಸಿಗೂ ವ್ಯಾಪಾರಕ್ಕಾಗಿ ಉತ್ತರ ಅಮೆರಿಕಾ ಮತ್ತು ಇಂಡಿಯಾದಲ್ಲಿ ಪೈಪೋಟಿ ಉಂಟಾಗಿತ್ತು.

ಯೂರೋಪಿನಲ್ಲಿ ಯುದ್ಧವು ಪ್ರಾರಂಭವಾದೊಡನೆಯೇ ಈ ಕಡೆಗಳಲ್ಲಿಯೂ ಹರಡಿತು. ಇಂಗ್ಲಿಷ್ ವಸಾಹತುಗಳು ಕೆನಡಾ ಮತ್ತು ಮಿಸಿಸಿಪ್ಪಿಗಳ ಮಧ್ಯೆ ಇದ್ದ ಫ್ರೆಂಚ್ ವಸಾಹತುಗಳು ಒಂದಕ್ಕೊಂದು ಸೇರದಂತೆ ಮಾಡಲು ಪ್ರಯತ್ನಿಸುತ್ತಿದ್ದುವು. ಫ್ರೆಂಚರು ಇಂಗ್ಲಿಷರನ್ನು ಅಲಿಘನಿ ಪರ್ವತ ಮತ್ತು ಸಮುದ್ರಗಳ ಮಧ್ಯೆ ಇರುವಂತೆ ಮಾಡಲು ಪ್ರಯತ್ನಿಸುತ್ತಿದ್ದರು.

ಇಂಗ್ಲೆಂಡ್ ಡೆಟಿಂಜನ್ ಎಂಬಲ್ಲಿ ಗೆದ್ದರೂ ೧೭೪೫ ರಲ್ಲಿ ಫಾಂಟಿನಾಯ್ (Fontenoy) ಎಂಬಲ್ಲಿ ಫ್ರಾನ್ಸಿನಿಂದ ಸೋಲಿಸಲ್ಪಟ್ಟಿತು. ಅಮೆರಿಕಾದಲ್ಲಿ ಇಂಗ್ಲಿಷರು ಫ್ರೆಂಚ್ ಕೋಟೆಯಾದ ಲೂಯಿಬರ್ಗ್ ಎಂಬುದನ್ನು ವಶಪಡಿಸಿಕೊಂಡರು. ಇಂಡಿಯಾದಲ್ಲಿ ಫ್ರೆಂಚರು ಮದರಾಸನ್ನು ತಮ್ಮ ವಶಮಾಡಿಕೊಂಡರು.

ಈ ಮಧ್ಯೆ ಮೂರನೇ ಜೇಮ್ಸನ ಮಗನಾದ ಚಾರ್ಲ್ಸ್ ಎಡ್ವರ್ಡ್ (Young pretender) ಇಂಗ್ಲೆಂಡಿನ ಸಿಂಹಾಸನವನ್ನು ಪಡೆಯಲು ಸ್ಕಾಟ್ಲೆಂಡಿಗೆ ಬಂದಿಳಿದನು. ಸುಮಾರು ೨೫೦೦ ಜನ ಬೆಟ್ಟಗುಡ್ಡ ಪ್ರದೇಶದ ಸೈನಿಕರೊಡನೆ ಪ್ರೆಸ್ಟನ್ ಪ್ಯಾನ್ಸ್ (Preston pans) ಎಂಬಲ್ಲಿ ಇಂಗ್ಲಿಷ್ ಸೈನ್ಯವೊಂದನ್ನು ಸೋಲಿಸಿ ಮುನ್ನುಗ್ಗಿದನು. ಫಾಲ್ ಕಿರ್ಕ್ ಎಂಬಲ್ಲಿ ಮತ್ತೊಂದು ಬಾರಿ ಇವನಿಗೆ ಜಯವಾಯಿತು. ಇವನ ಕಡೆ ಇಂಗ್ಲಿಷರು ಸೇರಲು ಹಿಂಜರಿದರು. ಅವರಿಗೆ ಹಾನೋವರ್ ದೇಶದ ರಾಜರಲ್ಲಿ ಪ್ರೀತಿಯಿಲ್ಲದಿದ್ದರೂ ಮತ್ತೊಮ್ಮೆ ಇಂಗ್ಲೆಂಡಿನಲ್ಲಿ ವಂಶೀಯ ಯುದ್ಧವು ಪ್ರಾರಂಭವಾಗುವುದು ಇಷ್ಟವಿರಲಿಲ್ಲ. ಅದೂ ಅಲ್ಲದೆ ರೋಮನ್ ಕ್ಯಾಥಲಿಕ್ ಮತಕ್ಕೆ ಸೇರಿದ ರಾಜನ ಆಳ್ವಿಕೆ ಅವರಿಗೆ ಬೇಕಾಗಿರಲಿಲ್ಲ. ಕಲೋಡನ್ ಎಂಬಲ್ಲಿ ಜರುಗಿದ ಯುದ್ಧದಲ್ಲಿ ಚಾರ್ಲ್ಸ್ ಎಡ್ವರ್ಡ್ ಮತ್ತು ಅವನ ಸೈನಿಕರು ಸಂಪೂರ್ಣವಾಗಿ ಸೋತರು. ಕಂಗೆಟ್ಟು ಚಾರ್ಲ್ಸ್ ಎಡ್ವರ್ಡ್ ತಲೆತಪ್ಪಿಸಿಕೊಂಡು ಓಡಿಹೋದನು.

೧೭೪೮ ರಲ್ಲಿ ಯೂರೋಪಿನಲ್ಲಿ ಯುದ್ಧವು ಏಲಾ ಷಪೇಲ್ (Aix-la-chapelle) ಎಂಬ ಕರಾರಿನಿಂದ ತಾತ್ಕಾಲಿಕವಾಗಿ ಮುಕ್ತಾಯವಾಯಿತು. ಈ ಕರಾರು, ಯುದ್ಧವು ಒದಗಿದ ಮುಖ್ಯ ಕಾರಣಗಳನ್ನು

ಬಗೆಹರಿಸಲಿಲ್ಲ. ಬ್ರಿಟನ್ ಮತ್ತು ಫ್ರಾನ್ಸ್ ಇವುಗಳ ಮಧ್ಯೆ ಎದ್ದಿದ್ದ ವ್ಯಾಪಾರ ಮತ್ತು ವಸಾಹತುಗಳ ಹೋರಾಟವಾಗಲಿ, ಆಸ್ಟ್ರಿಯಾ ಮತ್ತು ಪ್ರಷ್ಯಾಗಳ ಮಧ್ಯೆ ಬಂದಿದ್ದ ಸೈಲೇಷಿಯದ ಪ್ರಶ್ನೆಯಾಗಲಿ ಇತ್ಯರ್ಥ ವಾಗಲಿಲ್ಲ. ಫ್ರಾನ್ಸ್ ಮದರಾಸನ್ನು ಇಂಗ್ಲೆಂಡಿಗೂ, ಇಂಗ್ಲೆಂಡ್ ಲೂಯಿಬರ್ಗನ್ನು ಫ್ರಾನ್ಸಿಗೂ ಪರಸ್ಪರ ಹಿಂದಿರುಗಿಸಿದುವು.

**ಏಳು ವರ್ಷಗಳ ಯುದ್ಧ** (Seven years war): ಇಂಗ್ಲೆಂಡ್ ಮತ್ತು ಫ್ರಾನ್ಸ್, ಅಮೆರಿಕಾ ಮತ್ತು ಇಂಡಿಯಾ ದೇಶಗಳಲ್ಲಿ ವ್ಯಾಪಾರ ಕ್ಕಾಗಿ ಹೋರಾಟ ನಡೆಸುತ್ತಿದ್ದುವೆಂದು ಹಿಂದೆಯೇ ಹೇಳಿದೆ. ಇಂಗ್ಲೆಂಡಿನ ಹದಿಮೂರು ವಸಾಹತುಗಳು ಉತ್ತರ ಅಮೆರಿಕದ ಪೂರ್ವತೀರದಲ್ಲಿ ಸ್ಥಾಪಿತವಾಗಿದ್ದವು. ಅವುಗಳಲ್ಲಿ ಮಸಾಚುಸೆಟ್ಸ್, ನ್ಯೂಹ್ಯಾಂಪ್‌ಷೈರ್ ಕನೆಕ್ಟಿಕಟ್, ನ್ಯೂಯಾರ್ಕ್, ನ್ಯೂಜರ್ಸಿ, ಡಿಲವೇರ್, ಪೆನ್ಸಿಲ್ವೇನಿಯ, ಮೇರಿಲ್ಯಾಂಡ್, ಉತ್ತರ ಕರೋಲಿನ, ದಕ್ಷಿಣ ಕರೋಲಿನ- ಈ ಹನ್ನೆರಡು ಸ್ಟುವರ್ಟ್ ರಾಜರ ಕಾಲದಲ್ಲಿ ಸ್ಥಾಪಿತವಾಗಿದ್ದುವು. ಹದಿಮೂರನೆಯ ದಾದ ಜಾರ್ಜಿಯ ೧೭೩೩ ರಲ್ಲಿ ಸ್ಥಾಪಿತವಾಗಿತ್ತು. ಫ್ರೆಂಚರು ಸೇಂಟ್‌ಲಾರೆನ್ಸ್ ಮತ್ತು ಮಿಸಿಸಿಪ್ಪಿ ನದಿಗಳ ತೀರದಲ್ಲಿ ಕಟ್ಟಿಕೊಂಡಿದ್ದ ವಸಾಹತುಗಳನ್ನು ಕೆಲವು ಕೋಟೆಗಳ ಮೂಲಕ ರಕ್ಷಿಸಿಕೊಳ್ಳಲು ಉದ್ಯುಕ್ತರಾಗಿದ್ದರು. ನಯಾಗರ, ಕ್ರೌನ್‌ಪಾಯಿಂಟ್, ಫಾಂಟಿನಾಕ್, ಟಿಕಾಂಡರೋಗ, ಡುಕ್ವೆಸ್ನೆ-ಮೊದಲಾದುವು ಇವುಗಳಲ್ಲಿ ಮುಖ್ಯವಾ ದುವು. ಈ ಕೋಟೆಗಳ ಸಾಲಿನಿಂದ ಫ್ರೆಂಚರು, ಇಂಗ್ಲಿಷರು, ಅಲಿಘನಿ ಬೆಟ್ಟಗಳ ಪಶ್ಚಿಮಕ್ಕೆ ವಿಸ್ತರಿಸಲು ಸಾಧ್ಯವಾಗದಂತೆ ಮಾಡುವ ಕಾರ್ಯ ಕ್ರಮವನ್ನು ಕೈಗೊಂಡಿದ್ದರು. ಏಲಾಷಪೇಲ್ ಕರಾರು ಇಂಗ್ಲೆಂಡ್ ಮತ್ತು ಫ್ರಾನ್ಸಿಗೆ ಶಾಂತಿಯನ್ನು ತಂದಿದ್ದರೂ ಫ್ರೆಂಚರು ಮತ್ತು ಇಂಗ್ಲಿ ಷರು ಅಮೆರಿಕಾದಲ್ಲಿಯೂ ಮತ್ತು ಇಂಡಿಯಾದಲ್ಲಿಯೂ ಹೊಡೆದಾಡು ತ್ತಲೇ ಇದ್ದರು. ಕ್ಲೈವ್ ಮತ್ತು ಡೂಪ್ಲೆ ಭಾರತೀಯ ರಾಜಕೀಯ ರಂಗಕ್ಕೆ ಇಳಿದಿದ್ದರು.

ಅಮೆರಿಕಾದಲ್ಲಿ ಬ್ರಾಡಕ್ ಎಂಬ ಇಂಗ್ಲಿಷ್ ಸೈನ್ಯಾಧಿಪತಿಯು ಓಹಿಯೋ ನದಿ ಬಯಲಿನಲ್ಲಿ ಇಂಗ್ಲಿಷರ ಸ್ಥಾನವನ್ನು ಭದ್ರಪಡಿಸಲು

ಪ್ರಯತ್ನಿಸಿ ವಿಫಲನಾಗಿ ಪ್ರಾಣ ಕಳೆದುಕೊಂಡಿದ್ದನು. ಅವನ ಸೈನ್ಯವನ್ನು ಫ್ರೆಂಚರ ಕೈಯಿಂದ ರಕ್ಷಿಸಿದವನು ಜಾರ್ಜ್ ವಾಷಿಂಗ್‌ಟನ್ ಎಂಬುವನು.




ಬಾಸ್ಕೋವೆನ್ ಎಂಬ ಇಂಗ್ಲಿಂಷ್ ನೌಕಾಧಿಪತಿಯು ಫ್ರೆಂಚರ ಸೈನ್ಯವು ಅಮೆರಿಕಾಕ್ಕೆ ಬಂದಿಳಿಯದಂತೆ ಮಾಡಲು ಕಳುಹಿಸಲ್ಪಟ್ಟಿದ್ದನು.

ಯೂರೋಪಿನಲ್ಲಿ ಒಂದು 'ರಾಯಭಾರ ಕೌಶಲ ಕ್ರಾಂತಿ' (Diplomatic Revolution) ನಡೆಯಿತು. ಇದರ ಮುಖ್ಯ ಪಾತ್ರ ವಹಿಸಿದ್ದವನು ಆಸ್ಟ್ರಿಯದ ಮಂತ್ರಿಯಾದ ಕೌನಿಟ್ಸ್ (Kaunitz). ಅವನು ಮೇರಿಯ ಥೆರೆಸಳಿಗೆ ಇಂಗ್ಲಿಷರ ಸಹಾಯದಿಂದ ಸೈಲೀಷಿಯವು ತಮಗೆ ಪುನಃ ದೊರೆಯಲಾರದೆಂದು ನಂಬಿಕೆ ಹುಟ್ಟಿಸಿದನು. ಫ್ರಾನ್ಸಿಗೆ, ಪ್ರಷ್ಯವು ಹೋದ ಯುದ್ಧದಲ್ಲಿ ಎಲ್ಲಾ ಲಾಭವನ್ನು ತಾನೇ ಪಡೆಯಿತೆಂದು ದೃಢಪಡಿಸಿದನು. ಅದು ಅತಿ ಪ್ರಬಲವಾಗದಂತೆ ನೋಡಿಕೊಳ್ಳುವ ಆವಶ್ಯ

ಕತೆಯನ್ನು ಒತ್ತಿ ಹೇಳಿದನು. ಇದರ ಫಲವಾಗಿ ಆಸ್ಟ್ರಿಯ ಮತ್ತು ಫ್ರಾನ್ಸ್ ಒಂದಾದುವು. ಆಸ್ಟ್ರಿಯವು ಸೈಲೀಷಿಯವನ್ನು ಯುದ್ಧವಿಲ್ಲವೆ ಸುಲಭವಾಗಿ ಬಿಟ್ಟುಕೊಡುವುದಿಲ್ಲವೆಂದು ನಂಬಿದ್ದ ಫ್ರೆಡರಿಕ್ ದಿ ಗ್ರೇಟ್ ಇಂಗ್ಲೆಂಡಿನೊಡನೆ ಸ್ನೇಹ ಮಾಡಿಕೊಂಡನು. ಎರಡನೆ ಜಾರ್ಜನು ಜರ್ಮನಿಯಲ್ಲಿ ಯುದ್ಧವಾದರೆ ತನ್ನ ದೇಶವಾದ ಹ್ಯಾನೋವರನ್ನು ರಕ್ಷಿಸಲು ಫ್ರೆಡರಿಕ್ಕನ ಸಹಾಯವು ಆವಶ್ಯಕವೆಂದು ಅರಿತನು. ಹೀಗೆ ಅವರಿಬ್ಬರೂ ಒಂದಾದರು.

ಈ ವೇಳೆಗೆ ಇಂಗ್ಲೆಂಡಿನ ಮಂತ್ರಿಮಂಡಲದಲ್ಲಿ ಅನೇಕ ಬದಲಾವಣೆಗಳಾಗಿದ್ದುವು; ಹೆನ್ರಿ ಪೆಲ್‌ಹಾಮ್ ೧೭೫೪ರಲ್ಲಿ ಕಾಲವಾಗಿ ಅವನ ಅಣ್ಣನಾದ ಡ್ಯೂಕ್ ಆಫ್ ನ್ಯೂ ಕ್ಯಾಸಲ್ (೧೬೯೩–೧೭೬೮) ಮುಖ್ಯ ಮಂತ್ರಿ ಪದವಿಗೆ ಬಂದಿದ್ದನು. ಅವನು ಸುಮಾರು ೧೭೩೦ ರಿಂದ ಒಂದೇ ಸಮನಾಗಿ ಎಲ್ಲಾ ಮಂತ್ರಿಮಂಡಲದಲ್ಲಿಯೂ ಇದ್ದನು. ಅವನಿಗೆ ರಾಜಕೀಯವೆಂದರೆ ಮೀನಿಗೆ ನೀರಿನಂತೆ. ಆದರೆ ಅವನು ರಾಜತಂತ್ರಜ್ಞನಲ್ಲ (Statesman). ಏಳು ವರ್ಷಗಳ ಯುದ್ಧವು ೧೭೫೬ ರಲ್ಲಿ ಪ್ರಾರಂಭವಾದಾಗ ಇವನು ಅದನ್ನು ದಕ್ಷತೆಯಿಂದ ನಿರ್ವಹಿಸಲು ಅಶಕ್ತನಾಗಿದ್ದನು.

ಫ್ರೆಂಚರ ನೌಕೆಯು ಮೈನಾರ್ಕ ದ್ವೀಪದ ಮೇಲೆ ನುಗ್ಗಿತು. ಬಿಂಗ್ ಎಂಬ ನೌಕಾಧಿಪತಿಯನ್ನು ಒಂದು ಸಣ್ಣ ನೌಕಾಬಲದೊಡನೆ ಅಲ್ಲಿಗೆ ಯುದ್ಧ ಮಾಡಲು ಇಂಗ್ಲೆಂಡ್ ಕಳುಹಿಸಿತು. ಆದರೆ ಮೈನಾರ್ಕದ ಪತನವಾಯಿತು. ಇದರ ತಪ್ಪಿಗಾಗಿ ನೌಕಾಧಿಪತಿ ಬಿಂಗ್ ಮರಣದಂಡನೆಗೆ ಗುರಿಮಾಡಲ್ಪಟ್ಟನು. ನ್ಯೂಕ್ಯಾಸಲ್ ತನ್ನ ತಪ್ಪನ್ನು ಅವನ ಮೇಲೆ ಹೊರೆಸಲು ಹಿಂಜರಿಯಲಿಲ್ಲ. ಅಮೆರಿಕಾದಲ್ಲಿ ಇಂಗ್ಲಿಷರು ಆಸ್ವಿಗೋ ಕೋಟೆಯನ್ನು ಕಳೆದುಕೊಂಡರು. ಫ್ರೆಂಚರ ಸೈನ್ಯಾಧಿಪತಿ ಮಾಂಟ್‌ಕಾಮ್ ಎಂಬುವನು ತನ್ನ ಪ್ರತಿಭೆಯಿಂದ ಇಂಗ್ಲಿಷರ ಆಟ ಅಲ್ಲಿ ಸಾಗದಂತೆ ಮಾಡಿದ್ದನು. ಜರ್ಮನಿಯಲ್ಲಿ ಎರಡನೆ ಜಾರ್ಜನ ಮಗ ಡ್ಯೂಕ್ ಆಫ್ ಕಂಬರ್‌ಲಾಂಡ್ ಹೇಸ್ಟನ್‌ಬೆಕ್ ಕದನದಲ್ಲಿ ಸೋತು, ಅವಮಾನಕರವಾದ ಕ್ಲಾಸ್ಟರ್‌ಜವನ್ ಕರಾರಿನ ಪ್ರಕಾರ ಜರ್ಮನಿಯನ್ನು ಬಿಟ್ಟು ಹೊರ

ತಲು ಒಪ್ಪಿಕೊಳ್ಳಬೇಕಾಯಿತು. ಹೀಗೆ ಇಂಗ್ಲೆಂಡ್ ಯುದ್ಧದ ಮೊದಲಿನಲ್ಲಿ ಅನೇಕ ಕಡೆ ಸೋತಿತು. ಇಂಗ್ಲೆಂಡಿನ ಸ್ನೇಹಿತನಾದ ಫ್ರೆಡರಿಕ್ ಮಾತ್ರ ರಾಸ್‌ಬ್ಯಾಕ್ (Rassbach) ಎಂಬಲ್ಲಿ ಫ್ರಾನ್ಸಿನ ಮೇಲೆ ಜಯಗಳಿಸಿದ್ದನು. ಇಂಗ್ಲೆಂಡಿನಲ್ಲಿ ಈ ಅಪಜಯುಗಳಿಂದ ಜನಗಳಲ್ಲಿ ಗಾಬರಿಯಾಗಿ ಯುದ್ಧವನ್ನು ಯಶಸ್ವಿಯಾಗಿ ನಡೆಸಲು ವಿಲಿಯಂ ಪಿಟ್ ಸರ್ಕಾರದ ಹತೋಟಿಯನ್ನು ತನ್ನ ಕೈಗೆ ತೆಗೆದುಕೊಳ್ಳಬೇಕೆಂದು ಅವರು ಅಪೇಕ್ಷಿಸಿದರು. ೧೭೫೭ ರಲ್ಲಿ ವಿಲಿಯಂ ಪಿಟ್ ಅಧಿಕಾರಕ್ಕೆ ಬಂದನು.

ಪಿಟ್, ಈಟನ್ ಎಂಬಲ್ಲಿ ವಿದ್ಯಾಭ್ಯಾಸ ಮುಗಿಸಿ ೧೭೩೫ ರಲ್ಲಿ ಪಾರ್ಲಿಮೆಂಟಿನ ಸದಸ್ಯನಾದನು. ಅವನು 'ಹುಡುಗರು' ಎಂಬ ಸಣ್ಣ ಗುಂಪಿನ ನಾಯಕನಾಗಿ ವಾಲ್‌ಪೋಲನ ವಿರೋಧಿಯಾಗಿದ್ದನು. ಪೆಲ್‌ಹ್ಯಾಮ್ ಎಂಬುವನ ಮಂತ್ರಿತ್ವದಲ್ಲಿ ಆವನು ಸೈನ್ಯಗಳ ವೇತನಗಳನ್ನು ಕೊಡುವ ಅಧಿಕಾರಿಯಾಗಿದ್ದನು. (Paym aster of the Forces) ಕಾಮನ್ಸ್ ಸಭೆಯಲ್ಲಿ ಅವನ ವಾಕ್‌ಝುರಿಯ ಪ್ರವಾಹವು ತಡೆಯಿಲ್ಲದೆ ಹರಿಯುತ್ತಿತ್ತು. ಈ ಅಪ್ರಮಾಣಿಕ ಕಾಲದಲ್ಲಿ ಪ್ರಾಮಾಣಿಕತೆಯ ಪರಾಕಾಷ್ಟತೆಯನ್ನು ಹೊಂದಿದ್ದ ಪಿಟ್ ಇಂಗ್ಲೆಂಡನ್ನು ಈ ಕಷ್ಟಕಾಲದಲ್ಲಿ ರಕ್ಷಿಸಿದನು. ಇವನು ಮತ್ತು ಇವನ ಮಗ ಕಿರಿಯ ಪಿಟ್ ಇಂಗ್ಲೆಂಡಿನ ಚರಿತ್ರೆಯಲ್ಲಿ ಅತ್ಯಂತ ಪ್ರತಿಭಾಶಾಲಿಗಳಾದ ವ್ಯಕ್ತಿಗಳು.

ವಿಲಿಯಂ ಪಿಟ್ ಯುದ್ಧದ ವ್ಯವಸ್ಥೆಯನ್ನು ಮೊದಲು ಸರಿಪಡಿಸಿದನು. ಅವನ ಕೊಠಡಿಯಿಂದ ಹೊರಬಿದ್ದವರೆಲ್ಲಾ ಹೆಚ್ಚು ಧೈರ್ಯಶಾಲಿಗಳಾಗಿ ಬರುತ್ತಿದ್ದರೆಂದು ಒಬ್ಬ ಸೈನಿಕನು ಹೇಳಿದ ಮಾತನ್ನು ಇಲ್ಲಿ ನೆನಪಿಗೆ ತರಬಹುದು. ಯಾವ ಜಾಗಕ್ಕೆ ಯಾರು ಸರಿಯಾದವರೋ ಅವರನ್ನೇ ಪಿಟ್ ನೇಮಿಸುತ್ತಿದ್ದನು. ವುಲ್ಫ್ ಮತ್ತು ಹಾಕ್ ಅವನು ಆರಿಸಿದ ವ್ಯಕ್ತಿಗಳು. ಪಿಟ್ ಫ್ರಾನ್ಸನ್ನು ಯೂರೋಪಿನಲ್ಲೇ ಹೆಚ್ಚು ಹೆಚ್ಚು ಕಾರ್ಯಾಚರಣೆಯಲ್ಲಿ ನಿರತವಾಗುವಂತೆ ಮಾಡಿದನು. ಇದಕ್ಕಾಗಿ ಫ್ರೆಡರಿಕ್ಕನಿಗೆ ಹಣ ಸಹಾಯವನ್ನು ಒದಗಿಸಿದನು. "ನಾವು ಕೆನಡಾವನ್ನು ಎಲ್ಬ್ ನದಿ ತೀರದಲ್ಲಿ ಗೆಲ್ಲುವೆವು" ಎಂದು ಆತನು ಹೇಳುತ್ತಿದ್ದ ಮಾತಿನ ಅರ್ಥ ಇದೇ ಎಂದು ಹೇಳಬಹುದು. ಫ್ರೆಂಚರು ಅಮೆರಿಕ ಮತ್ತು

ಇಂಡಿಯಾದೇಶಗಳಿಗೆ ಸೈನ್ಯವನ್ನು ಕಳುಹಿಸದಂತೆ ಮಾಡಿದನು. ನೌಕಾಪಡೆಯನ್ನು ಬಲಪಡಿಸಿ ಫ್ರಾನ್ಸಿನ ರೇವು ಪಟ್ಟಣಗಳ ಮೇಲೆ ಕಣ್ಣಿಟ್ಟಿರುವಂತೆ ಮಾಡಿದನು.

ಇದರ ಫಲವಾಗಿ ೧೭೫೯ ರಿಂದ ಯುದ್ಧದ ವಾತಾವರಣವು ಬದಲಾಯಿಸಿತು. ಉತ್ತರ ಅಮೆರಿಕದಲ್ಲಿ ಫ್ರೆಂಚರ ಕೈ ಕೀಳಾಯಿತು. ಕ್ರಿ. ಶ. ೧೭೫೮ ರಲ್ಲೇ ಓಹಿಯೊ ನದಿ ತೀರದಲ್ಲಿದ್ದ ಡಕ್ವೆಸನಿಕೋಟೆಯು ಇಂಗ್ಲಿಷರ ಕೈವಶವಾಗಿ ಪಿಟ್ಟನ ಜ್ಞಾಪಕಾರ್ಥವಾಗಿ ಪಿಟ್ಸ್‌ಬರ್ಗ್ ಎಂಬುದಾಗಿ ಕರೆಯಲ್ಪಟ್ಟಿತ್ತು. ವುಲ್ಫ್, ಕ್ವಿಬೆಕ್ ಪಟ್ಟಣವನ್ನು ಸುಳಿವು ಕೊಡದೆ ಒಂದು ರಾತ್ರಿ ಮುತ್ತಿದನು. ಅದನ್ನು ಬಿಡಿಸಲು ಫ್ರೆಂಚರ ಸೈನ್ಯಾಧಿಪತಿ ಮಾಂಟ್‌ಕಾಮ್ ಹೆಣಗಾಡಿದನು. "ಹೈಟ್ಸ್ ಆಫ್ ಏಬ್ರಹಾಂ" ಎಂಬಲ್ಲಿ ನಡೆದ ಘೋರ ಕದನದಲ್ಲಿ ವೀರರಾದ ಈ ಇಬ್ಬರು ಸೈನ್ಯಾಧಿಪತಿಗಳೂ ಗಾಯಗೊಂಡು ಮಡಿದರು. ಕ್ವಿಬೆಕ್ ಪತನವು ಫ್ರೆಂಚರ ಪ್ರಾಬಲ್ಯವನ್ನು ಮುರಿಯಿತು. ಯೂರೋಪಿನಲ್ಲಿ ಕೂಡಾ ಫ್ರೆಂಚರು ಮಿಂಡೆ‌ನ್ ಎಂಬಲ್ಲಿ ಅಪಜಯಕ್ಕೊಳಗಾದರು.

ಪಿಟ್‌ನಂತೆಯೇ ಫ್ರಾನ್ಸಿನಲ್ಲಿ ಛಾಯಿಸಲ್ (Choiseul) ಎಂಬ ದಕ್ಷನಾದ ಯುದ್ಧಮಂತ್ರಿಯು ಇಂಗ್ಲೆಂಡಿನ ಮುತ್ತಿಗೆಯನ್ನೇ ಸಾಧಿಸಬೇಕೆಂಬ (Invasion of England) ಗುರಿಯಿಂದ ಫ್ರಾನ್ಸಿನ ರೇವುಪಟ್ಟಣಗಳಾದ ಟೂಲಾನ್ (Toulon) ಮತ್ತು ಬ್ರೆಸ್ಟ್ (Brest) ಗಳಲ್ಲಿ ಫ್ರೆಂಚ್ ನೌಕೆಗಳನ್ನು ಒಟ್ಟುಗೂಡಿಸಿದನು. ಆದರೆ ಬ್ರಿಟಿಷ್ ನೌಕಾಧಿಪತಿ ಬಾಸ್ಕೋವೆ‌ನ್ (Boscowen) ಟೂಲಾನ್ ಪಡೆಯನ್ನು ಹಿಂಬಾಲಿಸಿ, ಲಾಗೋಸ್ (Logos) ಎಂಬಲ್ಲಿ ಸೋಲಿಸಿ, ಕೆಲವು ಹಡಗುಗಳನ್ನು ಮುಳುಗಿಸಿದನು. ಬ್ರೆಸ್ಟ್ ಪಡೆಗೂ ಇದೇ ಗತಿಯಾಯಿತು. ಹಾಕ್ ಎಂಬ ನೌಕಾಧಿಪತಿಯು ಕ್ವಿಬರನ್ ಬೆ (Quiberon bay) ಕದನದಲ್ಲಿ ಸಂಪೂರ್ಣವಾಗಿ ಫ್ರೆಂಚರನ್ನು ಸೋಲಿಸಿದನು. ಇಂಡಿಯಾದಲ್ಲೂ ಇಂಗ್ಲಿಷರ ಕೈ ಮೇಲಾಗಿ ಫ್ರೆಂಚರಿಗೆ ಸೋಲಾಯಿತು. ಆದರೂ ಛಾಯಿಸಲ್ ಸ್ಪೇನಿನೊಡನೆ ಸಂಧಾನಮಾಡಿ ಅದನ್ನೂ ಯುದ್ಧದಲ್ಲಿ ಭಾಗವಹಿಸುವಂತೆ ಮಾಡಲು ಒಪ್ಪಂದವನ್ನು

ಮಾಡಿಕೊಂಡಿದ್ದುದು ಪಿಟ್ಟನಿಗೆ ಗೊತ್ತಾಯಿತು. ಅವನು ಸ್ಪೇನಿನಮೇಲೆ ಯುದ್ಧ ಘೋಷಿಸಬೇಕೆಂದು ಪಾರ್ಲಿಮೆಂಟಿನಲ್ಲಿ ವಾದಿಸಿದನು. ಆದರೆ ಆಗತಾನೆ ಪಟ್ಟಕ್ಕೆ ಬಂದಿದ್ದ ಮೂರನೇ ಜಾರ್ಜ್ ಇದಕ್ಕೆ ಒಪ್ಪಲಿಲ್ಲ. ಪಿಟ್ ೧೭೬೧ ರಲ್ಲಿ ತನ್ನ ಮಂತ್ರಿತ್ವಕ್ಕೆ ರಾಜಿನಾಮೆಕೊಟ್ಟನು. ಪಿಟ್ ಹೇಳಿದಂತೆ ಸ್ಪೇನ್ ಯುದ್ಧಕ್ಕಿಳಿಯಿತು. ಆದರೆ ಇಂಗ್ಲೆಂಡು ಸ್ಪೇನಿಗೆ ಸೇರಿದ ಹವಾನಾವನ್ನು ವಶಪಡಿಸಿಕೊಂಡಿತು. ಫ್ರೆಂಚರು ಶಾಂತಿಯ ಒಪ್ಪಂದಕ್ಕೆ ಸಿದ್ಧರಾದರು.

೧೭೬೩ ರಲ್ಲಿ ಪ್ಯಾರಿಸ್ ಕೌಲಿನಿಂದ (Treaty of Paris) ಏಳು ವರ್ಷಗಳ ಯುದ್ಧ ಮುಕ್ತಾಯವಾಯಿತು. ಫ್ರಾನ್ಸ್ ಇಂಗ್ಲೆಂಡಿಗೆ ಉತ್ತರ ಅಮೆರಿಕಾದಲ್ಲಿ ಕೆನಡ ಮತ್ತು ಕೇಪ್ ಬ್ರಿಟನ್ ದ್ವೀಪ ಇವುಗಳನ್ನು ಬಿಟ್ಟುಕೊಟ್ಟಿತು. ಯುದ್ಧದಲ್ಲಿ ಸ್ಪೇನಿಗೆ ಸಂಭವಿಸಿದ ನಷ್ಟ ಪರಿಹಾರಕ್ಕಾಗಿ ಫ್ರಾನ್ಸ್ ಲೂಸಿಯಾನಾವನ್ನು ಅದಕ್ಕೆ ಬಿಟ್ಟುಕೊಟ್ಟಿತು. ನ್ಯೂಫೌಂಡ್ ಲ್ಯಾಂಡಿನಲ್ಲಿ ಮಾತ್ರ ಮೀನು ಹಿಡಿಯುವ ಹಕ್ಕನ್ನು ಫ್ರಾನ್ಸ್ ಉಳಿಸಿಕೊಂಡಿತು. ಇಂಗ್ಲೆಂಡಿಗೆ ಫ್ರಾನ್ಸ್ ಸೆನಿಗಾಲ್, ಮತ್ತು ಮೈನಾರ್ಕ ಮೊದಲಾದುವುಗಳನ್ನು ಬಿಟ್ಟುಕೊಟ್ಟಿತು. ಪಾಂಡಿಚೆರಿ ಮತ್ತು ಗೋರೀ ಇವುಗಳನ್ನು ಉಳಿಸಿಕೊಂಡಿತು. ಸ್ಪೇನಿನಿಂದ ಇಂಗ್ಲೆಂಡ್ ಫ್ಲಾರಿಡಾವನ್ನು ವಶಪಡಿಸಿಕೊಂಡು ಕ್ಯೂಬಾ ಮತ್ತು ಫಿಲಿಫೈನ್ಸ್‌ಗಳನ್ನು ಬಿಟ್ಟುಕೊಟ್ಟಿತು. ೫೦ ವರ್ಷದ ಹಿಂದೆ ನಡೆದ ಯುಟ್ರೆಕ್ಟ್ ಕರಾರಿನಂತೆಯೆ ಇಂಗ್ಲೆಂಡ್ ಪ್ಯಾರಿಸ್ ಕೌಲಿನಿಂದ ತನ್ನ ಯಶಸ್ಸನ್ನು ಹೆಚ್ಚಿಸಿಕೊಂಡು ತನ್ನ ಸಾಮ್ರಾಜ್ಯವನ್ನು ವಿಸ್ತರಿಸಿತು.

**ಮೂರನೆಯ ಜಾರ್ಜ್, ೧೭೬೦-೧೮೨೦:** ಎರಡನೆ ಜಾರ್ಜನ ಮೊಮ್ಮಗ ಮೂರನೆ ಜಾರ್ಜ್ ಇಂಗ್ಲೆಂಡಿನಲ್ಲೆ ಹುಟ್ಟಿ ಬೆಳೆದವನು. ಒಂದನೆ ಜಾರ್ಜ್ ಮತ್ತು ಎರಡನೆ ಜಾರ್ಜ್ ಇವರಂತೆ ಅವನು ಇಂಗ್ಲೆಂಡಿನ ರಾಜಕೀಯದಲ್ಲಿ ತಟಸ್ಥನಾಗಿರಲಿಲ್ಲ. ಮೂರನೆ ಜಾರ್ಜನಿಗೆ ಮೊದಲಿನಿಂದಲೂ ಸರಿಯಾದ ರಾಜನಾಗಿ ಆಳಬೇಕೆಂಬ ಇಷ್ಟವಿತ್ತು. ಬೋಲಿಂಗ್ ಬ್ರೂಕ್ ಬರೆದ "ಪೇಟ್ರಿಯಟ್ ಕಿಂಗ್" ಮತ್ತು "ಜಾರ್ಜ್ ರಾಜ

ನಾಗಿರು " ಎಂಬ ಅವನ ತಾಯಿಯ ಉಪದೇಶ ಇವುಗಳು ಅವನನ್ನು ೧೭೬೦ ರಲ್ಲಿ ಇದ್ದ ರಾಜನ ಸ್ಥಾನವನ್ನು ಪುನಃ ಗಳಿಸುವಂತೆ ಮಾಡಿದುವು ವಾಲ್‌ಪೋಲ್ ಮತ್ತು ನ್ಯೂ ಕ್ಯಾಸಲ್ ಇವರುಗಳು ಹಾಕಿಕೊಟ್ಟ ಮೇಲ್ಪಂಕ್ತಿಯನ್ನು ಮೂರನೆ ಜಾರ್ಜ್ ಅನುಸರಿಸಿ ತನ್ನದೇ ಆದ ಒಂದು ಪಂಗಡವನ್ನು ಪಾರ್ಲಿಮೆಂಟಿನಲ್ಲಿ ಏರ್ಪಡಿಸಿಕೊಂಡನು.

ಮೂರನೆ ಜಾರ್ಜನ ಮೊದಲನೆಯ ಮಂತ್ರಿ ಅರ್ಲ್ ಆಫ್ ಬ್ಯೂಟ್ ರಾಜನ ಸಲಹೆಯಂತೆ ನಡೆಯುತ್ತಿದ್ದನು. ಆದರೆ ಪಿಟ್ಟನ ಸಾಮರ್ಥ್ಯತೆಯಾಗಲಿ, ಡ್ಯೂಕ್ ಆಫ್ ನೂಕ್ಯಾಸಲಿನಂತೆ ಪಾರ್ಲಿಮೆಂಟನ್ನು ಚತುರತೆಯಿಂದ ನಡೆಸಿಕೊಂಡು ಹೋಗುವ ಶಕ್ತಿಯಾಗಲೀ ಬ್ಯೂಟನಿಗಿರಲಿಲ್ಲ. ಅದೂ ಅಲ್ಲದೆ ಅವನು ಸ್ಕಾಟ್ ಜನಾಂಗಕ್ಕೆ ಸೇರಿದವನಾದ್ದರಿಂದ ಜನಗಳಿಗೆ ಅವನನ್ನು ಕಂಡರೆ ಆಗುತ್ತಿರಲಿಲ್ಲ. ಪ್ಯಾರಿಸ್ ಕೌಲಾದ ನಂತರ ಅವನು ತನ್ನ ಸ್ಥಾನಕ್ಕೆ ರಾಜೀನಾಮೆಯಿತ್ತನು. ಮೂರನೇ ಜಾರ್ಜ್ ಗ್ರೆನ್ವಿಲ್ ಎಂಬುವನನ್ನು ಮಂತ್ರಿಯಾಗಿ ನೇಮಿಸಿಕೊಂಡನು (೧೭೬೩–೧೭೬೫). ಇವನ ಎರಡು ವರ್ಷದ ಮಂತ್ರಿತ್ವದಲ್ಲಿ ಎರಡು ಜಗಳಗಳು ಹುಟ್ಟಿದವು: ಮೊದಲನೆಯದು ಜಾನ್ ವಿಲ್ಕ್ಸ್ ಎಂಬುವನೊಡನೆ, ಎರಡನೆಯದು ಅಮೆರಿಕಾದೊಡನೆ. ವಿಲ್ಕ್ಸ್ " ನಾರ್ತ್ ಬ್ರಿಟನ್ " ಎಂಬ ಪತ್ರಿಕೆಯಲ್ಲಿ ರಾಜನು ಪಾರ್ಲಿಮೆಂಟಿನ ಮುಂದೆ ಮಾಡಿದ ಭಾಷಣವನ್ನು ಕಟುವಾಗಿ ಟೀಕಿಸಿದ್ದನು. ಸರ್ಕಾರ ಮಾನನಷ್ಟ ಲೇಖನದ (Libel) ಪ್ರಕಟಣೆಯನ್ನು ಮಾಡಿದನೆಂದು ಅವನನ್ನು ದಸ್ತಗಿರಿ ಮಾಡಿತು. ಆದರೆ ಜಾನ್ ವಿಲ್ಕ್ಸ್ ಪಾರ್ಲಿಮೆಂಟಿನ ಸದಸ್ಯನಾಗಿದ್ದುದರಿಂದ ಅವನನ್ನು ಈ ಕಾರಣಕ್ಕಾಗಿ (on the charge of Libel) ದಸ್ತಗಿರಿ ಮಾಡಿದುದು ಸರಿಯಲ್ಲವೆಂದು ಮುಖ್ಯ ನ್ಯಾಯಾಧೀಶನ ತೀರ್ಪಾಯಿತು. ಅಮೆರಿಕದ ವಸಾಹತುಗಳ ರಕ್ಷಣೆಗಾಗಿ ಏಳು ವರ್ಷಗಳ ಯುದ್ಧದಲ್ಲಿ ಇಂಗ್ಲೆಂಡಿಗೆ ಹೆಚ್ಚು ಹಣ ಖರ್ಚಾಗಿತ್ತು. ಅದಕ್ಕಾಗಿ ಗ್ರೆನ್ವಿಲ್ ಕಾಗದ ಪತ್ರಗಳ ಮೇಲೆ (ತಲೆ ಚೀಟಿ) ತೆರಿಗೆಯೊಂದನ್ನು ಹಾಕುವ ಕಾನೂನನ್ನು (Stamp Act) ಜಾರಿಗೆ ತಂದನು.

೧೭೬೫–೬೬ ರಲ್ಲಿ ರಾಕಿಂಗ್‌ಹ್ಯಾಮ್ ಮುಖ್ಯಮಂತ್ರಿಯಾದನು. ಅವನು ಅಮೆರಿಕದ ವಸಾಹತುಗಳು ಸ್ಟಾಂಪ್ ತೆರಿಗೆಯ ಕಾನೂನನ್ನು ಪ್ರತಿಭಟಿಸಿದುದರಿಂದ ಅದನ್ನು ರದ್ದು ಮಾಡಿದನು.

೧೭೬೬–೬೮ ಈ ಎರಡು ವರ್ಷಗಳ ಕಾಲ ಪಿಟ್ ಮುಖ್ಯ ಮಂತ್ರಿಯಾಗಿದ್ದನು. ಆದರೆ ಈ ವೇಳೆಗೆ ಅವನ ಆರೋಗ್ಯವು ಗೌಟ್ (Gout) ಎಂಬ ವ್ಯಾಧಿಯಿಂದ ಕೆಟ್ಟುಹೋಗಿತ್ತು. ಅದೂ ಅಲ್ಲದೆ ಕಾಮನ್ಸ್ ಸಭೆಯಲ್ಲೇ ಇದ್ದು ಹೆಚ್ಚು ಯಶಸ್ಸುಗಳಿಸಿದ್ದ ಪಿಟ್ (Great Commoner) ಅರ್ಲ್ ಅಫ್ ಚಾತಮ್ (Earl of Chatham) ಎಂಬ ಬಿರುದನ್ನು ಪಡೆದಿದ್ದುದರಿಂದ ಜನಗಳ ವಿಶ್ವಾಸವು ಅವನಲ್ಲಿ ಕಮ್ಮಿಯಾಯಿತು.

೧೭೬೮ ರಿಂದ ೧೭೭೦ ರ ವರೆಗೆ ಡ್ಯೂಕ್‌ಆಫ್‌ಗ್ರಾಫ್ಟನ್ ಮುಖ್ಯಮಂತ್ರಿಯಾಗಿದ್ದನು. ಅವನ ಕಾಲದಲ್ಲಿ ಪುನಃ ವಿಲ್ಕ್ಸ್‌ನ ವಿಚಾರದಲ್ಲಿ ಸರ್ಕಾರವು ತೊಂದರೆಗೀಡಾಯಿತು. ಅವನನ್ನು ಪಾರ್ಲಿಮೆಂಟಿನ ಸದಸ್ಯನನ್ನಾಗಿ ಮಿಡಲ್ ಸೆಕ್ಸ್ ಪ್ರಾಂತ್ಯವು ಚುನಾಯಿಸಿತು. ಆದರೆ ಅವನು ದೇಶಭ್ರಷ್ಟನಾಗಿ ಓಡಿಹೋಗಿದ್ದುದರಿಂದ ಅವನು ಪಾರ್ಲಿಮೆಂಟಿನಲ್ಲಿ ಕುಳಿತುಕೊಳ್ಳಲು ಅನರ್ಹನೆಂದು ಸರ್ಕಾರ ಪರಿಗಣಿಸಿತು. ಆದರೆ ಅವನನ್ನು ಪುನಃ ಪುನಃ ಮಿಡಲ್ ಸೆಕ್ಸ್ ಚುನಾಯಿಸಿತು. ವಿಲ್ಕ್ಸ್‌ನ ಪ್ರತಿಕಕ್ಷಿಗೆ ೨೯೬ ಓಟು ಮತ್ತು ವಿಲ್ಕ್ಸ್‌ನಿಗೆ ೧೧೪೩ ಓಟುಗಳು ಬಂದುವು. ಆದಾಗ್ಯೂ ಅವನಿಗೆ ಪಾರ್ಲಿಮೆಂಟಿನಲ್ಲಿ ಸ್ಥಾನ ದೊರೆಯದಂತೆ ಮಾಡಿದ್ದುದು “ಜೂನಿಯಸ್‌ನ ಕಾಗದಗಳು ತೋರಿಸುವಂತೆ” ದೇಶದಲ್ಲಿ ತುಂಬಾ ಅಸಮಾಧಾನವನ್ನು ತಂದಿತು.

ಕಟ್ಟಕಡೆಗೆ ಮೂರನೆ ಜಾರ್ಜನಿಗೆ ಅನುಕೂಲನಾದ ಲಾರ್ಡ್ ನಾರ್ತ್ ಎಂಬ ಮಂತ್ರಿಯೊಬ್ಬನು ಸಿಕ್ಕಿದನು. ಅವನು ೧೭೭೦ ರಿಂದ ೧೭೮೨ ರ ವರೆಗೆ ಸರ್ಕಾರದ ಮುಖ್ಯ ಮಂತ್ರಿಯಾಗಿದ್ದರೂ, ಮೂರನೇ ಜಾರ್ಜನೇ ಈ ಕಾಲದಲ್ಲಿ ರಾಜ್ಯದ ಅಧಿಕಾರ ಸೂತ್ರವನ್ನೆಲ್ಲಾ ತನ್ನ ಕೈನಲ್ಲೇ ಇಟ್ಟುಕೊಂಡಿದ್ದನು. ಲಾರ್ಡ್ ನಾರ್ತ್ ಟೋರಿ ಪಕ್ಷಕ್ಕೆ ಸೇರಿದವನಾಗಿದ್ದನು. ಸುಮಾರು ಅರ್ಧ ಶತಮಾನದ ಆಳ್ವಿಕೆಯ ನಂತರ ವಿಗ್

ಪಕ್ಷವು ಒಳಜಗಳದಿಂದಲೂ ಮತ್ತು ಲಂಚ ಮೊದಲಾದ ದುಷ್ಟಪದ್ಧತಿಗಳಿಂದಲೂ ಜನಪ್ರಿಯತೆಯನ್ನು ಕಳೆದುಕೊಂಡಿತ್ತು. ಟೋರಿ ಪಕ್ಷವು ಇದರಿಂದ ಅಧಿಕಾರಕ್ಕೆ ಬರಲು ಅವಕಾಶವಾದುದಲ್ಲದೆ ಮೂರನೆ ಜಾರ್ಜ್ ಬಯಸುತ್ತಿದ್ದ ಕೋರಿಕೆಯೂ ನೆರವೇರಿತು.

**ಅಮೆರಿಕದ ಸ್ವಾತಂತ್ರ್ಯಕ್ಕಾಗಿ ಯುದ್ಧ, ೧೭೭೫—೧೭೭೫**

ಅಮೆರಿಕದಲ್ಲಿದ್ದ ಇಂಗ್ಲಿಷ್ ವಸಾಹತುಗಳನ್ನು ಫ್ರೆಂಚರ ಭಯದಿಂದ ರಕ್ಷಿಸಲು ಇಂಗ್ಲೆಂಡ್ ಏಳು ವರ್ಷಗಳ ಯುದ್ಧಮಾಡಿತಷ್ಟೆ. ಈ ವಸಾಹತುಗಳು ತಾವೆ ಚುನಾಯಿಸಿದ ಪ್ರಜೆಗಳಿಂದ ಕೂಡಿದ ಸಭೆಯನ್ನು ಹೊಂದಿದ್ದರೂ ಮಾತೃದೇಶದಿಂದ ನ್ಯಾಯಾಧಿಪತಿಗಳನ್ನೂ ಮತ್ತು ಗೌರ್ನರನ್ನೂ (Governor) ನೇಮಕ ಮಾಡಿಕೊಳ್ಳಬೇಕಾಗಿತ್ತು. ಇಂಗ್ಲಿಷ್ ಪಾರ್ಲಿಮೆಂಟಿನಲ್ಲಿ ರಚಿಸಲ್ಪಟ್ಟ ಕಾನೂನುಗಳು ವಸಾಹತುಗಳಿಗೆ ಅನ್ವಯಿಸಬೇಕೆಂಬ ನಿಯಮವಿದ್ದರೂ ಆಚರಣೆಯಲ್ಲಿ ಸಾಧಾರಣವಾಗಿ ಅವು ಸ್ವಾತಂತ್ರ್ಯದಿಂದ ಕೂಡಿದ್ದವೆಂದು ಹೇಳಬಹುದು. ಆದರೆ ವಸಾಹತುಗಳು ಮಾತೃದೇಶದ ಐಶ್ವರ್ಯ ಮತ್ತು ವ್ಯಾಪಾರಗಳನ್ನು ಹೆಚ್ಚಿಸುವುದಕ್ಕಾಗಿಯೇ ಸ್ಥಾಪಿಸಲ್ಪಟ್ಟದ್ದವೆಂಬ ಭಾವನೆ ಜನಗಳಲ್ಲಿ ಆಗ ಬಲವಾಗಿ ಬೇರೂರಿತ್ತು. ಇಂಗ್ಲೆಂಡಿನಲ್ಲಿ ತಯಾರಾದ ಸಿದ್ಧವಸ್ತುಗಳು ವಸಾಹತುಗಳಿಗೆ ಹೋಗುತ್ತಿದ್ದುವು. ಕಚ್ಚಾ ಪದಾರ್ಥಗಳನ್ನು ವಸಾಹತುಗಳು ರಫ್ತು ಮಾಡಬೇಕಾಗಿತ್ತು. ವಸಾಹತುಗಳ ಆಮದು ಮತ್ತು ರಫ್ತುಗಳು ಇತರ ದೇಶಗಳೊಡನೆ ಇಂಗ್ಲೆಂಡಿನ ಮೂಲಕ ನಡೆಯಬೇಕಾಗಿತ್ತು. ಈ ಅಡ್ಡಿ ಆತಂಕಗಳಿಂದ ವಸಾಹತುಗಳ ವ್ಯಾಪಾರ ತೀವ್ರವಾದ ನಿರ್ಬಂಧಗಳಿಗೆ ಒಳಗಾಗಿತ್ತು. ಇದರ ಫಲವಾಗಿ ವಸಾಹತುಗಳು ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದುವು. ನ್ಯೂ ಇಂಗ್ಲೆಂಡ್ ತಾನೇ ಟೋಪಿಗಳನ್ನು ಮತ್ತು ಕುದುರೆ ಲಾಳಗಳನ್ನು (Hats and horse shoes) ತಯಾರಿಸಬೇಕೆಂದು ಉದ್ದೇಶಿಸಿ ಮೇಲೆ ಹೇಳಿದ ವ್ಯಾಪಾರ ಪದ್ಧತಿಯನ್ನು (Mercantile System) ತೊಡೆದು ಹಾಕಲು ಮುನ್ನುಗ್ಗಿತು.

ಈ ವಸಾಹತುಗಳ ರಕ್ಷಣೆಗೆ ಇಂಗ್ಲೆಂಡ್ ಅಪಾರವಾದ ಹಣವನ್ನು ಒದಗಿಸಿತ್ತು. ಅದರ ರಾಷ್ಟ್ರೀಯ ಸಾಲ ಒಂದಕ್ಕೆರಡರಷ್ಟು ಆಯಿತು.

ಇದಲ್ಲದೆ ವಸಾಹತುಗಳ ರಕ್ಷಣೆಗಾಗಿ ಕಳುಹಿಸಲ್ಪಟ್ಟಿದ್ದ ಹತ್ತು ಸಾವಿರ ಸೈನಿಕರ ಖರ್ಚಿಗಾಗಿ ಬೇಕಾದ ಹಣದ ಅರ್ಧವನ್ನು ವಸಾಹತುಗಳಿಂದ ವಸೂಲ್ಮಾಡುವ ಉದ್ದೇಶದಿಂದ ಗ್ರೆನ್‌ವಿಲ್ ಮಂತ್ರಿಮಂಡವು (೧೭೬೩–೬೫) ಸ್ಟಾಂಪ್ ಕಾನೂನನ್ನು (Stamp Act) ಜಾರಿಗೆ ತಂದಿತು. ವಸಾಹತುಗಳಲ್ಲಿ ಇದರಿಂದ ಅತೃಪ್ತಿಯಾಯಿತು. ಮಾತೃ ದೇಶವು ವಸಾಹತುಗಳಿಂದ ಹಣವನ್ನು ತೆಗೆದುಕೊಳ್ಳುವುದು ಅಸಹಜ ವೇನೂ ಅಲ್ಲವೆಂದು ಅವರಿಗೆ ಗೊತ್ತಿತ್ತು. ಆದರೆ ತೆರಿಗೆ ಹಾಕುವಾಗ ತಮ್ಮ ಅಭಿಪ್ರಾಯ ಕೇಳಲಿಲ್ಲವೆಂಬ ಆಗ್ರಹ ಅವರಲ್ಲಿ ಹುಟ್ಟಿತು (No taxation without Representation). ತೀವ್ರ ಪ್ರತಿಭಟನೆಯ ಫಲವಾಗಿ ರಾಕಿಂಗ್‌ಹ್ಯಾಮ್ ಮಂತ್ರಿಮಂಡಲವು ಸ್ಟಾಂಪ್ ಕಾನೂನನ್ನು ೧೭೬೬ ರಲ್ಲಿ ರದ್ದುಮಾಡಬೇಕಾಯಿತು. ೧೭೬೬ ರಲ್ಲಿ ಚಾಥಮ್ ಮಂತ್ರಿಮಂಡಲದ ಆರ್ಥಿಕ ಮಂತ್ರಿ ಚಾರ್ಲ್ಸ್ ಟೌನ್ ಷೆಂಡ್ ಗಾಜು (Glass), ಟೀ ಮತ್ತು ಕಾಗದಗಳ ಮೇಲೆ ಮತ್ತಿನ್ನಷ್ಟು ತೆರಿಗೆ (Extra duties) ಯನ್ನು ಹಾಕಿದನು. ಇದು ಅಮೆರಿಕನ್ನರನ್ನು ಪುನಃ ಕೆರಳಿಸಿತು. ತೆರಿಗೆಯನ್ನು ಎತ್ತುವ ಅಧಿಕಾರಿಗಳ ರಕ್ಷಣೆಗಾಗಿ ಸೈನ್ಯದ ಸಹಾಯ ಒದಗಿಸಬೇಕಾಯಿತು. ಬೋಸ್ಟನ್ ಪಟ್ಟಣದಲ್ಲಿ ವಿಪರೀತ ಗಲಭೆಯಾಯಿತು. ೩೫೦ ಪೌಂಡು ತೆರಿಗೆಯನ್ನು ಎತ್ತಲು ೧೭೦೦೦೦ ಪೌಂಡು ಖರ್ಚಾಯಿತು.! ಇದರಿಂದ ಟೀ ತೆರಿಗೆಯೊಂದು ಬಿಟ್ಟು ಉಳಿದ ತೆರಿಗೆಯನ್ನು ರದ್ದುಮಾಡಲಾಯಿತು. ಒಂದು ಪೌಂಡು ಟೀಮೇಲೆ ಮೂರು ಪೆನ್ನಿ ತೆರಿಗೆ ಕೊಡಬೇಕೆಂಬ ಕಾನೂನನ್ನು ಇಂಗ್ಲೆಂಡ್ ತನಗೆ ತೆರಿಗೆಯನ್ನು ವಿಧಿಸುವ ಹಕ್ಕು ಇದೆಯೆಂದು ತೋರಿಸಲು ಉಳಿಸಿಕೊಂಡಿತು. ಆದರೆ ಅಮೆರಿಕನ್ನರು ಈ ತತ್ವಕ್ಕೆ ತೀವ್ರ ವಿರೋಧವನ್ನು ವ್ಯಕ್ತಪಡಿಸಿ, ಬೋಸ್ಟನ್ ರೇವುಪಟ್ಟಣದಲ್ಲಿದ್ದ ಟೀಯನ್ನೆಲ್ಲಾ Boston Tea party) ಸಮುದ್ರಕ್ಕೆ ಬಿಸಾಡಿದರು. ಇಂಗ್ಲೆಂಡ್ ಇದಕ್ಕೆ ಪ್ರತಿಕ್ರಿಯೆಯಾಗಿ ಬೋಸ್ಟನ್ ರೇವುಪಟ್ಟಣವನ್ನು ಮುಚ್ಚಿ, ಮಸಾಚು ಸೆಟ್ಸ್ ಸಭೆಗೆ ಕೊಟ್ಟಿದ್ದ ಸ್ವಾತಂತ್ರ್ಯವನ್ನು ರದ್ದುಮಾಡಿತು. ಇದರಿಂದ ಅಲ್ಲಿಯವರೆಗೂ ಒಗ್ಗಟ್ಟಿಲ್ಲದೆ ಒಂದರೊಡನೊಂದು ಜಗಳದಲ್ಲಿ ನಿರತವಾಗಿದ್ದ

ಹದಿಮೂರು ವಸಾಹತುಗಳ ಪೈಕಿ ಹನ್ನೆರಡು ಫಿಲಡೆಲ್ಫಿಯದಲ್ಲಿ ೧೭೭೪ ರಲ್ಲಿ ಸಭೆ ಸೇರಿ (Congress of Philadelphia) ತಮ್ಮ ಹಕ್ಕುಗಳನ್ನು ಘೋಷಿಸಿದವು. ಇಂಗ್ಲೆಂಡಿನಲ್ಲಿ ರಾಜತಂತ್ರಜ್ಞರು ಭಿನ್ನಾಭಿಪ್ರಾಯಗಳನ್ನು ವ್ಯಕ್ತಪಡಿಸಿದರು. ಪಿಟ್, ಸ್ಟಾಂಪ್ ಕಾನೂನನ್ನು ಖಂಡಿಸಿ ಅಮೆರಿಕನ್ನರ ಕಡೆ ವಾದಿಸಿದನು. ಬರ್ಕ್, ಆ ಕಾನೂನು ಕ್ರಮಬದ್ಧವೆಂದೂ, ಆದರೆ ಅವರನ್ನು ಕಾನೂನುಗಳ ಬದಲು ಪ್ರೀತಿಯಿಂದ ಒಲಿಸಿಕೊಳ್ಳಬೇಕೆಂದೂ ವಾದಿಸಿದನು. ಈ ಮಧ್ಯೆ ಅಮೆರಿಕದ ಸ್ವಾತಂತ್ರ್ಯದ ಯುದ್ಧವು ಪ್ರಾರಂಭವಾಯಿತು. ಲೆಕ್ಸಿಂಗ್‌ಟನ್ (Lexington, ೧೭೭೫) ಮತ್ತು ಬನ್ ಕರ್‌ಹಿಲ್ (Bunker Hill, ೧೭೭೫) ಎಂಬ ಸ್ಥಳಗಳಲ್ಲಿ ಕದನಗಳು ನಡೆದುವು. ಯುದ್ಧವನ್ನು ಯಶಸ್ವಿಯಾಗಿ ನಡೆಸಲು ಅಮೆರಿಕನ್ನರು ಜಾರ್ಜ್ ವಾಷಿಂಗ್‌ಟನ್ ಎಂಬುವನನ್ನು ತಮ್ಮ ಸೈನ್ಯಾಧಿಪತಿಯನ್ನಾಗಿ ನಿಯಮಿಸಿಕೊಂಡರು. ವಾಷಿಂಗ್‌ಟನ್ ವರ್ಜಿನಿಯದಲ್ಲಿ ಹೊಗೆಸೊಪ್ಪಿನ ತೋಟಗಳನ್ನು ಹೊಂದಿದ್ದನು (Tobacco planter). ಅವನ ಪೂರ್ವಿಕರು ಆಲಿವರ್ ಕ್ರಾಮ್‌ವೆಲ್ಲನ ಕಾಲದಲ್ಲಿ ವರ್ಜೀನೀಯದಲ್ಲಿ ನೆಲೆಸಿದ್ದರು. ಏಳು ವರ್ಷಗಳ ಯುದ್ಧವು ನಡೆಯುತ್ತಿದ್ದಾಗ ವಾಷಿಂಗ್‌ಟನ್ ಇತರ ಎಲ್ಲಾ ಅಮೆರಿಕನ್ನರಿಗಿಂತ ಹೆಚ್ಚು ಶೌರ್ಯದಿಂದ ಕಾದಿದ್ದನು. ಆದುದರಿಂದ ಅವನು ಅಮೆರಿಕನ್ನರ ಸ್ವಾತಂತ್ರ್ಯದ ಯುದ್ಧದ ನಾಯಕನಾದುದಲ್ಲದೆ ಯುದ್ಧ ಮುಗಿದನಂತರ ಅಮೆರಿಕದ ಅಧ್ಯಕ್ಷನೂ ಆದನು.

ಯುದ್ಧವು ಎರಡನೆ ವರ್ಷದಲ್ಲಿ ಹೆಜ್ಜೆ ಇಡುತ್ತಿದ್ದಾಗ (೧೭೭೬) ಅಮೆರಿಕದ ಕಾಂಗ್ರೆಸ್ ತನ್ನ ಸ್ವಾತಂತ್ರ್ಯವನ್ನು ಘೋಷಿಸಿತು. ಈ ಘೋಷಣೆ (Declaration) ಪ್ರಜಾಪ್ರಭುತ್ವದ ತಿರುಳಿನಿಂದ ಕೂಡಿದೆ. ಘೋಷಣೆಯ ಪತ್ರವನ್ನು ಜಫರ್‌ಸನ್ (Jefferson) ಎಂಬುವನು ತಯಾರಿಸಿದನು.

೧೭೭೬ ರಲ್ಲಿ ಅಮೆರಿಕನ್ನರ ಸ್ಥಿತಿ ಚಿಂತಾಜನಕವಾಗಿತ್ತು. ಹೌ ಎಂಬ ಇಂಗ್ಲಿಷ್ ಸೈನ್ಯಾಧಿಪತಿಯ ಅಚಾತುರ್ಯದಿಂದ ವಾಷಿಂಗ್‌ಟನ್ನನ ಸೈನ್ಯವು ನಾಶವಾಗದೆ ಉಳಿಯಿತು. ವಾಷಿಂಗ್‌ಟನ್ ಸೈನಿಕ ಶಿಕ್ಷಣದಲ್ಲಿ

ಹೆಚ್ಚು ನುರಿತವನಲ್ಲ. ಅವನ ಸೈನ್ಯವಂತೂ ಅವನನ್ನು ಬಿಟ್ಟು ಆಗಾಗ ಓಡಿಹೋಗುತ್ತಲೇ ಇತ್ತು. ಅವನಲ್ಲಿದ್ದ ಸಾಮರ್ಥ್ಯವೆಂದರೆ ಅಪಜಯ ಗಳ ಮಧ್ಯೆ ಕುಗ್ಗದಿದ್ದ ದೃಢಮನಸ್ಸು.

೧೭೭೭ ರಲ್ಲಿ ಹೌ ಮತ್ತು ಬರ್‍ಗಾಯಿನ್ ಒಂದು ಹಂಚಿಕೆ ಮಾಡಿದರು. ಬರ್‍ಗಾಯಿನ್ ಹಡ್‍ಸನ್ ನದಿಯ ಕಡೆಗೆ ಚಾಂಪಿಯನ್ ಸರೋವರ ದಿಂದ ನುಗ್ಗುವಂತೆಯೂ, ತನ್ನ ಸೈನ್ಯದೊಡನೆ ನ್ಯೂಯಾರ್ಕಿನಿಂದ ಹೊರಟು ಹೌ ಅವನ ಸೈನ್ಯವನ್ನು ಸೇರುವಂತೆಯೂ ಏರ್ಪಾಡಾಯಿತು. ಆದರೆ ಬರ್‍ಗಾಯಿನ್ ತನ್ನ ಸೈನ್ಯದೊಡನೆ ಸಾರಟೊಗ ಎಂಬಲ್ಲಿ ಸೋತು ಶರಣಾಗತನಾಗಬೇಕಾಯಿತು. ಈ ವಿಜಯವು ಅಮೆರಿಕನ್ನರಿಗೆ ಫ್ರಾನ್ಸಿನ ಸಹಾಯವನ್ನು ದೊರಕಿಸಿಕೊಟ್ಟಿತು. ಇಂಗ್ಲೆಂಡಿನ ಶತ್ರುವಾದ ಫ್ರಾನ್ಸ್ ಏಳು ವರ್ಷಗಳ ಯುದ್ಧದಲ್ಲಿ ತನಗಾದ ಅಪಜಯವನ್ನು ಮರೆತಿರಲಿಲ್ಲ. ಫ್ರಾನ್ಸಿನ ಜೊತೆಯಲ್ಲಿ ಸ್ಪೇನ್ ಇಂಗ್ಲೆಂಡಿನ ಮೇಲೆ ಯುದ್ಧಕ್ಕೆ ಹೊರ ಟಿತು. ಅದು ತಾನು ಕಳೆದುಕೊಂಡಿದ್ದ ಜಿಬ್ರಾಲ್ಟರನ್ನು ಪುನಃ ಪಡೆಯ ಬೇಕೆಂಬ ಆಸೆಯಿಂದ ಕೂಡಿತ್ತು. ಇಷ್ಟೇ ಅಲ್ಲದೆ ರಷ್ಯಾ, ಪ್ರಷ್ಯಾ, ಡೆನ್‍ಮಾರ್ಕ್ ಮತ್ತು ಸ್ವೀಡನ್ ಇಂಗ್ಲೆಂಡಿನ ಶತ್ರುಗಳಿಗೆ ಬೇಕಾದ ಸಾಮಾನುಗಳನ್ನು ಸರಬರಾಜು ಮಾಡಲು ಒಂದು ಸಂಘವನ್ನು ಮಾಡಿಕೊಂಡುವು (League of Armed Neutrality). ಹೀಗೆ ಇಂಗ್ಲೆಂಡ್ ಅಮೇರಿಕಾದೊಂದಿಗೆ ಒಂದು ಕಡೆ, ಮತ್ತೊಂದುಕಡೆ. ಯೂರೋಪಿನೊಡನೆ ಯುದ್ಧಮಾಡಬೇಕಾಯಿತು. ಯುದ್ಧದಲ್ಲಿ ಪರಿಶ್ರಮ ಹೊಂದಿದ್ದ ಪಿಟ್ ಪುನಃ ಮಂತ್ರಿತ್ವಕ್ಕೆ ಬರಬೇಕೆಂಬ ಒತ್ತಾಯವು ಹೆಚ್ಚತೊಡಗಿತು. ಆದರೆ ಈ ವೇಳೆಗೆ (೧೭೭೮) ಪಿಟ್ ಮುದುಕನಾಗಿ ಅಶಕ್ತನಾಗಿದ್ದನು. ಅಮೆರಿಕಾಕ್ಕೆ ಸ್ವಾತಂತ್ರ್ಯ ಕೊಡಬೇಕೆಂಬ ಮಸೂದೆಯನ್ನು ಖಂಡಿಸಿ ಮಾತನಾಡುತ್ತಾ ಅವನು ಜ್ಞಾನ ತಪ್ಪಿ,ಮನೆಗೊಯ್ಯಲ್ಪಟ್ಟು ಕಾಲವಾದನು.

ಫ್ರಾನ್ಸಿನ ಸೈನ್ಯ ಮತ್ತು ನೌಕಾಬಲವು ಅಮೆರಿಕಾಕ್ಕೆ ಜಯಗಳಿಸಿ ಕೊಟ್ಟಿತೆಂದು ಹೇಳಬಹುದು. ಕಾರನ್‍ವಾಲಿಸ್ ಯಾರ್ಕ್‍ಟೌನ್ (York Town) ಎಂಬಲ್ಲಿ ಒಂದು ಕಡೆ, ಡೆಗ್ರಾಸ್ ಎಂಬುವನ

ಕೈಕೆಳಗೆ ಫ್ರೆಂಚರ ನೌಕಾಬಲದಿಂದಲೂ, ಮತ್ತೊಂದುಕಡೆ, ಅಮೆರಿಕನ್ನರ ಸೈನ್ಯದಿಂದಲೂ ಸುತ್ತಲ್ಪಟ್ಟು ಶರಣಾಗತನಾದನು. ವಾಷಿಂಗ್‌ಟನ್ನನ ಸಹಾಯಕ್ಕೆ ಫ್ರೆಂಚ್ ಸೈನ್ಯವು ರೂಷಂಬ್ಯೂವಿನ ಕೈಕೆಳಗೆ ಸಿದ್ಧವಾಗಿತ್ತು. ಇಂಗ್ಲೆಂಡಿನ ಸಮುದ್ರದ ಸಾರ್ವಭೌಮತ್ವವು ಈ ವೇಳೆಗೆ ಸಡಿಲವಾಗಿತ್ತು. ಈ ವಿಜಯದೊಂದಿಗೆ ಅಮೆರಿಕದ ಸ್ವಾತಂತ್ರ್ಯದ ಯುದ್ಧವು ಮುಗಿಯಿತೆಂದು ಹೇಳಬಹುದು. ಸ್ಪೇನ್ ಮೈನಾರ್ಕ ದ್ವೀಪವನ್ನು ವಶಪಡಿಸಿಕೊಂಡು ಜಿಬ್ರಾಲ್ಟರನ್ನುಮುತ್ತಿತು. ಆದರೆ ರಾಡ್ನಿಯು ಸೆಂಟ್‌ವಿನ್‌ಸೆಂಟ್ ಎಂಬಲ್ಲಿ ಸ್ಪೇನಿನ ನೌಕೆಯನ್ನು ಸೋಲಿಸಿದನು. ಎಲಿಯಟ್ (Elliot) ಜಿಬ್ರಾಲ್ಟರ್ ಸ್ಪೇನಿನ ವಶವಾಗದಂತೆ ರಕ್ಷಿಸಿದನು.

೧೭೮೩ ರಲ್ಲಿ ಮೊದಲನೆ ವರ್‌ಸ್ಸೇಲ್ಸ್ (Versailles) ಕೌಲಿನಿಂದ ಯುದ್ಧವು ಮುಕ್ತಾಯವಾಯಿತು. ಇಂಗ್ಲೆಂಡ್ ಅಮೆರಿಕದ ಸ್ವಾತಂತ್ರ್ಯವನ್ನು ಒಪ್ಪಿಕೊಂಡಿತು. ಯುದ್ಧದಲ್ಲಿ ತನಗೆ ಸಹಾಯ ಮಾಡಿದ ಅಮೆರಿಕದ ಪ್ರಜೆಗಳ ಆಸ್ತಿ ಮೊದಲಾದುವುಗಳನ್ನು ಅಮೆರಿಕವು ಅವರಿಗೆ ಹಿಂದಕ್ಕೆ ಕೊಡಬೇಕೆಂದು ಗೊತ್ತಾಯಿತು. ಆದರೆ ಅಮೆರಿಕದ ಸಂಸ್ಥಾನಗಳು ಇದನ್ನು ಪರಿಪಾಲಿಸಲಿಲ್ಲ. ಅವರಲ್ಲಿ ಅನೇಕರು ಕೆನಡಾಗೆ (Canada) ಹೋಗಿ ನೆಲೆಸಿದರು ಫ್ರಾನ್ಸ್ ತಾನು ಕಳೆದುಕೊಂಡಿದ್ದ ಪಶ್ಚಿಮ ಆಫ್ರಿಕದ ವಸಾಹತುಗಳಾದ ಗೋರಿ, ಸೆನಿಗಾಲ್ ಮತ್ತು ಪಶ್ಚಿಮ ಇಂಡೀಸ್ ದ್ವೀಪಗಳಾದ ಟೊಬಾಗೊ ಮತ್ತು ಸೆಂಟ್‌ಲೂಸಿಯಾ ಮೊದಲಾದುವುಗಳನ್ನು ಪುನಃ ಪಡೆದುಕೊಂಡಿತು. ಸ್ಪೇನ್ ತಾನು ೧೭೬೩ ಮತ್ತು ೧೭೧೩ ರಲ್ಲಿ ಕಳೆದುಕೊಂಡಿದ್ದ ಪ್ಲಾರಿಡ ಮತ್ತು ಮೈನಾರ್ಕಗಳನ್ನು ಪುನಃ ತನ್ನ ವಶಕ್ಕೆ ತೆಗೆದುಕೊಂಡಿತು.

ಅಮೆರಿಕದ ಹದಿಮೂರು ವಸಾಹತುಗಳು ಒಂದುಗೂಡಿ ಅಮೆರಿಕದ ಸಂಯುಕ್ತಸಂಸ್ಥಾನಗಳಾದುವು (U. S. A,) ೧೭೮೯ ರಲ್ಲಿ ಮೊದಲನೆ ಅಧ್ಯಕ್ಷನಾದ ವಾಷಿಂಗ್‌ಟನ್ ಇವನ್ನೆಲ್ಲಾ ಒಟ್ಟುಗೂಡಿಸಿ ಅಮೆರಿಕದ ಜನಾಂಗವನ್ನಾಗಿ (American Nation) ಮಾಡಿದನು.

ಇಷ್ಟು ಅಲ್ಲದೆ ಇಂಗ್ಲೆಂಡಿನಲ್ಲಿ ಮೂರನೆ ಜಾರ್ಜನ ಪ್ರಾಬಲ್ಯವು ರಾಜಕೀಯದಲ್ಲಿ ಮುರಿದುಹೋಯಿತು. ೧೭೮೨ ರಲ್ಲಿ ತಾನು ಹೇಳಿದಂತೆ ಕೇಳುತ್ತಿದ್ದ ಲಾಡ್ ನಾರ್ತ್ ತನ್ನ ಮಂತ್ರಿತ್ವಕ್ಕೆ ರಾಜಿನಾಮೆಯನ್ನು ಕೊಟ್ಟದ್ದು ಜಾರ್ಜನಿಗೆ ಬಲವಾದ ಪೆಟ್ಟಾಯಿತು. ಮೂರನೆ ಜಾರ್ಜನು 'ರಾಜನಾಗಿ' ಆಳುತ್ತಿದ್ದ ಕಾಲವು ಮುಗಿದುಹೋಯಿತು.

ಲಾರ್ಡ್ ನಾರ್ತ್ ಅಧಿಕಾರವನ್ನು ತ್ಯಜಿಸಿದ ನಂತರ ಪುನಃ ವಿಗ್ ಪಂಗಡವು ಪ್ರಾಬಲ್ಯಕ್ಕೆ ಬಂದಿತು. ಆದರೆ ಅವರಲ್ಲಿ ಇನ್ನೂ ಒಳಜಗಳ ಮುಗಿದಿರಲಿಲ್ಲ. ಅವರಲ್ಲಿ ಅತ್ಯಂತ ಪ್ರಮುಖನಾಗಿದ್ದ ಚಾರ್ಲ್ಸ್ ಜೇಮ್ಸ್ ಫಾಕ್ಸ್ ಟೋರಿಯಾದ ನಾರ್ತ್‌ನೊಡನೆ ಸೇರಿ ಕೆಲವು ಕಾಲ ಮಂತ್ರಿ ಮಂಡಲವನ್ನು ರಚಿಸಿ ಅಧಿಕಾರ ನಡೆಸಿದನು. ಇವನನ್ನು ಕಂಡರೆ ಮೂರನೆ ಜಾರ್ಜನಿಗೆ ದ್ವೇಷವಿತ್ತು. ಅದಕ್ಕಾಗಿಯೇ ಅವನು ಲಾರ್ಡ್ ನಾರ್ತ್ ಅಧಿಕಾರ ತ್ಯಜಿಸಿದಾಗ ಮತ್ತೊಬ್ಬ ವಿಗ್ ಮುಖಂಡನಾದ ಷೆಲ್ ಬರ್ನ್ ಎಂಬುವನನ್ನು ಮಂತ್ರಿಯಾಗಿ ಆರಿಸಿಕೊಂಡಿದ್ದನು. ಆದರೆ ಫಾಕ್ಸ್ ಅತ್ಯಂತ ಪ್ರತಿಭಾಶಾಲಿ. ಅವನಿಗೆ ಪಾರ್ಲಿಮೆಂಟಿನಲ್ಲಿ ಜರುಗುತ್ತಿದ್ದ ಚರ್ಚೆಗಳಲ್ಲಿ ರಾತ್ರಿ ಕಳೆಯುತ್ತಿದ್ದುದೇ ಗೊತ್ತಾಗುತ್ತಿರಲಿಲ್ಲ. ಅವನಿಗೆ ಹದಿನೆಂಟನೆ ಶತಮಾನದಲ್ಲಿ ಸಾಧಾರಣವಾಗಿ ಶ್ರೀಮಂತವರ್ಗದಲ್ಲಿ ಆಚರಣೆಯಲ್ಲಿದ್ದ ಜೂಜುಗಾರಿಕೆ ಮತ್ತು ಪಾನದಲ್ಲೂ ಅಷ್ಟೇ ಆಸಕ್ತಿ. ನಾರ್ತ್ ಮತ್ತು ಫಾಕ್ಸ್ ಮಂತ್ರಿಗಳಾದ ಮೇಲೆ ಇಂಡಿಯಾ ದೇಶದ ಆಡಳಿತವನ್ನು ಸರಿಪಡಿಸಲು ಫಾಕ್ಸ್ 'ಇಂಡಿಯಾ ಬಿಲ್' ಎಂಬ ಕಾನೂನನ್ನು ಕಾಮನ್ಸ್ ಸಭೆಯ ಮುಂದಿಟ್ಟರು. ಈ ಕಾನೂನಿನ ಉದ್ದೇಶ 'ರೆಗ್ಯುಲೇಟಿಂಗ್ ಆಕ್ಟ್' ನಿಂದ ಸಂಭವಿಸಿದ ಕೆಲವು ಅಡಚಣೆಗಳನ್ನು ನಿವಾರಿಸುವುದೇ ಆಗಿತ್ತು. ಸಮಯ ಕಾಯುತ್ತಿದ್ದ ಮೂರನೆ ಜಾರ್ಜ್ ಲಾರ್ಡ್ಸ್ ಸಭೆಯಲ್ಲಿ ಅದು ಬಿದ್ದುಹೋಗುವಂತೆ ಮಾಡಿದನು. ಇದರಿಂದ ಫಾಕ್ಸ್ ರಾಜೀನಾಮೆಯನ್ನು ಕೊಡಬೇಕಾಯಿತು. ಅವನ ಸ್ಥಾನದಲ್ಲಿ ಜಾರ್ಜ್ ಹಿರಿಯ ಪಿಟ್ಟನ ಮಗನಾದ ಕಿರಿಯ ಪಿಟ್ಟನನ್ನು (Pitt, the Younger) ಪ್ರಧಾನ ಮಂತ್ರಿಯನ್ನಾಗಿ ನಿಯಮಿಸಿದನು. ಸಣ್ಣ ವಯಸ್ಸಿನ ಪಿಟ್ ಬಹು ಸ್ವಲ್ಪ ಕಾಲದಲ್ಲೆ ಮಂತ್ರಿ ಮಂಡಲವನ್ನು ಬಿಟ್ಟು

ಹೊರಬೀಳುವನೆಂದು ಎಲ್ಲರೂ ಭಾವಿಸಿದ್ದರು. ಆದರೆ ಅವನು ಇಂಗ್ಲೆಂಡಿನ ಪ್ರಧಾನ ಮಂತ್ರಿಯಾಗಿ ಹದಿನೆಂಟು ವರ್ಷ (೧೭೮೩–೧೮೦೧) ಗಳ ಕಾಲ ಉಳಿದನು. ತನ್ನ ತಂದೆಯಂತೆಯೇ ಪಿಟ್ ಇಂಗ್ಲೆಂಡನ್ನು ಅದಕ್ಕೆ ಒದಗಿದ್ದ ಅಪಾರವಾದ ಆಪತ್ತಿನಿಂದ ಪಾರುಮಾಡಿದನು.

ವಿಲಿಯಂ ಪಿಟ್ ೧೭೫೯ ರಲ್ಲಿ ಹುಟ್ಟಿದನು. ಅವನ ತಂದೆಯಾದ ಹಿರಿಯ ಪಿಟ್ ಮೊದಲಿನಿಂದಲೂ ತನ್ನ ಮಗನನ್ನು ರಾಜಕೀಯ ರಂಗದಲ್ಲಿ ಯಶಸ್ವಿಯಾಗಿ ಕೆಲಸಮಾಡಲು ಬೇಕಾದ ತರಪೇತನ್ನು ಕೊಡಿಸಿದ್ದನು. ತನ್ನ ೨೪ ನೇ ವಯಸ್ಸಿನಲ್ಲಿ ಪಿಟ್ ಇಂಗ್ಲೆಂಡಿನ ಪ್ರಧಾನ ಮಂತ್ರಿಯಾದನು-.

ವಾಲ್ ಪೋಲನಂತೆ ಕಿರಿಯ ಪಿಟ್ ದೀರ್ಘಕಾಲ ಪ್ರಧಾನ ಮಂತ್ರಿಯಾಗಿದ್ದುದಲ್ಲದೆ ಅವನಂತೆಯೇ ಹಣಕಾಸಿನ ವಿಚಾರದಲ್ಲಿ ತೀವ್ರ ಪರಿಶ್ರಮ ಹೊಂದಿದ್ದನು. ಷೆಲ್‌ಬರ್ನ್ ಮಂತ್ರಿ ಸಂಪುಟದಲ್ಲಿ ಪಿಟ್ ಆರ್ಥಿಕ ಸಚಿವನಾಗಿದ್ದನು (Chancellor of the Exchequer).

ಕ್ರಿ. ಶ. ೧೭೮೩ ರಿಂದ ೧೭೯೩ ರ ವರೆಗೆ ಅಂದರೆ ಹತ್ತು ವರ್ಷಗಳ ಕಾಲ ಪಿಟ್ ಶಾಂತಿಯುತವಾದ ಕೆಲಸ ಕಾರ್ಯಗಳಲ್ಲಿ ನಿರತನಾಗಿದ್ದನು. ೧೭೮೪ ರಲ್ಲಿ ಅವನು ಇಂಡಿಯಾ ಕಾನೂನನ್ನು (India Bill) ಜಾರಿಗೆ ತಂದು ಅಲ್ಲಿಯ ಆಡಳಿತವನ್ನು ಸರಿಪಡಿಸಿದನು. ೧೭೮೫ ರಲ್ಲಿ ಪಾರ್ಲಿಮೆಂಟಿನ ಚುನಾವಣಾ ಕ್ರಮವನ್ನು ಸರಿಪಡಿಸಲು ಪ್ರಯತ್ನಿಸಿದನು. ಆದರೆ ಅದು ಸಾಧ್ಯವಾಗಲಿಲ್ಲ. ಇದೇ ವರ್ಷ ಪಿಟ್ ಐರ್ಲೆಂಡಿನೊಡನೆ ವಾಣಿಜ್ಯ ಐಕ್ಯತೆಯನ್ನು ( Commercial union ) ಸಾಧಿಸಲು ಕಾನೂನೊಂದನ್ನು ತರಲು ಪ್ರಯತ್ನಿಸಿ, ಪಾರ್ಲಿಮೆಂಟ್ ಅದನ್ನು ವಿರೋಧಿಸಿದುದರಿಂದ ವಿಫಲನಾದನು.

ಹಣಕಾಸಿನ ಖಾತೆಯಲ್ಲಿ ಅನೇಕ ಸುಧಾರಣೆಗಳನ್ನು ತಂದನು. ಟೀ ಸೊಪ್ಪಿನ ಮೇಲೆ ಹಾಕಿದ್ದ ತೆರಿಗೆಯನ್ನು ಶೇಕಡ ಐವತ್ತರಿಂದ 12½ ಗೆ ಇಳಿಸಿದನು. ಇದರಿಂದ ಕಳ್ಳ ಸಾಗಾಣಿಕೆಯು (Smuggling) ಅಲಾಭದಾಯಕವಾಯಿತು. ಇದರಿಂದ ಕಡಿಮೆಯಾದ ವರಮಾನವನ್ನು ಸರಿದೂಗಲು ಪಿಟ್ ಕಿಟಕಿಗಳ ಮೇಲೆ ತೆರಿಗೆಯನ್ನು

(Window tax) ವಿಧಿಸಿದನು. ರಾಷ್ಟ್ರೀಯ ಸಾಲವನ್ನು ತೀರಿಸಲು ಪಿಟ್ ಒಂದು ನಿಧಿಯನ್ನು (Sinking fund) ಸ್ಥಾಪಿಸಿದನು. ಪ್ರತಿವರ್ಷವೂ ಸರ್ಕಾರವು ೧೦೦೦,೦೦೦ ಪೌಂಡು ಹಣವನ್ನು ಪ್ರತ್ಯೇಕವಾಗಿ ತೆಗೆದಿರಿಸಿ, ಅಸಲು ಮತ್ತು ಚಕ್ರಬಡ್ಡಿ ಸಮೇತ ೨೮ ವರ್ಷಗಳಲ್ಲಿ ಈ ಸಾಲವನ್ನು ಪರಿಹರಿಸಬಹುದೆಂದು ಏರ್ಪಡಿಸಿದನು. ಆದರೆ ಸಾಲವು ಪರಿಹಾರವಾಗುವುದರ ಬದಲು ಇಂಗ್ಲೆಂಡ್ ಫ್ರಾನ್ಸಿನೊಡನೆ ಯುದ್ಧಗಳಲ್ಲಿ ಪಾತ್ರವಹಿಸಬೇಕಾದ್ದರಿಂದ (Revolutionary and Napoleonic wars) ಅದು ಅಸಾಧ್ಯ ಪ್ರಮಾಣದಲ್ಲಿ ಏರಿತು.

ಪಿಟ್ ಫ್ರಾನ್ಸಿನೊಡನೆ ಒಂದು ವಾಣಿಜ್ಯದ ಒಪ್ಪಂದವನ್ನು ೧೭೮೬ ರಲ್ಲಿ ಮಾಡಿಕೊಂಡನು. ಫ್ರಾನ್ಸಿನ ಮಧ್ಯವಾದ ಕ್ಲಾರೆಟ್ ಮತ್ತು ಸಿಲ್ಕ್ ಬಟ್ಟೆಗಳ (Claret and silk cloth) ಮೇಲೆ ಹಾಕಿದ್ದ ಸುಂಕ ಕಮ್ಮಿಯಾಗಿ, ಪೋರ್ಚುಗಲ್ಲಿನಿಂದ ಬರುತ್ತಿದ್ದ ಪೋರ್ಟ್ ಎಂಬ ಮಧ್ಯದೊಡನೆ ಕ್ಲಾರೆಟ್ ಪೈಪೋಟಿ ಮಾಡುವಂತಾಯಿತು. ಫ್ರಾನ್ಸ್ ಇಂಗ್ಲೆಂಡಿನಿಂದ ಬಂದ ಉಲ್ಲನ್ ಮತ್ತು ಉಕ್ಕಿನ ಪದಾರ್ಥಗಳ ಮೇಲಿನ ಸುಂಕವನ್ನು ಕಮ್ಮಿಮಾಡಿತು. ಆಡಂಸ್ಮಿತ್ ತನ್ನ ಪುಸ್ತಕವಾದ 'ರಾಷ್ಟ್ರಗಳ ಐಶ್ವರ್ಯ' ದಲ್ಲಿ (Wealth of Nations, ೧೭೭೬) ಹೇಳಿದಂತೆ ಆತಂಕವಿಲ್ಲದ ವ್ಯಾಪಾರದ (Free Trade) ತತ್ವಗಳನ್ನು ಪಿಟ್ ಇದರಿಂದ ಆಚರಣೆಗೆ ತಂದನು.

ಆಸ್ಟ್ರೇಲಿಯವು ಕ್ಯಾಪ್ಟನ್ ಕುಕ್ ಎಂಬುವನಿಂದ ೧೭೭೦ ರಲ್ಲಿ ಕಂಡುಹಿಡಿಯಲ್ಪಟ್ಟಿತಷ್ಟೆ. ಅಲ್ಲಿಗೆ ಇಂಗ್ಲೆಂಡಿನಿಂದ ೭೫೦ ಖೈದಿಗಳನ್ನು (Convicts) ಪಿಟ್ಟನ ಸರ್ಕಾರವು ಕಳುಹಿಸಲು ಪ್ರಾರಂಭಿಸಿತು. ಪಿಟ್ಟನ ಕೆನಡಾ ಕಾನೂನು (Canada Act, ೧೭೯೧) ಕೆನಡಾವನ್ನು ಎರಡು ಭಾಗಗಳನ್ನಾಗಿ ವಿಭಾಗಿಸಿ ಅಲ್ಲಿಯ ಫ್ರೆಂಚ್ ಮತ್ತು ಇಂಗ್ಲಿಷ್ ನಿವಾಸಿಗಳು ಜಗಳವಾಡಲು ಅವಕಾಶವಾಗದಂತೆ ಮಾಡಿತು. ಅಂಟೆರಿಯೊ ಭಾಗದಲ್ಲಿ ಇಂಗ್ಲಿಷರೂ, ಕ್ವಿಬೆಕ್ ಭಾಗದಲ್ಲಿ ಫ್ರೆಂಚರೂ ನೆಮ್ಮದಿಯಾಗಿ ಇರತೊಡಗಿದರು.

ವಾಂಕೂವರ್‌ನಲ್ಲಿದ್ದ (೧೭೯೦) ಇಂಗ್ಲಿಷರಿಗೂ ಮತ್ತು ಸ್ಪೇನಿನವರಿಗೂ ಜಗಳವಾಗುತ್ತಿತ್ತು. ಪಿಟ್ ವಾಂಕೂವರ್ ದ್ವೀಪವು ಇಂಗ್ಲಿಷರಿಗೆ ಸೇರಿದ್ದೆಂದು ವಾದಿಸಿ ವ್ಯಾಜ್ಯವನ್ನು ಪರಿಹರಿಸಿದನು.

ಯೂರೋಪಿನಲ್ಲಿ ರಷ್ಯದ ರಾಣಿಯಾದ ಕ್ಯಾಥರೀನ್ ಪ್ರಷ್ಯದೊಡನೆ ಸೇರಿ ದಿಕ್ಕಿಲ್ಲದ ಪೋಲೆಂಡಿನ ವಿಭಜನೆಯನ್ನು ನಡೆಸಿದ್ದಳು (Partition of Poland ೧೭೯೩-೯೫). ಇಂಗ್ಲೆಂಡ್ ಈ ವಿಚಾರದಲ್ಲಿ ಏನನ್ನೂ ಮಾಡುವಂತಿರಲಿಲ್ಲ. ಆ ವೇಳೆಗೆ ಫ್ರಾನ್ಸಿನ ಮಹಾ ಕ್ರಾಂತಿಯು ಅದರ ಗಮನವನ್ನು ಸೆಳೆದಿತ್ತು.

## ೧೮ ನೆ ಶತಮಾನದ ಸಮಾಜ ಮತ್ತು ಜೀವನ

೧೮ ನೆ ಶತಮಾನದ ಪೂರ್ವಾರ್ಧದಲ್ಲಿ ಇಂಗ್ಲಿಷ್ ಸಮಾಜವು ಕೆಲವು ವಿಚಿತ್ರ ಆಚರಣೆಗಳಿಂದ ಕೂಡಿತ್ತು. ಮೊದಲನೆ ನಲವತ್ತು ವರ್ಷಗಳಲ್ಲಿ 'ಮದ್ಯದ ಕ್ರಾಂತಿ' ಜರುಗಿತು. ಒಂದಲ್ಲ ಎರಡು ಕ್ರಾಂತಿಗಳಾದುವೆಂದು ಹೇಳಬಹುದು. ಶ್ರೀಮಂತವರ್ಗವು "ಪೋರ್ಟ್" ಎಂಬ ಮದ್ಯ ಸೇವನೆಯಲ್ಲೂ ಮತ್ತು ಜನಸಾಮಾನ್ಯರು "ಜಿನ್" ಸೇವನೆಯಲ್ಲೂ ನಿರತರಾಗಿದ್ದರು. ೧೭೦೩ ರಲ್ಲಿ ಜಾರಿಗೆ ಬಂದ ಮೆಥೂನ್ (Methuen treaty) ಕರಾರಿನ ಪ್ರಕಾರ ಪೋರ್ಚುಗಲ್ಲಿನಿಂದ ಬಂದ ಮದ್ಯಗಳ ಮೇಲಿನ ಸುಂಕ ಕಡಿಮೆ ಮಾಡಲ್ಪಟ್ಟದ್ದರಿಂದ ಹೆಚ್ಚು ಅಪಾಯಕಾರಿಯಲ್ಲದ ಫ್ರಾನ್ಸಿನ ಮದ್ಯಗಳು ತುಟ್ಟಿಯಾಗಿ ಜನಾನುರಾಗವನ್ನು ಕಳೆದುಕೊಂಡವು. ವಾಲ್‌ಪೋಲ್‌ನಿಂದ ಹಿಡಿದು ಕಿರಿಯ ಪಿಟ್ಟನ ಪೀಳಿಗೆಯವರೆಗೂ ರಾಜತಂತ್ರಜ್ಞರು ವಿಶೇಷವಾಗಿ ಕುಡುಕರಾಗಿದ್ದರು. ಇದರಿಂದ ಶ್ರೀಮಂತರಲ್ಲಿ ಗೌಟ್ ಎಂಬ ವ್ಯಾಧಿ ಮನೆಮಾಡಿಕೊಂಡಿತ್ತು.

೧೭೨೪ ರಲ್ಲಿ ಜನಸಾಮಾನ್ಯರಲ್ಲಿ ಜಿನ್ ಹೆಚ್ಚು ಬಳಕೆಗೆ ಬಂದಿತು. ೧೭೪೨ ರಲ್ಲಿ ಏಳು ಮಿಲಿಯನ್ ಗ್ಯಾಲನ್ ಜಿನ್ ಇಂಗ್ಲೆಂಡಿನಲ್ಲಿ ತಯಾರಾಯಿತು. ಅಂದರೆ ಜನಸಂಖ್ಯೆಯಲ್ಲಿ ಹೆಂಗಸು, ಗಂಡಸು ಮತ್ತು ಮಗುವಿಗೆ ತಲಾ ಒಂದು ಗ್ಯಾಲನ್‌ನಂತೆ ಆಯಿತು. ೧೭೫೧ ರಲ್ಲಿ ಇದು ೧೧ ಮಿಲಿಯನ್ ಗ್ಯಾಲನ್ನಿಗೇರಿತು.

ಸಾಹಿತ್ಯವು ೧೮ ನೇ ಶತಮಾನದ ಶ್ರೀಮಂತರ ಜೀವನವು ಮೋಜಿನಿಂದಲೂ ಮತ್ತು ನಾಗರಿಕತೆಯಿಂದಲೂ ಕೂಡಿತ್ತೆಂದು ಪ್ರತಿಬಿಂಬಿಸುತ್ತದೆ. ಆದರೆ ಅದು ಸಮಾಜದ ಬರಿ ಮೇಲ್ಪದರವಾಗಿತ್ತು. ಆದರ ಅಡಿಯಲ್ಲಿ ಮತ್ತು ಮಧ್ಯದಲ್ಲಿ ಅಸಭ್ಯತೆಯಿಂದ ಕೂಡಿದ ವರ್ಗವಿತ್ತು. ಸಾಮಾನ್ಯವಾಗಿ ಜನ ರಾಜಕೀಯಕ್ಕೆ ಇಳಿಯುತ್ತಿರಲಿಲ್ಲ. ಆದರೆ ಅಂತಹ ಸಂದರ್ಭಗಳು ಒದಗಿದಾಗ ಅನಾಹುತಕಾರಿಯಾದ ಪರಿಣಾಮ ಉಂಟಾಗುತ್ತಿತ್ತು. ಆನಿಯ ಆಳ್ವಿಕೆಯಲ್ಲಿ ಡಾ|| ಸಾಚೆವೆರಲ್ ಎಂಬ ಪಾದ್ರಿಯ ಪರವಾಗಿ ಜರುಗಿದ ದೊಂಬಿ, ವಾಲ್‌ಪೋಲನ ಕಾಲದಲ್ಲಿ ಸುಂಕದ ಕಾನೂನಿನ (Excise duty) ವಿರುದ್ಧವಾಗಿ ನಡೆದ ಪ್ರದರ್ಶನ, ರೋಮನ್ ಕ್ಯಾಥಲಿಕ್ ಪಂಗಡಕ್ಕೆ ಒದಗಿದ್ದ ಕೆಲವು ಕುಂದುಕೊರತೆಗಳನ್ನು ಸ್ವಲ್ಪಮಟ್ಟಿಗೆ ನಿವಾರಿಸಲು ಮಾಡಿದ ಕಾನೂನಿನ ವಿರುದ್ಧವಾಗಿ ೧೭೮೦ ರಲ್ಲಿ ಜರುಗಿದ ದಂಗೆ ಇವೇ ಮೊದಲಾದುವು ಕೆಲವು ಮುಖ್ಯ ಉದಾಹರಣೆಗಳು.

೧೮ ನೇ ಶತಮಾನವು ಮತೀಯ ಆಸಕ್ತಿಯಿಲ್ಲದ ಶತಮಾನವೆಂದು ಹೇಳಬಹುದು. ಆದರೆ ವೆಸ್ಲಿಯ ಅಸಾಧಾರಣ ಶ್ರಮ ಮತ್ತು ಪ್ರತಿಭೆಯಿಂದ ಸ್ವಲ್ಪ ಮಟ್ಟಿಗೆ ಮತೀಯ ಶ್ರದ್ಧೆ ಮತ್ತು ಚೇತನವುಂಟಾಯಿತು. ೧೭೨೯ ರಿಂದ ೧೭೩೫ ರ ತನಕ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದ ಕಲುಷಿತ ವಾತಾವರಣದಲ್ಲಿ ೧೬ ಜನ ಸದಸ್ಯರಿಂದ ಕೂಡಿದ ಒಂದು ಸಣ್ಣ ಸಂಸ್ಥೆಯಿತ್ತು. ಹಾಸ್ಯಕ್ಕಾಗಿ ಇದನ್ನು 'ಹೋಲಿಕ್ಲಬ್' ಎಂದು ಕರೆಯುತ್ತಿದ್ದರು. ಜಾನ್‌ವೆಸ್ಲಿ ಮತ್ತು ಅವನ ಸಹೋದರ ಚಾರ್ಲ್ಸ್ ಮತ್ತು ವೈಟ್‌ಫೀಲ್ಡ್ ಇದರ ಮುಖ್ಯ ಸದಸ್ಯರಾಗಿದ್ದರು. ವೈಟ್‌ಫೀಲ್ಡ್ ಮತ್ತು ವೆಸ್ಲಿ ಖೈದಿಗಳಿಗೂ ಮತ್ತು ಕಲ್ಲಿದ್ದಲು ಗಣಿಗಳ ಕೆಲಸಗಾರರಿಗೂ ಬೋಧಿಸಲು ಪ್ರಾರಂಭಿಸಿದರು. ವೆಸ್ಲಿ ಈ ಕೆಲಸವನ್ನು ೫೧ ವರ್ಷಕಾಲ (೧೭೩೯–೯೧)ಎಡಬಿಡದೆ ಮಾಡಿದನು. ಕ್ರಿಶ್ಚಿಯನ್ ಚರ್ಚ್ ವೆಸ್ಲಿಯನ್ನೂ ಮತ್ತು ಅವನ ಅನುಯಾಯಿಗಳನ್ನೂ ಪುರಸ್ಕರಿಸಲಿಲ್ಲ. ವೆಸ್ಲಿಯು ಮತಾಧಿಪತಿಯಲ್ಲದಿದ್ದರೂ ಪಾದ್ರಿಗಳನ್ನು ನಿಯಮಿಸುತ್ತಿದುದರಿಂದ ಇವರ ಪಂಗಡಕ್ಕೆ 'ಮೆಥಾಡಿಸ್ಟ್' ಪಂಗಡವೆಂದು ಹೆಸರಾಯಿತು. ಈ

ಸಂಗಡದವರ ಪ್ರಭಾವದಿಂದ ಸೆರೆಮನೆಗಳ ಸುಧಾರಣೆಯೂ ಮತ್ತು ಗುಲಾಮರ ವ್ಯಾಪಾರದ ನಿಲ್ಲುವಿಕೆಯೂ ಉಂಟಾದುವು (Prison Reforms and abolition of slave trade). ಪಿಟ್ಟನ ಪರಮ ಸ್ನೇಹಿತನಾದ ವಿಲಿಯಂ ವಿಲಿಬರ್ ಫೋರ್ಸ್ (William Wilber force) ಗುಲಾಮರ ವ್ಯಾಪಾರವನ್ನು ತಪ್ಪಿಸುವ ಸಲುವಾಗಿ ತನ್ನ ರಾಜಕೀಯ ಜೀವನವನ್ನೇ ತ್ಯಜಿಸಿ (Political Career) ಅತಿಶಯವಾಗಿ ದುಡಿದನು. ಗುಲಾಮರ ವ್ಯಾಪಾರದಲ್ಲಿ ಇಂಗ್ಲೆಂಡ್ ಮುಖ್ಯಪಾತ್ರ ವಹಿಸಿತ್ತು. ಯುಟ್ರೆಕ್ಟ್ ಕರಾರಿನ ಪ್ರಕಾರ ಗುಲಾಮರ ವ್ಯಾಪಾರದ ಏಕಸ್ವಾಮ್ಯತೆ (Monopoly) ಇಂಗ್ಲೆಂಡಿನದಾಗಿತ್ತೆಂದು ಹಿಂದೆಯೇ ತಿಳಿಸಿದೆ. ಆಫ್ರಿಕದ ಹಳ್ಳಿಗಳಿಗೆ ನುಗ್ಗಿ ಕಾಡು ಮೃಗಗಳಂತೆ ನೀಗ್ರೋ ಜನರನ್ನು ಹಿಡಿದು ಇಂಗ್ಲಿಷ್ ವರ್ತಕರು ಅವರನ್ನು ಉತ್ತರ ಮತ್ತು ದಕ್ಷಿಣ ಅಮೇರಿಕಾ ದೇಶಗಳಿಗೆ ಒಯ್ಯುತ್ತಿದ್ದರು. ೧೭೭೬ ರ ಹಿಂದಿನ ಶತಮಾನದಲ್ಲಿ ೩೦೦೦೦೦೦ ನೀಗ್ರೋಗಳು ಗುಲಾಮರಾಗಿ ಮಾರಲ್ಪಟ್ಟರು. ಇದರ ಶೇಕಡ ೧೦ ರಷ್ಟು ಜನರು ಸಮುದ್ರದ ಮೇಲೆ ಒಯ್ಯಲ್ಪಡುವಾಗ ಸತ್ತು ಸಮುದ್ರಕ್ಕೆ ಎಸೆಯಲ್ಪಟ್ಟರು. ೧೭೮೩ ರಿಂದ ೯೩ ರ ವರೆಗೆ ಗುಲಾಮರ ವ್ಯಾಪಾರದ ಕೇಂದ್ರವಾಗಿದ್ದ ಲಿವರ್‌ಪೂಲ್‌ನಿಂದ ೩೦೦,೦೦೦ ಗುಲಾಮರು ೧,೫೦.೦೦,೦೦೦ ಪೌಂಡುಗಳಿಗೆ ಮಾರಲ್ಪಟ್ಟರು. ಪಿಟ್ ಪಾರ್ಲಿಮೆಂಟಿನಲ್ಲಿ ವಿಲ್‌ಬರ್ ಫೋರ್ಸ್‌ನೊಡನೆ ತನ್ನ ಸಹಾನುಭೂತಿಯನ್ನು ತೋರಿಸಿದರೂ, ಅವನು ಸರ್ಕಾರದ ಪರವಾಗಿ ಏನನ್ನೂ ಮಾಡಲಾಗಲಿಲ್ಲ. ಗುಲಾಮರ ಮರಾಟವನ್ನು ರದ್ದುಮಾಡಲು ಅನೇಕವೇಳೆ ಪಾರ್ಲಿಮೆಂಟ್ ಸಭೆಯಲ್ಲಿ ಮಸೂದೆಯು ಮಂಡಿಸಲ್ಪಟ್ಟರೂ ಅದಕ್ಕೆ ಸೋಲಾಯಿತು. ಪಿಟ್ ಕಾಲವಾದ ಮೇಲೆ ಫಾಕ್ಸ್ ೧೮೦೭ ರಲ್ಲಿ ಇಂಗ್ಲೆಂಡಿನಲ್ಲಿ ಗುಲಾಮರ ವ್ಯಾಪಾರವನ್ನು ಕಾನೂನಿನಿಂದ ರದ್ದುಮಾಡಿಸಿದನು ಬ್ರಿಟಿಷ್ ಸಾಮ್ರಾಜ್ಯದಿಂದ ಅದು ೧೮೩೩ ರಲ್ಲಿ ಕೊನೆಗೆ ರದ್ದಾಯಿತು.

ಜಾನ್ ಹವಾರ್ಡ್, ಸೆರೆಮನೆಗಳ ಸುಧಾರಣೆಗಾಗಿ ವಿಶೇಷವಾಗಿ ಹೋರಾಡಿದ ಮತ್ತೊಬ್ಬ ೧೮ ನೇ ಶತಮಾನದ ಹಿರಿದಾದ ವ್ಯಕ್ತಿ.

ಪ್ರಸಿದ್ಧ ಕಾದಂಬರಿಕಾರರಾದ ಸಾಮ್ಯುಯಲ್ ರಿಚರ್ಡ್‌ಸನ್, ಹೆನ್ರಿಫೀಲ್ಡಿಂಗ್, ಗೋಲ್ಡ್‌ಸ್ಮಿತ್ ಮತ್ತು ಡಾ|| ಜಾನ್ಸನ್ ೧೮ ನೇ ಶತಮಾನದಲ್ಲಿ ಜೀವಿಸಿದ್ದರು. ಈ ಯುಗಕ್ಕೆ "ಡಾ|| ಜಾನ್ಸನ್ ಯುಗ" ವೆಂದು ಹೇಳಬಹುದು. ಚರಿತ್ರೆಕಾರ ಗಿಬ್ಬನ್, ಅರ್ಥಶಾಸ್ತ್ರ ವಿಶಾರದ ಆಡಂಸ್ಮಿತ್, ಚಿತ್ರಕಾರ ರೈನಾಲ್ಡ್ಸ್ (Reynolds) ಜಾನ್ಸನ್ ಯುಗಕ್ಕೆ ಸೇರಿದ ಇತರ ಪ್ರಮುಖರು. ಗ್ರೆ ಬರೆದ 'Elegy on a Country Church Yard', ಎಂಬ ಪದ್ಯ ಕವಿತೆಯನ್ನು ಸೇನಾಧಿಪತಿ ವುಲ್ಫ್ ತಾನು ಕ್ವಿಬೆಕ್ ಮೇಲೆ ರಾತ್ರಿ ಮುತ್ತಿಗೆಯನ್ನು ಹಾಕಲು ಹೋಗುತ್ತಿದ್ದಾಗ ಓದಿದನಂತೆ. ಗೋಲ್ಡ್‌ಸ್ಮಿತ್ ಬರೆದ 'ಡೆಸರ್‌ಟೆಡ್ ವಿಲೇಜ್' (Deserted Village) ಅನೇಕರ ಮನವನ್ನು ಸೆಳೆದಿತ್ತು. ರಾಬರ್ಟ್ ಬರ್ನ್ಸ್ (Burns), ಬ್ಲೇಕ್, ವರ್ಡ್ಸ್‌ವರ್ತ್, ಷೆಲ್ಲಿ ಮತ್ತು ಬೈರನ್ ೧೮ ನೇ ಶತಮಾನದ ಕೀರ್ತಿಯನ್ನು ಸಾಹಿತ್ಯದ ಚರಿತ್ರೆಯಲ್ಲಿ ಬೆಳಗಿಸಿದರು.

ಷೇಕ್ಸ್‌ಪಿಯರನ ನಾಟಕಗಳನ್ನು ಅವು ಇದ್ದಂತೆಯೇ ಆಡಲು ೧೮ ನೇ ಶತಮಾನದಲ್ಲಿ ಜನಗಳಲ್ಲಿ ಅಭಿಲಾಷೆ ಬಂದಿತು. ಈ ನಾಟಕಗಳ ಪುನರುಜ್ಜೀವನಗೊಳಿಸುವ ಕಾರ್ಯ ಆಗಿನ ಕಾಲದ ನಟ ಸಾರ್ವಭೌಮನಾಗಿದ್ದ ಡೇವಿಡ್ ಗ್ಯಾರಿಕ್ (೧೭೧೭–೧೭೭೯) ಎಂಬುವನಿಂದ ಯಶಸ್ವಿಯಾಯಿತು. ಲೇಡಿ ಮ್ಯಾಕ್‌ಬೆತ್ ಪಾತ್ರವಹಿಸಿ ಜನಗಳನ್ನು ಮುಗ್ಧಗೊಳಿಸಿದ ಶ್ರೀಮತಿ ಸಾರಾ ಸಿಡ್ಡನ್ಸ್ ಮತ್ತೊಬ್ಬ ಪ್ರಖ್ಯಾತ ನಟಿ.

ಸಮಾಜದ ಕ್ರೂರ ಪದ್ಧತಿಗಳನ್ನು ತನ್ನ ಕೃತಿಗಳಲ್ಲಿ ಎತ್ತಿ ತೋರಿಸಿದ ಚಿತ್ರಗಾರ ಹೊಗಾರ್ಥ್ (Hogarth, ೧೬೯೭–೧೭೬೪). ನೈಸರ್ಗಿಕ ಸೌಂದರ್ಯವನ್ನು ಚಿತ್ರಿಸುವುದರಲ್ಲಿ ನಿಪುಣರಾಗಿದ್ದ ಕಾನ್ಸ್ಟೆಬಲ್. ಮತ್ತು ಟರ್ನರ್, ಸುಪ್ರಸಿದ್ಧ ಸಂಗೀತಗಾರ ಹಾನ್‌ಡೆಲ್ ಈ ಶತಮಾನದ ಸಾಂಸ್ಕೃತಿಕ ಜೀವನದಲ್ಲಿ ಪ್ರಖ್ಯಾತರು.

## ಫ್ರಾನ್ಸಿನ ಮಹಾಕ್ರಾಂತಿ : ಕಾರಣಗಳು

೧. ೧೮ನೇ ಶತಮಾನವು ಶ್ರೀಮಂತರ ಮತ್ತು ಬಡವರ ಮಧ್ಯೆ ಇದ್ದ ಅಂತರವನ್ನು ಕಡಮೆ ಮಾಡುವ ಪ್ರಯತ್ನವನ್ನು ತನ್ನ ಕೊನೆಯ ದಿನ

ಗಳವರೆಗೂ ಕಾಣಲಿಲ್ಲ. ಫ್ರಾನ್ಸಿನಲ್ಲಂತೂ ಸಮಾಜದ ವರ್ಗಗಳ ಅಂತರವು ಎಲ್ಲೆಯನ್ನೇ ಮೀರಿತ್ತು. ಅಲ್ಲಿನ ಶ್ರೀಮಂತರು ಸರ್ಕಾರಕ್ಕೆ ಯಾವ ತೆರಿಗೆಯನ್ನೂ ಕೊಡದೆ, ಅನೇಕ ವಿಶೇಷ ಹಕ್ಕುಗಳನ್ನು (Privileges) ಪಡೆದುಕೊಂಡಿದ್ದರು. ಎಲ್ಲಾ ತೆರಿಗೆಯೂ ಬಡವರ ಪಾಲಿಗೆ ಬಂದಿತ್ತು. ಹೀಗೆ ಸಂದ ಆದಾಯವನ್ನು ೧೪ ನೆ ಲೂಯಿ ಮತ್ತು ಅವನ ನಂತರ ಬಂದ ರಾಜರು ತಮ್ಮ ಯುದ್ಧಗಳಿಗೂ ಮತ್ತು ವರ್ಸೇಲ್ಸ್‌ನಲ್ಲಿದ್ದ (Versailles) ತಮ್ಮ ಆಸ್ಥಾನ ಮತ್ತು ಭೋಗ ಜೀವನ ಮೊದಲಾದುವುಗಳಿಗೆ ನೀರಿನಂತೆ ಖರ್ಚು ಮಾಡುತ್ತಿದ್ದರು. ಆದಾಯವು ಸಾಲದೆ ಹೋದಾಗ ಸಾಲಮಾಡಿ ಹಣ ಒದಗಿಸುವ ಭಾರವು ಮಂತ್ರಿಗಳದಾಗಿತ್ತು. ಈ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸಲು ಟರ್ಗೊ (Turgot), ನೆಕರ್, ಮೊದಲಾದವರು ಮಾಡಿದ ಸಲಹೆಗಳು ಪ್ರಯೋಜನಕಾರಿಯಾಗಲಿಲ್ಲ.

೨. ಫ್ರಾನ್ಸಿನಲ್ಲಿ ಫ್ಯೂಡಲ್ ಪದ್ಧತಿ ಇನ್ನೂ ಉಳಿದುಕೊಂಡೆ ಬಂದಿತ್ತು. ರೈತರ ಸ್ಥಿತಿ ತೀವ್ರ ಶೋಚನೀಯವಾಗಿತ್ತು. ಅವರು ತೆರಿಗೆಯ ಜೊತೆಗೆ ತಮ್ಮ ಜಮೀನುದಾರರಿಗೆ (Feudal lord) ಮಾಡಬೇಕಾದ ದುಡಿಮೆ ಮತ್ತು ಪರೋಕ್ಷವಾಗಿ ತೆರುತ್ತಿದ್ದ ಕಾಣಿಕೆ, ಚರ್ಚ್‌ಗಾಗಿ ಕೊಡುತ್ತಿದ್ದ ಹಣ (Tithes) ಇವೆಲ್ಲಾ ಸೇರಿ ಅವನ ಆರ್ಥಿಕ ಸ್ಥಿತಿ ಸಹಿಸಲು ಅಸಾಧ್ಯವಾಗಿತ್ತು.

೩. ಫ್ರಾನ್ಸಿನ ರಾಜಕೀಯ ಪರಿಸ್ಥಿತಿಯಂತೂ ತೀವ್ರ ವಿಷಾದಕರವಾಗಿತ್ತು. ಫ್ರೆಂಚ್‌ರಾಜರು—೧೪ ನೆ ಲೂಯಿಯಿಂದ ೧೬ ನೆ ಲೂಯಿಯವರೆಗೆ—ಪ್ರತಿಯೊಬ್ಬರೂ ನಿರಂಕುಶ ಪ್ರಭುಗಳಾಗಿದ್ದರು. ೧೪ ನೆ ಲೂಯಿಯು ಯೂರೋಪಿನಲ್ಲಿ ಮಾಡಿದ ಯುದ್ಧಗಳು ಫ್ರಾನ್ಸಿನ ಮೇಲೆ ಹೆಚ್ಚು ಕೆಟ್ಟ ಪರಿಣಾಮುಗಳನ್ನುಂಟು ಮಾಡಿದುವು. ಒಂದು ರೀತಿಯಲ್ಲಿ ಅವು ಫ್ರಾನ್ಸಿನ ಬಲವನ್ನು ಕುಂದಿಸಿತೆಂದು ಹೇಳಬಹುದು. ಅವನ ನಂತರ ಆಳಿದ ೧೫ ನೆ ಲೂಯಿ ಪರಿಸ್ಥಿತಿಯನ್ನು ಅರಿತಿದ್ದರೂ ಯಾವ ಸುಧಾರಣೆಗಳನ್ನೂ ಜಾರಿಗೆ ತರುವ ಮನೋಭಾವವನ್ನು ಹೊಂದಿರಲಿಲ್ಲ. "ನಾನಾದ ಮೇಲೆ ಪ್ರಳಯ" ಎಂದು ಅವನು ಹೇಳುತ್ತಿದ್ದುದನ್ನು

ವಿಚಾರಮಾಡಿ ನೋಡಿದರೆ ಅವನ ಬೇಜವಾಬ್ದಾರಿ ಎಷ್ಟೆಂದು ನಮಗೆ ಅರಿವಾಗುವುದು.

೪. ಅಮೇರಿಕದಲ್ಲಿ ಸ್ವಾತಂತ್ರ್ಯಕ್ಕಾಗಿ ಯುದ್ಧ ನಡೆಯುತ್ತಿದ್ದಾಗ ಫ್ರೆಂಚ್ ಸರ್ಕಾರ ಮತ್ತು ಫ್ರೆಂಚ್ ಜನಗಳು ಅದರಲ್ಲಿ ಭಾಗವಹಿಸಿ ಇಂಗ್ಲೆಂಡಿನ ಅಪಜಯಕ್ಕೆ ಕಾರಣರಾದರೆಂದು ಹಿಂದೆಯೇ ಹೇಳಿದೆ. ಅಮೆರಿಕದಿಂದ ಮರಳಿ ಬಂದ ಫ್ರೆಂಚರಿಗೆ ಅಮೆರಿಕದಂತೆ ಪ್ರಜಾ ರಾಜ್ಯವನ್ನು ತಮ್ಮ ದೇಶದಲ್ಲಿಯೂ ಸ್ಥಾಪಿಸಬೇಕೆಂಬ ಹಂಬಲ ಮೂಡಿದ್ದು ಸಹಜವೇ ಸರಿ. ಇಷ್ಟೇ ಅಲ್ಲದೆ ಫ್ರಾನ್ಸಿನ ಶ್ರೀಮಂತರ ಗೃಹಗಳಲ್ಲಿ 'ಮಾನವನ ಹಕ್ಕುಗಳ' (Rights of Man) ವಿಚಾರದಲ್ಲಿ ವಿಪುಲವಾದ ಚರ್ಚೆಗಳಾಗುತ್ತಿದ್ದುವು. ಅನೇಕ ಗ್ರಂಥಕರ್ತರು (Philosophes) ತಮ್ಮ ಗ್ರಂಥಗಳಿಂದ ಅನೇಕ ಹೊಸ ಹೊಸ ಭಾವನೆಗಳನ್ನು ಬೆಳಕಿಗೆ ತಂದರು. ಮಾಂಟೆಸ್ಕ್ಯೂ (೧೬೮೯–೧೭೫೫) ಇಂಗ್ಲಿಷ್ ಆಡಳಿತ ಪದ್ಧತಿಯನ್ನು ಪ್ರಶಂಸಿಸಿ, ಕಾರ್ಯಾಂಗ ಮತ್ತು ಶಾಸನಾಂಗ (Executive and Legislative Powers) ಬೇರೆ ಬೇರೆಯಾಗಿರಬೇಕೆಂದು ಬೋಧಿಸಿದನು. ಡಿಡೂರಾಟ್ (Diderot. ೧೭೧೩–೧೭೮೪) ಅನೇಕ ವಿಷಯಗಳನ್ನು ಪ್ರಕಟಿಸಿ, ಫ್ರಾನ್ಸಿನ ಸಂಸ್ಥೆಗಳ ಹುಳುಕುಗಳನ್ನು ಎತ್ತಿ ತೋರಿಸಿದನು. ರೂಸೊ (Rousseau) (೧೭೧೨–೭೮) ಜನಗಳಲ್ಲಿ ಬಳಕೆಯಲ್ಲಿದ್ದ ಅಸಮತೆಯ (Inequality) ಮೂಲವನ್ನು ಕುರಿತು ಚರ್ಚಿಸಿದನು. ಅವನ ಮುಖ್ಯ ಗ್ರಂಥವಾದ 'ಸೋಷಿಯಲ್ ಕಾನ್ಟ್ರಾಕ್ಟ್, ೧೭೬೨.' ಎಲ್ಲಾ ಅಧಿಕಾರವೂ ಜನಗಳಿಗೆ ಸೇರಿದ್ದೆಂದೂ, ಸರ್ಕಾರಗಳು ಜನಗಳ ಸೇವಕರಂತಿರಬೇಕೆಂದೂ ಸಾರಿತು. ವಾಲ್ಟೇರ್ (Voltaire ೧೬೯೪–೧೭೭೮) ಫ್ರಾನ್ಸಿನಲ್ಲಿದ್ದ ಕ್ರಿಶ್ಚಿಯನ್ನರ ಚರ್ಚು (ಮತೀಯ ಸಂಸ್ಥೆ) ಜನಗಳಲ್ಲಿ ಮೌಢ್ಯವನ್ನು ಹೆಚ್ಚಿಸುವುದರಲ್ಲೇ ನಿರತವಾಗಿತ್ತೆಂದು ಅದನ್ನು ಖಂಡಿಸಿದನು. ಸ್ವಾತಂತ್ರ್ಯ, ಸಮತೆ, ಸಹೋದರತೆ (Liberty, Equality and Fraternity) ಕ್ರಾಂತಿಯ ಕೂಗಾಯಿತು.

ಈ ಹಲವಾರು ಕಾರಣಗಳು ಫ್ರಾನ್ಸಿನ ಕ್ರಾಂತಿಗೆ ತಳಹದಿಯನ್ನು ಹಾಕಿದುವು. ೧೭೭೪ ರಲ್ಲಿ ೧೬ ನೇ ಲೂಯಿ ಪಟ್ಟಕ್ಕೆ ಬಂದನು. ೧೭೮೯ ರ ವೇಳೆಗೆ ಫ್ರಾನ್ಸಿನಲ್ಲಿ ಹಣಕಾಸಿನ ಸ್ಥಿತಿ ಹದಗೆಟ್ಟು, ೧೭೫ ವರ್ಷಗಳಿಂದ ಸಭೆ ಸೇರದಿದ್ದ ಫ್ರೆಂಚ್ ಪಾರ್ಲಿಮೆಂಟಾದ "ಎಸ್ಟೇಟ್ ಜನರಲ್" ನ್ನು ಅವನು ಸೇರಿಸಿದನು. ಈ ಸಭೆಯು ಅನೇಕ ಸುಧಾರಣೆಗಳನ್ನು ಜಾರಿಗೆ ತರಲು ಇಷ್ಟವುಳ್ಳದಾಗಿತ್ತೆ ವಿನಃ ರಾಜತ್ವವನ್ನು ಫ್ರಾನ್ಸಿನಿಂದ ಕೊನೆಗಾಣಿಸಬೇಕೆಂಬ ಅಭಿಪ್ರಾಯವನ್ನು ಹೊಂದಿರಲಿಲ್ಲ. ಆದರೆ ಪ್ಯಾರಿಸ್ ಪಟ್ಟಣದ ಜನ ಜಂಗುಳಿಯು (Mob) ತಮ್ಮ ವಶಕ್ಕೆ ಸಭೆಯನ್ನೂ (Assembly), ರಾಜನನ್ನೂ ಮತ್ತು ರಾಣಿಯನ್ನೂ ತೆಗೆದುಕೊಂಡಿತು. ಜನಜಂಗುಳಿಯು ಬಾಸ್ಟಿಲ್ (Bastille) ಎಂಬ ಬಂದೀಖಾನೆಯನ್ನು ಮುತ್ತಿತು.

ರಾಜನು ಪರದೇಶಗಳ ಸೈನ್ಯಗಳ ಸಹಾಯದಿಂದ ಕ್ರಾಂತಿಯನ್ನು ಅಡಗಿಸಲು ಉದ್ಯುಕ್ತನಾಗಿದ್ದನೆಂದು, ವೇಷ ಮರೆಸಿಕೊಂಡು ಓಡಿಹೋಗುತ್ತಿದ್ದ ೧೬ ನೆ ಲೂಯಿ ಮತ್ತು ಅವನ ರಾಣಿ ಮೇರಿ ಅಂಟಾಯಿನೆಟ್ ಅವರನ್ನು ೧೭೯೩ ರಲ್ಲಿ ಮರಣದಂಡನೆಗೆ ಗುರಿಮಾಡಿ, ಕ್ರಾಂತಿಕಾರರು ರಾಜತ್ವವನ್ನು ಫ್ರಾನ್ಸಿನಲ್ಲಿ ಕೊನೆಗಾಣಿಸಿದರು. ಇದಕ್ಕೆ ಕಾರಣವಾದ ಗುಂಪಿನ ಸದಸ್ಯರಿಗೆ 'ಜಾಕೊಬಿನ್' ಎಂದು ಹೆಸರು.

ಇದಕ್ಕೆ ಮುಂಚೆ ಇಂಗ್ಲೆಂಡಿನಲ್ಲಿ ಫ್ರಾನ್ಸಿನ ಮಹಾಕ್ರಾಂತಿಯ ವಿಚಾರದಲ್ಲಿ ಭಿನ್ನಾಭಿಪ್ರಾಯಗಳು ಹುಟ್ಟಿಕೊಂಡಿದ್ದುವು. ಎಡ್ಮಂಡ್ ಬರ್ಕ್ (Edmund Burke) ಫ್ರಾನ್ಸಿನ ಕ್ರಾಂತಿಯು ರಾಜತ್ವವನ್ನೂ ಮತ್ತು ಮತವನ್ನೂ (Kingship and Religion) ಹಾಳುಮಾಡಿ ಯೂರೋಪಿನಲ್ಲಿ ಘೋರಯುದ್ಧಕ್ಕೆ ಕಾರಣವಾಗಿ ಸೈನಿಕ ಪ್ರಭುತ್ವದಲ್ಲಿ ಕೊನೆಗಾಣುವುದೆಂದು ತಾನು ೧೭೯೦ ರಲ್ಲಿ ಬರೆದ "ರಿಫ್ಲೆಕ್ಷನ್ಸ್ ಆನ್ ದಿ ಫ್ರೆಂಚ್ ರೆವಲ್ಯೂಷನ್" (Reflections on the French Revolution) ಗ್ರಂಥದಲ್ಲಿ ಸಾರಿದನು. ಅವನಿಗೆ ಅದು ಯೂರೋಪಿನ ಪ್ರಜಾಪ್ರಭುತ್ವಕ್ಕೆ ತಳಹದಿಯನ್ನು ಹಾಕುವುದೆಂದು ಗೊತ್ತಾಗಲಿಲ್ಲ. ಬರ್ಕ್ ತೀವ್ರ ರಾಜಕೀಯ ಬದಲಾವಣೆಗಳಿಗೆ ವಿರೋಧಿ

ಯಾಗಿದ್ದನು (Extreme changes). ಬರ್ಕ್ ಹೇಳಿದ ಅಭಿಪ್ರಾಯಗಳನ್ನು ವಿರೋಧಿಸಿ ಟಾಮ್ ಪೇಯಿನ್ (Tom paine) "ಮಾನವನ ಹಕ್ಕುಗಳು" ಎಂಬ ಗ್ರಂಥವನ್ನು ಬರೆದನು. ಆದರೆ ಫ್ರಾನ್ಸಿನ ಮಹಾಕ್ರಾಂತಿಯನ್ನು ಮೆಚ್ಚಿ ಅದು ಪಾರ್ಲಿಮೆಂಟಿನ ಹಳೆಯ ಚುನಾವಣೆಯ ಪದ್ಧತಿಯನ್ನು ತ್ಯಜಿಸಿ ಹೊಸ ಸುಧಾರಣೆಗಳು ಬರಲು ಮಾರ್ಗದರ್ಶಕವೆಂದು ವಾದಿಸಿದವನು ಚಾರ್ಲ್ಸ್ ಜೇಮ್ಸ್ ಫಾಕ್ಸ್.

೧೭೯೨ ರಲ್ಲಿ ಫ್ರಾನ್ಸ್, ಆಸ್ಟ್ರಿಯ, ಪ್ರಷ್ಯಾ ಮೊದಲಾದ ದೇಶಗಳೊಡನೆ ಯುದ್ಧಕ್ಕೆ ತೊಡಗಿತು. ಗಣರಾಜ್ಯವನ್ನು (Republic) ಹೊಸದಾಗಿ ಸ್ಥಾಪಿಸಿದ್ದ ಫ್ರಾನ್ಸ್ ಜಮಪ್ಪೆಸ್ (Jemeppes) ಎಂಬ ಕದನದಲ್ಲಿ ವಿಜಯಗಳಿಸಿ ಬೆಲ್ಜಿಯಂ ದೇಶವನ್ನು ತನ್ನ ವಶಮಾಡಿಕೊಂಡಿತು. ಪರರಾಷ್ಟ್ರಗಳ ಆಕ್ರಮಣಕ್ಕೆ ಒಳಗಾಗಿದ್ದ ಫ್ರಾನ್ಸ್ ಪರರಾಷ್ಟ್ರಗಳ ಸೈನ್ಯವು ಪ್ಯಾರಿಸ್ಸಿನಿಂದ ಕಾಲ್ತೆಗೆಯುವಂತೆ ಮಾಡಿದ್ದುದಲ್ಲದೆ ತನ್ನ ಸೈನ್ಯಗಳನ್ನು ಹುರಿದುಂಬಿಸಿ ಜಯಗಳಿಸುವಂತೆ ಮಾಡಿತು. ಸೇನಾಧಿಪತಿಗಳು ಸೋತರೆ ಗಲ್ಲು ಅವರಿಗೆ (Guillotine) ಸಿದ್ಧವಾಗಿ ಕಾದಿತ್ತು. ಬೆಲ್ಜಿಯಂ ಆಕ್ರಮಣದಿಂದ ಪಿಟ್ ಫ್ರಾನ್ಸಿನೊಡನೆ ಯುದ್ಧಮಾಡಬೇಕಾಯಿತು. ಆದರೆ ಬ್ರಿಟಿಷ್ ಜನಗಳು ಫ್ರಾನ್ಸಿನಲ್ಲಿ ಜಾಕೊಬಿನ್ ಮುಖಂಡರು ಕೈಗೊಂಡಿದ್ದ ಸೆಪ್ಟೆಂಬರ್ ಕಗ್ಗೊಲೆ (September Massacres) ಯಿಂದ ಕುಪಿತರಾದರು. ರಾಜ ರಾಣಿಯರ ಮರಣದಂಡನೆಯು ಅವರ ಸಹನೆಯ ಎಲ್ಲೆಯನ್ನು ಮೀರಿಸಿತ್ತು. ಅವರು ಈ ಕಾರಣಗಳಿಗಾಗಿ ಫ್ರಾನ್ಸಿನಮೇಲೆ ಮಾಡಿದ ಯುದ್ಧಘೋಷಣೆಯನ್ನು ಅನುಮೋದಿಸಿದರು.

**ಫ್ರಾನ್ಸಿನೊಡನೆ ಯುದ್ಧ:** (೧) ಮಹಾಕ್ರಾಂತಿಯ ಕಾಲ (೧೭೯೩–೧೮೦೨) ಹೀಗೆ ಯುದ್ಧವು ಒದಗಿ ಬಂದುದರಿಂದ ಶಾಂತಿಯ ಕೆಲಸ ಕಾರ್ಯಗಳಲ್ಲಿ ನಿರತನಾಗಿದ್ದ ಪಿಟ್ ಸಮರ ಮಂತ್ರಿಯಾಗಬೇಕಾಯಿತು (War Minister). ಆದರೆ ಇದಕ್ಕಾಗಿ ಅವನಿಗೆ ಬೇಕಾದ ಸಾಮರ್ಥ್ಯವಿರಲಿಲ್ಲ. ಆದರೂ ಅವನು ಇಂಗ್ಲೆಂಡನ್ನು ಕಾಪಾಡಲು ತನ್ನ ಜೀವವನ್ನೇ ತೆತ್ತನು. ಫ್ರಾನ್ಸಿನ ವಿರುದ್ಧರಾಷ್ಟ್ರಗಳ ಗುಂಪನ್ನು ಸೇರಿಸಿ (Coalition) ಅವುಗಳಿಗೆ ಹಣ ಸಹಾಯ ಮಾಡುವುದರಲ್ಲೆ ಅವನು ಹಣಾದನು.

ಸಮುದ್ರದ ಮೇಲಿನ ಬಲವನ್ನು ಕಾಪಾಡಿ ಇಂಗ್ಲೆಂಡ್ ಫ್ರೆಂಚರ ಆಕ್ರಮಣ (Invasion) ದಿಂದ ಪಾರಾಗುವಂತೆ ಮಾಡುವುದೇ ಅವನ ನೀತಿ (Policy) ಆಗಿತ್ತು. ಆದರೆ ಇಂಗ್ಲಿಷ್ ನೌಕಾಪಡೆ (Navy) ಯ ಸ್ಥಿತಿ ತೀವ್ರ ಅತೃಪ್ತಿಕರವಾಗಿತ್ತು. ೧೭೯೭ ರಲ್ಲಿ ನೋರ್ ಮತ್ತು ಸ್ಪಿಟ್‌ಹೆಡ್ (Nore and Spithead) ಎಂಬಲ್ಲಿ ನಾವಿಕರು ದಂಗೆ ಎದ್ದರು. ಇಂಗ್ಲೆಂಡಿನಲ್ಲಿ ಪಾರ್ಲಿಮೆಂಟಿನ ಚುನಾವಣೆ ಪದ್ಧತಿಯಲ್ಲಿ ಸುಧಾರಣೆಗಳನ್ನು ತರಲು ಕಾತುರರಾಗಿದ್ದವರನ್ನು ಪಿಟ್ ತಡೆಗಟ್ಟಬೇಕಾಯಿತು. ಅದಕ್ಕಾಗಿ ದೇಶದಲ್ಲಿ ನಡೆಯುತ್ತಿದ್ದ ಚಳುವಳಿ, ಹೆಚ್ಚು ಕೂಲಿಗಾಗಿ ಬೇಡಿಕೆ ಮೊದಲಾದುವು ೧೭೯೯ ರಲ್ಲಿ ಜಾರಿಗೆ ಬಂದ ಕಾನೂನಿನಿಂದ ಪ್ರತಿಬಂಧಿಸಲ್ಪಟ್ಟವು.

**ಪಿಟ್ ಮತ್ತು ಮೊದಲನೆ ಮಿತ್ರರಾಷ್ಟ್ರಗಳ ಗುಂಪು, ೧೭೯೩-೧೭೯೭ :** ೧೭೯೪ ರಲ್ಲಿ ಸಮುದ್ರದ ಮೇಲೆ ಜೂನ್ ಒಂದನೇ ತಾರೀಖು ಇಂಗ್ಲೆಂಡಿನ ನೌಕಾಧಿಪತಿ ಹೌ (Howe) ಎಂಬುವನು ಫ್ರೆಂಚರ ನೌಕಾಪಡೆಯನ್ನು ಸೋಲಿಸಿದನು (Battle of the Glorious First of June ೧೭೯೪). ಆದರೆ ೧೭೯೬ ರಲ್ಲಿ ಫ್ರೆಂಚರ ದಳಪತಿ ನೆಪೋಲಿಯನ್ ಆಸ್ಟ್ರಿಯದ ಸೈನ್ಯಗಳನ್ನು ಇಟಲಿಯಲ್ಲಿ ಲೋಡಿ (Lodi), ಆರ್ಕೋಲ (Arcola) ಮತ್ತು ರಿವೋಲಿ (Rivoli) ಎಂಬ ಕಡೆಗಳಲ್ಲಿ ಸೋಲಿಸಿದನು. ಇಂಗ್ಲೆಂಡ್ ಒಂದೇ ಉಳಿಯಿತು. ಅದು ಹಾಲೆಂಡ್ ಮತ್ತು ಸ್ಪೆಯಿನ್‌ಗಳ ಸಂಯುಕ್ತ ಸಹಾಯದಿಂದ ಕೂಡಿದ ಫ್ರೆಂಚರನ್ನು ಎದುರಿಸಬೇಕಾಯಿತು. ಆದರೆ ಬ್ರಿಟಿಷ್ ನೌಕೆಯು ಇಂಗ್ಲೆಂಡನ್ನು ಕಾಪಾಡಿತು. ನೌಕಾಧಿಪತಿ ಜರ್ವಿಸ್ (Jervis) ಫ್ರೆಂಚ್ ಮತ್ತು ಸ್ಪೆಯಿನ್‌ಗಳ ನೌಕಾಪಡೆಯನ್ನು ೧೭೯೭ ರಲ್ಲಿ ಸೆಂಟ್ ವಿನ್ಸೆಂಟ್ (Battle of St. Vincent) ಎಂಬಲ್ಲಿ ಸೋಲಿಸಿದನು. ಡಂಕನ್ ಡಚ್ಚರ ಹಡಗು ಪಡೆಯನ್ನು ಕ್ಯಾಂಪರ್‌ಡೌನ್ (Camperdown, ೧೭೯೭) ಕದನದಲ್ಲಿ ಸೋಲಿಸಿದನು.

**ಎರಡನೆ ಮಿತ್ರರಾಷ್ಟ್ರಗಳ ಗುಂಪು, ೧೭೯೮–೧೮೦೨ :** ೧೭೯೮ ರಲ್ಲಿ ನೆಪೋಲಿಯನ್ ಬೋನಪಾರ್ಟ್ ಈಜಿಪ್ಟ್ ದೇಶಕ್ಕೆನುಗ್ಗಿ ಅದನ್ನು

ವಶಪಡಿಸಿಕೊಂಡನು. ಅವನು ಅಲ್ಲಿಂದ ಮುಂದೆ ಬ್ರಿಟಿಷರ ಕೈವಶದಲ್ಲಿದ್ದ ಇಂಡಿಯಾ ದೇಶದ ಮೇಲೆ ನುಗ್ಗಲು ಹವಣಿಸಿದ್ದನು. ಆದರೆ ನೈಲ್‌ನದಿ ಕದನದಲ್ಲಿ ನೌಕಾಧಿಪತಿ ನೆಲ್ಸನ್ ಫ್ರೆಂಚರಮೇಲೆ ಬಿದ್ದು ಅವರ ಹಡಗುಗಳನ್ನು ನಾಶಮಾಡಿದನು. ನೆಪೋಲಿಯನ್ ತನ್ನ ಸೈನ್ಯವನ್ನು ಅಲ್ಲಿಬಿಟ್ಟು ಫ್ರಾನ್ಸನ್ನು ತಲಪಿದನು. ಅಲ್ಲಿ ಅವನು ಅಧಿಕಾರವನ್ನು ತಾನೇ ವಹಿಸಿಕೊಂಡನು (First Consul). ಆಸ್ಟ್ರಿಯವು ಮಾರೆಂಗೊ ಮತ್ತು ಹೊಹೆನ್‌ಲಿಂಡನ್ ಎಂಬಲ್ಲಿ ಸೋತು ೧೮೦೧ ರಲ್ಲಿ ಲೂನೆವೀಲ್ (Lune-Ville) ಒಪ್ಪಂದವನ್ನು ಮಾಡಿಕೊಂಡಿತು. ತನ್ನ ಶತ್ರುವಾದ ಫ್ರಾನ್ಸಿನ ಜೊತೆಯಲ್ಲಿ ಯುದ್ಧಕ್ಕೆ ಬೇಕಾದ ಸಾಮಗ್ರಿಗಳ ವ್ಯಾಪಾರಮಾಡಲು ಕೆಲವು ಅಡ್ಡಿಆತಂಕಗಳನ್ನು ಇಂಗ್ಲೆಂಡ್ ತಂದೊಡ್ಡಿದ್ದರಿಂದ ಬಾಲ್ಟಿಕ್ ಸಮುದ್ರದ ಪಕ್ಕದ ರಾಷ್ಟ್ರಗಳಾದ ಡೆನ್‌ಮಾರ್ಕ್, ಸ್ವೀಡನ್, ಪ್ರಷ್ಯಾ, ರಷ್ಯ, ಮೊದಲಾದುವು ಪ್ರತಿಭಟಿಸಿದುವು. ಇವುಗಳ ಸಂಘಕ್ಕೆ "ಆರಮ್ಡ್ ನ್ಯೂಟ್ರಾಲಿಟಿ" ಎಂದುಹೆಸರು. ಇದು ಅಮೆರಿಕದ ಸ್ವಾತಂತ್ರ್ಯ ಯುದ್ಧದ ಕಾಲದಲ್ಲಿ (೧೭೮೦) ಸ್ಥಾಪಿಸಲ್ಪಟ್ಟಿತ್ತು. ಬ್ರಿಟಿಷ್ ನೌಕಾಪಡೆಯೊಂದು ಸರ್‌ಹೈಡ್ ಪಾರ್ಕರ್ ಮತ್ತು ನೆಲ್ಸನ್‌ರವರ ಮುಖಂಡತ್ವದಲ್ಲಿ ಕೋಪನ್‌ಹೇಗನ್ ಕದನದಲ್ಲಿ ಈ ರಾಷ್ಟ್ರಗಳನ್ನು ೧೮೦೧ ರಲ್ಲಿ ಸೋಲಿಸಿತು. ಕದನವು ನಡೆಯುತ್ತಿದ್ದಾಗ ತಮಗೆ ಅಪಜಯವಾಗುವುದೆಂದು ಭಾವಿಸಿ ಪಾರ್ಕರ್ ಯುದ್ಧವನ್ನು ನಿಲ್ಲಿಸುವಂತೆ ನೆಲ್‌ಸನ್ನನಿಗೆ ಸಂಜ್ಞೆ (Signal) ಮಾಡಿದನು. ಆದರೆ ನೆಲ್‌ಸನ್ ಯುದ್ಧವನ್ನು ಗೆಲ್ಲಬೇಕೆಂದೇ ನಿರ್ಧರಿಸಿ ಕುರುಡಾಗಿದ್ದ ತನ್ನ ಕಣ್ಣಿಗೆ ಟೆಲಿಸ್ಕೋಪನ್ನು ಇಟ್ಟುಕೊಂಡು ಏನೂ ಕಾಣದಂತೆ ನಟಿಸಿ ಯುದ್ಧವನ್ನು ಮುಂದುವರೆಸಿ, ಜಯಶೀಲನಾದನು. ಈ ಜಯವು ಲಭಿಸುವುದಕ್ಕಿಂತ ಒಂದುವಾರ ಮುಂಚೆ ಇಂಗ್ಲೆಂಡನ್ನು ದ್ವೇಷಿಸುತ್ತಿದ್ದ ರಷ್ಯದ ಚಕ್ರವರ್ತಿ ಪಾಲ್ ಕಾಲವಾಗಿದ್ದನು. ಅವನ ನಂತರ ಚಕ್ರವರ್ತಿಯಾದ ಒಂದನೆ ಅಲೆಕ್ಸಾಂಡರ್ ಶಾಂತಿಯ ಒಪ್ಪಂದವನ್ನು ಪ್ರಸ್ತಾಪಿಸಿದನು.



**ಫ್ರಾನ್ಸಿನ ಮಹಾಕ್ರಾಂತಿಯ ಮತ್ತು ನೆಪೋಲಿಯನ್ನನ ಯುದ್ಧಗಳು (ಸಮುದ್ರದ ಮೇಲೆ)**

ಈ ವೇಳೆಗೆ ಇಂಗ್ಲೆಂಡ್ ಮತ್ತು ಫ್ರಾನ್ಸ್ ಯುದ್ಧವನ್ನು ತಾತ್ಕಾಲಿಕವಾಗಿ ನಿಲ್ಲಿಸುವಂತೆ ೧೮೦೨ ರಲ್ಲಿ ಅಮಿಯಾನ್ಸ್ ಒಪ್ಪಂದದಿಂದ ಗೊತ್ತು

ಮಾಡಿಕೊಂಡವು. ಇಂಗ್ಲೆಂಡ್, ಸಿಲೋನ್, ಟ್ರಿನಿಡಾಡ್, ಮತ್ತು ಮಾಲ್ಟ ಮೊದಲಾದವುಗಳನ್ನು ಬಿಟ್ಟುಕೊಡಲು ಒಪ್ಪಿತು. ಕೋಪನ್‌ಹೇಗನ್ ಕದನದ ವೇಳೆಗೆ ಪಿಟ್ಟನ ಸರ್ಕಾರವು ಮುಕ್ತಾಯವಾಗಿದ್ದರೂ ಅವನ ಸಲಹೆಯಂತೆಯೇ ಅವನ ನಂತರ ಅಧಿಕಾರಕ್ಕೆ ಬಂದ ಅಡಿಂಗ್‌ಟನ್ ಶಾಂತಿಯ ಒಪ್ಪಂದವನ್ನು ನೆಪೋಲಿಯನ್ನನೊಡನೆ ಮಾಡಿಕೊಂಡನು.

**(೨.) ನೆಪೋಲಿಯನ್‌ನೊಡನೆ ಯುದ್ಧ: ೧೮೦೩–೧೮೧೫.** ಮೂರನೆ ಮಿತ್ರರಾಷ್ಟ್ರಗಳ ಗುಂಪು ಮತ್ತು ಪಿಟ್: ೧೮೦೩–೧೮೦೫. ಅಮೀನ್ಸ್ ಒಪ್ಪಂದದಿಂದ ಯುದ್ಧವು ನಿಲ್ಲಲಿಲ್ಲ. ನೆಪೋಲಿಯನ್ನನ ಚಟುವಟಿಕೆಗಳು ಇಂಗ್ಲೆಂಡಿನ ಸಂಶಯವನ್ನು ಕೆರಳಿಸಿದವು. ಅವನು ಯೂರೋಪಿನ ದೇಶಗಳನ್ನು ವಶಪಡಿಸಿಕೊಂಡು ಇಂಗ್ಲೆಂಡಿನ ಮೇಲೆ ಬೀಳುವನೆಂಬ ಅರಿವು ಅದಕ್ಕಾಗಿತ್ತು. ಆಗಲೆ ಹಾಲೆಂಡ್, ರೈನ್ (Rhine) ಪ್ರದೇಶ ಮತ್ತು ಉತ್ತರ ಇಟಲಿ ಫ್ರಾನ್ಸಿನ ವಶವಾಗಿದ್ದವು. ಇಂಗ್ಲೆಂಡ್ ಮಾಲ್ಟವನ್ನು ಅಮೀನ್ಸ್ ಕರಾರಿನಂತೆ ಬಿಟ್ಟುಕೊಡಲಿಲ್ಲ. ೧೮೦೩ ರಲ್ಲಿ ಯುದ್ಧವು ಪುನಃ ಪ್ರಾರಂಭವಾಯಿತು. ನೆಪೋಲಿಯನ್ ಇಂಗ್ಲೆಂಡಿಗೆ ಮುತ್ತಿಗೆ ಹಾಕುವ ಸಲುವಾಗಿ ಬೊಲೋನ್ ಎಂಬಲ್ಲಿ ಒಂದು ದೊಡ್ಡ ಸೈನ್ಯವನ್ನು ಶೇಖರಿಸಿದನು. ಈ ಸೈನ್ಯದಲ್ಲಿ ನೆಪೋಲಿಯನ್ನನ ಪ್ರಖ್ಯಾತ ಸೇನಾಪತಿಗಳಾದ ಸೋಲ್ಟ್ (Soult), ಲಾನ್ಸ್ (Lannes), ನೇ (Ney), ಮುರಾಟ್ (Murat), ಡವೋಸ್ಟ್ (Davoust) ಮತ್ತು ಬರ್ಥಿಯರ್ (Berthier) ಮೊದಲಾದವರೆಲ್ಲಾ ಇದ್ದರು. ಈ ಸೈನ್ಯವು ಮೂವತ್ತು ಮೈಲಿಯ ಇಂಗ್ಲಿಷ್ ಕಡಲ್ಗಾಲುವೆಯನ್ನು ದಾಟಿದ್ದರೆ ಇಂಗ್ಲೆಂಡ್ ಸೋತುಹೋಗಿ ಶರಣಾಗತಿಯನ್ನು ಹೊಂದಬೇಕಾಗಿತ್ತು. ಆದರೆ ಇಂಗ್ಲಿಷ್ ನೌಕಾಪಡೆ ಇದನ್ನು ತಪ್ಪಿಸಿತು. ಇಂಗ್ಲೆಂಡಿನಲ್ಲಿ ನೆಪೋಲಿಯನ್ ಮಾಡುತ್ತಿದ್ದ ಪ್ರಯತ್ನಗಳನ್ನು ಕಂಡು ಜನಗಳಿಗೆ ಬಹಳ ಭೀತಿಯುಂಟಾಗಿತ್ತು. ಅಡಿಂಗ್‌ಟನ್ ಯುದ್ಧವನ್ನು ನಡೆಸಲು ಅಸಮರ್ಥನೆಂದು ಜನಗಳು ಅರಿತು, ಪಿಟ್ ಪುನಃ ಅಧಿಕಾರಕ್ಕೆ ಬರಬೇಕೆಂದು ಆಶಿಸಿದರು. ಅಮೀನ್ಸ್ ಕರಾರು ಏರ್ಪಡುವುದಕ್ಕಿಂತ ಮುಂಚೆ ಅವನು ಅಧಿಕಾರವನ್ನು ತ್ಯಜಿಸಿದ್ದನು. ಐರ್ಲೆಂಡ್ ಮತ್ತು ಇಂಗ್ಲೆಂಡ್ ಒಕ್ಕೂಡಲು (Union of Ireland)

ಪಿಟ್ ಪ್ರಯತ್ನಪಟ್ಟದ್ದನಷ್ಟೆ. ೧೮೦೦ ರಲ್ಲಿ ಐರ್ಲೆಂಡಿನ ಒಕ್ಕೂಟದ ಕಾನೂನು ಜಾರಿಗೆ ಬಂದಿತು. ಆದರೆ ಅದರ ಅಂಗವಾಗಿ ಬರಬೇಕಾಗಿದ್ದ ಕ್ಯಾಥಲಿಕರ ವಿಮೋಚನೆಯ ಕಾನೂನು ಪಿಟ್ ಐರ್ಲೆಂಡಿನ ರೋಮನ್ ಕ್ಯಾಥಲಿಕ್ ಜನಾಂಗಕ್ಕೆ ವಾಗ್ದಾನ ಮಾಡಿದ್ದಂತೆ ಬರಲಿಲ್ಲ. ಮೂರನೇ ಜಾರ್ಜನಿಗೆ ಕ್ಯಾಥಲಿಕರನ್ನು ಕಂಡರಾಗುತ್ತಿರಲಿಲ್ಲವಾದ್ದರಿಂದ ಅವನು ಇದನ್ನು ಆಗಗೊಡಲಿಲ್ಲ. ಪಿಟ್ ಪುನಃ ಅಧಿಕಾರಸೂತ್ರಗಳನ್ನು ವಹಿಸಿಕೊಂಡಾಗ ಅವನು ಪುನಃ ಕ್ಯಾಥಲಿಕ್ ವಿಮೋಚನೆಗಾಗಿ ಪ್ರಯತ್ನಪಡಕೂಡದೆಂಬ ವಾಗ್ದಾನವನ್ನು ಮೂರನೇ ಜಾರ್ಜನಿಗೆ ಮಾಡಬೇಕಾಯಿತು. ದೇಶವನ್ನು ರಕ್ಷಿಸುವ ಕೆಲಸವು ಅತ್ಯಂತ ಮುಖ್ಯವಾಗಿತ್ತಾದ್ದರಿಂದ ಪಿಟ್ ಇದಕ್ಕೆ ತಾತ್ಕಾಲಿಕವಾಗಿ ಒಪ್ಪಿಕೊಳ್ಳಬೇಕಾಯಿತು.

ಪುನಃ ಪಿಟ್ ಯೂರೋಪಿನಲ್ಲಿ ಮಿತ್ರರಾಷ್ಟ್ರಗಳ ಗುಂಪೊಂದನ್ನು ಕಟ್ಟಿದನು. ರಷ್ಯಾ ಮತ್ತು ಆಸ್ಟ್ರಿಯ ಫ್ರಾನ್ಸಿನ ಮೇಲೆ ನುಗ್ಗಬೇಕೆಂದು ಗೊತ್ತಾಯಿತು. ಈ ಮಧ್ಯೆ ನೆಪೋಲಿಯನ್ ಇಂಗ್ಲೆಂಡನ್ನು ಮುತ್ತಲು ತನ್ನ ಪ್ರಯತ್ನಗಳನ್ನು ಮುಂದುವರಿಸಿದ್ದನು. ಫ್ರೆಂಚರ ನೌಕಾಪಡೆಗಳು ಟೋಲಾನ್ (Toulon) ಮತ್ತು ಬ್ರೆಸ್ಟ್ (Brest) ರೇವುಪಟ್ಟಣಗಳಲ್ಲಿದ್ದುವು. ಇಂಗ್ಲಿಷ್ ನೌಕಾ ಪಡೆಯು ನೆಲ್ಸನ್ ಮತ್ತು ಇತರರೊಂದಿಗೆ ಅವು ಹೊರಗೆ ಹೋಗದಂತೆ ಕಾಯುತ್ತಿತ್ತು. ಫ್ರೆಂಚರ ಈ ನೌಕಾಪಡೆಗಳು ಇಂಗ್ಲಿಷ್ ನೌಕಾಪಡೆಗೆ ಕಾಣದಂತೆ ತಪ್ಪಿಸಿಕೊಂಡು ವೆಸ್ಟ್ ಇಂಡೀಸ್ ದ್ವೀಪಗಳಲ್ಲಿ ಒಂದು ಕಡೆ ಗುಟ್ಟಾಗಿ ಒಟ್ಟು ಸೇರಿ ಇಂಗ್ಲಿಷ್ ಕಾಲುವೆಯ ಮೇಲೆ ನುಗ್ಗಬೇಕೆಂದು ಗೊತ್ತಾಗಿತ್ತು. ಫ್ರೆಂಚರ ನೌಕಾಪಡೆಯ ಜೊತೆಗೆ ಸ್ಪೇನ್ ತನ್ನ ಹಡಗು ಪಡೆಯನ್ನೂ ಸೇರಿಸಿತ್ತು.

ಫ್ರೆಂಚ್ ನೌಕಾಧಿಪತಿ ವಿಲಿನೂ (Villeneuve) ಮೊದಲೇ ಗೊತ್ತಾಗಿದ್ದ ಹಂಚಿಕೆಯ ಪ್ರಕಾರ ಟೋಲಾನಿನಿಂದ ತನ್ನ ಹಡಗುಗಳೊಂದಿಗೆ ನೆಲ್ಸನ್ನನಿಗೆ ಕಾಣದಂತೆ ತಪ್ಪಿಸಿಕೊಂಡನು. ನೆಲ್ಸನ್ ಅವನು ವೆಸ್ಟ್ ಇಂಡೀಸ್ ಕಡೆ ಹೋಗಿರುವನೆಂದು ಊಹಿಸಿ ಹಿಂಬಾಲಿಸಿದನು. ಅಷ್ಟರಲ್ಲಿ ವಿಲಿನೂ ಯೂರೋಪಿನ ಕಡೆಗೆ ಪುನಃ ಹೊರಟಿದ್ದುದರಿಂದ ನೆಲ್ಸನ್ ಬಹಳ ವೇಗವಾಗಿ ಹೋಗುವ ತನ್ನ ಯುದ್ಧದ ಹಡಗೊಂದನ್ನು

ಈ ವಿಚಾರ ತಿಳಿಸುವಂತೆ ಇಂಗ್ಲೆಂಡಿಗೆ ಕಳುಹಿಸಿದನು. ಇದರಿಂದ ಕಾಲ್ಡರ್ ಎಂಬ ನೌಕಾಧಿಪತಿಯ ಸಹಾಯಕ್ಕಾಗಿ ಇಂಗ್ಲೆಂಡ್ ಹದಿನೈದು ಹಡಗು



ಕೈಗೆಸಿಕ್ಕಿದ ಹಡಗುಗಳನ್ನೆಲ್ಲಾ ತಮ್ಮ ವಶಮಾಡಿಕೊಳ್ಳಲು ಪ್ರಾರಂಭಿಸಿದರು. ಹೀಗಾಗಿ ಯೂರೋಪಿನ ವ್ಯಾಪಾರವೇ ಹಾಳಾಗಿಹೋಯಿತು. ಬರ್ಲಿನ್ ಆಜ್ಞೆಯಿಂದ ಇಂಗ್ಲೆಂಡಿನಲ್ಲಿ ತೀವ್ರ ಕಷ್ಟಗಳೇನೋ ಸಂಭವಿಸಿದುವು. ಅನೇಕರು ಕೆಲಸಗಳನ್ನು ಕಳೆದುಕೊಂಡು ಕೈಗಾರಿಕೆಯ ಕ್ರಾಂತಿಯಿಂದ ಬಂದ ಯಂತ್ರಗಳನ್ನು (Luddite Riots) ಒಡೆದುಹಾಕಿದರು. ಆದರೂ ಇಂಗ್ಲೆಂಡ್ ಕಂಗೆಡಲಿಲ್ಲ. ಫ್ರಾನ್ಸ್ ಮತ್ತು ಅದರ ಅನುಯಾಯಿಗಳಿಗೆ ಕಾಫಿ, ಸಕ್ಕರೆ, ತಂಬಾಕು ಮತ್ತು ಬಟ್ಟೆ ಇವುಗಳ ಬೆಲೆ ವಿಪರೀತವಾಗಿ ಹೆಚ್ಚಿ, ಆರ್ಥಿಕ ಪರಿಸ್ಥಿತಿ ಹದಗೆಟ್ಟಿತು.

"ಬರ್ಲಿನ್ ಆಜ್ಞೆ" ಯನ್ನು ಪಾಲಿಸದ ದೇಶವಾದ ಪೋರ್ಚುಗಲ್ ನೆಪೋಲಿಯನ್ನನ ಕೋಪವನ್ನು ಕೆರಳಿಸಿತು. ಅವನು ಜೂನೊ (Junot) ಎಂಬ ಸೈನ್ಯಾಧಿಪತಿಯನ್ನು ಪೋರ್ಚುಗಲ್ಲನ್ನು ಬಲಾತ್ಕರಿಸಲು ಸೈನ್ಯದೊಡನೆ ಕಳುಹಿಸಿದನು (Nov. ೧೮೦೭). ಪೋರ್ಚುಗಲ್ಲಾದ ಮೇಲೆ ಸ್ಪೇನ್ ನೆಪೋಲಿಯನ್ನನ ದೃಷ್ಟಿಗೆ ಬಿದ್ದಿತು. ತಂದೆಯಾದ ನಾಲ್ಕನೆಯ ಚಾರ್ಲ್ಸ್ ಮತ್ತು ಅವನ ಮಗ ಫರ್ಡಿನಾಂಡ್ ಒಬ್ಬರೊಡನೊಬ್ಬರು ಜಗಳವಾಡುತ್ತಿದ್ದರು. ನೆಪೋಲಿಯನ್ ಅವರಿಬ್ಬರನ್ನೂ ರಾಜ್ಯದಿಂದ ತೆಗೆದುಹಾಕಿ ಸ್ಪೇನ್ ರಾಜ್ಯವನ್ನು ತನ್ನ ಸಹೋದರ ಜೋಸೆಫ್ ಬೋನಾಪಾರ್ಟ್ ಎಂಬುವನಿಗೆ ಕೊಟ್ಟನು. ಇದರಿಂದ ಸ್ಪೇನ್ ಕೋಪಗೊಂಡು ನೆಪೋಲಿಯನ್ನನಮೇಲೆ ಯುದ್ಧ ಹೂಡಿತು. ಅಲ್ಲಿಯ ಜನಾಂಗವೇ (Nation at Arms) ದಂಗೆ ಎದ್ದಿತು. ಇದುವರೆಗೆ ನೆಪೋಲಿಯನ್ ರಾಜರನ್ನೆದುರಿಸಿ ಅವರನ್ನು ಗೆದ್ದಿದ್ದನು. ಸ್ಪೇನ್ ಮತ್ತು ರಷ್ಯಾಗಳಲ್ಲಿ ಅವನು ಜನತೆಯನ್ನು ಎದುರಿಸಬೇಕಾಯಿತು.

ಹೀಗೆ ಪರ್ಯಾಯದ್ವೀಪದ ಯುದ್ಧ (Peninsular War, ೧೮೦೮–೧೩ ಪ್ರಾರಂಭವಾಯಿತು. ಒಂದು ಸಣ್ಣ ಸೈನ್ಯದೊಡನೆ ಸರ್ ಆರ್ಥರ್ ವೆಲ್ಲೆಸ್ಲಿಯನ್ನು ಪೋರ್ಚುಗಲ್ಲಿನ ಸಹಾಯಕ್ಕಾಗಿ ಇಂಗ್ಲೆಂಡ್ ಕಳುಹಿಸಿತು. ಅವನು ಜೂನೋವನ್ನು (Junot) ವಿಮಿಯಾರೊ ಎಂಬಲ್ಲಿ (Vim iero, ೧೮೦೮)ಸೋಲಿಸಿದರೂ ಮಾರನೆಯದಿನ ಬಂದ ಅವನ ಮೇಲ್ಪಟ್ಟ ಅಧಿಕಾರಿಗಳು ಸಿಂಟ್ರಾ ಒಪ್ಪಂದದ ಪ್ರಕಾರ ಜೂನೊವಿನ ಸೈನ್ಯವು

ಫ್ರಾನ್ಸಿಗೆ ವಾಪಸ್ ಹೋಗಲು ಅವಕಾಶಕೊಟ್ಟರು. ಕೊರುನ್ನಾ (Corunna) ಎಂಬಲ್ಲಿ ಮತ್ತೊಂದು ಕದನ ನಡೆದು ಸರ್ ಜಾನ್ ಮೂರ್ (Sir John Moore) ಮಡಿದನು. ಆದರೆ ವೆಲ್ಲೆಸ್ಲಿಯು ಸ್ಪೇನಿನ ಜನಗಳ ಸಹಾಯದಿಂದ ಸಮುದ್ರಕ್ಕೆ ಹತ್ತಿರವಿರುವ ಮತ್ತು ಗುಡ್ಡಗಾಡುಗಳಿಂದ ಕೂಡಿದ ಈ ಪ್ರದೇಶದಲ್ಲಿ ಯುದ್ಧಮಾಡುವುದರ ಉಪಯುಕ್ತತೆಯನ್ನು ಇಂಗ್ಲೆಂಡಿನ ಸರ್ಕಾರಕ್ಕೆ ಮನವಿಮಾಡಿಕೊಂಡಿದ್ದ ರಿಂದ ಅವನನ್ನೇ ಅಲ್ಲಿಗೆ ಪುನಃ ನೇಮಿಸಲಾಯಿತು. ಅವನು ತಾಲವರ (Talavera, ೧೮೦೯), ಸಾಲಮಾಂಕ (Salamanca, ೧೮೧೨), ವಿಟೋರಿಯಾ (Vitoria, ೧೮೧೩), ಮೊದಲಾದ ಕದನಗಳಲ್ಲಿ ಫ್ರೆಂಚ ರನ್ನು ಸೋಲಿಸಿ ಕೊನೆಗೆ ಫ್ರಾನ್ಸಿನ ಮೇಲೆಯೇ ನುಗ್ಗಿದನು.

ರಷ್ಯದ ಚಕ್ರವರ್ತಿ ಅಲೆಕ್ಸಾಂಡರ್ ಟಿಲ್‌ಸಿಟ್ ಕರಾರಿನಿಂದ ರಷ್ಯದ ವ್ಯಾಪಾರಕ್ಕೆ ಧಕ್ಕೆಯಾದುದನ್ನು ಕಂಡು ಅದನ್ನು ಮುರಿಯಲು ಸಿದ್ಧ ನಾದನು. ಅವನು ಇಂಗ್ಲೆಂಡಿಗೆ ರಷ್ಯದೊಡನೆ ವ್ಯಾಪಾರಕ್ಕೆ ಅವಕಾಶ ಮಾಡಿಕೊಟ್ಟನು. ಇದರಿಂದ ನೆಪೋಲಿಯನ್ ರಷ್ಯದಮೇಲೆ ಯುದ್ಧಕ್ಕೆ ಸಿದ್ಧನಾದನು. ಅತ್ಯಂತ ಪ್ರಬಲವಾದ ಸೈನ್ಯದೊಂದಿಗೆ ನೆಪೋಲಿಯನ್ ರಷ್ಯನರಮೇಲೆ ಜೂನ್ ೧೮೧೨ ರಲ್ಲಿ ನುಗ್ಗಿದನು. ಅವರು ಯುದ್ಧಮಾಡದೆ ಹಿಂದೆ ಹಿಂದೆಯೇ ಸರಿಯುತ್ತಿದ್ದರು. ಮಾಸ್ಕೊ ನಗರಕ್ಕೆ ಎಪ್ಪತ್ತು ಮೈಲಿ ದೂರದಲ್ಲಿದ್ದ ಬೊರೊಡಿನೊ ತಲಪುವವೇಳೆಗೆ ನೆಪೋಲಿಯನ್ನನ ೩೮೦,೦೦೦ ಸ್ಪೇನಿಕರ ಪೈಕಿ ೧೭೫೦೦೦ ಜನರು ಆಹಾರವಿಲ್ಲದೆ ಸಾವು ನೋವುಗಳಿಗೆ ತುತ್ತಾಗಿದ್ದರು. ಬೊರೊಡಿನೊ ಕದನದಲ್ಲಿ ರಷ್ಯವು ಭೀಕರವಾದ ಯುದ್ಧಮಾಡಿತು. ಆದರೆ ಅದಕ್ಕೆ ಮಾಸ್ಕೊ ನಗರವನ್ನು ರಕ್ಷಿಸಲಾಗಲಿಲ್ಲ. ನೆಪೋಲಿಯನ್ ಮಾಸ್ಕೊನಗರವನ್ನು ಪ್ರವೇಶಿಸಿ ಶಾಂತಿ ಗಾಗಿ ಕಾದನು. ಆದರೆ ರಷ್ಯನ್ನರು ಮಾಸ್ಕೊನಗರವನ್ನೇ ತ್ಯಜಿಸಿದ್ದರು. ಅಷ್ಟೆ ಅಲ್ಲದೆ ಅವರು ನಗರದ ಅನೇಕ ಭಾಗಗಳಿಗೆ ಬೆಂಕಿ ಇಟ್ಟರು. ಐದು ವಾರಗಳನಂತರ ನೆಪೋಲಿಯನ್ ೧೧೦,೦೦೦ ಸೈನಿಕರೊಡನೆ ಮಾಸ್ಕೋವಿ ನಿಂದ ಹಿಂದಕ್ಕೆ ಹೊರಟನು. ಅಲ್ಲಿಂದ ಹಿಂದಕ್ಕೆ ಬರುವಾಗ ರಷ್ಯನ್ನರು ಕಿರುಕುಳ ಯುದ್ಧ ಪ್ರಾರಂಭಿಸಿದರು. ಯುದ್ಧ ವಿಶಾರದನಾದುದರಿಂದ

ನೆಪೋಲಿಯನ್ ಅನೇಕ ಕಷ್ಟಗಳಿಗೆ ಸಿಕ್ಕಿಬಿದ್ದರೂ ಅವುಗಳಿಂದ ಪಾರಾಗಿ ಹಿಂದಕ್ಕೆ ಬಂದನು. ಆದರೆ ಅವನ ಸೈನ್ಯವು ನಾಶವಾಗಿ ಡಿಸೆಂಬರ್ ೩ ರ ವೇಳೆಗೆ ೨೦,೦೦೦ ಕ್ಕೆ ಇಳಿದಿತ್ತು.

ಇದರಿಂದ ಪ್ರಷ್ಯ, ರಷ್ಯ ಮತ್ತು ಆಸ್ಟ್ರಿಯ ಪುನಃ ಒಂದುಗೂಡಿ ನೆಪೋಲಿಯನ್ನನ ಮೇಲೆ ಯುದ್ಧಹೂಡಿದವು. ೧೮೧೩ ರಲ್ಲಿ ನಡೆದ ಲೀಪ್‌ಸಿಗ್ (Leipzig, ೧೮೧೩) ಕದನದಲ್ಲಿ ನೆಪೋಲಿಯನ್ನನಿಗೆ ಸೋಲಾಯಿತು. ತನ್ನ ಸೈನ್ಯವೆಲ್ಲಾ ರಷ್ಯದ ಮಂಜಿನಲ್ಲಿ (Russian Snow) ಮತ್ತು ಚಳಿಯಲ್ಲಿ ನಾಶವಾಗಿದ್ದರೂ ನೆಪೋಲಿಯನ್ ಎಲ್ಲರನ್ನೂ ಬೆರಗುಗೊಳಿಸುವಂತೆ ಮತ್ತೊಂದು ಸೈನ್ಯವನ್ನು ಸೇರಿಸಿದನು. ಆದರೆ ಆ ಸೈನ್ಯವು ಅಷ್ಟು ಉತ್ತಮವಾಗಿರಲಿಲ್ಲ. ವಿಜಯಿಗಳಾದ ಮಿತ್ರರಾಷ್ಟ್ರಗಳು: ಆಸ್ಟ್ರಿಯನ್ನರು, ಪ್ರಷ್ಯನ್ನರು, ರಷ್ಯನ್ನರು ಪೂರ್ವದಿಂದಲೂ. ವೆಲ್ಲಿಂಗ್‌ಟನ್ ತನ್ನ ಸೈನ್ಯದೊಡನೆ ದಕ್ಷಿಣದಿಂದಲೂ ಫ್ರಾನ್ಸಿಗೆ ಮುತ್ತಿಗೆಹಾಕಿ ನೆಪೋಲಿಯನ್ನನನ್ನು ಪದಚ್ಯುತನನ್ನಾಗಿ ಮಾಡಿ ಎಲ್ಬಾದ್ವೀಪಕ್ಕೆ ಮಾರ್ಚಿ ೧೮೧೪ ರಲ್ಲಿ ಬಂದುವು.

ಈ ಮಧ್ಯೆ ಇಂಗ್ಲೆಂಡ್ ಮತ್ತು ಅಮೆರಿಕಾ ೧೮೧೨ ರಲ್ಲಿ ಯುದ್ಧ ಮಾಡಬೇಕಾಯಿತು. ವೆಸ್ಟ್ ಇಂಡೀಸ್ ದ್ವೀಪಗಳಿಂದ ಫ್ರಾನ್ಸ್ ಇಂಗ್ಲಿಷ್ ಹಡಗುಗಳಿಗೆ ಸಿಕ್ಕದಂತೆ ಸಾಮಾನುಗಳನ್ನು ಅಮೆರಿಕದ ಬಾವುಟವುಳ್ಳ ಹಡಗಿನಲ್ಲಿ ತರಿಸುತ್ತಿತ್ತು. ಇದರಿಂದ ಇಂಗ್ಲಿಷ್ ಹಡಗುಗಳು ಅವನ್ನು ನಿಲ್ಲಿಸಿ ಹುಡುಕಲಾರಂಭಿಸಿದವು. ಅಮೆರಿಕ ಇದನ್ನು ಪ್ರತಿಭಟಿಸಿತು. ಅನೇಕವೇಳೆ ಇಂಗ್ಲಿಷ್ ನಾವಿಕರು ತಮಗೆ ಸಿಗುತ್ತಿದ್ದ ಸಂಬಳ ಮೊದಲಾದುವು ಕಮ್ಮಿಯಾಗಿದ್ದುದರಿಂದ ಅಮೆರಿಕದ ಹಡಗುಗಳಲ್ಲಿ ಕೆಲಸಮಾಡಲು ತಮ್ಮ ಹಡಗುಗಳನ್ನು ಬಿಟ್ಟು ಅವನ್ನು ಸೇರಿಕೊಳ್ಳುತ್ತಿದ್ದರು. ಅವರನ್ನು ಹುಡುಕುತ್ತಿದ್ದ ಇಂಗ್ಲಿಷ್ ಹಡಗುಗಳು ಅಮೆರಿಕದ ಹಡಗುಗಳನ್ನು ಪರೀಕ್ಷೆಗಾಗಿ ತಡೆದು ನಿಲ್ಲಿಸುತ್ತಿದ್ದವು. ಬರ್ಲಿನ್ ಆಜ್ಞೆಗೆ ಪ್ರತಿಕ್ರಿಯೆ ಮಾಡಲು ಹೊರಟ ಇಂಗ್ಲೆಂಡ್ ಹೀಗೆ ಅಮೆರಿಕದೊಡನೆ ಕದನ ಮಾಡಬೇಕಾಯಿತು. ೧೮೧೪ ರಲ್ಲಿ ನೆಪೋಲಿಯನ್ನನ ಪತನವಾದ ಮೇಲೆ ಎರಡು ದೇಶಗಳೂ ಶಾಂತಿಯನ್ನು ಮಾಡಿಕೊಂಡುವು.

ಎಲ್ಬಾದಿಂದ ನೆಪೋಲಿಯನ್ ತಪ್ಪಿಸಿಕೊಂಡು ಪ್ಯಾರಿಸ್ ನಗರಕ್ಕೆ ಬಂದನು, ಮಿತ್ರರಾಷ್ಟ್ರಗಳು ನೆಪೋಲಿಯನ್ನನ ಆಕ್ರಮಣದ ಫಲವಾಗಿ ಯೂರೋಪಿನ ಭೂಪಟದಲ್ಲಿ ಉದ್ಭವಿಸಿದ ಪ್ರಶ್ನೆಗಳನ್ನು ಸರಿಪಡಿಸಲು ವಿಯನ್ನಾ ನಗರದಲ್ಲಿ ಚರ್ಚೆ ಮಾಡುತ್ತಿದ್ದಾಗ ಅವರಿಗೆ ಈ ಸಮಾಚಾರವು ಮುಟ್ಟಿತು. ಅವರು ಚರ್ಚೆಯನ್ನು ಅಲ್ಲಿಗೆ ನಿಲ್ಲಿಸಿ ನೆಪೋಲಿಯನ್ನನಮೇಲೆ ಪುನಃ ಯುದ್ಧಕ್ಕೆ ಸಿದ್ಧರಾದರು. ಚರಿತ್ರೆಯಲ್ಲಿ ಪ್ರಖ್ಯಾತವಾದ ವಾಟರ್ ಲೂ ಕದನವು (Waterloo, 18th June ೧೮೧೫) ವೆಲ್ಲಿಂಗ್‌ಟನ್ನನಿಗೆ ಜಯಗಳಿಸಿಕೊಟ್ಟಿತು. ಪ್ರಷ್ಯದ ಸೈನ್ಯವು ಲಿಗ್ನಿ (Ligny) ಎಂಬಲ್ಲಿ ಸೋಲಿಸಲ್ಪಟ್ಟರೂ ಅದು ವೆಲ್ಲಿಂಗ್‌ಟನ್ನನ ಸೈನ್ಯವನ್ನು ಸೇರಿಕೊಳ್ಳದಂತೆ ಮಾಡಲು ನೆಪೋಲಿಯನ್ನನಿಗೆ ಸಾಧ್ಯವಾಗಲಿಲ್ಲ. ನೆಪೋಲಿಯನ್ ಸೋತು. ಸೆಂಟ್‌ಹೆಲಿನ ದ್ವೀಪಕ್ಕೆ ಕಳುಹಿಸಲ್ಪಟ್ಟನು.

ಇಂಗ್ಲಿಷರ ಸಮುದ್ರದಮೇಲಿನ ಹತೋಟಿ, ಸ್ಪೇನ್ ಮತ್ತು ರಷ್ಯ ಗಳೊಡನೆ ಯುದ್ಧ, ಇಂಗ್ಲಿಷರ ವ್ಯಾಪಾರವನ್ನು ಮುರಿಯಲು ಅವನು ಜಾರಿಗೆ ತಂದ, ಖಂಡಾಂತರ ಪದ್ಧತಿ, (Continentel System) ಇವುಗಳೇ ಅವನ ಪತನಕ್ಕೆ ಕಾರಣವಾದುವು.

ಫ್ರಾನ್ಸಿನಲ್ಲಿ ಹದಿನೆಂಟನೆ ಲೂಯಿಯನ್ನು ಪಟ್ಟಕ್ಕೆ ತರಲಾಯಿತು. ಸುಮಾರು ೨೮೦೦೦೦೦೦ ಪೌಂಡು ದಂಡವನ್ನು ಫ್ರಾನ್ಸ್ ಮಿತ್ರರಾಷ್ಟ್ರಗಳಿಗೆ ತೆರಬೇಕಾಯಿತು. ನೆಪೋಲಿಯನ್ ತಾನು ಗೆದ್ದು, ಬೇರೆ ಬೇರೆ ದೇಶಗಳಿಂದ ತಂದ ಕಲಾವಸ್ತುಗಳನ್ನು (Works of Art) ಫ್ರಾನ್ಸ್ ಆಯಾ ದೇಶಗಳಿಗೆ ಹಿಂದಿರುಗಿಸಬೇಕಾಯಿತು. ಯೂರೋಪಿನ ರಾಜಕೀಯ ಸಮಸ್ಯೆಯನ್ನು ಬಗೆಹರಿಸಲು ಮಿತ್ರರಾಷ್ಟ್ರಗಳು ವಿಯನ್ನಾ ನಗರದಲ್ಲಿ ಸೇರಿದುವು. ಈ ಸಭೆಯ ಮುಖ್ಯ ಸೂತ್ರಧಾರ ಆಸ್ಟ್ರಿಯದ ಮಂತ್ರಿ ಮೆಟರ್‌ನಿಕ್ (Metternich). ಆಸ್ಟ್ರಿಯ ಮತ್ತು ಬ್ರಿಟನ್ ಒಂದುಕಡೆ, ರಷ್ಯಾ ಮತ್ತು ಪ್ರಷ್ಯಾ ಮತ್ತೊಂದುಕಡೆ ಸೇರಿಕೊಂಡುವು. ಇವುಗಳ ಮಧ್ಯೆ ಒಪ್ಪಂದವನ್ನು ತರಲು ಫ್ರಾನ್ಸಿನ ಟ್ಯಾಲಿರ್ಯಾಂಡ್ (Talleyrand) ಎಂಬುವನಿಗೆ ಸಮಯಸಿಕ್ಕಿತು. ಅವನು ಫ್ರಾನ್ಸಿನಲ್ಲಿ ಕ್ರಾಂತಿಯಾಗುವುದಕ್ಕಿಂತ ಹಿಂದೆಯೇ ಮಠಾಧಿಪತಿಯಾಗಿದ್ದನು. ಮಹಾಕ್ರಾಂತಿ

ಯಾದಾಗ ಅದರ ಕಡೆಗೆ ಸೇರಿಕೊಂಡನು. ಹತ್ತು ವರ್ಷ ನೆಪೋಲಿಯನ್ನನ ವಿದೇಶೀಯ ಖಾತೆಯ ಮಂತ್ರಿಯಾಗಿದ್ದನು. ನಂತರ ಅವನನ್ನು ಉರುಳಿಸಲು ಪ್ರಯತ್ನಿಸಿದನು. ಬ್ರಿಟನ್ ಮತ್ತು ಆಸ್ಟ್ರಿಯದಕಡೆಗೆ ಅವನು ಸೇರಿಕೊಂಡಿದ್ದುದರಿಂದ ರಷ್ಯಾ ಮತ್ತು ಪ್ರಷ್ಯಾ ತಮ್ಮ ಬೇಡಿಕೆಗಳನ್ನು ತಗ್ಗಿಸಬೇಕಾಯಿತು. ಜರ್ಮನಿಯಲ್ಲಿ ಮೂವತ್ತೊಂಭತ್ತು ಪ್ರಾಂತ್ಯಗಳ ಸಂಯುಕ್ತ ಸಂಘವು (Federation) ಏರ್ಪಾಡಾಯಿತು. ಸುಮಾರು ೩೩ ವರ್ಷಗಳಕಾಲ ಆಸ್ಟ್ರಿಯ ಮೆಟರ್‌ನಿಕ್ಕನ ರಾಜಕೀಯ ನಿಪುಣತೆಯಿಂದ ಈ ಸಂಯುಕ್ತ ಸಂಘದಲ್ಲಿ ಮುಖ್ಯಪಾತ್ರ ವಹಿಸಿತ್ತು.

ಆದರೆ ಯೂರೋಪ್ ಫ್ರಾನ್ಸಿನ ಮಹಾಕ್ರಾಂತಿಯ ಪಾಠಗಳನ್ನು ಮರೆಯಲಿಲ್ಲ. ಜನಗಳ ಉತ್ಸಾಹದ ಶಕ್ತಿಯನ್ನು ಇಟಲಿಯ ಗೆರಿಬಾಲ್ಡಿ (Garibaldi). ಇಟಲಿಯನ್ನು ಒಟ್ಟುಗೂಡಿಸುವ (Unity of Italy) ಉದ್ಯಮದಲ್ಲಿ ಉಪಯೋಗಿಸಿಕೊಂಡನು. ನೆಪೋಲಿಯನ್ನನ ದಕ್ಷತೆ ಜರ್ಮನಿಯಲ್ಲಿ ಬಿಸ್‌ಮಾರ್ಕನಿಗೆ (Bismarck) ಮೇಲ್ಪಂಕ್ತಿಯಾಯಿತು. ಯೂರೋಪಿನಲ್ಲಿ ಪ್ರಜಾಪ್ರಭುತ್ವ ಮತ್ತು ರಾಷ್ಟ್ರೀಯತೆ ಫ್ರಾನ್ಸಿನ ಮಹಾಕ್ರಾಂತಿಯು ಬಿತ್ತಿದ ಬೀಜಗಳೆನ್ನಬಹುದು.

## ಕೈಗಾರಿಕೆಯ ಕ್ರಾಂತಿ, ೧೭೬೦-೧೮೨೦:

ಇಂಗ್ಲೆಂಡ್ ಫ್ರಾನ್ಸ್‌ನೊಡನೆ ಹೋರಾಡುತ್ತಿದ್ದಾಗ ಕೈಗಾರಿಕೆಯ ಕ್ರಾಂತಿಯು ಪ್ರಾರಂಭವಾಯಿತು. ಇದು ಇಂಗ್ಲೆಂಡನ್ನು ಕೈಗಾರಿಕೆಯ ದೇಶವನ್ನಾಗಿ ಮಾರ್ಪಡಿಸಿತು. ಹತ್ತಿಬಟ್ಟೆಯ ಕೈಗಾರಿಕೆಯು ತುಂಬಾ ಮುಂದುವರಿಯಲು ಕೆಲವು ಆವಶ್ಯಕವಾದ ಯಾಂತ್ರಿಕ ಬದಲಾವಣೆಗಳಾದುವು. ಜೇಮ್ಸ್ ಹಾರ್‌ಗ್ರೀವ್ಸ್ (James Hargreaves) ಎಂಬುವನು 'ಸ್ಪಿನಿಂಗ್ ಜೆನ್ನಿ'ಯನ್ನು(Spinning Jeuny, ೧೭೬೪) ಕಂಡುಹಿಡಿಯುವುದರಮೂಲಕ ಒಬ್ಬ ಮನುಷ್ಯನು ಯಂತ್ರದ ಸಹಾಯದಿಂದ ಅನೇಕ ಕದರುಗಳು ಒಂದೇ ಕಾಲದಲ್ಲಿ ನೂಲು ತೆಗೆಯುವಂತೆ ಮಾಡಿದನು. ದಾರವನ್ನು ತಿರುಚಿ ಬಲಗೊಳಿಸಲು ರಿಚರ್ಡ್ ಆರ್ಕ್‌ರೈಟ್ (Richard Arkwright) ನೀರಿನ ಶಕ್ತಿಯಿಂದ ಚಲಿಸುವ ಯಂತ್ರವೊಂದನ್ನು (Water Frame) ಕಂಡುಹಿಡಿದನು. ಕ್ರಾಮ್‌ಟನ್ (Cromton) ಮಗ್ಗದ ಹಾಸು ನೂಲು ಬಲವಾಗಿಯೂ ಮತ್ತು ಅದಷ್ಟು ನವಿರಾಗಿಯೂ ಇರುವಂತೆ ಒಂದು ಯಂತ್ರವನ್ನು ಕಂಡುಹಿಡಿದನು (Mule). ವಿಟ್‌ನೀ (Whitney) ಹತ್ತಿಯಲ್ಲಿದ್ದ ಬೀಜವನ್ನು ಬೇರ್ಪಡಿಸಲು ತಯಾರಿಸಿದ ಯಂತ್ರ ಹತ್ತಿಬಟ್ಟೆಯ ಕೈಗಾರಿಕೆಯ ಏಳಿಗೆಗೆ ಪ್ರಬಲವಾದ ಕಾರಣವಾಯಿತು. ೧೭೮೫ ರಿಂದಾಚೆಗೆ ನೀರಿನ ಶಕ್ತಿಯಿಂದ ಚಲಿಸುವ ಯಂತ್ರಗಳು ಹತ್ತಿಬಟ್ಟೆಯ ಕೈಗಾರಿಕೆಯಲ್ಲಿ ಹೆಚ್ಚುಹೆಚ್ಚು ಬಳಕೆಗೆ ಬಂದುವು. ಆದರೆ ಗಣಿತಶಾಸ್ತ್ರದ ಉಪಕರಣಗಳನ್ನು (Mathematical Instruments) ಮಾಡುತ್ತಿದ್ದ, ಗ್ಲಾಸ್ಗೋ ನಗರದ ಜೇಮ್ಸ್‌ವ್ಯಾಟ್ (James Watt) ಎಂಬುವನು ಪರಿಷ್ಕರಿಸಲ್ಪಟ್ಟ ಮತ್ತು ಹೆಚ್ಚು ಬಲಯುತವಾದ ಹಬೆಯ ಯಂತ್ರವನ್ನು ಕಂಡುಹಿಡಿದನು. ನೀರಿನ ಶಕ್ತಿಯ ಸ್ಥಾನವನ್ನು ಹಬೆಯ ಶಕ್ತಿಯು ಆಕ್ರಮಿಸಿತು. ಕಾರ್ಖಾನೆಗಳು ನದಿಯ ಪಕ್ಕದಲ್ಲೂ ಮತ್ತು ಉಪನದಿಗಳ (Streams) ಪಕ್ಕದಲ್ಲೂ ನೀರಿನ ಶಕ್ತಿಯನ್ನುಪಯೋಗಿಸಿಕೊಳ್ಳಲು ಸ್ಥಾಪಿಸಲ್ಪಡುತ್ತಿದ್ದುವು. ಹಬೆಯಶಕ್ತಿ ಬಂದಮೇಲೆ ಕಾರ್ಖಾನೆಗಳನ್ನು

ಅನುಕೂಲವಾದ ಬೇರೆಕಡೆಗಳಲ್ಲಿ ಕಟ್ಟಲು ಸಾಧ್ಯವಾಯಿತು. ಮೊದ ಮೊದಲು ಹಬೆಯ ಯಂತ್ರವು ಗಣಿಗಳಿಂದ ನೀರನ್ನು ಮೇಲಕ್ಕೆತ್ತಲು ಉಪಯೋಗಿಸಲ್ಪಟ್ಟರೂ, ಕಾಲಕ್ರಮೇಣ ಅದು ಎಲ್ಲಾ ಕೈಗಾರಿಕೆಗಳಲ್ಲೂ ಬಳಸುವಂತಾಯಿತು. ಹಬೆಯ ಯಂತ್ರದಿಂದ ಇಂಗ್ಲೆಂಡಿನ ಕೈಗಾರಿಕೆ ಗಳು ಹೆಚ್ಚು ಅಭಿವೃದ್ಧಿಗೆ ಬಂದು, ದೇಶದಲ್ಲಿ ಐಶ್ವರ್ಯವನ್ನು ಹೆಚ್ಚಿಸಿತು. ಈ ಹೊಸ ಐಶ್ವರ್ಯವು ನೆಪೋಲಿಯನ್ನನೊಡನೆ ಒದಗಿದ ಯುದ್ಧದಲ್ಲಿ ಇಂಗ್ಲೆಂಡಿಗೆ ಜಯವನ್ನು ತಂದಿತೆಂದು ಹೇಳಬಹುದು. ಅದರ ಪಾತ್ರವು ನೆಲ್ಸನ್ ಮತ್ತು ವೆಲ್ಲಿಂಗ್‌ಟನ್ ಮೊದಲಾದವರ ಪಾತ್ರದಷ್ಟೇ ಪ್ರಾಮುಖ್ಯತೆ ಯನ್ನು ಹೊಂದಿದೆಯೆಂದರೆ ತಪ್ಪಲ್ಲ.

ವಿಜ್ಞಾನದಿಂದ ಕೈಗಾರಿಕೆಗೊಂದೇ ಅಲ್ಲದೆ ವ್ಯವಸಾಯಕ್ಕೂ (Agriculture) ಹೆಚ್ಚು ಉಪಯೋಗವಾಯಿತು. ಜೆಥ್ರೋಟಲ್ (Jethro Tull, ೧೬೭೪–೧೭೪೧), ಲಾರ್ಡ್ ಟೌನ್‌ಷೆಂಡ್ (Lord Townshend, ೧೬೭೪–೧೭೩೮) ಕೆಲವು ಸುಧಾರಣೆಗಳನ್ನು ಮಾಡಿ ದರು. ಟಲ್ ಸಾಲುಸಾಲಾಗಿ ಬೀಜ ಬಿತ್ತುವುದು ಹೆಚ್ಚು ಪ್ರಯೋಜನ ಕಾರಿಯೆಂದು ತೋರಿಸಿದನು ರಾಬರ್ಟ್ ಬೇಕ್‌ವೆಲ್ (Robert Bakewell, ೧೭೨೫–೧೭೯೫) ತಳಿಗಳ ಜಾತಿಯನ್ನು ಉತ್ತಮಪಡಿ ಸಿದನು. ವ್ಯವಸಾಯವು ಹೀಗೆ ಲಾಭದಾಯಕವಾಗಿ ಜನಗಳು ಗೋಮಾಳ ಮೊದಲಾದುವುಗಳನ್ನೂ ಸಹ ಬೇಲಿಯೊಳಗೆ ಸೇರಿಸಲಾರಂಭಿಸಿದರು. ೧೮ ನೇ ಶತಮಾನದಲ್ಲಿ ವ್ಯವಸಾಯರಂಗದಲ್ಲಿ ನಿಪುಣನಾಗಿದ್ದ ಆರ್ಥರ್ ಯಂಗ್ (Arthur Youug) ಎಂಬುವನು ಈ ಪದ್ಧತಿಯಿಂದ ಬಡ ವರಿಗೆ ತೀವ್ರ ಅನಾನುಕೂಲವಾಯಿತೆಂದು ಹೇಳಿದ್ದಾನೆ.

ಸಂಚಾರದ ವ್ಯವಸ್ಥೆಯಲ್ಲೂ ಅನೇಕ ಮುಖ್ಯ ಬದಲಾವಣೆಗಳಾ ದುವು. 'ಟರ್ನ್‌ಪೈಕ್ ಟ್ರಸ್ಟ್ಸ್' (Turnpike Trusts) ಅನೇಕ ರಸ್ತೆಗಳನ್ನು ಪಾರ್ಲಿಮೆಂಟಿನ ಅನುಮತಿಯಮೇಲೆ ನಿರ್ಮಿಸಿತು. ಈ ಕಂಪನಿಗಳು ಚತುರರಾದ ಟೆಲ್‌ಫರ್ಡ್ ಮತ್ತು ಮ್ಯಕಾಡಮ್(Telford and Macadam) ಮೊದಲಾದ ಇಂಜನಿಯರುಗಳನ್ನು ಹೊಸ ವಿಧಾನ ದಲ್ಲಿ ರಸ್ತೆಗಳನ್ನು ಮಾಡಲು ನಿಯಮಿಸಿತು. ೧೭೦೦ರಲ್ಲಿ ಕುದುರೆಗಾಡಿಯ

ಪ್ರಯಾಣವು ಲಂಡನ್ನಿನಿಂದ ಯಾರ್ಕಿಗೆ ಹೋಗಲು ಒಂದುವಾರ ಹಿಡಿಯುತ್ತಿತ್ತು. ೧೮೧೫ ರಲ್ಲಿ ಅದು ೨೪ ಘಂಟೆಗಳಿಗೆ ಇಳಿಯಿತು. ೧೭೭೦ ರಲ್ಲಿ ಲಂಡನ್ನಿನಿಂದ ಮಾಂಚೆಸ್ಟರ್ ಮೂಲಕ ಲಿವರ್‌ಪೂಲಿಗೆ ಒಂದೇ ಒಂದು ಕುದುರೆಗಾಡಿ ಹೋಗುತ್ತಿತ್ತು. ೧೮೧೬ ರಲ್ಲಿ ಈ ಮಾರ್ಗದಲ್ಲಿ ೭೦ ಕುದುರೆಗಾಡಿಗಳು ಓಡಾಡುತ್ತಿದ್ದುವು. ೨೪ ಘಂಟೆಗಳಿಗಿಂತ ಸ್ವಲ್ಪ ಜಾಸ್ತಿಕಾಲದಲ್ಲಿ ತಮ್ಮ ಪ್ರಯಾಣವನ್ನು ಮುಗಿಸುತ್ತಿದ್ದುವು. ಭಾರವಾದ ಸಾಮಾನುಗಳನ್ನು ಸಾಗಿಸಲು ಕಾಲುವೆಗಳು ಉಪಯೋಗಿಸಲ್ಪಡುತ್ತಿದ್ದುವು. ಡ್ಯೂಕ್ ಆಫ್ ಬ್ರಿಡ್ಜ್‌ವಾಟರ್ ಎಂಬುವನು ಏಳುಮೈಲಿ ದೂರದಲ್ಲಿದ್ದ ತನ್ನ ಕಲ್ಲಿದ್ದಲು ಗಣಿಗಳಿಂದ ಕಲ್ಲಿದ್ದಲನ್ನು ಮಾಂಚೆಸ್ಟರಿಗೆ ಸಾಗಿಸಲು ಒಂದು ಟನ್ನಿಗೆ ಹತ್ತು ಷಿಲಿಂಗುಗಳನ್ನು ತೆರುತ್ತಿದ್ದನು. ಅವನು ಈ ಏಳು ಮೈಲಿದೂರಕ್ಕೆ ಒಂದು ಕಾಲುವೆಯನ್ನು ಮಾಡಿಸಲು ಬ್ರಿಂಡ್ಲಿ ಎಂಬುವನನ್ನು ನೇಮಿಸಿದನು. ೧೮೦೦ ರ ವೇಳೆಗೆ ೩,೦೦೦ ಮೈಲಿ ಕಾಲುವೆಗಳು ಇಂಗ್ಲೆಂಡಿನಲ್ಲಿದ್ದುವು. ೧೭೯೦ರ ವೇಳೆಗೆ ಕಬ್ಬಿಣದ ಹಡಗುಗಳು ಬಂದುವು. ೧೮೧೨ ರಲ್ಲಿ ಅಂದರೆ ನೆಪೋಲಿಯನ್ ರಷ್ಯದಮೇಲೆ ನುಗ್ಗಲು ಹವಣಿಸುತ್ತಿದ್ದಾಗ ಕಾಮೆಟ್ (Comet) ಎಂಬ ಹಡಗು ಕ್ಲೈಡ್‌ನದಿಯನ್ನು ದಾಟಿತು.

ಹಬೆಯ ಯಂತ್ರದ ಕಂಡುಹಿಡಿಯುವಿಕೆಯಿಂದ ರೈಲು ಪ್ರಯಾಣ ಪ್ರಾರಂಭವಾಯಿತು. ಸ್ಟಿಫನ್ ಸನ್ ಮೊದಲನೆಯ ರೈಲ್ವೆ ಎಂಜಿನ್ನನ್ನು ವಾಟರ್‌ಲೂ ಕದನದ ಹಿಂದಿನ ವರ್ಷ ಕಂಡುಹಿಡಿದನು. ೧೮೨೫ ರಲ್ಲಿ ಸ್ಟಾಕ್‌ಟನ್ ಡಾರ್ಲಿಂಗ್‌ಟನ್ (Stockton Darlington) ರೈಲ್ವೆಯೂ, ೧೮೨೯ ರಲ್ಲಿ ಮಾಂಚೆಸ್ಟರ್ ಲಿವರ್‌ಪೂಲ್ ರೈಲ್ವೆಯೂ ಪ್ರಾರಂಭವಾದವು. ಕಾಲಕ್ರಮೇಣ ಕೈಗಾರಿಕೆಯ ಪಟ್ಟಣಗಳು ಒಂದರೊಡನೊಂದು ರೈಲು ಮಾರ್ಗಗಳಿಂದ ಸೇರಿಸಲ್ಪಟ್ಟವು. ೧೮೫೦ ರ ವೇಳೆಗೆ ೬೦೦೦ ಮೈಲಿ ರೈಲುರಸ್ತೆ ಹಾಕಲ್ಪಟ್ಟಿತು. ವಿಕ್ಟೋರಿಯಾರಾಣಿ ತನ್ನ ಮೊದಲನೆಯ ರೈಲು ಪ್ರಯಾಣವನ್ನು ೧೮೪೨ ರಲ್ಲಿ ಮಾಡಿದಳು. ೧೮೪೬ ರಲ್ಲಿ ಬಂದ ರೈಲ್ವೆ ಕಾನೂನು ಒಂದು ಮೈಲಿಗೆ ಒಂದು ಪೆನ್ನಿಯಂತೆ ದರವನ್ನು ವಿಧಿಸಿತು.

ರೈಲು, ಹಡಗು ಮತ್ತು ಇತರ ಯಂತ್ರಗಳನ್ನು ತಯಾರಿಸಲು ಹೇರಳವಾಗಿ ಕಬ್ಬಿಣ ಬೇಕಾಗಿದ್ದುದರಿಂದ ಕಬ್ಬಿಣದ ಉತ್ಪಾದನೆ ಸಹಜವಾಗಿ ಹೆಚ್ಚಾಯಿತು. ಕಬ್ಬಿಣವನ್ನು ತಯಾರಿಸಲು ಬೇಕಾದ ಸೌದೆ ಸಿಕ್ಕುವುದು ಕಷ್ಟವಾಗಿತ್ತು. ಕಾಡುಗಳು ಮುಗಿದುಹೋಗಿ ಸೌದೆಯಬೆಲೆ ಏರಿತು. ಅಬ್ರಹಾಂ ಡರ್ಬಿ (Dardy) ಮತ್ತು ಹೆನ್ರಿಕಾರ್ಟ್ (HenryCort) ಕಲ್ಲಿದ್ದಲನ್ನು ಉಪಯೋಗಿಸುವ ವಿಧಾನವನ್ನು ಕಂಡುಹಿಡಿದುದರಿಂದ ಕಬ್ಬಿಣದ ತಯಾರಿಕೆಯು ಕಲ್ಲಿದ್ದಲು ಸಿಕ್ಕುವ ಪ್ರದೇಶಗಳಲ್ಲಿ ಹೆಚ್ಚು ಯಶಸ್ವಿಯಾಗಿ ನಡೆಯಲು ಪ್ರಾರಂಭವಾಯಿತು. ಕಲ್ಲಿದ್ದಲುಗಣಿಗಳಲ್ಲಿ ಆಗಾಗ್ಗೆ ಅನಿಲಗಳ ಆಸ್ಫೋಟನೆಗಳಾಗಿ(Explosion) ಕಾರ್ಮಿಕರು ಸಾಯುತ್ತಿದ್ದರು. ಹಂಫ್ರಿ ಡೇವಿ (Humphry Davy) ೧೮೧೫ ರಲ್ಲಿ ಕಂಡುಹಿಡಿದ ರಕ್ಷಕದೀಪ (Safety lamp) ಇದನ್ನು ಹೋಗಲಾಡಿಸಿತು.

**ಫಲಿತಾಂಶಗಳು** : ಕೈಗಾರಿಕೆಯ ಕ್ರಾಂತಿಯಿಂದ ಮಾನವನಿಗೆ ಅನೇಕ ಉಪಕಾರಗಳೇನೋ ಆಯಿತು. ಇಂಗ್ಲೆಂಡಿನಲ್ಲಂತೂ ಇದರ ಫಲವಾಗಿ ಹೊಸ ಐಶ್ವರ್ಯವು ಬಂದಿತೆಂದು ಹಿಂದೆಯೇ ಹೇಳಿದೆ. ಇದರಿಂದ ಇಂಗ್ಲೆಂಡಿನ ಆರ್ಥಿಕ ಪರಿಸ್ಥಿತಿ ಉತ್ತಮಗೊಂಡಿತು. ವಾಟರ್‌ಲೂ ಯುದ್ಧವನ್ನು ಗೆಲ್ಲಲು ಈಟನ್ ಆಟದ ಮೈದಾನಗಳು ಕಾರಣವೆಂದು ಕೆಲವರ ಅಭಿಪ್ರಾಯ. ಆದರೆ ಗಣಿಗಳಲ್ಲಿ ದಿನಕ್ಕೆ ೧೨–೧೪ ಘಂಟೆಗಳ ಕಾಲ ದುಡಿಯುತ್ತಿದ್ದ ನತದೃಷ್ಟ ಮಕ್ಕಳು ಕೂಡಾ ವಾಟರ್‌ಲೂ ಕದನದ ಜಯಕ್ಕೆ ಕಾರಣವೆಂದು ಹೇಳಬಹುದು.

ಕೈಗಾರಿಕೆಯ ಕ್ರಾಂತಿಯಿಂದ ಕೆಲವು ಅನಾಹುತಗಳೂ ಇಂಗ್ಲೆಂಡಿನಲ್ಲಿ ಸಂಭವಿಸಿದುವು. ಎಲ್ಲೆಲ್ಲೂ * ಸೈತಾನನಂತೆ ಕಾರ್ಖಾನೆಗಳು ಉದ್ಭವಿಸಿದುವು. ಮೊದಮೊದಲು ಅವು ಕೂಲಿಮಾಡುತ್ತಿದ್ದವರ ಕೆಲಸವನ್ನು ತಾವೇ ಮಾಡತೊಡಗಿದ್ದುದರಿಂದ ಅನೇಕರಿಗೆ ಕೆಲಸವಿಲ್ಲದೆ

---

* ಬ್ಲೇಕ್ ಎಂಬ ಕವಿಯು ೧೮೦೪ ರಲ್ಲಿ 'ಜರೂಸಲಂ' ಎಂಬ ಪದ್ಯವನ್ನು ಬರೆದಾಗ, ಡಾರ್ಕ್ ಸಾಟನಿಕ್ ಮಿಲ್ಸ್, (Dark satanic Mills) ಎಂಬ ಪದವನ್ನು ಉಪಯೋಗಿಸಿದನು.

ಹೋಯಿತು. ಕೈಗಾರಿಕೆಯ ಕ್ರಾಂತಿಯ ಫಲವಾಗಿ ಮಕ್ಕಳ ದುಡಿಮೆ (Child Labour) ಹೆಚ್ಚಾಯಿತು. ಬಡವರ ಮತ್ತು ಅನಾಥರ ಮಕ್ಕಳು ಮೃಗಗಳಂತೆ ಕಲ್ಲಿದ್ದಲು ಗಣಿಗಳಲ್ಲಿ ದುಡಿಯುತ್ತಿದ್ದರು.

ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದ ಮಕ್ಕಳ ವಿದ್ಯೆ, ಆರೋಗ್ಯ ಮತ್ತು ದುಡಿಮೆಯ ವಿಚಾರದಲ್ಲಿ ಸರ್ಕಾರವು ಯಾವ ಕಾನೂನನ್ನೂ ಜಾರಿಗೆ ತಂದಿರಲಿಲ್ಲ. ಮಕ್ಕಳ ದುಡಿಮೆಯ ಕಾಲವನ್ನು ನಿಷ್ಕರ್ಷೆಮಾಡಿ, ಒಂಬತ್ತು ವರ್ಷಕ್ಕಿಂತ ಕಡಿಮೆಯಿದ್ದ ಮಕ್ಕಳು ಕಾರ್ಖಾನೆಯಲ್ಲಿ ಕೆಲಸ ಮಾಡಕೂಡದೆಂಬ ಮಸೂದೆಯನ್ನು ೧೮೧೫ ರಲ್ಲಿ ಕಾರ್ಖಾನೆಯ ಇಬ್ಬರು ಮಾಲೀಕರು ಕಾಮನ್ಸ್ ಸಭೆಯ ಮುಂದಿಟ್ಟಾಗ, ಅದು ತಿರಸ್ಕರಿಸಲ್ಪಟ್ಟಿತು.

ಕಾಲಕ್ರಮೇಣ ಕೈಗಾರಿಕೆಯ ಕ್ರಾಂತಿಯಿಂದ ಪದಾರ್ಥಗಳ ಬೆಲೆ ಕಡಿಮೆಯಾಗಿ, ಉತ್ಪಾದನೆಯು ಹೆಚ್ಚಾಗಿ, ಕಾರ್ಮಿಕರಿಗೆ ಹೆಚ್ಚುಹೆಚ್ಚು ಸಂಖ್ಯೆಯಲ್ಲಿ ಕರೆಬಂದರೂ ಮೊದಮೊದಲು ಅನೇಕರಿಗೆ ಜೀವನೋಪಾಯವೇ ಇಲ್ಲವಾಯಿತು. ಕೈಮಗ್ಗದವರ ಸ್ಥಿತಿಯಂತೂ ತೀವ್ರ ಶೋಚನೀಯವಾಯಿತು. ಅವರು ಯಂತ್ರದ ಮಗ್ಗಗಳೊಡನೆ ಸ್ಪೈರ್ಧೆಮಾಡಲು ಅಶಕ್ತರಾಗಿದ್ದರು. ೧೭೯೭ ರಲ್ಲಿ ಒಬ್ಬ ನಿಪುಣನಾದ ಕೈಮಗ್ಗದವನಿಗೆ ಇಪ್ಪತ್ತಾರು ಷಿಲಿಂಗ್ ಎಂಟು ಪೆನ್ನಿ ಒಂದು ವಾರಕ್ಕೆ ಸಿಗುತ್ತಿತ್ತು. ೧೮೧೧ ರಲ್ಲಿ ಅದು ಹದಿನಾಲ್ಕು ಷಿಲಿಂಗ್ ಏಳು ಪೆನ್ನಿಗೆ ಇಳಿಯಿತು. ಹಣದ ಕೊಳ್ಳುವ ಶಕ್ತಿಯೂ (Purchasing power of money) ಕಡಿಮೆಯಾಗುತ್ತಿತ್ತು. ೧೭೯೭ ರಲ್ಲಿ ಅವನು ತನ್ನ ಕೂಲಿಯಿಂದ ೨೮೧ ಪೌಂಡು ಆಹಾರವನ್ನು ಕೊಳ್ಳಬಹುದಾಗಿತ್ತು. ೧೮೧೧ ರಲ್ಲಿ ಕೇವಲ ೧೩೧ ಪೌಂಡು ಮಾತ್ರ ಆಹಾರ ಆ ಹಣಕ್ಕೆ ಸಿಗುತ್ತಿತ್ತು. ೧೭೯೦ ರಿಂದ ೧೮೧೩ ರ ವೇಳೆಗೆ ಪದಾರ್ಥಗಳ ಬೆಲೆ ಶೇಕಡ ೮೭ ಕ್ಕೆ ಏರಿತ್ತು.

ಇಂಗ್ಲೆಂಡಿನ ಕೈಗಾರಿಕೆಯ ಕ್ರಾಂತಿಯಿಂದ ಭಾರತದಲ್ಲಂತೂ ಕೈಮಗ್ಗದ ಕೈಗಾರಿಕೆಯೇ ಸಂಪೂರ್ಣ ನಾಶವಾಗಿ ಪುರಾತನ ಕಾಲದಿಂ

ದಲೂ ಪ್ರಖ್ಯಾತಿಯನ್ನು ಗಳಿಸಿದ್ದ ಕ್ಯಾಲಿಕೋ, ಮಸ್ಲಿನ್ ಬಟ್ಟೆಗಳು ಮಾಯವಾದುವು.

ಜನಗಳು ೧೮೧೧-೧೨ ರಲ್ಲಿ ಇಂಗ್ಲೆಂಡಿನಲ್ಲಿ ದಂಗೆಯೆದ್ದು (Luddite Riots) ತಮ್ಮ ಜೀವನಕ್ಕೆ ತೊಂದರೆಯನ್ನು ತಂದ ಯಂತ್ರಗಳನ್ನು ಒಡೆಯಲಾರಂಭಿಸಿದರು.*

ಇಂಗ್ಲೆಂಡ್ ನೆಪೋಲಿಯನ್ನನೊಡನೆ ಯುದ್ಧದಲ್ಲಿ ತೊಡಗಿದ್ದ ತನಕ ಸುಧಾರಣೆಗಳ ವಿಷಯವಾಗಿ ಯೋಚಿಸುವುದೂ ದೇಶದ್ರೋಹವೆಂದೇ ಪರಿಗಣಿಸಲ್ಪಟ್ಟಿತ್ತು. ೧೭೯೪ ರಲ್ಲಿ "ಹಿಬಯಸ್ ಕಾರ್ಪಸ್" ಕಾನೂನು, ತಾತ್ಕಾಲಿಕವಾಗಿ ರದ್ದಾಗಿ, ವಿಚಾರಣೆಯಿಲ್ಲದೆ ಸೆರೆಮನೆಗೆ ಜನಗಳನ್ನು ಒಯ್ಯುವ ಅಧಿಕಾರವನ್ನು ಸರ್ಕಾರ ಪಡೆದುಕೊಂಡಿತು. ೧೭೯೯ ರಲ್ಲಿ ಜಾರಿಗೆ ಬಂದ "ಕಾಂಬಿನೇಷನ್ ಕಾನೂನು" (Combination Act, ೧೭೯೯) ಕಾರ್ಮಿಕರು ಒಟ್ಟಿಗೆ ಸೇರಿ (Combination of workmen) ಮಾಲೀಕರನ್ನು (Employers) ಹೆಚ್ಚು ಕೂಲಿ ಮೊದಲಾದುವುಗಳನ್ನು ಕೇಳಲು ಅವಕಾಶವಿಲ್ಲದಂತೆ ಮಾಡಿತ್ತು. ಆಡಂ ಸ್ಮಿತ್ ಮೊದಲಾದ ಅರ್ಥಶಾಸ್ತ್ರಜ್ಞರು ಕೂಲಿ, ಕಾರ್ಮಿಕರ ಸ್ಥಿತಿ ಮೊಲಾದುವು (Wages and conditions of Labour) ಗುರುತ್ವಾಕರ್ಷಣದ ಕಾನೂನಿನಂತೆ (Law of Gravitation) ಮನುಷ್ಯನ ಹಿಡಿತಕ್ಕೆ ಸಿಕ್ಕತಕ್ಕದ್ದಲ್ಲವೆಂದು ವಾದಿಸಿ, ಸರ್ಕಾರವು "ತಾಟಸ್ಥ್ಯ ಪದ್ಧತಿಯನ್ನು" (Laissez-faire) ಅರ್ಧಶತಮಾನದ ವರೆಗೆ ಅನುಸರಿಸುವಂತೆ ಮಾಡಿದರು.

ಯುದ್ಧವು ಮುಗಿದ ಮೇಲೆ ಪಾರ್ಲಿಮೆಂಟ್ ಪಿಟ್ ಯುದ್ಧಕಾಲದಲ್ಲಿ ಹಾಕಿದ್ದ ವರಮಾನ ತೆರಿಗೆಯನ್ನು ರದ್ದುಮಾಡಿ ಸುಂಕದ ತೆರೆಗೆಯನ್ನು ಹೆಚ್ಚಿಸಿದುದರಿಂದ ಜನಗಳ ತೊಂದರೆ ಇನ್ನೂ ಹೆಚ್ಚಾಯಿತು. ಗೋಧಿಯ

---

* Mrs. ಗಾಸ್ಕೆಲ್ ಬರೆದ 'ಉತ್ತರ ಮತ್ತು ದಕ್ಷಿಣ' ಎಂಬ ಕಥೆಯಲ್ಲೂ (Novel) ಮತ್ತು ಸಿ. ಬ್ರಾಂಟ್ (C. Bront) ಬರೆದ 'ಷರ್ಲಿ "ಯಲ್ಲಿಯೂ ಯಂತ್ರಗಳನ್ನು ಒಡೆಯುವ ಭೀಕರ ವರ್ಣನೆಗಳಿವೆ.

ಬೆಲೆ ಏರಿ ವ್ಯವಸಾಯಕ್ಷೇತ್ರದ ಕೂಲಿಗಳಿಗಂತೂ ಜೀವನ ಸಾಗಿಸಲು ತೀವ್ರ ಕಷ್ಟವಾಯಿತು. ಈ ಪರಿಸ್ಥಿತಿಯನ್ನು ಸ್ವಲ್ಪ ತಡೆಗಟ್ಟಲು ೧೭೯೫ ರಲ್ಲಿ ಬರ್ಕ್‌ಷೈರಿನ ಸ್ಪೀನ್‌ಹ್ಯಾಮ್‌ಲ್ಯಾಂಡ್ ಎಂಬಲ್ಲಿದ್ದ ದಂಡಾಧಿಕಾರಿಗಳು (Magistrates) ಗೋಧಿಯ ಬೆಲೆ ಏರಿದಂತೆಯೂ ಮತ್ತು ಮಕ್ಕಳ ಸಂಖ್ಯೆ ಒಂದು ಕುಟುಂಬದಲ್ಲಿ ಜಾಸ್ತಿಯಾದಂತೆಯೂ ತಮಗೆ ದೊರೆಯುತ್ತಿದ್ದ ಕೂಲಿ (Wages) ಹಣದ ಜೊತೆಗೆ ಆರ್ಥಿಕ ಸಹಾಯ ವನ್ನು ನೀಡಬೇಕೆಂದು ನಿರ್ಧರಿಸಿದರು. ಇದಕ್ಕೆ 'ಸ್ಪೀನ್ ಹ್ಯಾಮ್ ಲ್ಯಾಂಡ್ ಪದ್ಧತಿ' ಎಂದು ಹೆಸರು. ಈ ಪದ್ಧತಿಯು ದೇಶದ ಇತರ ಭಾಗ ಗಳಿಗೂ ಹರಡಿಕೊಂಡಿತು.

ಯುದ್ಧ ಮುಗಿದು ಶಾಂತಿಯು ಬಂದ ಮೇಲೆ ಪರದೇಶಗಳು ಗೋಧಿ ಯನ್ನುಇಂಗ್ಲೆಂಡಿಗೆ ರಫ್ತುಮಾಡಲಾರಂಭಿಸಿದುವು. ಪಾರ್ಲಿಮೆಂಟ್೧೮೧೫ ರಲ್ಲಿ ಗೋಧಿಯ ಕಾನೂನನ್ನು ಜಾರಿಗೆ ತಂದಿತು. ಇದರಿಂದ ಇಂಗ್ಲೆಂಡ್ ಪರದೇಶಗಳಿಂದ ಗೋಧಿಯನ್ನು ಇಂಗ್ಲೆಂಡಿನಲ್ಲಿ ಬೆಳೆದ ಗೋಧಿಯ ಬೆಲೆ ಒಂದು ಕ್ವಾರ್ಟರಿಗೆ (೨೮ ಪೌಂ) ೮೦ ಷಿಲಿಂಗ್ ಆಗುವ ತನಕ ತರಿಸಕೂಡ ದೆಂದು ವಿಧಾಯಕವಾಯಿತು. ಪಾರ್ಲಿಮೆಂಟ್ ಜಮೀನುದಾರರಿಂದ ತುಂಬಿದ್ದರಿಂದ ಇಂತಹ ಕಾನೂನು ಜಾರಿಗೆ ಬಂದಿತು.

ಕಾರ್ಮಿಕರಿಗೆ (Working class) ಎಲ್ಲಿಯವರೆಗೆ ರಾಜಕೀಯ ಬಲವಿಲ್ಲವೊ (Political power), ಅಲ್ಲಿಯವರೆಗೆ ಅವರಿಗೆ ಮೋಕ್ಷವಿಲ್ಲ ವೆಂದು ತೋರಿಸಿಕೊಟ್ಟವರು ವಿಲಿಯಂ ಕ್ಯಾಬೆಟ್(William Cobett) ಮತ್ತು ಹಂಟ್ (Hunt). ಕ್ಯಾಬೆಟ್, "ಪೊಲಿಟಿಕಲ್ ರಿಜಿಸ್ಟರ್" ಎಂಬ ತನ್ನ ವಾರಪತ್ರಿಕೆಯಲ್ಲಿ ಈ ಕಾರ್ಮಿಕರ ದುಸ್ಥಿತಿಯನ್ನು ಚಿತ್ರಿಸಿ, ದೇಶದ ಇತರ ಸಮಾಜ ವರ್ಗಗಳಾದ ವಿದ್ಯಾವಂತರ ಮತ್ತು ಹಣವಂತರ ಗಮನ ವನ್ನು ಈ ಕಡೆ ಸೆಳೆದನು. ಕಾರ್ಮಿಕರು ಯಂತ್ರಗಳನ್ನು ಒಡೆಯುವುದ ರಿಂದಾಗಲಿ ಅಥವಾ ಮೆದೆಗಳಿಗೆ ಬೆಂಕಿಯಿಡುವುದರಿಂದಾಗಲಿ (Machine breaking and rick-burning) ಪ್ರಯೋಜನವಿಲ್ಲವೆಂದು ತೋರಿಸಿಕೊಟ್ಟು, ಅವರು ಪಾರ್ಲಿಮೆಂಟಿನ ಸದಸ್ಯತ್ವದ ಚುನಾವಣೆಯಲ್ಲಿ ಸುಧಾರಣೆಗಳನ್ನು ತರಲು ಪ್ರಯತ್ನಮಾಡಬೇಕೆಂದು ಬೋಧಿಸಿದನು.

ಇವನು ಮತ್ತು ಇವನ ಅನುಯಾಯಿಗಳಿಗೆ 'ರ್ಯಾಡಿಕಲ್ಸ್' (Radicals) ಎಂದು ಹೆಸರಾಯಿತು. ಏಕೆಂದರೆ ಅವರು ಸಂಪೂರ್ಣವಾದ ಸುಧಾರಣೆಗಳು (Extreme reforms) ಆವಶ್ಯಕವೆಂದೂ, ಕೇವಲ ಒಂದೆರಡು ಸುಧಾರಣೆಗಳು ಸಾಲದೆಂದೂ ನಂಬಿದ್ದರು.

ಸರ್ಕಾರವು ಹಂಟ್ ಮತ್ತು ಕಾಬೆಟ್ ಮೊದಲಾದವರನ್ನು ಸೆರೆಮನೆಯಲ್ಲಿಡಿಸಿ ಅಥವಾ ದೇಶದಿಂದ ಹೊರಗಟ್ಟಿ ಈ ಚಳುವಳಿಯನ್ನು ಮುರಿಯಲು ಪ್ರಯತ್ನಿಸಿತು (Repression). ೧೮೧೯ ನೇ ಆಗಸ್ಟ್ ಹದಿನಾರರಲ್ಲಿ ಹಂಟ್ ಎಂಬುವನ ಮುಖಂಡತ್ವದಲ್ಲಿ ಮಾಂಚೆಸ್ಟರ್ ಪಟ್ಟಣದಲ್ಲಿ ಸುಮಾರು ೬೦,೦೦೦ ಜನಗಳ ದೊಡ್ಡ ಸಭೆಯೊಂದು (Meeting) ಸೇರಿದಾಗ ಕೆಲವು ದಂಡಾಧಿಕಾರಿಗಳು (Magistrates) ಸಭೆಯನ್ನು ಚದುರಿಸಲು ಕುದುರೆ ಸೈನ್ಯವನ್ನು ಕಳುಹಿಸಿದರು. ಈ ಈ ಘರ್ಷಣೆಯಲ್ಲಿ ೧೧ ಮಂದಿ ಸತ್ತುದಲ್ಲದೆ ೧೦೦ ಮಂದಿ ಮಹಿಳೆಯರಿಗೆ ಗಾಯಗಳಾದುವು. ಇದಕ್ಕೆ 'ಪೀಟರ್‌ಲೂ ಕಗ್ಗೊಲೆ' (Peterloo massacre) ಎಂದು ಚರಿತ್ರೆಯಲ್ಲಿ ಹೆಸರು.

ಸರ್ಕಾರವು, ದಂಗೆಯನ್ನು ಅಡಗಿಸಿದುದಕ್ಕಾಗಿ ದಂಡಾಧಿಕಾರಿಗಳಿಗೆ ವಂದನೆಯನ್ನು ನೀಡಿದುದಲ್ಲದೆ ಆರು ಕಾನೂನುಗಳನ್ನೂ ಜಾರಿಗೆ ತಂದಿತು. ಈ ಆರು ,ಕಾನೂನುಗಳಲ್ಲಿ (Six Acts) ಒಂದು ದಂಡಾಧಿಕಾರಿಗಳಿಗಲ್ಲದೆ (Magistrates) ಬೇರೆ ಯಾರೂ ಸಭೆಯನ್ನು (meeting) ಸೇರಿಸಕೂಡದೆಂದು ವಿಧಿಸಿತು. ಇದರಿಂದ ಕೇವಲ ಸಣ್ಣ ಪ್ರಮಾಣದಲ್ಲಿ ಸುಧಾರಣೆಗಳನ್ನು (Moderate reforms) ತರಲು ಕಾತುರರಾಗಿದ್ದವರಿಗೂ ಕೂಡಾ ತಮ್ಮ ಅಭಿಪ್ರಾಯವನ್ನು ಪ್ರಚುರಿಸಲು ಅವಕಾಶ ತಪ್ಪಿತು. ಈ ಪರಿಸ್ಥಿತಿಯಲ್ಲಿ ೧೮೨೦ ರಲ್ಲಿ ಕೇಟೋ ಬೀದಿ ಪಿತೂರಿ ನಡೆದುದು ಅಸಹಜವೇನೂ ಅಲ್ಲ. ಪಿತೂರಿಗಾರರು ಆರ್ಥರ್ ಥಿಸಲ್‌ವುಡ್ ಎಂಬುವನ ಮುಖಂಡತ್ವದಲ್ಲಿ ಮಂತ್ರಿಮಂಡಲವು ಭೋಜನಕೂಟವೊಂದರಲ್ಲಿ ಭಾಗವಹಿಸುತ್ತಿದ್ದಾಗ ಪೂರ್ತಿಯಾಗಿ ಅದನ್ನೇ ಕೊಂದು ಹಾಕಲು ಸಂಚು ನಡೆಸಿದ್ದರು. ಆದರೆ ಅವರ ಸಂಚೆಲ್ಲಾ ಸರ್ಕಾರಕ್ಕೆ ಆಗಲೇ ಗೊತ್ತಾಗಿತ್ತು. ಅವರ ಪ್ರಯತ್ನ ಕೈಗೂಡುವ ಮುನ್ನ ಅವರೆಲ್ಲಾ

ವಸ್ತಗಿರಿಮಾಡಲ್ಪಟ್ಟರು. ಥಿಸಲ್‌ವುಡ್ ಮತ್ತು ಇತರ ನಾಲ್ಕು ಪಿತೂರಿಗಾರರು ಮರಣದಂಡನೆಗೆ ಗುರಿಯಾದರು. ವಾಟರ್‌ಲೂ ಕದನದಲ್ಲಿ ನೆಪ್ರೋಲಿಯನ್ನನನ್ನು ಸೋಲಿಸಿ ಇಂಗ್ಲೆಂಡಿಗೆ ಜಯಗಳಿಸಿಕೊಟ್ಟಿದ್ದ ವೆಲಿಂಗ್‌ಟನ್, ಪಿತೂರಿಗಾರರು ಕೊಲ್ಲಲು ಉದ್ದೇಶಿಸಿದವರ ಪೈಕಿ ಒಬ್ಬನಾಗಿದ್ದನು.

೧೮೨೦ ರವರೆಗೂ ಮೂರನೇ ಜಾರ್ಜನ ಆಳ್ವಿಕೆಯು ಕೊನೆಗಾಣದಿದ್ದರೂ, ವಾಟರ್‌ಲೂ ಕದನದ ವೇಳೆಗೆ ಮೂರನೆ ಜಾರ್ಜ್ ಜೀವಶ್ರವವಾಗಿದ್ದನು. ಅವನು ಕುರುಡನಾಗಿ, ಕಿವುಡನಾಗಿ ಆಗಾಗ್ಗೆ ಹುಚ್ಚಿನಿಂದ ನರಳುತ್ತಿದ್ದನು. ಸರ್ಕಾರವು ೧೮೧೫–೧೮೨೧ ರ ತನಕ ಟೋರಿ ಗುಂಪಿನ ರಾಜಕಾರಣಿಗಳ ಕೈಯಲ್ಲಿತ್ತು. ಲಾರ್ಡ್ ಲಿವರ್‌ಪೂಲ್ ಮುಖ್ಯಮಂತ್ರಿಯಾಗಿದ್ದರೂ, ಮಂತ್ರಿಮಂಡಲದಲ್ಲಿ ಅತ್ಯಂತ ಪ್ರಭಾವಶಾಲಿಯಾಗಿದ್ದವನು ಲಾರ್ಡ್ ಕ್ಯಾಸಲ್‌ರೆ ( Lord Castlereagh ). ಲಾರ್ಡ್ ಸಿಡ್‌ಮತ್, ಲಾರ್ಡ್ ಎಲ್ಡನ್ ಮೊದಲಾದ ಇತರರು ಕೈಗಾರಿಕೆಯ ಕ್ರಾಂತಿಯಿಂದ ಒದಗಿದ ಹೊಸ ಪರಿಸ್ಥಿತಿಯನ್ನು ಎದುರಿಸಲು ಅಶಕ್ತರಾಗಿದ್ದರು. ಅವರಿಗೆ ಈ ಹೊಸ ಪ್ರಪಂಚದ ಅರ್ಥ ಸರಿಯಾಗಿ ಆಗಿರಲಿಲ್ಲ. ‘ ಒಬ್ಬ ಮನುಷ್ಯ ಒಂದು ಓಟು ’ ಎನ್ನುವ ರ್‍ಯಾಡಿಕಲ್ ಗುಂಪಿನ ಕೂಗು ಅವರಿಗೆ ಹಿಡಿಸಲಿಲ್ಲ. ಅವರಿಗೆ ಸುಧಾರಣೆಗಳನ್ನು ತರುವ ಮನೋಭಾವವೇ ಇರಲಿಲ್ಲ. ಇದಕ್ಕಾಗಿ ಅವರನ್ನು ಹಳೆಯ ಟೋರಿಗಳೆಂದು ಕರೆಯಲಾಯಿತು.

**ಲಾರ್ಡ್ ಕ್ಯಾಸಲ್‌ರೆ, ೧೭೬೯–೧೮೨೨ :** ವಿದೇಶೀಯ ಕಾರ್ಯದರ್ಶಿಯಾಗಿ ಲಾರ್ಡ್ ಕ್ಯಾಸಲ್‌ರೆ ೧೮೧೨ ರಿಂದಲೇ ನೆಪ್ರೋಲಿಯನ್ನನ ಬಲವನ್ನು ಮುರಿಯಲು ಮಿತ್ರರಾಷ್ಟ್ರಗಳ ನಾಲ್ಕನೇ ಗುಂಪನ್ನು ಕಟ್ಟಿ, ಕೊನೆಗೆ ನೆಪ್ರೋಲಿಯನ್ನನ ಪರಾಭವಕ್ಕೆ ಕಾರಣನಾದನು. ವಿಯನ್ನಾ ಸಭೆಯಲ್ಲಿ (Congress of Vienna) ಭಾಗವಹಿಸಿದನು. ಆಸ್ಟ್ರಿಯದ ಮಂತ್ರಿಯಾಗಿದ್ದ ಮೆಟರ್‌ನಿಕ್, ಯೂರೋಪಿನ ರಾಷ್ಟ್ರಗಳು ದಬ್ಬಾಳಿಕೆಯನ್ನು ಎದುರಿಸಿ, ರಾಜ್ಯಾಂಗದ ಆಧಾರದ ಮೇಲೆ (Constitutional Government) ಸರ್ಕಾರವನ್ನು ಸ್ಥಾಪಿಸಲು

ಹೊಡಿದ್ದ ಚಳುವಳಿಯನ್ನು ನಿರಂಕುಶ ರಾಜರ ಸಹಾಯದಿಂದ ಮುರಿಯಲು ಒಂದು ಹಂಚಿಕೆಯನ್ನು ಮಾಡಿದ್ದನು. ಆದರೆ ಇಂಗ್ಲೆಂಡ್ ಈ ತರಹ ಚಳುವಳಿಯನ್ನು ಯೂರೋಪಿನಲ್ಲಿ ಮುರಿಯಲು ಸಹಕರಿಸುವುದಿಲ್ಲವೆಂದು ೧೮೧೮ ರಲ್ಲಿ ಏಲಾಚಪೇಲ್ ಎಂಬಲ್ಲಿ ನಡೆದ ಸಭೆಯಲ್ಲಿ ಕ್ಯಾಸಲ್‌ರೆ ತಿಳಿಸಿದನು. ೧೮೨೦ ರಲ್ಲಿ ಟ್ರಾಪೊ (Troppau Congress) ಎಂಬಲ್ಲಿ ನಡೆದ ಸಮಾವೇಶದಲ್ಲಿ ನೇಪಲ್ಸ್ ರಾಜನಿಗೆ ಪ್ರಜೆಗಳು ತನ್ನ ದಬ್ಬಾಳಿಕೆಯನ್ನು ಪ್ರತಿಭಟಿಸಲು ಎದ್ದಿದ್ದ ದಂಗೆಯನ್ನು ಅಡಗಿಸಲು ಅವನಿಗೆ ಸಹಾಯ ನೀಡಬೇಕೆಂದು ಯೂರೋಪಿನ ರಾಷ್ಟ್ರಗಳು ನಿರ್ಧರಿಸಿದಾಗ ಕ್ಯಾಸಲ್‌ರೆ ಇದಕ್ಕೆ ಒಪ್ಪಲಿಲ್ಲ. ಆದರೆ ಯೂರೋಪಿನ ರಾಷ್ಟ್ರಗಳು ತಮ್ಮ ವ್ಯವಹಾರಗಳನ್ನು ನಿರ್ಧರಿಸಲು, ಒಟ್ಟು ಸಭೆ ಸೇರಿ ಶಾಂತಿಯಿಂದ ಅವನ್ನು ಪರಿಹರಿಸಿಕೊಳ್ಳಬೇಕೆಂಬ (Congress system) ತತ್ವಕ್ಕೆ ಕ್ಯಾಸಲ್‌ರೆ ತಲೆಬಾಗಿದ್ದನು.

ಆದರೆ ಕ್ಯಾಸಲ್‌ರೆ ಇಂಗ್ಲೆಂಡಿನಲ್ಲಿ ಕಾರ್ಮಿಕರ ವಿರುದ್ಧ, ಅವರು ಚಳುವಳಿ ನಡೆಸದಂತೆ ಕಾನೂನುಗಳನ್ನು ತಂದನು. ಆರು ಕಾನೂನುಗಳ ವಿಷಯ ಹಿಂದೆಯೇ ತಿಳಿಸಿದೆ. ಜನಗಳು ಸೈನಿಕ ತರಪೇತು ಹೊಂದಕೂಡದು, ಸಾರ್ವಜನಿಕ ಸಭೆಗಳು ಅಪ್ಪಣೆಯಿಲ್ಲದೆ ಜರುಗಕೂಡದು, ದಂಡಾಧಿಕಾರಿಗಳು ಆಯುಧಗಳನ್ನು, ಜನಗಳನ್ನು ಇಟ್ಟುಕೊಂಡಿದ್ದರೆ ಅವುಗಳನ್ನು ಅವರಿಂದ ಕಿತ್ತುಕೊಳ್ಳುವುದು, ಪತ್ರಿಕೆಗಳ ಮೇಲೆ ನಾಲ್ಕು ಪೆನ್ನಿ ಸ್ಟಾಂಪನ್ನು ಹಾಕಬೇಕೆಂದು ನಿಯಮಿಸಿದುದು—ಇವುಗಳೇ ಈ ಕಾನೂನುಗಳಲ್ಲಿ ಮುಖ್ಯವಾದವು. ಕ್ಯಾಸಲ್‌ರೆ ಇವುಗಳನ್ನು ರಚಿಸಲು ಮುಖ್ಯಕಾರಣನೆಂದು ಹೇಳಬಹುದು. ಇದರಿಂದ ಜನಗಳಿಗೆ ಅವನನ್ನು ಕಂಡರೆ ದ್ವೇಷ ಹೆಚ್ಚಾಯಿತು. ೧೮೨೨ ರಲ್ಲಿ ಅವನು ಆತ್ಮಹತ್ಯ ಮಾಡಿಕೊಂಡಾಗ ಅದು ತನ್ನ ಸಂತೋಷವನ್ನು ವ್ಯಕ್ತಪಡಿಸಿತು. ಷೆಲ್ಲಿ, ಬೈರನ್ ಮತ್ತು ಕೋಲ್‌ರಿಡ್ಜ್ ಅವನ ಮೇಲೆ ಕಟುವಾದ ಟೀಕೆಯನ್ನು ತಮ್ಮ ಪದ್ಯಗಳಲ್ಲಿ ಮಾಡಿದರು. ಆದರೆ ಕ್ಯಾಸಲ್‌ರೆ ಇಂಗ್ಲೆಂಡಿಗೆ ಅದರ ಕಷ್ಟಕಾಲದಲ್ಲಿ ಸೇವೆಯನ್ನು ಸಲ್ಲಿಸಿ ಅದರ ಪ್ರಭಾವವನ್ನು ಯೂರೋಪಿನಲ್ಲಿ ಹೆಚ್ಚಿಸಿದನೆಂಬುದನ್ನು ಮರೆಯಬಾರದು.

**೪ನೆ ಜಾರ್ಜ್, ೧೮೨೦-೧೮೩೦ ಮತ್ತು ೪ನೆ ವಿಲಿಯಂ ೧೮೩೦-೩೭:** ಕ್ಯಾನಿಂಗ್: ಲಾರ್ಡ್ ಕ್ಯಾಸಲ್‌ರೆಯ ಮರಣಾನಂತರ ಲಾರ್ಡ್ ಲಿವರ್ ಪೂಲ್ ತನ್ನ ಮಂತ್ರಿ ಸಂಪುಟದಲ್ಲಿ ಹಲವು ಬದಲಾವಣೆಗಳನ್ನು ಮಾಡ ಬೇಕಾಯಿತು. ಕ್ಯಾಸಲ್‌ರೆ ಯ ಸ್ಥಳಕ್ಕೆ ಜಾರ್ಜ್ ಕ್ಯಾನಿಂಗ್ (George Canning, ೧೭೭೦—೧೮೨೭) ನಿಯಮಿಸಲ್ಪಟ್ಟನು. ೪ ನೆ ಜಾರ್ಜನು ತನ್ನ ರಾಣಿಯನ್ನು ವಿಸರ್ಜಿಸಲು ಪಾರ್ಲಿಮೆಂಟಿನ ಮುಂದೆ ಕಾನೂನನ್ನು ತಂದಾಗ ಕ್ಯಾನಿಂಗ್ ರಾಜನ ವಿರೋಧಿಯಾಗಿದ್ದನು. ಇವನ ಪ್ರತಿಕಕ್ಷಿ ಕ್ಯಾಸಲ್‌ರೆ ಪ್ರಬಲನಾಗಿದ್ದುದರಿಂದ ಇವನಿಗೆ ಮೇಲಕ್ಕೇರಲು ಅವಕಾಶವಿರಲಿಲ್ಲ. ಇಂಡಿಯಾ ದೇಶಕ್ಕೆ ಗೌರ್ನರ್ ಜನರಲ್ಲಾಗಿ ಇವನು ಹೋಗುವನಾಗಿದ್ದನು. ಇದರಿಂದ ಅವನನ್ನು ಇಂಗ್ಲೆಂಡಿನ ರಾಜಕೀಯ ದಿಂದ ದೂರದಲ್ಲಿಡಬಹುದಾಗಿತ್ತು. ಆದರೆ ಕ್ಯಾಸಲ್‌ರೆಯ ಆತ್ಮಹತ್ಯ ಇವನಿಗೆ ದಾರಿಮಾಡಿಕೊಟ್ಟಿತು. ಕ್ಯಾಸಲ್‌ರೆಯಂತೆಯೇ ಕ್ಯಾನಿಂಗ್ ಕೂಡಾ ನೆಪೋಲಿಯನ್ನನೊಡನೆ ಇಂಗ್ಲೆಂಡ್ ಯುದ್ಧಮಾಡುತ್ತಿದ್ದಾಗ ಸ್ವಲ್ಪಕಾಲ ವಿದೇಶಾಂಗ ಕಾರ್ಯದರ್ಶಿಯಾಗಿದ್ದನು. ಟೋರಿ ಸರ್ಕಾರವು ಕ್ಯಾಸಲ್‌ರೆಯ ಮುಖಂಡತ್ವದಲ್ಲಿ ಸುಧಾರಣಾ ಚಳುವಳಿಯನ್ನು ಮುರಿದು ಹಾಕಿತ್ತು (Repression). ಈ ಹಳೆಯ ಟೋರಿಗಳು ೧೮೨೨ ರ ವೇಳೆಗೆ ರಾಜಕೀಯದಿಂದ ನಿವೃತ್ತರಾದುದರಿಂದ ಕ್ಯಾನಿಂಗ್ ಮತ್ತು ಅವನ ಅನುಯಾಯಿಗಳಾದ ರಾಬರ್ಟ್ ಪೀಲ್ (Robert peel ೧೭೮೮–೧೮೫೦) ಮತ್ತು ಹಸ್ಕಿಸನ್ (Huskisson, ೧೭೭೦–೧೮೩೦) ಲೀವರ್‌ಪೂಲ್ ಮಂತ್ರಿ ಸಂಪುಟವನ್ನು ಸೇರಿದರು. ಪೀಲ್ ಗೃಹ ಕಾರ್ಯದರ್ಶಿಯಾದನು (Home Secretary). ವಿಲಿಯಂ ಹಸ್ಕಿಸನ್ ವ್ಯಾಪಾರ ಖಾತೆಯ ಅಧ್ಯಕ್ಷನಾದನು (Board of trade). ಇವರಿಗೆ ಹೊಸ ಟೋರಿಗಳೆಂದು ಹೆಸರಾಯಿತು. ಏಕೆಂದರೆ ಇವರು ಹಳೆಯ ಟೋರಿಗಳ ಮನೋಭಾವವನ್ನು ಹೊಂದಿರಲಿಲ್ಲ. ಜನಗಳಲ್ಲಿ ಮೂಡಿದ್ದ ಅತೃಪ್ತಿಯನ್ನು ಸ್ವಲ್ಪಮಟ್ಟಿಗೆ ಹೋಗಲಾಡಿಸಬೇಕೆಂದು ಇವರು ಮನಸ್ಸುಮಾಡಿದ್ದರು. ಈ ಅತೃಪ್ತಿಗೆ ಸಾಕಾದಷ್ಟು ಕಾರಣಗಳಿತ್ತೆಂದು ಈ ಹೊಸ ಟೋರಿಗಳ ಮುಖಂಡ ಕ್ಯಾನಿಂಗ್ ಮನಗಂಡಿದ್ದನು. ಕ್ಯಾನಿಂಗ್

ಪಿಟ್ಟನ (Pitt, the younger) ಶಿಷ್ಯನಾಗಿದ್ದನೆಂಬುದನ್ನು ಮರೆಯ ಬಾರದು. ಫ್ರೆಂಚರ ಮಹಾಕ್ರಾಂತಿ ಬರುವುದಕ್ಕಿಂತ ಮುಂಚೆ ಪಿಟ್ ಸುಧಾರಣಾ ಚಳುವಳಿಯನ್ನು ತರಲು ತಾನೇ ಕಾತುರನಾಗಿದ್ದನು.

**ಕ್ಯಾನಿಂಗನ ವಿದೇಶಾಂಗ ನೀತಿ :** ದಬ್ಬಾಳಿಕೆಯನ್ನು ಎದುರಿಸಲು ಯೂರೋಪಿನಲ್ಲಿ ಹೋರಾಡುತ್ತಿದ್ದ ಜನಗಳಿಗೆ ಕ್ಯಾನಿಂಗ್ ಸಹಾಯ ಮಾಡಿದನು. ಪೋರ್ಚುಗಲ್ಲಿನಲ್ಲಿ ಸ್ವಲ್ಪಮಟ್ಟಿಗೆ ಉದಾರವಾದ ರಾಜ್ಯಾಂಗ ವನ್ನು (Liberal Constitution) ಸ್ಥಾಪಿಸಲು ಹೋರಾಡುತ್ತಿದ್ದ ಕೆಲವು ಮುಖಂಡರನ್ನು ತುಳಿಯಲು, ಕೆಲವು ಯೂರೋಪಿಯನ್ ರಾಷ್ಟ್ರಗಳು ಯೋಚಿಸುತ್ತಿದ್ದಾಗ ಕ್ಯಾನಿಂಗ್ ಆ ರಾಷ್ಟ್ರಗಳ ವಿರೋಧವಾಗಿ ಪೋರ್ಚುಗೀಸ್ ಮುಖಂಡರ ಸಹಾಯಕ್ಕೆ ನಾವಿಕ ಸೈನ್ಯವನ್ನು ಕಳುಹಿಸಿದನು.

ಸ್ಪೇನಿಗೆ ಸೇರಿದ ದಕ್ಷಿಣ ಅಮೆರಿಕದ ವಸಾಹತುಗಳ ವಿಚಾರದಲ್ಲಿಯೂ ಕ್ಯಾನಿಂಗ್ ಪ್ರವೇಶಿಸಿದನು. ನೆಪೋಲಿಯನ್ನನ ಸಹೋದರ ಜೋಸೆಫ್ ಬೋನಪಾರ್ಟ್ ಸ್ವಲ್ಪಕಾಲ ಸ್ಪೇನಿನ ರಾಜನಾಗಿದ್ದಾಗ ಅವನ ಅಧಿಕಾರದಿಂದ ಈ ವಸಾಹತುಗಳು ಬೇರೆಯಾಗಿದ್ದುವು. ೧೮೧೪ ರಲ್ಲಿ ಫರ್ಡಿನಾಂಡ್ ಸ್ಪೇನಿನ ರಾಜನಾಗಿ ಮಾಡಲ್ಪಟ್ಟಾಗ ಈ ವಸಾಹತುಗಳು ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಳ್ಳಲು ಸಿದ್ಧವಾಗಿರಲಿಲ್ಲ. ಕ್ಯಾನಿಂಗ್ ಈ ವಸಾಹತುಗಳನ್ನು ಗಣರಾಜ್ಯವೆಂದು ಅಂಗೀಕರಿಸಿ ಅವುಗಳಿಗೆ ಸಹಾಯ ಮಾಡಲು ಸಿದ್ಧವಾಗಿದ್ದನು. ಇಂಗ್ಲೆಂಡ್ ಈ ವಸಾಹತುಗಳೊಂದಿಗೆ ವ್ಯಾಪಾರಸಂಬಂಧವನ್ನು ಬೆಳೆಸಿಕೊಂಡಿತ್ತು. ಫರ್ಡಿನಾಂಡ್ ಈ ಗಣ ರಾಜ್ಯಗಳನ್ನು ತನ್ನ ಹತೋಟಿಗೆ ತರಲು ಫ್ರೆಂಚರ ಮತ್ತು ರಷ್ಯನರ ಸಹಾಯ ಕೇಳಿದನು. ದಬ್ಬಾಳಿಕೆಯ ಮನೋಭಾವ ಹೊಂದಿದ್ದ ಈ ರಾಷ್ಟ್ರಗಳು, ಆಸ್ಟ್ರಿಯದ ಮೆಟರ್‌ನಿಕ್ ಎಂಬುವನ ಪ್ರಭಾವಕ್ಕೆ ಒಳಗಾಗಿ, ಯೂರೋಪಿನಲ್ಲಿ ರಾಜರ ದಬ್ಬಾಳಿಕೆಯನ್ನು ಜನಗಳು ವೊಟಕುಮಾಡಲು ಅವಕಾಶಕೊಡದಂತೆ ಸಿದ್ಧವಾಗಿಯೇ ಇದ್ದುವು. ಆದರೆ ಕ್ಯಾನಿಂಗ್ ಬ್ರಿಟಿಷ್ ನೌಕಾ ಪಡೆಯಿಂದ ರಷ್ಯಾ ಮತ್ತು ಫ್ರಾನ್ಸಿನ ಸೈನ್ಯಗಳನ್ನು ಎದುರಿಸಲು ಸಿದ್ಧನಾಗಿದ್ದುದರಿಂದ ಅವು ತಾಟಸ್ಥ್ಯವನ್ನು ಹೊಂದಬೇಕಾಯಿತು. “ನಾನು ಈ ಹೊಸ ಪ್ರಪಂಚವನ್ನು (ಈ ಹೊಸ ಗಣರಾಜ್ಯ

ಗಳನ್ನು) ಹಳೆಯ ಪ್ರಪಂಚವನ್ನು (ಯೂರೋಪ್) ಸಮತೂಕದಲ್ಲಿಡಲು ಜನ್ಮತಾಳುವಂತೆ ಮಾಡಿದೆನು" (I called the new world into existence to redress the balance of the old) ಎಂಬ ಕ್ಯಾನಿಂಗನ ಹೇಳಿಕೆ ಸುಪ್ರಸಿದ್ಧವಾಗಿದೆ. ಕ್ಯಾನಿಂಗನಿಗೆ ಉತ್ತರ ಅಮೆರಿಕದ ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷನಿಂದಲೂ ಇದಕ್ಕೆ ಬೆಂಬಲ ಸಿಕ್ಕಿತು. ಅವನು "ಮನ್ರೋ ತತ್ವ" ವನ್ನು ಪ್ರಕಟಿಸಿದನು. ಇದರಿಂದ ಅಮೆರಿಕಾಗಳ ವಿಚಾರದಲ್ಲಿ ಯೂರೋಪ್ ಕೈಹಾಕುವುದನ್ನು ಅಮೇರಿಕದ ಸಂಯುಕ್ತ ಸಂಸ್ಥಾನ ಸಹಿಸುವುದಿಲ್ಲವೆಂದು ತಿಳಿಸಿತು.

ಯೂರೋಪಿನಲ್ಲಿ ಗ್ರೀಕರು ತಮ್ಮ ಸ್ವಾತಂತ್ರ್ಯವನ್ನು ಪಡೆಯಲು ತುರ್ಕಿಯ ಮೇಲೆ ದಂಗೆಯೆದ್ದರು. ಇಂಗ್ಲೆಂಡಿನಲ್ಲಿ ಗ್ರೀಕರ ಈ ಉದ್ಯಮಕ್ಕೆ ಲಾರ್ಡ್‌ಬೈರನ್ ಮೊದಲಾದವರಿಂದ ಸಹಾನುಭೂತಿ ದೊರಕಿತು. ಮೊದಮೊದಲು ಕ್ಯಾನಿಂಗ್ ತುರ್ಕಿಯನ್ನು ಬಲಹೀನವಾಗಿ ಮಾಡಿದರೆ ರಷ್ಯದ ಬಲ ಹೆಚ್ಚುವುದೆಂದು ತಿಳಿದು ಹಿಂಜರಿದನು. ಆದರೆ ತುರ್ಕಿಗೆ ಸೇರಿದ ಈಜಿಪ್ಟಿನ ಸೈನ್ಯ ಗ್ರೀಕರನ್ನು ಸದೆಬಡೆಯುತ್ತಿದ್ದುದನ್ನು ನೋಡಿ ಗ್ರೀಕರಿಗೆ ಸಹಾಯ ನೀಡಲು ರಷ್ಯಾ ಮತ್ತು ಫ್ರಾನ್ಸ್‌ಗಳೊಡನೆ ಕ್ಯಾನಿಂಗ್ ಸೇರಿಕೊಂಡನು. ಅವನು ಗ್ರೀಕರ ಸಹಾಯಕ್ಕೆ ಬ್ರಿಟಿಷ್ ನೌಕೆಯನ್ನು ಕಳುಹಿಸಿದನು. ತುರ್ಕಿಯ ನೌಕಾಬಲವು ನಾವಾರಿನೊ (೧೮೨೭) ಯುದ್ಧದಲ್ಲಿ ಸಂಪೂರ್ಣವಾಗಿ ಸೋತು ನಾಶವಾಯಿತು. ಏಡ್ರಿಯಾನೋಪಲ್ ಕರಾರಿನಿಂದ (೧೮೨೯) ಗ್ರೀಕರ ಸ್ವಾತಂತ್ರ್ಯವನ್ನು ತುರ್ಕಿಯ ಸುಲ್ತಾನನು ಒಪ್ಪಿಕೊಳ್ಳಬೇಕಾಯಿತು. ಆದರೆ ನಾವಾರಿನೊ ಯುದ್ಧ ಮುಗಿಯುವ ಮೊಳಿಗೆ ಕ್ಯಾಸಿಂಗ್ ಕಾಲವಾಗಿದ್ದನು.

ಕ್ಯಾನಿಂಗನ ಸಹೋದ್ಯೋಗಿಗಳು ಇಂಗ್ಲೆಂಡಿನಲ್ಲಿ ಅನೇಕ ಸುಧಾರಣೆಗಳನ್ನು ಜಾರಿಗೆ ತಂದರು. ಕಿರಿಯ ಪಿಟ್ ಯುದ್ಧಕಾಲದಲ್ಲಿ ಜಾರಿಗೆ ತಂದಿದ್ದ 'ಕಾಂಬಿನೇಷನ್ ಆಕ್ಟ್' ಕಾರ್ಮಿಕರು ಒಟ್ಟಿಗೆ ಸೇರಿ ಸಂಘಗಳನ್ನು ಏರ್ಪಡಿಸಿಕೊಳ್ಳುವುದಕ್ಕಾಗಲಿ (Trade Unions) ಮತ್ತು ಮುಷ್ಕರಗಳನ್ನು (Strikes) ಮಾಡುವುದಕ್ಕಾಲಿ ಅವಕಾಶವಿಲ್ಲದಂತೆ ಮಾಡಿತ್ತು. ಇದನ್ನು ೧೮೨೪ ರಲ್ಲಿ ರದ್ದುಮಾಡಲಾಯಿತು. ಫ್ರಾನ್ಸಿಸ್

ಪ್ಲೇಸ್ ಎಂಬ ದರ್ಜಿಯು ಇದಕ್ಕಾಗಿ ಹೆಚ್ಚಾಗಿ ಶ್ರಮಿಸಿ ಪಾರ್ಲಿಮೆಂಟಿನ ಸದಸ್ಯನಾದ ಜೋಸೆಫ್ ಹ್ಯೂಂ (Joseph Hume) ಎಂಬುವನ ಮೂಲಕ ಈ ಕಾರ್ಯವನ್ನು ಸಾಧಿಸಿದನು. ಇದರಿಂದ ಕೆಲಸಗಾರರು ಮಾಲಿಕರ ಹಿಡಿತದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಯಿತು.

ಹಸ್ಕಿಸರ್ ವ್ಯಾಪಾರ ಕ್ಷೇತ್ರದಲ್ಲಿ ಕೆಲವು ಸುಧಾಹರಣೆಗಳನ್ನು ತಂದನು. 'ನಾವಿಗೇಷನ್' ಕಾನೂನನ್ನು (Navigation Act) ಸಡಿಲ ಮಾಡಿದ್ದುದರಿಂದ ಬೇರೆಬೇರೆ ದೇಶದ ಹಡಗುಗಳಿಂದ ಸಾಮಾನುಗಳು ಇಂಗ್ಲೆಂಡಿಗೆ ಬರಲು ಅವಕಾಶವಾಯಿತು. ಇದರಿಂದ ಪದಾರ್ಥಗಳ ಬೆಲೆ ಅಗ್ಗವಾಯಿತು. ಇಂಗ್ಲೆಂಡಿಗೆ ಪರದೇಶಗಳಿಂದ ಬರುತ್ತಿದ್ದ ಪದಾರ್ಥಗಳ ಮೇಲೆ ಹಾಕಿದ್ದ ಸುಂಕದ ದರವನ್ನು ಅವನು ಕಡಿಮೆ ಮಾಡಿದನು. ಒಬ್ಬ ಬರಹಗಾರನು ಹೇಳಿದಂತೆ ವಧುವು ತಲೆಯಮೇಲೆ ಧರಿಸುತ್ತಿದ್ದ ರಿಬ್ಬನ್ ನಿಂದ ಹಿಡಿದು ಸತ್ತವರನ್ನು ಸಾಗಿಸುವುದಕ್ಕೆ ಉಪಯೋಗಿಸುತ್ತಿದ್ದ ಮರದ ಪೆಟ್ಟಿಗೆಗೆ (Coffin) ಹೊಡೆಯಲು ಬೇಕಾಗಿದ್ದ ಮೊಳೆಗಳಿಗೂ ಕೂಡಾ ಸುಂಕ ತೆರಬೇಕಾಗಿತ್ತು. ಈ ತೆರೆಗೆಯಿಂದ ವ್ಯಾಪಾರವು ಅನೇಕ ಅಡಚಣೆಗಳಿಗೆ ಒಳಗಾಗಿತ್ತು. ಆಡಂಸ್ಮಿತ್ ದೇಶದಲ್ಲಿ ಐಶ್ವರ್ಯ ಹೆಚ್ಚಲು ಅಡ್ಡಿ ಅಡಚಣೆಗಳಿಲ್ಲದ ವ್ಯಾಪಾರವಿರಬೇಕೆಂದು ಹೇಳಿದ ತತ್ವವನ್ನು ಹಸ್ಕಿಸರ್ ಆಚರಣೆಗೆ ತಂದನು. ಆದುದರಿಂದ ಇವನಿಗೆ 'ಅನಾತಂಕ ವ್ಯಾಪಾರದ ಬೆಳಗಿನ ನಕ್ಷತ್ರ' ವೆಂದು (Morning Star of free Trade) ಹೆಸರಾಯಿತು. ಇವನು ಈ ವಿಷಯದಲ್ಲಿ ಪ್ರಾರಂಭಿಸಿದ ಕೆಲಸವನ್ನು ಗ್ಲಾಡ್ ಸ್ಟನ್ ಪೂರ್ಣಗೊಳಿಸಿದನು. ವಸಾಹತುಗಳಿಂದ ಇಂಗ್ಲೆಂಡಿಗೆ ಆಮದು ಮಾಡಲ್ಪಟ್ಟ ಪದಾರ್ಥಗಳ ಮೇಲೆ ಹಸ್ಕಿಸರ್ ಅದೇ ಸಾಮಾನುಗಳು ಬೇರೆ ದೇಶಗಳಿಂದ ಬಂದರೆ ಅವಕ್ಕೆ ಹಾಕುತ್ತಿದ್ದ ಸುಂಕಕ್ಕಿಂತ ಕಮ್ಮಿ ಹಾಕುವ ರಿಯಾಯಿತಿ (Preference) ಪದ್ಧತಿಯನ್ನು ಆಚರಣೆಗೆ ತಂದನು. ೧೮೧೫ ನೆ ಗೋಧಿಯ ಕಾನೂನು (Corn law) ಕಾರ್ಮಿಕರ (Workers) ರೊಟ್ಟಿಯ ಬೆಲೆಯನ್ನು ಹೆಚ್ಚಿಸಿತ್ತು. ಆದರೆ ಇದರಿಂದ ಜಮೀನುದಾರರಿಗೆ ಒಳ್ಳೆಯ ಬೆಲೆ ಸಿಗುತ್ತಿತ್ತು. ಇವರಲ್ಲಿ ಹೆಚ್ಚುಜನ ಟೋರಿ ಪಂಗಡಕ್ಕೆ

ಸೇರಿದವರೇ ಆಗಿದ್ದರು. ಹಸ್ಕಿಸನ್ ಬೆಲೆಯು ಕಡಿಮೆಯಾದಂತೆ ಅದೇ ಪ್ರಮಾಣದಲ್ಲಿ ಪರದೇಶದ ಗೋಧಿ (Sliding Scale) ಬರುವಂತೆ ಮಾಡಿದನು.

ಪೀಲ್ ಲಂಕಷೈರಿನ ಹತ್ತಿಕಾರ್ಖಾನೆಯ ಮಾಲೀಕನಾದ ಸರ್ ರಾಬರ್ಟ್ ಪೀಲ್ ಎಂಬುವನ ಮಗ ಹಿರಿಯ ಪೀಲ್ ತನ್ನ ಮಗನು ರಾಜಕೀಯವನ್ನು ಪ್ರವೇಶಿಸಬೇಕೆಂದು ಮೊದಲಿನಿಂದಲೂ ಅದಕ್ಕೆ ಬೇಕಾದ ಸೌಲಭ್ಯಗಳನ್ನು ಕಲ್ಪಿಸಿಕೊಟ್ಟಿದ್ದನು. ಹ್ಯಾರೋವಿನಲ್ಲಿ ಇವನ ವಿದ್ಯಾಭ್ಯಾಸಕ್ಕೆ ಏರ್ಪಾಡುಮಾಡಿದನು. ಪೀಲ್ ಅಲ್ಲಿ ಲಾರ್ಡ್‌ಬೈರನ್ ಮೊದಲಾದವರೊಡನೆ ಗ್ರೀಕ್ ಮತ್ತು ರೋಮ್‌ಗಳಿಗೆ ಸಂಬಂಧಪಟ್ಟ (Classical Education) ಸಾಹಿತ್ಯ ಮೊದಲಾದುವುಗಳನ್ನು ಕಲಿತನು. ಅವನು ವಿದ್ಯಾಭ್ಯಾಸವನ್ನು ಕ್ರೈಸ್ಟ್‌ಚರ್ಚ್ ಕಾಲೇಜಿನಲ್ಲಿ ಮುಗಿಸಿದಮೇಲೆ ಅವನ ತಂದೆಯು ಅವನಿಗೆ ಒಂದು ಗ್ರಾಮವನ್ನು (Borough) ಕೊಂಡುಕೊಟ್ಟನು. ಹೀಗೆ ಅವನು ಪಾರ್ಲಿಮೆಂಟಿಗೆ ಸದಸ್ಯನಾಗಿ, ೧೮೧೨ ರ ವೇಳೆಗೆ ಐರ್ಲೆಂಡಿನ ಮುಖ್ಯ ಕಾರ್ಯದರ್ಶಿಯಾದನು. ೧೮೨೨ ರಲ್ಲಿ ಪೀಲ್ ಲಿವರ್‌ಪೂಲ್ ಮಂತ್ರಿ ಸಂಪುಟವನ್ನು ಗೃಹಕಾರ್ಯದರ್ಶಿಯಾಗಿ ಸೇರಿದನು. ಸುಧಾರಣೆ ಬಗ್ಗೆ ಹಳೆಯ ಟೋರಿಗಳ ಸಂಪ್ರದಾಯವಾದ ಪ್ರತಿಭಟನೆ ಮತ್ತು ಬಲತ್ಕಾರದಿಂದ ಅವುಗಳ ಅಡಗಿಸುವಿಕೆಯನ್ನು (Repression) ಪೀಲ್ ಚೆಲ್ಲಿಕೊಟ್ಟು, ಸುಧಾರಣೆಗಳು ಅತ್ಯಗತ್ಯವೆಂದು ಮನಗಂಡನು. ಆವಶ್ಯಕವಾದ ಸುಧಾರಣೆಗಳನ್ನು ಆಚರಣೆಗೆ ತರಲು ಅವನು ಹಿಂಜರಿಯಲಿಲ್ಲ.

ಮೊದಲು ಇವನ ಗಮನವನ್ನು ಸೆಳೆದಿದ್ದು ಆಗ್ಗೆ ಅಪರಾಧಿಗಳಿಗೆ ಶಿಕ್ಷೆವಿಧಿಸುವ ಕಾನೂನಿನ ಪಟ್ಟಿ (Penal Code). ಅದು ತೀವ್ರ, ಕ್ರೂರ ಶಿಕ್ಷೆಯನ್ನು ವಿಧಿಸುವ ಅನೇಕ ಕಾನೂನುಗಳಿಂದ ಕೂಡಿತ್ತು. ೨೦೦ ತಪ್ಪುಗಳಿಗೆ (Offences) ಮರಣದಂಡನೆಯನ್ನು ವಿಧಿಸಲಾಗುತ್ತಿತ್ತು. ಕುರಿ ಕದ್ದವನಿಗೂ, ಸಣ್ಣ ಪುಟ್ಟಕಳ್ಳತನ (೫ ಷಿಲಿಂಗ್) ಮಾಡಿದವನಿಗೂ ಮರಣದಂಡನೆ ವಿಧಿಸಲ್ಪಡುತ್ತಿತ್ತು. ೧೮೧೯ ರಲ್ಲಿ ಸುಮಾರು ಹತ್ತುಸಾವಿರ ಜನರನ್ನು ಆಸ್ಟ್ರೇಲಿಯದ ಬಾಟನಿ ಬೆ (Botany Bay)ಎಂಬಲ್ಲಿಗೆ ಜೀವಾವಧಿ ಶಿಕ್ಷೆವಿಧಿಸಿ ಕಳುಹಿಸಲಾಗಿತ್ತು. ತಪ್ಪಿಗೆ

ಶಿಕ್ಷೆವಿಧಿಸುವುದರಲ್ಲಿ ಕೆಲವು ನ್ಯಾಯಬದ್ಧವಾದ ಸುಧಾರಣೆಗಳನ್ನು ಮಾಡಬೇಕೆಂದು ಸ್ಯಾಮುಯಲ್ ರೊಮಿಲ್ಲಿ (Samuel Romilly, ೧೭೫೭-೧೮೧೮) ಮತ್ತು ಜೇಮ್ಸ್ ಮ್ಯಾಕಿಂಟಾಷ್ (James Mackintosh, ೧೭೬೮-೧೮೩೨) ಪ್ರಯತ್ನಿಸಿದ್ದರು. ಪೀಲ್ ಸುಮಾರು ನೂರು ತಪ್ಪುಗಳಿಗೆ ಮರಣದಂಡನೆಯನ್ನು ತಪ್ಪಿಸಿದನು.

ತಪ್ಪು ಮಾಡಿದವನನ್ನು ಶಿಕ್ಷಿಸುವುದಕ್ಕಿಂತ ತಪ್ಪುಮಾಡುವವನು ಕಂಡುಹಿಡಿಯಲ್ಪಡುವನೆಂಬ ಭಯವು ಜನಗಳಲ್ಲಿ ಮೂಡಲು ಪೀಲ್ ಪೋಲೀಸರ ಪಡೆಯನ್ನು ೧೮೨೯ ರಲ್ಲಿ ಲಂಡನ್ನಿನಲ್ಲಿ ಸ್ಥಾಪಿಸಿದನು. ಕೆಲವು ವರ್ಷಗಳನಂತರ ಅದು ಬೇರೆ ಬೇರೆ ಕಡೆಗಳಲ್ಲಿಯೂ ಸ್ಥಾಪಿತವಾಯಿತು.

ಫೆಬ್ರವರಿ, ೧೮೨೭ ರಲ್ಲಿ ಲಾರ್ಡ್ ಲೀವರ್‌ಪೂಲನಿಗೆ ಲಕ್ವಾ (Stroke) ಹೊಡೆದು ರಾಜಕೀಯದಿಂದ ಅವನು ದೂರವಿರಬೇಕಾಯಿತು. ಆದುದರಿಂದ ಕ್ಯಾನಿಂಗ್ ಮುಖ್ಯ ಮಂತ್ರಿಯಾದನು. ಆದರೆ ಅದು ನಾಲ್ಕು ತಿಂಗಳೊಳಗೆ ಮುಕ್ತಾಯವಾಯಿತು (August ೮,೧೮೨೭). ಹಳೆಯ ಟೋರಿ, ವೆಲ್ಲಿಂಗ್‌ಟನ್ ಅನಂತರ ಮುಖ್ಯ ಮಂತ್ರಿಯಾದನು. ಹೊಸ ಟೋರಿ ಪೀಲ್, ಈ ಮಂತ್ರಿಮಂಡಲವನ್ನು ಸೇರಿಕೊಂಡನು. ಏಕೆಂದರೆ ಇವರಿಬ್ಬರೂ ಕ್ಯಾಥಲಿಕರ ಸ್ಥಿತಿಯನ್ನು ಉತ್ತಮಗೊಳಿಸಲು ಮತ್ತು ಅವರಿಗೆ ವಿಮೋಚನೆಯನ್ನು ತರಲು (Catholic Emancipation) ಇಷ್ಟವುಳ್ಳವರಾಗಿರಲಿಲ್ಲ. ಆದರೆ ಇವರೇ ಕೊನೆಗೆ ಕ್ಯಾಥಲಿಕರ ವಿಮೋಚನಾ ಕಾನೂನನ್ನು ಜಾರಿಗೆ ತರಬೇಕಾಯಿತು. ಅದಕ್ಕೆ ಪ್ರಬಲವಾದ ಕಾರಣವು ಐರ್ಲೆಂಡಿನಿಂದ ಒದಗಿತು.

ಐರ್ಲೆಂಡಿನ ಚರಿತ್ರೆ, ೧೬೮೯—೧೮೧೫ : ಎರಡನೆ ಜೇಮ್ಸ್ ಬಾಯಿನ್ ಕದನದಲ್ಲಿ (೧೬೯೦) ಸೋತಮೇಲೆ ಅವನಿಗೆ ಬೆಂಬಲಕೊಟ್ಟ ರೋಮನ್ ಕ್ಯಾಥಲಿಕರು, ಲಿಮರಿಕ್ ಪತನವಾದ ಮೇಲೆ (೧೬೯೧) ಶರಣಾಗತರಾದರು. ೪/೫ ಜನಸಂಖ್ಯೆಯ ರೋಮನ್ ಕ್ಯಾಥಲಿಕರಿಗೆ ಅನೇಕ ಉಪದ್ರವಗಳು ಒದಗಿದ್ದವು. ಅವರ ವಿರುದ್ಧ ಅನೇಕ ಕಾನೂನುಗಳಾಸುವು (೧೭೨೭) : ಅವರು ಐರ್ಲೆಂಡಿನ ಪಾರ್ಲಿಮೆಂಟಿನ ಸದಸ್ಯರಾಗಲು

ಅವಕಾಶವಿರಲಿಲ್ಲ. ಅವರಿಗೆ ಮತದಾನದ ಹಕ್ಕಿರಲಿಲ್ಲ (Voting Power). ಅವರನ್ನು ಸೈನ್ಯ, ನೌಕಾಬಲ ಮತ್ತು ಇತರ ಕಚೇರಿಗಳಲ್ಲಿ ಕೆಲಸಕ್ಕೆ ಸೇರಿಸುತ್ತಿರಲಿಲ್ಲ. ಅವರು ವಿಶ್ವವಿದ್ಯಾನಿಲಯಕ್ಕೆ ಸೇರಿ ವಿದ್ಯಾಭ್ಯಾಸ ಮಾಡಲೂ ಅವಕಾಶವಿರಲಿಲ್ಲ. ಜಮೀನು ಕೊಳ್ಳುವ ಹಕ್ಕಂತೂ ಇರಲೇ ಇಲ್ಲ. ಐದು ಪೌಂಡಿಗಿಂತ ಹೆಚ್ಚಿನ ಬೆಲೆಯ ಕುದುರೆಯನ್ನೂ ಇಟ್ಟುಕೊಳ್ಳುವಂತಿರಲಿಲ್ಲ.

ಇಷ್ಟೇ ಅಲ್ಲದೆ ಐರ್ಲೆಂಡಿನ ರಾಜಕೀಯದಲ್ಲಿ ಇನ್ನೂ ಅನೇಕ ಸಮಸ್ಯೆಗಳಿದ್ದುವು. ಐರ್ಲೆಂಡಿನ ಪಾರ್ಲಿಮೆಂಟು ಜಾರಿಗೆ ತಂದ ಎಲ್ಲಾ ಕಾನೂನುಗಳೂ ಪಾಯಿನಿಂಗ್ ಮಾಡಿದ ಕಾನೂನಿನ ಪ್ರಕಾರ (Poynings' Act, ೧೪೯೪) ಇಂಗ್ಲಿಷ್ ಸರ್ಕಾರದಿಂದ (English Privy Council) ಅನುಮೋದಿಸಲ್ಪಡಬೇಕಾಗಿತ್ತು. ಅಷ್ಟೆ ಅಲ್ಲದೆ ಒಂದನೆ ಜಾರ್ಜನ ಕಾಲದಲ್ಲಿ ಐರ್ಲೆಂಡಿಗಾಗಿ ಕಾನೂನುಗಳನ್ನು ರಚಿಸುವ ಹಕ್ಕನ್ನೂ ಅದು ಕಾದಿಟ್ಟುಕೊಂಡಿತು, ಐರ್ಲೆಂಡಿನ ಉನ್ನತಾಧಿಕಾರಿಗಳೆಲ್ಲರೂ ಇಂಗ್ಲಿಷಿನವರೇ ಆಗಬೇಕಾಗಿತ್ತು.

ರಾಜಕೀಯ ಪರಿಸ್ಥಿತಿಯಲ್ಲದೆ ಆರ್ಥಿಕ ಪರಿಸ್ಥಿತಿಯೂ ಐರ್ಲೆಂಡಿನಲ್ಲಿ ಹದಗೆಟ್ಟಿತ್ತು. ಮುಕ್ಕಾಲು ಭಾಗ ಜಮೀನುಗಳು ಇಂಗ್ಲಿಷ್ ಜಮೀನುದಾರರ ಕೈಯಲ್ಲಿದ್ದುವು. ಇವರಲ್ಲಿ ಅನೇಕರು ಇಂಗ್ಲೆಂಡಿನಲ್ಲೇ ಇದ್ದುಕೊಂಡು ತಮ್ಮ ಜಮೀನುಗಳನ್ನು ಗುತ್ತಿಗೆಗೆ ಕೊಟ್ಟಿದ್ದರು. ಐರ್ಲೆಂಡಿನ ರೈತಾಪಿ ಜನ ಮಧ್ಯಸ್ಥಿಕೆಗಾರನಿಗೆ 'ಗುತ್ತಿಗೆ ಕೊಟ್ಟು, ತಮ್ಮ ಮತಕ್ಕೆ ಸೇರದೆ ಇದ್ದ ಪ್ರಾಟೆಸ್ಟೆಂಟ್ ಚರ್ಚಿಗೆ ಬಲಾತ್ಕಾರದ ಕಾಣಿಕೆ ಕೊಟ್ಟು (Tithes) ಉಳಿದುದರಲ್ಲಿ ಜೀವನ ತಳ್ಳಬೇಕಾಗಿತ್ತು. ಇದರಿಂದ ಅನೇಕರು ಐರ್ಲೆಂಡನ್ನು ಬಿಟ್ಟು ಬೇರೆಬೇರೆ ದೇಶಗಳಿಗೆ ಹೋಗಿ ಸೇರಿಕೊಂಡರು. ಅನೇಕರು ಫ್ರಾನ್ಸ್, ಸ್ಪೇನ್, ಆಸ್ಟ್ರಿಯ ಮತ್ತು ರಷ್ಯದ ಸೈನ್ಯಗಳಲ್ಲಿ ಸೇರಿಕೊಂಡು ಅವುಗಳನ್ನು ತರಪೇತು ಮಾಡಿದರು.

ಆದರೆ ೧೮ ನೇ ಶತಮಾನದ ದ್ವಿತೀಯಾರ್ಧದಲ್ಲಿ ಐರ್ಲೆಂಡಿಗೆ ಕೆಲವು ಕಷ್ಟಗಳಿಂದ ಬಿಡುಗಡೆ ಹೊಂದಲು ಅವಕಾಶ ಸಿಕ್ಕಿತು. ಅಮೇರಿಕ

ತನ್ನ ಸ್ವಾತಂತ್ರ್ಯಕ್ಕಾಗಿ ಯುದ್ಧ ಹೂಡಿದಾಗ ಇಂಗ್ಲೆಂಡ್ ಐರ್ಲೆಂಡಿಗೆ ವಿರುದ್ಧವಾದ ಕೆಲವು ಕಾನೂನುಗಳನ್ನು ರದ್ದುಗೊಳಿಸಿತು. ೧೭೭೩ ರ ವೇಳೆಗೆ ೧೭೨೭ ರಲ್ಲಿ ಜಾರಿಗೆ ಬಂದಿದ್ದ ಶಾಸನಗಳು* ತೆಗೆದುಹಾಕಲ್ಪಟ್ಟವು. ೧೭೮೦ ರಲ್ಲಿ ಐರ್ಲೆಂಡಿನ ವ್ಯಾಪಾರ ಅಭಿವೃದ್ಧಿಯಾಗದಂತೆ ಕೈಗೊಂಡಿದ್ದ ಕಾನೂನುಗಳು ತೆಗೆದುಹಾಕಲ್ಪಟ್ಟವು. ೧೭೮೨ ರಲ್ಲಿ ಪಾಯಿನಿಂಗ್ಸ್ ಕಾನೂನು ರದ್ದಾಗಿ, ಇಂಗ್ಲೆಂಡಿನ ಪಾರ್ಲಿಮೆಂಟು ಐರ್ಲೆಂಡಿಗೆ ಕಾನೂನು ಗಳನ್ನು ಮಾಡುವ ಹಕ್ಕೂ ಇದೇ ವರ್ಷ ತೆಗೆದುಹಾಕಲ್ಪಟ್ಟಿತು. ಹೀಗೆ ೧೮ ವರ್ಷ ಐರ್ಲೆಂಡ್ ಸ್ವತಂತ್ರವಾದ ಪಾರ್ಲಿಮೆಂಟಿನಿಂದ ಕೂಡಿತ್ತು.

ಐರ್ಲೆಂಡಿನ ಪಾರ್ಲಿಮೆಂಟಿನಲ್ಲಿ ಹೆನ್ರಿ ಗ್ರಾರ್ಟ್ ಎಂಬ ಪ್ರಾಟೆಸ್ಟೆಂಟ್ ಸದಸ್ಯನು ರೋಮನ್ ಕ್ಯಾಥಲಿಕರಿಗೆ ಪಾರ್ಲಿಮೆಂಟಿನ ಸದಸ್ಯರಾಗಲು ಅವಕಾಶವಿರಬೇಕೆಂಬ ವಿಷಯವಾಗಿ ಅನೇಕ ಉಜ್ವಲ ಭಾಷಣಗಳನ್ನು ಮಾಡಲಾರಂಭಿಸಿದನು. ಆದರೆ ಇಂಗ್ಲೆಂಡ್ ಇದಕ್ಕೆ ಸಿದ್ಧವಾಗಿರಲಿಲ್ಲ. ಈ ವೇಳೆಗೆ, ಫ್ರಾನ್ಸಿನೊಡನೆ ಇಂಗ್ಲೆಂಡ್ ಯುದ್ಧಕ್ಕೆ ತೊಡಗಿದ್ದುದರಿಂದ, ಇಂಗ್ಲೆಂಡಿನೊಡನೆ ಎಲ್ಲಾ ಸಂಬಂಧವನ್ನೂ ಕಡಿದುಹಾಕಬೇಕೆಂಬ ಉದ್ದೇಶ್ಯದಿಂದ, ಉಲ್ಫ್‌ಟೋನ್ ಎಂಬ ಮತ್ತೊಬ್ಬ ಪ್ರಾಟೆಸ್ಟೆಂಟನ ಮುಖಂಡತ್ವದಲ್ಲಿ ಐರ್ಲೆಂಡಿನಲ್ಲಿ 'ಯುನೈಟೆಡ್ ಐರಿಷ್‌ಮನ್' ಎಂಬ ಒಂದು ಪಕ್ಷವು ಸ್ಥಾಪಿತವಾಯಿತು. ಫ್ರೆಂಚರು ೧೭೯೬ ರಲ್ಲಿ ಇವರ ಸಹಾಯಕ್ಕಾಗಿ ೧೫೦೦೦ ಸೈನ್ಯವನ್ನು ಹೊಚೆ (Hoche) ಎಂಬುವನ ಕೈಕೆಳಗೆ ಕಳುಹಿಸಿದರು. ಆದರೆ ಅದು ಬಿರುಗಾಳಿಯಿಂದ ಐರ್ಲೆಂಡಿನಲ್ಲಿ ಇಳಿಯಲಾಗಲಿಲ್ಲ.

---

* ೧ ಮತದಾನ ಮಾಡಲು ರೋಮನ್ ಕ್ಯಾಥಲಿಕರಿಗೆ ಹಕ್ಕಿಲ್ಲದಿದ್ದುದು.

೨ ವಿಶ್ವವಿದ್ಯಾನಿಲಯಕ್ಕೆ ರೋಮನ್‌ಕ್ಯಾಥಲಿಕ್ ಪ್ರವೇಶಿಸದಂತೆ ಮಾಡಿದ್ದುದು.

೩ ರೋಮನ್ ಕ್ಯಾಥಲಿಕ್ ಜಮೀನು ಕೊಳ್ಳಲಾಗದಂತೆ ಮಾಡಿದ್ದುದು.

೪ ರೋಮನ್ ಕ್ಯಾಥಲಿಕ್ ಪ್ರಾಟೆಸ್ಟೆಂಟರನ್ನು ವಿವಾಹವಾಗದಂತೆ ಮಾಡಿದ್ದುದು.

೧೭೯೮ ರಲ್ಲಿ ಐರ್ಲೆಂಡಿನಲ್ಲಿ ದಂಗೆಯಾಯಿತು. ದಂಗೆಕಾರರು ಕ್ಯಾಥಲಿಕರಿಗೆ ಪಾರ್ಲಿಮೆಂಟಿನ ಸದಸ್ಯತ್ವ ದೊರಕಬೇಕೆಂದೂ, ರೈತಾಪಿ ಜನಗಳು ತಾವು ಪ್ರಾಟೆಸ್ಟೆಂಟ್ ಚರ್ಚಿಗೆ ಕೊಡುತ್ತಿದ್ದ ಬಲಾತ್ಕಾರದ ಕಾಣಿಕೆ (Tithes) ರದ್ದಾಗಬೇಕೆಂದೂ ಆಶಿಸಿದ್ದರು. ಅವರು ತಮಗೆ ಫ್ರೆಂಚರ ಸಹಾಯವು ದೊರಕುವ ಭರವಸೆಯನ್ನೂ ಹೊಂದಿದ್ದರು. ಆದರೆ ನೆಪೋಲಿಯನ್ ಐರ್ಲೆಂಡಿಗೆ ಸಹಾಯವನ್ನು ಕಳುಹಿಸಲಿಲ್ಲ. ವೀನೆ ಗರ್ ಹಿಲ್ ಎಂಬಲ್ಲಿ ಇಂಗ್ಲಿಷ್ ಸರ್ಕಾರವು ರೈತಾಪಿ ಜನಗಳ ದಂಗೆಯನ್ನು ಅಡಗಿಸಿತು.

ದಂಗೆಯನ್ನು ಅಡಗಿಸಿದಮೇಲೆ ಕಿರಿಯ ಪಿಟ್ ಐರ್ಲೆಂಡನ್ನು ಉಳಿಸಿಕೊಳ್ಳಬೇಕಾದರೆ ಐರ್ಲೆಂಡ್ ಮತ್ತು ಇಂಗ್ಲೆಂಡಿನ ಐಕ್ಯತೆಯೇ (Union) ಮುಖ್ಯ ಮಾರ್ಗವೆಂದು ಅರಿತನು. ಈ ಐಕ್ಯತೆಯು ಅಷ್ಟೇನೂ ಸುಲಭವಾಗಿರಲಿಲ್ಲ. ಧಾರಾಳವಾದ ಹಣದ ವೆಚ್ಚದಿಂದಲೂ ಮತ್ತು ಅನೇಕರಿಗೆ ಲಾರ್ಡ್ ಪದವಿಯನ್ನು ಕೊಡುವುದರ ಮೂಲಕವೂ ಪಿಟ್ ಐರ್ಲೆಂಡಿನ ಐಕ್ಯತೆಯನ್ನು (Union of Ireland) ೧೮೦೦ ರಲ್ಲಿ ತಂದನು. ಇಂಗ್ಲೆಂಡಿನ ಮತ್ತು ಐರ್ಲೆಂಡಿನ ಪಾರ್ಲಿಮೆಂಟುಗಳು ಒಂದಾದವು. ಇಂಗ್ಲೆಂಡಿನ ಪಾರ್ಲಿಮೆಂಟಿಗೆ ಐರ್ಲೆಂಡಿನಿಂದ ನಾಲ್ಕು ಮಠಾಧಿಪತಿಗಳು ಮತ್ತು ಇಪ್ಪತ್ತೆಂಟು ಶ್ರೀಮಂತರು (Lords) ಲಾರ್ಡ್ಸ್ ಸಭೆಗೂ (House of Lords) ಮತ್ತು ನೂರು ಪ್ರತಿನಿಧಿಗಳು ಕಾಮನ್ಸ್ ಸಭೆಗೂ ಸದಸ್ಯರಾಗಿರಬೇಕೆಂದೂ ವಿಧಾಯಕವಾಯಿತು. ಈ ರೀತಿ ಐರ್ಲೆಂಡಿನ ಸ್ವತಂತ್ರ ಪಾರ್ಲಿಮೆಂಟ್ ಮುಕ್ತಾಯಗೊಂಡಿತು. ಆ ಪಾರ್ಲಿಮೆಂಟಿನ ಸದಸ್ಯರನೇಕರು ತಾವು ಕೊಂಡುಕೊಂಡಿದ್ದ ಚುನಾವಣಾ ಕ್ಷೇತ್ರಗಳನ್ನು (Pocket Boroughs) ಕಳೆದುಕೊಂಡಿದ್ದರಿಂದ ಇಂಗ್ಲೆಂಡ್ ೧,೨೫೦,೦೦೦ ಪೌಂಡು ಹಣವನ್ನು ವ್ಯಯ ಮಾಡಬೇಕಾಯಿತು. ಇಬ್ಬರು ಶ್ರೀಮಂತರು ತಲಾ ೫೨,೦೦೦ ಪೌಂಡ್ ಮತ್ತು ೪೫,೦೦೦ ಪೌಂಡ್ ಪಡೆದರು. ಐರ್ಲೆಂಡ್ ಮತ್ತು ಇಂಗ್ಲೆಂಡ್ ಮಧ್ಯೆ ಅಡ್ಡಿ ಆಡಚಣೆಗಳಿಲ್ಲದ ವ್ಯಾಪಾರವೂ (Free Trade) ಮತ್ತು

ಗ್ರೇಟ್ ಬ್ರಿಟನ್ನಿನ ಆದಾಯದ ಏಳನೇ ಎರಡು ಭಾಗವನ್ನು (೨/೭) ಐರ್ಲೆಂಡ್ ಕೊಡಬೇಕೆಂದೂ ಷರತ್ತುಗಳಾದುವು.

ಐಕ್ಯತೆಯನ್ನು ತರುವ ಮುನ್ನ ಕ್ಯಾಥಲಿಕರಿಗೆ ಪಾರ್ಲಿಮೆಂಟಿನ ಸದಸ್ಯರಾಗಲು ಅವಕಾಶಕೊಡುವ ಕಾನೂನನ್ನು ತರುವುದಾಗಿ ಪಿಟ್ ವಾಗ್ದಾನ ಮಾಡಿದ್ದನು. ಆದರೆ ಅದು ನೆರವೇರಲು ಮೂರನೇ ಜಾರ್ಜ್ ಅವಕಾಶ ಕೊಡಲಿಲ್ಲ. ಐರ್ಲೆಂಡ್ ಈ ಮೋಸವನ್ನು ಮರೆಯಲಿಲ್ಲ. ಇಪ್ಪತ್ತೊಂಭತ್ತು ವರ್ಷಗಳಾದ ಮೇಲೆ ಆ ಕಾನೂನು ಜಾರಿಗೆ ಬಂದಿತು. ಆದರೆ ಆಗ ಅದು ಇಂಗ್ಲೆಂಡಿನ ಒಳ್ಳೆಯ ಮನಸ್ಸಿನಿಂದಾಗಲಿ, ಕೃಪೆ ಯಿಂದಾಗಲಿ ಬರಲಿಲ್ಲ. ಐರ್ಲೆಂಡ್ ಬಲಾತ್ಕಾರದಿಂದ ಅದನ್ನು ಪಡೆಯಿತು.

ಪೀಲ್ ೧೮೧೮ ರ ವರೆಗೆ (ಆರು ವರ್ಷ) ಐರ್ಲೆಂಡಿನ ಮುಖ್ಯ ಕಾರ್ಯದರ್ಶಿಯಾಗಿದ್ದನಷ್ಟೆ. ಕ್ಯಾಥಲಿಕರಿಗೆ ಪಾರ್ಲಿಮೆಂಟಿನಲ್ಲಿ ಸ್ಥಾನ ಕೊಡಲು (Catholic Emancipation) ಅವನಿಗೆ ಇಷ್ಟವಿರಲಿಲ್ಲ. ಆದರೆ ಅವನ ಪ್ರತಿಕಕ್ಷಿಯಾಗಿ ಐರ್ಲೆಂಡಿನಲ್ಲಿ ಡ್ಯಾನಿಯಲ್ ಓಕಾನೆಲ್ ಎಂಬ ರೋಮ್ಯಕ್ಯಾಥಲಿಕ್, ಕ್ಯಾಥಲಿಕ್ ಸಂಘದ ( Catholic Association) ನಾಯಕನಾಗಿ ವಿಮೋಚನಾಚಳುವಳಿಯನ್ನು ಹಬ್ಬಿಸಿ ದನು. ಅವನು ಹಿಂಸಾತ್ಮಕ ಕೃತ್ಯಗಳಿಗೆ ಎಡೆಗೊಡದೆ ಶಾಂತಿಯಿಂದ ವರ್ತಿಸ ಬೇಕೆಂದು ತನ್ನ ಅನುಯಾಯಿಗಳಿಗೆ ಹೇಳಿದ್ದನು. ಯಾರು ಕ್ಯಾಥಲಿಕರ ವಿಮೋಚನೆಗಾಗಿ ಪ್ರಯತ್ನ ಪಡುವರೋ ಅಂತಹವರನ್ನೆ ಪಾರ್ಲಿಮೆಂಟಿಗೆ ಚುನಾಯಿಸಬೇಕೆಂದು ಪ್ರಸಾರಮಾಡಿದನು. ಅನಂತರ ಅವನು ತಾನೇ ಕ್ಲೇರ್ ಎಂಬ ಚುನಾವಣಾ ಕ್ಷೇತ್ರದಿಂದ ಪಾರ್ಲಿಮೆಂಟಿಗೆ ಸದಸ್ಯನಾಗಿ ನಿಂತನು. ಅವನ ಪ್ರತಿಕಕ್ಷಿ ಪ್ರಾಟೆಸ್ಟೆಂಟ್ ಜಮಿನಾನುದಾರ ಫಿಟ್ಸ್ ಜೆರಾಲ್ಡ್ (Fitz Gerald) ಐರ್ಲೆಂಡಿನಲ್ಲಿ ಜನಪ್ರಿಯನಾಗಿಯೂ, ಮತ್ತು ಕ್ಯಾಥಲಿಕರ ವಿಮೋಚನೆಗೆ ಪಣ ತೊಟ್ಟವನೂ ಆಗಿದ್ದನು. ಅತ್ಯಂತ ಹೆಚ್ಚು ಸಂಖ್ಯೆಯಿಂದ (Overwhelming Majority) ಓ ಕಾನೆಲ್ ಪಾರ್ಲಿಮೆಂಟಿಗೆ ಸದಸ್ಯನಾಗಿ ಚುನಾಯಿಸಲ್ಪಟ್ಟನು. ಆದರೆ ಕಾನೂನು ಪ್ರಕಾರ ಕ್ಯಾಥಲಿಕರು ಪಾರ್ಲಿಮೆಂಟಿಗೆ ಸದಸ್ಯರಾಗಲು ಹಕ್ಕಿರಲಿಲ್ಲ.

ಐರ್ಲೆಂಡಿನಲ್ಲಿ ಎಲ್ಲಾ ಕಡೆಗಳಲ್ಲಿಯೂ ಅಶಾಂತಿ ತಲೆದೋರಿ, ದೊಡ್ಡ ದಂಗೆಯಾಗುವ ಸಂದರ್ಭ ಒದಗಿದ್ದುದನ್ನು ಕಂಡು ಪೀಲ್ ಮತ್ತು ವೆಲ್ಲಿಂಗ್‌ಟನ್ ಕ್ಯಾಥಲಿಕರ ವಿಮೋಚನಾಕಾನೂನನ್ನು ವಿಧಿಯಿಲ್ಲದೆ ಜಾರಿಗೆ ತಂದರು. ೧೮೨೯ ರಲ್ಲಿ ಜಾರಿಗೆ ಬಂದ ಈ ಕಾನೂನು ರೋಮನ್ ಕ್ಯಾಥಲಿಕರು ಪಾರ್ಲಿಮೆಂಟಿನ ಸದಸ್ಯರಾಗಲು ಮತ್ತು ಸೈನ್ಯ, ನೌಕಾಪಡೆ ಮತ್ತು ನ್ಯಾಯಾಸ್ಥಾನಗಳಲ್ಲಿ ಅಧಿಕಾರಿಗಳಾಗಲು ಅವಕಾಶ ಮಾಡಿಕೊಟ್ಟಿತು. ಇದಕ್ಕಿಂತ ಒಂದು ವರ್ಷ ಹಿಂದೆಯೇ, ಎರಡನೆ ಚಾರ್ಲ್ಸ್‌ನ ಕಾಲದಲ್ಲಿ ಜಾರಿಗೆ ಬಂದಿದ್ದ ಟೆಸ್ಟ್ ಆಕ್ಟ್ ಮತ್ತು ಕಾರ್ಪೊರೇಷನ್ ಆಕ್ಟ್ ಇಂಗ್ಲೆಂಡಿನಲ್ಲಿ ರದ್ದಾಗಿದ್ದವು.

ಇದಾದ ಮೇಲೆ ಪ್ರಾಟೆಸ್ಟೆಂಟ್ ಚರ್ಚಿಗೆ ಸೇರದ ಮತ್ತಿತರರಿಗೂ ಪಾರ್ಲಿಮೆಂಟಿನ ಸದಸ್ಯರಾಗಲು ಅವಕಾಶ ಸಿಕ್ಕಿತು. ೧೮೫೮ ರಲ್ಲಿ ಜ್ಯೂ (Jews) ಗಳು ಈ ಹಕ್ಕನ್ನು ಪಡೆದರು. ೧೮೭೦ ರಲ್ಲಿ ವಿಶ್ವವಿದ್ಯಾನಿಲಯದ ಪದವಿಗಳು (Degress) ಮತೀಯ ಗಣನೆಯಿಲ್ಲದೆ (Irrespective of religion) ಎಲ್ಲರಿಗೂ ಸಿಕ್ಕುವಂತಾಯಿತು. ೧೮೮೬ ರಲ್ಲಿ ನಾಸ್ತಿಕರೂ ಕೂಡಾ ಪಾರ್ಲಿಮೆಂಟಿಗೆ ಸದಸ್ಯರಾಗಲು ಅವಕಾಶ ಸಿಕ್ಕಿತು.

# ಪಾರ್ಲಿಮೆಂಟಿನ ಚುನಾವಣೆ ಪದ್ಧತಿಯ ಸುಧಾರಣೆ

**ಪಾರ್ಲಿಮೆಂಟಿನ ಚುನಾವಣೆ ಪದ್ಧತಿಯ ಸುಧಾರಣೆ** : ಕಾಮನ್ಸ್ ಸಭೆಯಲ್ಲಿ ಒಟ್ಟು ೬೫೮ ಸದಸ್ಯರಿದ್ದರು. ಅವರ ಹಂಚಿಕೆ ಈ ರೀತಿ ಇತ್ತು :

| | | | |
|---|---|---|---|
| (೧) | ಇಂಗ್ಲೆಂಡ್ ಮತ್ತು ವೇಲ್ಸ್: | ೫೧೩ | ೫೧೩ |
| | ಬರೊ (ಗ್ರಾಮ) ಗಳಿಗೆ : | ೪೧೯ | |
| | ಕೌಂಟಿ (ಪ್ರದೇಶ) ಗಳಿಗೆ : | ೯೪ | |
| (೨) | ಐರ್ಲೆಂಡ್ : | | ೧೦೦ |
| (೩) | ಸ್ಕಾಟ್‌ಲೆಂಡ್ : | | ೪೫ |

ಚುನಾವಣೆ ಹಕ್ಕನ್ನು ಪಡೆದಿದ್ದ ಊರುಗಳು (Boroughs) ಮೂರು ವಿಧವಾಗಿದ್ದವು. ಮೊದಲನೆಯದು 'ನಾಮಕರಣದ ಬರೋ' ಗಳು. ಇವುಗಳ ಮಾಲೀಕನು ಇವುಗಳ ಸದಸ್ಯನನ್ನು ಪಾರ್ಲಿಮೆಂಟಿಗೆ ನಾಮಕರಣದ ಮೂಲಕ ಕಳುಹಿಸಬಹುದಾಗಿತ್ತು. ಈ ಗುಂಪಿಗೆ ಸೇರಿದ ಹಳೆ 'ಸಾರಂ' ಎಂಬ ಊರು ಜನಗಳಿಲ್ಲದ ಒಂದು ದಿಬ್ಬವಾಗಿತ್ತು. ಡರ್ವಿಚ್ ಎಂಬ ಮತ್ತೊಂದು ಬರೋ ನೀರಿನಲ್ಲಿ ಮುಳುಗಿಹೋಗಿತ್ತು. ಇಂತಹ ಊರು ಒಬ್ಬ ಶ್ರೀಮಂತನ ಕೈಯಿಂದ ಮತ್ತೊಬ್ಬ ಶ್ರೀಮಂತನಿಗೆ ಮಾರಾಟದಿಂದ ಆಗಾಗ್ಗೆ ಬದಲಾಯಿಸಲ್ಪಡುತ್ತಿತ್ತು.

ಎರಡನೆಯ ಗುಂಪಿಗೆ ಸೇರಿದ್ದ 'ರಾಟ್ನ್‌ಬರೋ' ಗಳಲ್ಲಿ ಜನಸಂಖ್ಯೆ ತೀರ ಕಮ್ಮಿಯಾಗಿದ್ದುದರಿಂದ ಕೆಲವು ಸಾವಿರ ಪೌಂಡು ಲಂಚದ ಮೂಲಕ ಅಲ್ಲಿಯ ಮತದಾರರ ಓಟುಗಳನ್ನೆಲ್ಲಾ ಒಬ್ಬ ಉಮೇದುವಾರನು ಕೊಂಡುಕೊಳ್ಳಬಹುದಾಗಿತ್ತು.

ಮೂರನೆಯದಾದ 'ಫ್ರೀಬರೋ' (Free Borough) ಗಳಲ್ಲಿ ಮತದಾರರ ಸಂಖ್ಯೆ ಜಾಸ್ತಿಯಾಗಿದ್ದುದರಿಂದ ಹಣದಿಂದ ಓಟುಗಳನ್ನು ಕೊಳ್ಳುವುದು ಅಸಾಧ್ಯವಾಗಿತ್ತು. ಆದರೆ ಇಂತಹ ಬರೋಗಳು ತೀರ ಕಡಮೆಯಾದ ಸಂಖ್ಯೆಯಲ್ಲಿದ್ದವು.

ಕೌಂಟಿಗಳಲ್ಲಿ (ಪ್ರದೇಶ) ಲಂಚದ ಹೊಡೆತ ಅಷ್ಟಿಲ್ಲದಿದ್ದರೂ ಸ್ಥಳೀಯ ಜಮೀನುದಾರರ ಕೈವಾಡ ತಪ್ಪಿರಲಿಲ್ಲ. ಒಟ್ಟಿನಲ್ಲಿ ಸರಿಯಾದ ಚುನಾವಣೆಯಿಂದ ಪಾರ್ಲಿಮೆಂಟಿಗೆ ಬರುತ್ತಿದ್ದವರ ಸಂಖ್ಯೆ ಮೂರನೇ ಒಂದಕ್ಕಿಂತ (೧/೩) ಕಡಮೆಯಾಗಿತ್ತೆಂದು ಹೇಳಬಹುದು.

ಇಷ್ಟೇ ಅಲ್ಲದೆ ಕೈಗಾರಿಕೆಯ ಕ್ರಾಂತಿಯಿಂದ ಪ್ರಾಮುಖ್ಯತೆಗೆ ಬಂದ ಪಟ್ಟಣಗಳಾದ ಬರ್ಮಿಂಗ್‌ಹ್ಯಾಂ, ಮಾಂಚೆಸ್ಟರ್, ಲೀಡ್ಸ್ ಮೊದಲಾದುವುಗಳಿಗೆ ಸದಸ್ಯತ್ವ ಇರಲೇ ಇಲ್ಲ. ಆಗ ಪಾರ್ಲಿಮೆಂಟಿನ ಸದಸ್ಯನಾಗಿದ್ದ ಮೆಕಾಲೆ ಇದನ್ನು ಒತ್ತಿ ಹೇಳಿ ಸುಧಾರಣೆ ಬರದಿದ್ದರೆ ಉಳಿಯುವುದೇ ಕಷ್ಟವೆಂದು ಭಾಷಣ ಮಾಡಿದನು. ೧೬೮೮ ರಲ್ಲಿ ಎರಡನೇ ಜೇಮ್ಸನನ್ನು ಓಡಿಸಿದಾಗ ಅಥವಾ ೧೯೨೬ ರಲ್ಲಿ ಒದಗಿದ ಕೆಲಸಗಾರರ ಮಹಾ ಮುಷ್ಕರ (General Strike of 1926) ದಲ್ಲಿ ಇಂಗ್ಲೆಂಡ್ ಯಾವ ಸ್ಥಿತಿಯಲ್ಲಿತ್ತೋ ಅದೇ ಸ್ಥಿತಿಯನ್ನು ಅದು ೧೮೩೨ ರಲ್ಲಿ ಹೊಂದಿತ್ತು.

ಸ್ಕಾಟ್ಲೆಂಡಿನಲ್ಲಿ ನಾಲ್ಕುಸಾವಿರಕ್ಕಿಂತ (೪೦೦೦) ಹೆಚ್ಚಿಲ್ಲದ ಚುನಾವಣೆದಾರರು (Voters) ೪೫ ಜನ ಪ್ರತಿನಿಧಿಗಳನ್ನು ಚುನಾಯಿಸುತ್ತಿದ್ದರಷ್ಟೆ. ಈ ಚುನಾವಣೆಯ ಹಿಡಿತವು ಸುಮಾರು ೧೫೦ ಪೋಷಕ ಶ್ರೀಮಂತರ (Patrons) ಕೈಯಲ್ಲಿತ್ತು. ಐರ್ಲೆಂಡಿನ ಚುನಾವಣೆಯೂ ಕೂಡಾ ೫೦ ಅಥವಾ ೬೦ ಜಮೀನುದಾರರ ಹಿಡಿತದಲ್ಲಿತ್ತು. ಹೀಗೆ ಇಂಗ್ಲಿಷ್ ಪಾರ್ಲಿಮೆಂಟ್ ಹತ್ತೊಂಭತ್ತನೇ ಶತಮಾನದ ಮೊದಲನೆ ಭಾಗದಲ್ಲಿ ಜನಗಳಿಗೆ ಸರಿಯಾದ ಪ್ರಾತಿನಿಧ್ಯವನ್ನು ಕೊಟ್ಟಿರಲಿಲ್ಲ. ಅದು ಶ್ರೀಮಂತರಾದ ಜಮೀನುದಾರರ ಪ್ರಭಾವಕ್ಕೆ ಒಳಗಾಗಿತ್ತು.

ನಾಲ್ಕನೇ ಜಾರ್ಜ್ ೧೮೩೦ ರಲ್ಲಿ ಕಾಲವಾಗಿ ನಾಲ್ಕನೇ ವಿಲಿಯಂ ಪಟ್ಟಕ್ಕೆ ಬಂದನು. ಫಾಕ್ಸನ ಶಿಷ್ಯನಾದ ಲಾರ್ಡ್‌ಗ್ರೆ ೧೯೩೧ರಲ್ಲಿ ಪ್ರಧಾನ ಮಂತ್ರಿಯಾದನು. ಲಾರ್ಡ್ ಜಾನ್ ರಸಲ್ ಎಂಬ ಮತ್ತೊಬ್ಬ ವಿಗ್ ಪ್ರಮುಖನು ಲಾರ್ಡ್ ಗ್ರೆನಂತೆಯೇ ಪಾರ್ಲಿಮೆಂಟಿನ ಚುನಾವಣಾ ಪದ್ಧತಿಯಲ್ಲಿ ಸುಧಾರಣೆಯನ್ನು ತರಲು ಆಸಕ್ತನಾಗಿದ್ದನು. ೧೮೩೧ ರಲ್ಲಿ ಗ್ರೆ ಸುಧಾರಣೆಯ ಮಸೂದೆಯನ್ನು ಮಂಡಿಸಿದಾಗ ಕಾಮನ್ಸ್ ಸಭೆಯು

ಅದಕ್ಕೆ ಒಪ್ಪಿಗೆ ಸೂಚಿಸಿತು. ಆದರೆ ಲಾರ್ಡ್ಸ ಸಭೆ ಅದನ್ನು ತಿರಸ್ಕರಿಸಿತು. ವೆಲ್ಲಿಂಗ್ಟನ್ ಸುಧಾರಣೆಗಳ ಮುಖ್ಯ ವಿರೋಧಿಯಾಗಿದ್ದನು (Chief opponent of reform). ಸುಧಾರಣೆಯ ಮಸೂದೆಯು ಜಯಪ್ರದವಾಗಲು ನೂರು ಜನ ಶ್ರೀಮಂತರನ್ನು (೧೦೦ Peers) ಹೊಸದಾಗಿ ಮಾಡಲು ರಾಜನ ಆಜ್ಞೆಯನ್ನೂ ಲಾರ್ಡ್ಸ ಗ್ರೆ ತೆಗೆದುಕೊಂಡಿದ್ದನು. ಆದರೆ ಮೂರನೇ ಸಲ ಮಸೂದೆ ಬಂದಾಗ ವೆಲ್ಲಿಂಗ್ಟನ್ ಮತ್ತು ಅವನ ಅನುಯಾಯಿಗಳು ಸಭಾತ್ಯಾಗ ಮಾಡಿದ್ದರಿಂದ ಈ ಸಂದರ್ಭ ಒದಗಲಿಲ್ಲ. ಹೀಗೆ ೧೮೩೨ ರಲ್ಲಿ ಮೊದಲನೆಯ ಸುಧಾರಣಾ ಕಾನೂನು ಜಾರಿಗೆ ಬಂದಿತು.

**೧೮೩೨ ನೆ ಸುಧಾರಣಾ ಕಾನೂನು** (Reform Act, 1832): (೧) ಸ್ಥಾನಗಳ ಪುನರ್ವಿಂಗಡನೆ: ಎರಡು ಸಾವಿರಕ್ಕಿಂತ ಜನಸಂಖ್ಯೆ ಕಡಮೆ ಇದ್ದ ೫೬ ಊರುಗಳು (Boroughs) ತಮ್ಮ ಎರಡು ಸ್ಥಾನಗಳನ್ನೂ ಕಳೆದುಕೊಂಡುವು. ೩೦ ಇತರ ಊರುಗಳು (Borough) ತಲಾ ಒಂದೊಂದು ಸ್ಥಾನವನ್ನು (Seats) ಕಳೆದುಕೊಂಡುವು. ಹೀಗೆ ೧೪೩ ಸ್ಥಾನಗಳು ಪುನರ್ವಿಂಗಡನೆಗೆ ಉಳಿದುವು.

(೨) ಇವುಗಳಲ್ಲಿ ೬೫ ಸ್ಥಾನಗಳು ಕೌಂಟಿಗಳಿಗೂ, ಳಳ ಬರ್ಮಿಂಗ್‌ಹ್ಯಾಂ ಮತ್ತು ಮಾಂಚೆಸ್ಟರಿನಂತಹ ೨೨ ದೊಡ್ಡ ಪಟ್ಟಣಗಳಿಗೂ, ೨೧ ಇತರ ಚಿಕ್ಕ ಪಟ್ಟಣಗಳಿಗೂ, ೮ ಸ್ಕಾಟ್ಲೆಂಡಿಗೂ, ೫ ಐರ್ಲೆಂಡಿಗೂ ಕೊಡಲ್ಪಟ್ಟವು. ೧೮೩೨ ನೆಯ ಸುಧಾರಣೆಯ ಕಾನೂನು ಪ್ರಾತಿನಿಧ್ಯವನ್ನು ಊರುಗಳಿಂದ (Borough) ಕಿತ್ತುಕೊಂಡು ಕೌಂಟಿಗಳಿಗೂ ಮತ್ತು ಕೈಗಾರಿಕೆಯ ಪಟ್ಟಣಗಳಿಗೂ ಹಂಚಿತು.

ಓಟಿನ ವಿಸ್ತರಣೆ (Extention of Franchise): (೧) ಕೌಂಟಿಗಳಲ್ಲಿ ವರ್ಷಕ್ಕೆ ಹತ್ತು ಪೌಂಡಿನ ಜಮೀನು ಹಿಡುವಳಿದಾರನಿಗೂ ಮತ್ತು ಗುತ್ತಿಗೆದಾರನಿಗೂ ಓಟು ಮಾಡುವ ಹಕ್ಕು ದೊರಕಿತು. (೨) ಊರುಗಳಲ್ಲಿ (Borough) ವರ್ಷಕ್ಕೆ ಹತ್ತು ಪೌಂಡ್ ಮನೆ ಬಾಡಿಗೆ ಅಥವಾ ಕಂದಾಯ ಕೊಡುವ ಪ್ರತಿಯೊಬ್ಬ ಮನೆಯ ಮಾಲೀಕನಿಗೂ ಓಟು ಮಾಡುವ ಹಕ್ಕು ಕೊಡಲ್ಪಟ್ಟಿತು.

೧೮೩೨ ನೆಯ ಸುಧಾರಣಾ ಕಾನೂನು ಇಂಗ್ಲೆಂಡಿನಲ್ಲಿ ಪ್ರಜಾ ಪ್ರಭುತ್ವವನ್ನು ಸ್ಥಾಪಿಸಲಿಲ್ಲ. ಈ ಕಾನೂನಿನಿಂದ ಮೇಲ್ತರಗತಿಯ ಮಧ್ಯಮ ವರ್ಗದವರಿಗೆ (Upper Middle Class) ರಾಜಕೀಯ ಅಧಿಕಾರ (Political Power) ಸಿಕ್ಕಿತು. ಕಾರ್ಮಿಕರು ಈ ಕಾನೂನು ಬರಲು ಚಳುವಳಿಯನ್ನು ಹೂಡಿದರೂ ಅವರಿಗೆ ಅದರಿಂದ ಫಲ ಸಿಗಲಿಲ್ಲ. ಆದರೆ ಮುಂದೆ ಅವರಿಗಾಗಿ ಮತ್ತೊಂದು ಕಾನೂನು ಬರುವ ಸಾಧ್ಯತೆಯನ್ನು ಇದು (೧೮೩೨ ರ ಕಾನೂನು) ತೋರಿಸಿಕೊಟ್ಟಿತು.

೧೮೩೨ ರಿಂದಾಚೆಗೆ ಬ್ರಿಟನ್ನಿನ ಜನಸಂಖ್ಯೆಯಲ್ಲಿ ೨೪ ಕ್ಕೆ ಒಬ್ಬನಂತೆಯೂ, ೧೮೬೭ ರಿಂದಾಚೆಗೆ ೧೨ ಕ್ಕೆ ಒಬ್ಬನಂತೆಯೂ, ೧೮೮೪ ರಿಂದಾಚೆಗೆ ೭ ಕ್ಕೆ ಒಬ್ಬನಂತೆಯೂ, ೧೯೧೮, ೧೯೨೮ (ಮಹಿಳೆಯರಿಗೆ ಓಟು ಮಾಡುವ ಹಕ್ಕು ಸಿಕ್ಕಿದಮೇಲೆ) ಐದಕ್ಕೆ ಮೂರರಂತೆಯೂ ಓಟು ಮಾಡುವ ಹಕ್ಕು ಕೊಡಲ್ಪಟ್ಟಿತು.

**ಎರಡನೆಯ ಸುಧಾರಣಾ ಕಾನೂನು, ೧೮೬೭ :** ಮೊದಲನೆಯ ಸುಧಾರಣಾ ಕಾನೂನು ೧೮೩೨ ರಲ್ಲಿ ಮೇಲ್ತರಗತಿಯ ಮಧ್ಯಮ ವರ್ಗದವರಿಗೆ (Upper Middle Classes) ಮತದಾನದ ಹಕ್ಕನ್ನು ಕೊಟ್ಟಿದ್ದು ಸರಿಯಷ್ಟೆ. ಕಾರ್ಮಿಕ ವರ್ಗಕ್ಕೆ (Working Classes) ಇನ್ನೂ ಮತದಾನದ ಹಕ್ಕು ಸಿಕ್ಕಿರಲಿಲ್ಲ. ಅವರ ಚಳುವಳಿ (೧೮೩೦–೧೮೫೦) ಬಿರುಸಿನಿಂದ ನಡೆಯಿತು. ಈ ಚಳುವಳಿಗೆ 'ಚಾರ್ಟಿಸ್ಟ್' ಚಳುವಳಿಯೆಂದು ಹೆಸರು. ಇವರು ಹಕ್ಕು ಬಾಧ್ಯತೆಗಳ ಸನ್ನದುಗಳಿಗಾಗಿ (Charter) ಹೊಡೆದಾಡುತ್ತಿದ್ದುದರಿಂದ ಇವರಿಗೆ 'ಚಾರ್ಟಿಸ್ಟ್' ಎಂಬ ಹೆಸರಾಯಿತು. ಮೊದಲಿನಿಂದಲೂ ಈ ಚಳುವಳಿಯ ಗುರಿ ರಾಜಕೀಯದಲ್ಲಿ ಕಾರ್ಮಿಕರು (Working Classes) ಶ್ರೀಮಂತರಿಗೆ ಮತ್ತು ಜಮೀನುದಾರರಿಗೆ ಇದ್ದಂತೆ ಬಲವನ್ನು ಪಡೆಯಬೇಕೆಂಬುದೇ ಆಗಿತ್ತೆಂದು ಹೇಳಬಹುದು. ಅವರು ಸಮಾಜವಾದಿಗಳಲ್ಲ; ಏಕೆಂದರೆ ಕೈಗಾರಿಕೆಯ ಕ್ರಾಂತಿಯಿಂದ ಒದಗಿದ ಸಾಮಾಜಿಕ ಪರಿಸ್ಥಿತಿಗಳನ್ನು ಅವರು ಪರಿಹರಿಸಲು ಉದ್ಯುಕ್ತರಾಗಿರಲಿಲ್ಲ. ಇವರ ಆರು ಬೇಡಿಕೆಗಳು (Six Points of the Charter) ಯಾವುವೆಂದರೆ :

(೧) ಪಾರ್ಲಿಮೆಂಟ್ ಪ್ರತಿವರ್ಷವೂ ಹೊಸದಾಗಿ ಚುನಾಯಿಸಲ್ಪಡುವುದು. (Annual Parliaments)

(೨) ಪ್ರತಿಯೊಬ್ಬ ಮನುಷ್ಯನಿಗೂ ಮತದಾನ ಮಾಡುವ ಹಕ್ಕು (Universal Manhood Suffrage)

(೩) ಗುಟ್ಟಾಗಿ ಮತದಾನ ಮಾಡುವುದು (Vote by Ballot)

(೪) ಪಾರ್ಲಿಮೆಂಟಿನ ಸದಸ್ಯನಾಗಲು ಆಸ್ತಿ ಮೊದಲಾದವು ಇರಬೇಕಾದುದಿಲ್ಲ (No Property qualification to become a M. P.)

(೫) ಪಾರ್ಲಿಮೆಂಟಿನ ಸದಸ್ಯರಿಗೆ ಸಂಬಳ (Pay for a M. P.)

* (೬) ಸಮವಾದ ಚುನಾವಣಾ ಕ್ಷೇತ್ರಗಳು (Equal electoral Districts)

ಇವರ ನಾಯಕರಾದ ವಿಲಿಯಂ ಲೊವೆಟ್ (Lovett), ಫಿಯರ್ ಗಸ್ ಓಕಾನರ್ ಅಪಾರವಾದ ಜನ ಸಭೆ (Mass Meeting) ಸೇರಿಸುವುದರಲ್ಲಿ ನಿಪುಣರು. ೧೮೩೮ ರಲ್ಲಿ ಬರ್ಮಿಂಗ್‌ಹ್ಯಾಂ ಮತ್ತು ನ್ಯೂಪೋರ್ಟ್ ಮೊದಲಾದ ಕಡೆ ಸಭೆ ನಡೆದು ಗಲಭೆಗಳಾಯಿತು. ೧೮೪೨ ರಲ್ಲಿ ಹೂಡಿದ ಮುಷ್ಕರ (Strike) ದ ಫಲವಾಗಿ ಪೀಲ್ ಐನೂರು

* ಹಕ್ಕುಬಾಧ್ಯತೆಗಳ ಸನ್ನದುಕಾರರು (Chartists) ತಾವು ಯಾವ ವಿಷಯುಗಳಿಗಾಗಿ ಹೋರಾಡಿದರೋ ಅವು (ಒಂದನೆಯದನ್ನು ಬಿಟ್ಟು) ಕಾರ್ಯಗತವಾಯಿತೆಂದು (Materialised) ಹೇಳಬಹುದು. ಎರಡನೆಯದು, ೧೮೬೭ ರ ಸುಧಾರಣಾ ಕಾನೂನು (ಪಟ್ಟಣದ ಮನೆ ಮಾಲೀಕರಿಗೆ), ೧೮೮೪ ರ ಕಾನೂನು (ಊರಿನ ಅಥವಾ ಹಳ್ಳಿಯಮನೆ ಮಾಲೀಕರಿಗೆ), ೧೯೧೮ ರ ಕಾನೂನು (ಎಲ್ಲಾ ವಯಸ್ಕರಾದ ಗಂಡಸರಿಗೆ)—ಇವೇ ಮೊದಲಾದುವುಗಳಿಂದ ಬಂದಿತು. ಮೂರನೆಯದು ಗ್ಲಾಡ್‌ಸ್ಟನ್ ಜಾರಿಗೆ ತಂದ ೧೮೭೨ ರ ಕಾನೂನಿನಿಂದ ಬಂದಿತು. ನಾಲ್ಕನೆಯದು ೧೮೫೮ ರಲ್ಲಿ ಬಳಕೆಗೆ ಬಂದಿತು. ಐದನೆಯದು ೧೯೧೧ ರಲ್ಲಿ ಜಾರಿಗೆಬಂದಿತು. ಆರನೆಯದು ೧೮೮೫ ರ ಕಾನೂನಿನಿಂದ ಬಂದಿತು. ಪ್ರತಿವರ್ಷವೂ ಪಾರ್ಲಿಮೆಂಟಿಗಾಗಿ ಚುನಾವಣೆಯನ್ನು ಮಾಡುವುದು ತೀವ್ರ ಹಣದ ಖರ್ಚು ಆಗುವುದರಿಂದ ಸಾಧ್ಯವಾಗಿಲ್ಲ.

ಮಂದಿ ಕೆಲಸಗಾರರನ್ನು ದಸ್ತಗಿರಿ ಮಾಡಿದನು. ೧೮೪೮ ರಲ್ಲಿ ಫಿಯರ್‌ಗಸ್ ಓ ಕಾನರ್ ಮತ್ತೊಂದುಸಾರಿ ಸಭೆಯನ್ನೇರ್ಪಡಿಸಿದನು. ಆ ವರ್ಷ ಯೂರೋಪಿನ ಚರಿತ್ರೆಯಲ್ಲಿ ಕೆಲವು ಮುಖ್ಯವಾದ ಸಂಗತಿಗಳು ಜರುಗಿದವು. ಮೆಟರ್‌ನಿಕ್ಕನ ಪತನ, ಫ್ರಾನ್ಸಿನ ಮೂರನೆಯ ಕ್ರಾಂತಿ, ಇಟಲಿ ಮತ್ತು ಜರ್ಮನಿಯಲ್ಲಿ ಕ್ರಾಂತಿ ಇವೇ ಮೊದಲಾದುವು ಆ ವರ್ಷ ಒದಗಿಬಂದುವು. ಇಂಗ್ಲೆಂಡಿನಲ್ಲಿ ಲಾರ್ಡ್ ರಸಲ್ ಮುಖ್ಯ ಮಂತ್ರಿಯಾಗಿದ್ದನು. ಆ ವರ್ಷ ಫಿಯರ್‌ಗಸ್ ಓ ಕಾನರ್ ಐವತ್ತು ಲಕ್ಷ (Five Million) ಜನರಿಂದ ಸಹಿ ಮಾಡಿದ ಒಂದು ಅರ್ಜಿಯನ್ನು ದೊಡ್ಡ ಮೆರವಣಿಗೆಯಲ್ಲಿ ಕಾಮನ್ಸ್ ಸಭೆಗೆ ಒಪ್ಪಿಸಲು ಏರ್ಪಡಿಸಿದ್ದನು. ಸರ್ಕಾರವು ಈ ಮೆರವಣಿಗೆಯನ್ನು ಆಕ್ರಮವೆಂದು ಸಾರಿ, ಪ್ರತಿಬಂಧಿಸಿತು. ಕೊನೆಗೆ ಈ ಅರ್ಜಿಯನ್ನು ಗಾಡಿಯಲ್ಲಿ ಒಯ್ಯಲಾಯಿತು.

ಅರ್ಜಿಯನ್ನು ಪರೀಕ್ಷಿಸಿದಾಗ ಅದರಲ್ಲಿ ಅನೇಕ ಸುಳ್ಳು ಹೆಸರಿನ ರುಜುಗಳಿದ್ದುದು ಗೊತ್ತಾಯಿತು. ಅಷ್ಟೆ ಅಲ್ಲವೆ 'ವಿಕ್ಟೋರಿಯಾ ರಾಣಿ' 'ವೆಲ್ಲಿಂಗ್‌ಟನ್' ಎಂದು ರುಜುಮಾಡಿದ ಹೆಸರುಗಳೂ ಇದ್ದುವು. ಚಳುವಳಿಗಾರರು ತಮಾಷೆಗಾಗಿ ಈ ಹೆಸರುಗಳನ್ನು ಸೇರಿಸಿದ್ದರು. ಅರ್ಜಿಗೆ ಈ ರೀತಿಯಲ್ಲಿ ಸಂಭವಿಸಿದ ಅವಹೇಳನದಿಂದ ಈ ಚಳುವಳಿ ಬಲಗುಂದಿ ವಿಫಲವಾಯಿತು. ಆದರೆ ಚಳುವಳಿದಾರರು 'ಹಸಿದ ನಲವತ್ತರಲ್ಲಿ' (Hungry Forties) ಕಾರ್ಮಿಕರ ಶೋಚನೀಯ ಸ್ಥಿತಿಯನ್ನು ಸರ್ಕಾರಕ್ಕೆ ತಿಳಿಯುವಂತೆ ಮಾಡಿದರು.

ಕಾರ್ಮಿಕರಿಗೆ ಮತದಾನದ ಹಕ್ಕನ್ನು ಕೊಡಬೇಕೆಂದು ಲಿಬರಲ್ ಪಕ್ಷದ ಜಾನ್ ಬ್ರೈಟ್ ಮತ್ತು ಗ್ಲಾಡ್‌ಸ್ಟನ್ ಇಷ್ಟವುಳ್ಳವರಾಗಿದ್ದರು. ೧೮೬೬ ರಲ್ಲಿ ಗ್ಲಾಡ್‌ಸ್ಟನ್ ಇದಕ್ಕಾಗಿ ಒಂದು ಮಸೂದೆಯನ್ನು ಪಾರ್ಲಿಮೆಂಟಿನ ಮುಂದೆ ತಂದನು. ಇದರಿಂದ ಸುಮಾರು ಐದುಲಕ್ಷ ಜನರಿಗೆ ಮತದಾನದ ಹಕ್ಕು ಸಿಕ್ಕಲು ಅವಕಾಶವಿತ್ತು. ಆದರೆ ಟೋರಿ ಪಕ್ಷದ ಮುಖಂಡನಾದ ಡಿಸ್‌ರೇಲಿ ಮತ್ತು ಲಿಬರಲ್ ಪಕ್ಷದ ಒಂದು ಸಣ್ಣ

ಗುಂಪು* ಇದನ್ನು ವಿರೋಧಿಸಿತು. ಲಿಬರಲ್ ಸರ್ಕಾರವು ಇದರಿಂದ ತನ್ನ ರಾಜೀನಾಮೆಯನ್ನು ಸಲ್ಲಿಸಿತು.

ನಂತರ ಬಂದ ಡರ್ಬಿ ಮತ್ತು ಡಿಸ್ರೇಲಿ ಟೋರಿ ಮಂತ್ರಿಮಂಡಲವು ಡಿಸ್ರೇಲಿಯ ಪ್ರಯತ್ನದ ಫಲವಾಗಿ ಬಲವಾದ ಮತ್ತು ಪ್ರಗತಿದಾಯಕವಾದ ಸುಧಾರಣಾ ಕಾನೂನನ್ನು ಕಾಮನ್ಸ್ ಸಭೆಯ ಮುಂದೆ ತಂದಿತು. ಡಿಸ್ರೇಲಿ ತಾನೇ ಹಿಂದೆ ವಿರೋಧಿಸಿದ್ದ ಕಾನೂನನ್ನು ಜಾರಿಗೆ ತರಲು ಕಾತುರನಾಗಿದ್ದುದನ್ನು ಕಂಡು ಲಿಬರಲ್ ಪಕ್ಷದ ಸದಸ್ಯರಿಗೂ ಮತ್ತು ಅದಕ್ಕಿಂತ ಹೆಚ್ಚಾಗಿ ಅವನ ಪಕ್ಷದವರೇ ಆಗಿದ್ದ ಟೋರಿಗಳಿಗೂ ಪರಮಾಶ್ಚರ್ಯವಾಯಿತು. ಅವನು ತಂದ ಮಸೂದೆಯನ್ನು ಸೋಲಿಸಲು ಲಿಬರಲ್ ಪಕ್ಷದ ಸದಸ್ಯರು ಅನೇಕ ಕ್ರಾಂತಿದಾಯಕ ತಿದ್ದುಪಡಿಗಳನ್ನು ಸೂಚಿಸಿದರು. ಡಿಸ್ರೇಲಿ ಅವನ್ನೆಲ್ಲಾ ಒಪ್ಪಿಕೊಂಡು ೧೮೬೭ ನೇ ಸುಧಾರಣಾ ಕಾನೂನನ್ನು ಜಾರಿಗೆ ತಂದನು. ಡಿಸ್ರೇಲಿಯ ಈ ವರ್ತನೆಗೆ ಎರಡು ಕಾರಣಗಳಿದ್ದುವು. ಅವನಿಗೆ ಕಾರ್ಮಿಕರ ಸ್ಥಿತಿಯನ್ನು ಸರಿಪಡಿಸಲು ಟೋರಿಯಾಗಿದ್ದರೂ ಇಷ್ಟವಿತ್ತು. ಎರಡನೆಯದಾಗಿ ಲಿಬರಲ್ ಪಕ್ಷಕ್ಕೆ ಸೇರಬಹುದಾದ ಕೀರ್ತಿ ತನಗೆ ಬರಲೆಂದು ಇವನ ಇಷ್ಟ. ತಿದ್ದುಪಡಿಗಳನ್ನು ಒಪ್ಪಿಕೊಂಡಿದ್ದುದರ ಫಲವಾಗಿ ಮಸೂದೆಯಲ್ಲಿ ನಮೂದಿಸಿದ್ದುದರ ಎರಡರಷ್ಟು ಮಂದಿಗೆ ಮತದಾನದ ಹಕ್ಕನ್ನು ಕೊಡಬೇಕಾಯಿತು.

**ಸುಧಾರಣಾ ಕಾನೂನು, ೧೮೬೭ : ಷರತ್ತುಗಳು.**

೧. **ಸ್ಥಾನಗಳ ಪುನರ್ ಹಂಚಿಕೆ** (Redistribution of seats)

(i) ಹತ್ತುಸಾವಿರಕ್ಕಿಂತ ಕಡಿಮೆ ಜನಸಂಖ್ಯೆಯಿದ್ದ ಪಟ್ಟಣ

---

* ತನ್ನ ಪಕ್ಷವು ತಂದ ಮಸೂದೆಯನ್ನು ಪ್ರತಿಪಾದಿಸದೆ ವಿರೋಧಿಸುವ ಸಣ್ಣ ಒಳಗುಂಪಿಗೆ 'ಗುಹೆ' (Cave) ಎಂಬ ಹೆಸರು ಅಂದಿನಿಂದ ಬಂದಿದೆ. ಜಾನ್ ಬ್ರೈಟ್ ಇದನ್ನು ಈ ಒಳಪಂಗಡಕ್ಕೆ ಮೊದಲು ಉಪಯೋಗಿಸಿದನು. 'ಅಡುಲಂ' ಎಂಬ ಗುಹೆಯಲ್ಲಿ ಇಸ್ರೇಲಿನ ರಾಜನಾದ ಡೇವಿಡ್ ಎಂಬುವನನ್ನು ಕೆಲವು ಅನುಯಾಯಿಗಳು ಸಂಧಿಸಿದ್ದುದರಿಂದ ಇಂತಹ ಒಳಗುಂಪಿನ ಸದಸ್ಯರಿಗೆ 'ಅಡುಲಮೈಟ್' ಎಂದು ಹೆಸರು.

ಗಳಿಗೆ ಎರಡನೆ ಸದಸ್ಯನನ್ನು (Second member) ಕಳುಹಿಸುವ ಅವಕಾಶ ಹೋಯಿತು.

(ii) ಕೆಲವು ಊರುಗಳು (Boroughs) ತಮ್ಮ ಸ್ಥಾನಗಳನ್ನು ಕಳೆದುಕೊಂಡುವು (Disfranchised).

ಮೇಲೆ ಹೇಳಿದ ಬದಲಾವಣೆಗಳ ಪರಿಣಾಮವಾಗಿ ಬಂದ ನಲವತ್ತೈದು ಸ್ಥಾನಗಳನ್ನು ಕೆಳಗೆ ಕಂಡಂತೆ ಪುನರ್ ಹಂಚಿಕೆ ಮಾಡಲಾಯಿತು.

| | | |
|---|---|---|
| ಕೌಂಟಿಗಳಿಗೆ : | ೨೫ | |
| ಪಟ್ಟಣಗಳಿಗೆ : | ೧೯ | (ಬರ್ಮಿಂಗ್‌ಹ್ಯಾಂ, ಮ್ಯಾಂಚೆಸ್ಟರ್; ಲಿವರ್‌ಪೂಲ್‌ಮತ್ತು ಲೀಡ್ಸ್ ಮೊದಲಾದವುಗಳಿಗೆ ಎರಡು ಸ್ಥಾನಗಳ ಜೊತೆಗೆ ಮತ್ತೊಂದು ಸ್ಥಾನವು ಕೊಡಲ್ಪಟ್ಟಿತು) |
| ಲಂಡನ್ ವಿಶ್ವವಿದ್ಯಾನಿಲಯ : | ೧ | |
| ಒಟ್ಟು | ೪೫ | |

(೨) ಮತದಾನದ ವಿಸ್ತರಣೆ :

(i) ಊರುಗಳು : (Boroughs) ಮನೆಯನ್ನು ಹೊಂದಿದ್ದ ಎಲ್ಲಾ ಪುರುಷರಿಗೂ ಮತದಾನದ ಹಕ್ಕನ್ನು ಕೊಡಲಾಯಿತು. ಹತ್ತು ಪೌಂಡು ಬಾಡಿಗೆ ಕೊಡುತ್ತಿದ್ದ ಎಲ್ಲಾ ಪುರುಷರೂ ಮತದಾನದ ಹಕ್ಕನ್ನು ಪಡೆದರು.

(ii) ಕೌಂಟಿಗಳಲ್ಲಿ ವರ್ಷಕ್ಕೆ ಹನ್ನೆರಡು ಪೌಂಡು ಬಾಡಿಗೆ ಕೊಡುತ್ತಿದ್ದ ಗಂಡಸರಿಗೆಲ್ಲಾ ಮತದಾನದ ಹಕ್ಕು ದೊರಕಿತು.

ಹೀಗೆ ೧೮೬೭ ರ ಕಾನೂನು ಇಂಗ್ಲೆಂಡಿನಲ್ಲಿ ಪ್ರಜಾಪ್ರಭುತ್ವವನ್ನು ಸ್ಥಾಪಿಸಿತೆಂದು ಹೇಳಬಹುದು, ಆದರೆ ಅನೇಕ ಟೋರಿ ಮುಖಂಡರಿಗೆ ೧೮೬೭ ರ ಕಾನೂನು ಸರಿಬೀಳಲಿಲ್ಲ. ಲಾರ್ಡ್ ಡರ್ಬಿ ಇದು "ಕತ್ತಲೆಯ

ನೆಗತ" ವೆಂದು ಹೇಳಿದನು. ಮತ್ತೊಬ್ಬ ಟೋರಿ ರಾಜಕಾರಣಿಯಾದ ಲಾರ್ಡ್ ಸಾಲಿಸ್‌ಬರಿ ಇಂತಹ "ರಾಜಕೀಯ ಅಪ್ರಮಾಣಿಕತೆ ನಮ್ಮ ದೇಶದ ಚರಿತ್ರೆಯಲ್ಲಿ ಸಿಕ್ಕುವುದಿಲ್ಲ" ಎಂದನು.

## ಪಾರ್ಲಿಮೆಂಟಿನ ಸುಧಾರಣೆಯ ಮೂರನೆಯ ಕಾನೂನು :

**೧೮೮೪, ೧೮೮೫.** ಗ್ಲಾಡ್‌ಸ್ಟನ್ ಮಂತ್ರಿತ್ವವು ಪಾರ್ಲಿಮೆಂಟಿನ ಸುಧಾರಣೆಯ ಚರಿತ್ರೆಯಲ್ಲಿ ಮುಖ್ಯವಾದುದು. ಅವನ ಮೊದಲನೆ ಮಂತ್ರಿ ಸಂಪುಟವು ೧೮೭೨ ರಲ್ಲಿ ಬ್ಯಾಲೆಟ್ ಕಾನೂನನ್ನು ಜಾರಿಗೆ ತಂದಿತು. ಇದರಿಂದ ಗುಟ್ಟಾಗಿ ಮತದಾನ ಮಾಡಲು ಅವಕಾಶವಾಯಿತು. ಲಂಚ ಮೊದಲಾವುದುಗಳ ಹಾವಳಿ ಚುನಾವಣೆ ನಡೆಯುತ್ತಿದ್ದಾಗ ವಿಪರೀತವಾದ ಮಟ್ಟಕ್ಕೆ ಹೋಗುತ್ತಿದ್ದುದು ಕಡಿಮೆಯಾಯಿತು. ೧೮೮೩ ರಲ್ಲಿ ಗ್ಲಾಡ್‌ಸ್ಟನ್ ಎರಡನೆಯಸಲ ಮಂತ್ರಿಯಾದಾಗ ದುಷ್ಟ ಪದ್ಧತಿಗಳ ಕಾನೂನೊಂದು (Corrupt Practices Act, ೧೮೮೩) ರಚಿತವಾಗಿ, ಪರೋಕ್ಷವಾಗಿ ಲಂಚ ಮೊದಲಾದವು ಚುನಾವಣೆಗಾಗಿ ಉಪಯೋಗಿಸಲ್ಪಡದಂತಾಯಿತು.

೧೮೮೪ ರಲ್ಲಿ ಅದೇ ಮಂತ್ರಿಮಂಡಲವು ಅತಿ ಮುಖ್ಯವಾದ ಮತ್ತೊಂದು ಕಾನೂನನ್ನು ಜಾರಿಗೆ ತಂದಿತು. ಡಿಸ್‌ರೇಲಿಯು ೧೮೬೭ ರಲ್ಲಿ ಜಾರಿಗೆ ತಂದ ಕಾನೂನು ಮತದಾನದ ಹಕ್ಕನ್ನು ಪಟ್ಟಣಗಳಲ್ಲಿದ್ದ ದುಡಿಮೆಗಾರರಿಗೆ ಮತ್ತು ಕಾರ್ಮಿಕರಿಗೆ (Working man of towns) ಕೊಟ್ಟಿತಷ್ಟೆ. ಗ್ಲಾಡ್‌ಸ್ಟನ್ ೧೮೮೪ ರಲ್ಲಿ ತಂದ ಈ ಕಾನೂನು ಹಳ್ಳಿಗಳಲ್ಲಿ ವ್ಯವಸಾಯ ಕ್ಷೇತ್ರದಲ್ಲಿ ತೊಡಗಿದ್ದ ಕಾರ್ಮಿಕರಿಗೆ (Agri cultural Workers) ಮತದಾನದ ಹಕ್ಕನ್ನು ಕೊಟ್ಟಿತು. ಹಳ್ಳಿಗಳಲ್ಲಿ ಹತ್ತು ಪೌಂಡು (೧೦ £) ಮನೆ ಕಂದಾಯ (Rent) ಕೊಡುವ ಪ್ರತಿಯೊಬ್ಬನಿಗೂ ಮತದಾನ ಮಾಡುವ ಅಧಿಕಾರ ಕೊಡಲ್ಪಟ್ಟಿತು.

೧೮೮೫ ರಲ್ಲಿ ಗ್ಲಾಡ್‌ಸ್ಟನ್, ೧೮೮೪ ರಲ್ಲಿ ಪಾರ್ಲಿಮೆಂಟಿನ ಚುನಾವಣಾ ಸುಧಾರಣೆಯ ಕಾನೂನಿನ ಅಂಗವಾಗಿ ಸ್ಥಾನಗಳ ಪುನರ್‌ಹಂಚಿಕೆಯ ಕಾನೂನನ್ನು ಜಾರಿಗೆ ತಂದನು. ಮೊದಲನೆಯದಾಗಿ ಇದರಿಂದ ಹದಿ

ನೈದು (೧೫,೦೦೦) ಸಾವಿರಕ್ಕಿಂತ ಕಡಿಮೆ ಜನಸಂಖ್ಯೆ ಇದ್ದ ಊರುಗಳು (Boroughs) ತಮ್ಮ ಸದಸ್ಯತ್ವವನ್ನು ಕಳೆದುಕೊಂಡು, ಕೌಂಟಿಗಳಲ್ಲಿ ಮಿಳಿತವಾದವು. ಐವತ್ತು (೫೦,೦೦೦) ಸಾವಿರಕ್ಕಿಂತ ಕಡಿಮೆ ಜನ ಸಂಖ್ಯೆಯ ಊರುಗಳು (Boroughs) ಒಬ್ಬ ಸದಸ್ಯನನ್ನು ಮಾತ್ರ ಪಾರ್ಲಿಮೆಂಟಿಗೆ ಚುನಾಯಿಸತಕ್ಕದೆಂದು ಗೊತ್ತಾಯಿತು. ಹೀಗೆ ಗಳಿಸಿದ ಸ್ಥಾನಗಳನ್ನು ದೊಡ್ಡ ದೊಡ್ಡ ಪಟ್ಟಣಗಳಿಗೆ ಹಂಚಲಾಯಿತು. ಲಂಡನ್ ಮೂವತ್ತೇಳು ಹೊಸ ಸ್ಥಾನಗಳನ್ನೂ (Additional Seats), ಲಿವರ್ ಪೂಲ್ ಆರು, ಗ್ಲಾಸ್ಗೋ ಮತ್ತು ಬರ್ಮಿಂಗ್‌ಹ್ಯಾಮ್ ತಲಾ ನಾಲ್ಕು ಹೊಸ ಸ್ಥಾನಗಳನ್ನೂ ಪಡೆದವು.

ಎರಡನೆಯದಾಗಿ ಇಪ್ಪತ್ತೊಂದು ಪಟ್ಟಣಗಳು, ಆಕ್ಸ್‌ಫರ್ಡ್ ಮತ್ತು ಕೇಮ್‌ಬ್ರಿಡ್ಜ್ ವಿಶ್ವವಿದ್ಯಾಲಯಗಳ ವಿನಃ ಒಂದೊಂದು ಕ್ಷೇತ್ರಕ್ಕೆ ಒಂದೊಂದೇ ಸದಸ್ಯತ್ವ ಸಾಮಾನ್ಯವಾಗಿ ಇರಬೇಕೆಂದು (Single-Member Constituency) ಈ ಕಾನೂನು ವಿಧಿಸಿತು. ಈ ತತ್ವದ ಆಧಾರದ ಮೇಲೆ ಕೌಂಟಿಗಳ ಪುನರ್ವಿಂಗಡನೆ ಮಾಡಲಾಯಿತು.

ಮತದಾನದ ಹಕ್ಕು ಹೀಗೆ ಕೆಳದರ್ಜೆಯ ತರಗತಿಗಳಿಗೆ ದೊರ ಕಿದುದು ಸರಿಯಷ್ಟೆ. ಆದರೆ ಹೆಂಗಸರಿಗೆ ಈ ಅಧಿಕಾರ ದೊರಕಲು ಸ್ವಲ್ಪ ಕಾಲ ಹಿಡಿಯಿತು. ಹೆಂಗಸರ ಶಾಂತಿಯುತ ಚಳವಳಿ ಜನಗಳ ಮನಸ್ಸನ್ನು ಸೆಳೆಯಲಿಲ್ಲ. ೧೯೦೫ ರಲ್ಲಿ ಮಿಸೆಸ್ ಪ್ಯಾಂಕ್ ಹರ್ಸ್ಟ್ (Mrs. pank hurst) ಮತ್ತು ಅವಳ ಇಬ್ಬರು ಹೆಣ್ಣು ಮಕ್ಕಳು "ಹೆಂಗಸರ ರಾಜ ಕೀಯ ಮತ್ತು ಸಾಮಾಜಿಕ ಸಂಘವನ್ನು" ಸ್ಥಾಪಿಸಿ ಬಲವಾದ ಚಳ ವಳಿಯನ್ನು ಹೂಡಿದರು. ಅವರು ಶಾಂತಿಯುತ ಹಾದಿಯನ್ನು ಬಿಟ್ಟು ಅಂಗಡಿಗಳ ಕಿಟಕಿಗಳನ್ನು ಒಡೆಯುವುದು, ಟಪ್ಪಾಲು ಪೆಟ್ಟಿಗೆಗಳನ್ನು ಸುಡುವುದು, ಕಾಮನ್ಸ್ ಸಭೆಗೆ ನುಗ್ಗುವುದು, ಮಂತ್ರಿಗಳ ಮೇಲೆ ಆಕ್ರಮಣ ಇವೇ ಮೊದಲಾದ ಮಾರ್ಗಗಳನ್ನು ಅನುಸರಿಸಿದರು. ಅವರನ್ನು ದಸ್ತಗಿರಿ ಮಾಡಿದಾಗ ವಿಧಿಸಿದ ಜುಲ್ಮಾನೆಯನ್ನು ಕೊಡದೆ ನಿರಶನವ್ರತ ಮಾಡುವುದು ಇವೇ ಮೊದಲಾದ ಆಚರಣೆಗಳಿಂದ ಅವರು ಸರ್ಕಾರಕ್ಕೆ ಶಾಂತಿಯಿಲ್ಲದಂತೆ ಮಾಡಿದರು. ಆದರೆ ಇದರಿಂದ ಹೆಂಗಸರಿಗೆ

ಅನುಕೂಲವಾಗಲಿಲ್ಲ. ೧೯೧೪–೧೮ ರ ಯುದ್ಧದಲ್ಲಿ ಅವರು ಗಂಡಸರ ಜೊತೆಯಲ್ಲಿ ದೇಶಕ್ಕಾಗಿ ಹೋರಾಡಿದುದರಿಂದ ಯುದ್ಧ ಮುಗಿದಮೇಲೆ ಅವರಿಗೆ ಮತದಾನದ ಹಕ್ಕು ಕೊಡಲ್ಪಟ್ಟಿತು. ೧೯೧೮ ರಲ್ಲಿ ೨೧ ವರ್ಷದ ಪ್ರತಿಯೊಬ್ಬ ಪುರುಷನೂ ಮತ್ತು ೩೦ ವರ್ಷದ ಮಹಿಳೆಯೂ ಮತದಾನದ ಹಕ್ಕನ್ನು ಪಡೆದರು. ಇದರಿಂದ ೧೩೦ ಲಕ್ಷ ಗಂಡಸರು ಮತ್ತು ೯೦ ಲಕ್ಷ ಹೆಂಗಸರು ಮತದಾರರ ಪಟ್ಟಿಯಲ್ಲಿ ಸೇರಿಸಲ್ಪಟ್ಟರು. ಹೀಗೆ ಮಹಿಳೆಯರು ಪಾರ್ಲಿಮೆಂಟಿನ ಸದಸ್ಯರಾಗಲು ಅವಕಾಶ ಸಿಕ್ಕಿತು. ೧೯೨೮ ರಲ್ಲಿ ಪುರುಷರಂತೆಯೆ ಮಹಿಳೆಯರ ವಯಸ್ಸು ಮತದಾನ ಮಾಡಲು ೨೧ ಕ್ಕೆ ಇಳಿಯಿತು.

## ಮೊದಲನೆಯ ಸುಧಾರಣ ಯುಗ, ೧೮೩೦-೧೮೪೧

ಪಾರ್ಲಿಮೆಂಟಿನ ಚುನಾವಣೆಯ ಸುಧಾರಣೆಯ ಮೊದಲನೆ ಕಾನೂನನ್ನು ೧೮೩೨ ರಲ್ಲಿ ಜಾರಿಗೆ ತಂದ ವಿಗ್ ಪಕ್ಷದ ನಾಯಕರು ಇನ್ನೂ ಅನೇಕ ಸುಧಾರಣೆಗಳನ್ನು ಜಾರಿಗೆ ತಂದರು.

ಕಾರ್ಖಾನೆ ಕಾನೂನು, ೧೮೩೩: ಕಾರ್ಖಾನೆಗಳಲ್ಲಿ ಕೆಲಸ ಮಾಡುತ್ತಿದ್ದ ಮಕ್ಕಳ ಸ್ಥಿತಿ ಶೋಚನೀಯವಾಗಿತ್ತೆಂದು ಹಿಂದೆಯೇ ಹೇಳಿದೆ. ಆರು ಏಳು ವರ್ಷದ ಮಕ್ಕಳು ದಿನಕ್ಕೆ ಹತ್ತು ಹದಿನಾಲ್ಕು ಘಂಟೆಗಳು ಅನಾರೋಗ್ಯಕರವಾದ ವಾತಾವರಣದಲ್ಲಿ ಕೆಲಸ ಮಾಡಬೇಕಾಗಿತ್ತು. ಅವರಿಗೆ ಆಟಪಾಟಗಳ ಬದಲು ಜೀವನವೆಲ್ಲಾ ಕಾರ್ಖಾನೆಯಲ್ಲೇ ಕಳೆದುಹೋಗುತ್ತಿತ್ತು. ಮಕ್ಕಳ ಈ ದುರವಸ್ಥೆಯನ್ನು ಸರ್ಕಾರದ ಗಮನಕ್ಕೆ ಬರುವಂತೆ ಮಾಡಿದವನು ಲಾರ್ಡ್ ಷಾಫ್ಟ್ಸ್‌ಬರಿ (೧೮೦೧-೧೮೮೫). ಅವನ ಪ್ರಭಾವದ ಮೂಲಕ ಸರ್ಕಾರವು ನಿಯಮಿಸಿದ್ದ ಸಮಿತಿಯ ವರದಿ ಪಾರ್ಲಿಮೆಂಟಿನ ಸಂತಾಪವನ್ನು ಕೆರಳಿಸಿ ಈ ಕಾನೂನು ಜಾರಿಗೆ ಬರುವಂತೆ ಮಾಡಿತು. ಈ ಕಾನೂನು ಹತ್ತಿಬಟ್ಟೆ ಮತ್ತು ಉಣ್ಣೆಬಟ್ಟೆ ಕಾರ್ಖಾನೆಗಳಲ್ಲಿ ಒಂಬತ್ತು ವರ್ಷಕ್ಕಿಂತ ಕಡಮೆ ವಯಸ್ಸಿನ ಮಕ್ಕಳನ್ನು ಕೆಲಸಕ್ಕೆ ಸೇರಿಸಿಕೊಳ್ಳಕೂಡದೆಂದೂ, ಹದಿಮೂರು ವರ್ಷಕ್ಕಿಂತ ಕಡಮೆ ವಯಸ್ಸಿನವರು ವಾರಕ್ಕೆ ನಲವತ್ತೆಂಟು ಘಂಟೆಗಳ ಕಾಲ ಮಾತ್ರ ಕೆಲಸ ಮಾಡಬೇಕೆಂದೂ ವಿಧಾಯಕ ಮಾಡಿತು.

ಇಷ್ಟೆ ಅಲ್ಲದೆ ಈ ಕಾನೂನಿನ ವಿಧಿಗಳನ್ನು ಅನುಸರಿಸುವಂತೆ ನೋಡಿಕೊಳ್ಳಲು ಸರ್ಕಾರವು ನಾಲ್ಕು ಜನ ಪರೀಕ್ಷಕ ಅಧಿಕಾರಿಗಳನ್ನು (Inspectors) ನಿಯಮಿಸಿತು. ಹೀಗೆ ಕಾರ್ಖಾನೆ ಮತ್ತು ಗಣಿಗಳ ಕೆಲಸದಿಂದ ವಿಮೋಚನೆ ಹೊಂದಿದ ಮಕ್ಕಳಿಗೆ ವಿದ್ಯಾಭ್ಯಾಸ ಆವಶ್ಯಕವಾಯಿತು. ೧೮೦೩ ರಲ್ಲೇ ಬ್ರಿಟಿಷ್ ಮತ್ತು ವಿದೇಶಿ ಶಾಲೆಗಳ ಸಂಘವು ಕೈಗಾರಿಕೆಯ ಕೇಂದ್ರದ ಪಟ್ಟಣಗಳಲ್ಲಿ ಅನೇಕ ಶಾಲೆಗಳನ್ನು ತೆರೆದಿತ್ತು. ಇಂಗ್ಲೆಂಡಿನ ಚರ್ಚ್ ಸಂಸ್ಥೆ ಬಡವರ ವಿದ್ಯಾಭ್ಯಾಸಕ್ಕಾಗಿ ರಾಷ್ಟ್ರೀಯ ಸಂಘವೊಂದನ್ನು ಸ್ಥಾಪಿಸಿತ್ತು. ೧೮೩೩ ರಲ್ಲಿ ಸರ್ಕಾರವು ವರ್ಷಂಪ್ರತಿ

ಇಪ್ಪತ್ತು ಸಾವಿರ (೨೦,೦೦೦) ಪೌಂಡು ಹಣವನ್ನು ಈ ಸಂಘಗಳಿಗೆ ಒದಗಿಸಿದುದಲ್ಲದೆ ೧೮೩೯ ರಲ್ಲಿ ಈ ಹಣವು ಸರಿಯಾಗಿ ವಿನಿಯೋಗವಾಗುವಂತೆ ನೋಡಿಕೊಳ್ಳಲು ಪರೀಕ್ಷಕ ಅಧಿಕಾರಿಗಳನ್ನು (Inspectors) ನಿಯಮಿಸಿತು.

ಬಡವರ ಕಾನೂನು : ಆಹಾರ ಪದಾರ್ಥಗಳ ಬೆಲೆ ವಿಪರೀತ ಏರಿ, ವ್ಯವಸಾಯ ಕ್ಷೇತ್ರದ ಕೆಲಸಗಾರನ ಕೂಲಿಯ ಜೊತೆಗೆ ಆರ್ಥಿಕ ಸಹಾಯವನ್ನು ನೀಡುವಂತೆ ಸ್ಪೀನ್‌ಹ್ಯಾಂಲ್ಯಾಂಡ್‌ಪದ್ಧತಿ ಏರ್ಪಡಿಸಿತ್ತಷ್ಟೆ. ಅದು ತಾತ್ಕಾಲಿಕ ಪರಿಹಾರವನ್ನು ನೀಡಿ ಪರಿಸ್ಥಿತಿಯನ್ನು ಸರಿಪಡಿಸಿದರೂ ಅದರಿಂದ ಬೇರೆ ಬೇರೆ ಸಮಸ್ಯೆಗಳು ಹುಟ್ಟಿಕೊಂಡುವು. ಮೊದಲನೆಯದಾಗಿ ಮಾಲೀಕರು ಕೂಲಿಗಾರರಿಗೆ ಜೀವನಕ್ಕೆ ಸಾಕಷ್ಟು (Living wage) ಕೂಲಿಯನ್ನುಕೊಡಲು ಅವಕಾಶ ಕಲ್ಪಿಸಲಿಲ್ಲ. ಎರಡನೆಯದಾಗಿ ಕೂಲಿಗಾರರು ಸ್ವಾಭಿಮಾನ ಕಳೆದುಕೊಂಡರು (Selfrespect). ಕಷ್ಟಪಟ್ಟು ಕೆಲಸ ಮಾಡಿದವರೂ, ಮಿತವ್ಯಯ ಮಾಡಿದರೂ ಅವರಿಗೆ ಸಿಗುತ್ತಿದ್ದ ಕೂಲಿ ಅಲ್ಪವಾಗಿದ್ದುದರಿಂದ ಅವರು ಆರ್ಥಿಕ ಸಹಾಯವನ್ನು (Parish relief) ತೆಗೆದುಕೊಳ್ಳಬೇಕಾಗುತ್ತಿತ್ತು. ಅನೇಕರು ಇದನ್ನು ತಮ್ಮ ಆದಾಯದ ಒಂದು ಭಾಗವೆಂದು ಪರಿಗಣಿಸಿಕೊಂಡರು. ಮೂರನೆಯದಾಗಿ ಈ ಆರ್ಥಿಕ ನಿಧಿಯನ್ನು ಸೇರಿಸಲು ಆಯಾ ಪ್ರದೇಶಗಳಲ್ಲಿ ರೈತರಿಂದ ಹಣ ತೆಗೆದುಕೊಳ್ಳಬೇಕಾಗಿತ್ತು. ಕೆಲವು ಕಡೆ ಇದಕ್ಕೆ ಕೊಡಬೇಕಾಗಿದ್ದ ಹಣ ಕಂದಾಯಕ್ಕಿಂತ ಜಾಸ್ತಿಯಾಗುತ್ತಿದ್ದುದರಿಂದ ಅನೇಕ ರೈತರು ತಾವೇ ಕೂಲಿಗಾರರಾಗಿ, ತಾವು ಹಣ ಕೊಡುವುದರ ಬದಲು ಆರ್ಥಿಕ ಸಹಾಯವನ್ನು ತಾವೇ ಪಡೆಯಲಾರಂಭಿಸಿದರು.

೧೮೩೪ ರಲ್ಲಿ ಇದನ್ನು ತಹಬಂದಿಗೆ ತರಲು ಸರ್ಕಾರವು ಬಡವರ ಕಾನೂನಿನ ತಿದ್ದುಪಡಿಯೊಂದನ್ನು (Poor Law Amendment Act) ಎಡ್ವರ್ಡ್ ಚಾಡ್‌ವಿಕ್ ಎಂಬುವನ ಮುಖಂಡತ್ವದಲ್ಲಿ ತಯಾರಿಸಿತು. ಆರ್ಥಿಕ ಸಹಾಯವನ್ನು ಅಪೇಕ್ಷಿಸುವವರು "ಕೆಲಸದ ಮನೆಗಳಿಗೆ" ಹೋಗಿ ಕೆಲಸಮಾಡಬೇಕಾಗಿತ್ತು. ಈ ಕೆಲಸದ ಗೃಹಗಳು ಹೆಂಗಸರಿಗೆಬೇರೆ ಮತ್ತು ಗಂಡಸರಿಗೆ ಬೇರೆ ಇದ್ದುವು. ಇದರಿಂದ ಮಾಲೀಕರು ಕೆಲಸಗಾರರಿಗೆ

ಹೆಚ್ಚು ಕೂಲಿ ಕೊಡಬೇಕಾದ ಆವಶ್ಯಕತೆ ಒದಗಿತು. ಇಲ್ಲದಿದ್ದರೆ ಅವರು ಕೆಲಸದ ಗೃಹಗಳಿಗೆ ಹೋಗಿ, ಅವರಿಗೆ ಕೂಲಿಯವರೇ ಸಿಕ್ಕುತ್ತಿರಲಿಲ್ಲ. ಆದರೆ ಈ ಕೆಲಸ ಗೃಹಗಳಲ್ಲಿ, ಅಲ್ಲಿಗೆ ಹೆಚ್ಚು ಜನರು ಬರದಂತೆ ಮಾಡಲು ಸಹ್ಯವಲ್ಲದ ವಾತಾವರಣವನ್ನು ಬೇಕೆಂತಲೇ ಏರ್ಪಡಿಸಿದ್ದರಿಂದ ಬಡವರ ಕಷ್ಟ ಇದರಿಂದ ಪರಿಹಾರವಾಗುವುದರ ಬದಲು ಮತ್ತಷ್ಟು ಹೆಚ್ಚಾಯಿತೆಂದು ಹೇಳಬಹುದು. ಈ ಸನ್ನಿವೇಶವನ್ನು ಪ್ರಸಿದ್ಧ ಗ್ರಂಥಕರ್ತನಾದ ಡಿಕನ್ಸನ "ಅಲಿವರ್ ಟ್ವಿಸ್ಟ್" ಎಂಬ ಗ್ರಂಥದಲ್ಲಿ ನಾವು ಕಾಣಬಹುದು.

೧೮೩೫ ರಲ್ಲಿ ಪೌರ ಸಭೆಗಳ (Municipal Corporation Act) ಕಾನೂನಿನಿಂದ, ಪೌರಸಮಿತಿಗಳು ಚುನಾವಣೆಯ ಫಲವಾಗಿ ಏರ್ಪಟ್ಟು, ಅವುಗಳು ನಗರ ನೈರ್ಮಲ್ಯ ಮತ್ತು ದೀಪ ಮೊದಲಾದ ಕೆಲಸಗಳನ್ನು ಕೈಗೊಳ್ಳಲು ಅವಕಾಶ ಸಿಕ್ಕಿತು.

ಅಂಚೆ ವ್ಯವಸ್ಥೆಯ ಕಾನೂನು ೧೮೪೦ ರಲ್ಲಿ ಇಂಗ್ಲೆಂಡಿನಲ್ಲಿ ಸಾಮಾಜಿಕ ಪ್ರಗತಿಯನ್ನು ತಂದಿತೆಂದು ಹೇಳಬಹುದು. ಕಾಲವಿಳಂಬ ಮತ್ತು ಹೆಚ್ಚು ಖರ್ಚು ಇಲ್ಲದೆ ಅಂಚೆಯನ್ನು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಕಳುಹಿಸಲು ಆಗುತ್ತಿರಲಿಲ್ಲ. ಲಂಡನ್ನಿನಿಂದ ವಿಂಡ್‌ಸರ್‌ಗೆ ಕಾಗದ ಹೋಗಲು ಐದು ಪೆನ್ನಿ, ಕೇಂಬ್ರಿಡ್ಜಿಗೆ ಎಂಟು ಪೆನ್ನಿ, ಡರ್‌ಹ್ಯಾಂಗೆ ಒಂದು ಷಿಲಿಂಗ್ ಖರ್ಚಾಗುತಿತ್ತು. ರೋವ್‌ಲ್ಯಾಂಡ್‌ಹಿಲ್ ಎಂಬುವನು ಮಾಡಿದ ಸುಧಾರಣೆಗಳ ಫಲವಾಗಿ ಪೆನ್ನಿ ಅಂಚೆಯು ಬಳಕೆಗೆ ಬಂದಿತು.

# ವಿಕ್ಟೋರಿಯಾ ೧೮೩೭-೧೯೦೧

**ಪೀಲ್ ಮತ್ತು ಪಾಮರ್‌ಸ್ಟನ್** : ಸರ್ ರಾಬರ್ಟ್ ಪೀಲ್ ಸಾಧಿಸಿದ ಕೆಲಸಗಳನ್ನು ಹಿಂದೆಯೇ ಹೇಳಿತಷ್ಟೆ. ೧೮೩೪ ರಲ್ಲಿ ನಾಲ್ಕನೇ ವಿಲಿಯಂ ಮೆಲ್‌ಬೋರ್ನ ಸರ್ಕಾರವನ್ನು ರದ್ದುಮಾಡಿ, ಟೋರಿಗಳು ಸರ್ಕಾರವನ್ನು ರಚಿಸುವಂತೆ ಅಪ್ಪಣೆ ಮಾಡಿದನು. ಆಗ ಟೋರಿ ಪಕ್ಷದ ನಾಯಕನಾಗಿದ್ದವನು ಪೀಲ್. ಪೀಲ್, ಟಾಮ್‌ವರ್ಥ್ ಹೇಳಿಕೆಯಲ್ಲಿ (೧೮೩೪) ಪರಿಸ್ಥಿತಿಗನುಗುಣವಾಗಿ ಟೋರಿಗಳೂ ಕೂಡಾ ಸುಧಾರಣೆಗಳನ್ನು ಕೈಗೊಳ್ಳಬೇಕೆಂಬ ಮನೋಭಾವವನ್ನು ವ್ಯಕ್ತಪಡಿಸಿದನು. ಆದರೆ ಸುಧಾರಣೆಗಳು ನಿಧಾನವಾಗಿ ಬರಬೇಕೆಂಬುದು ಅವನ ಗುರಿ. ಈ ಟೋರಿಗಳಿಗೆ "ಕನ್ಸರ್‌ವೇಟೀವ್" ಎಂದು ಹೆಸರಾಯಿತು. ಆದರೆ ಟೋರಿಗಳಿಗೆ ೧೮೩೪ ರ ಚುನಾವಣೆಯಲ್ಲಿ ಸೋಲಾದ್ದರಿಂದ ಪೀಲ್ ತನ್ನ ರಾಜೀನಾಮೆ ಸಲ್ಲಿಸಿದನು.

೧೮೪೧ ರಲ್ಲಿ ಪೀಲ್ ಪುನಃ ಮುಖ್ಯಮಂತ್ರಿಯಾದನು. ಅವನ ಮುಖಂಡತ್ವದಲ್ಲಿ ಕನ್ಸರ್‌ವೇಟೀವ್ ಪಕ್ಷ ಬಲಗೂಡುತ್ತಾ ಬಂದಿತ್ತು. ಕ್ಯಾಥಲಿಕ್ ವಿಮೋಚನಾ ಕಾನೂನಿನ ಜಗಳದಲ್ಲಿ ಟೋರಿಗಳ ಪತನವಾಗಿತ್ತಷ್ಟೆ. ೧೮೪೧ ರಲ್ಲಿ ಪೀಲ್ ಮುಖ್ಯಮಂತ್ರಿಯಾದಾಗ ಅವನ ಗುರಿ ದೇಶದ ಹಣಕಾಸಿನ ಪರಿಸ್ಥಿತಿಯನ್ನು ಸರಿಪಡಿಸುವುದೂ ಮತ್ತು ಗೋಧಿಯ ಕಾನೂನನ್ನು ರಕ್ಷಿಸುವುದೂ ಆಗಿತ್ತು. ಕನ್ಸರ್‌ವೇಟೀವ್ (ಟೋರಿ) ಪಕ್ಷವು ಹೆಚ್ಚಾಗಿ ಜಮೀನುದಾರರಿಂದ ಕೂಡಿತ್ತಾದ್ದರಿಂದ ಅದು ಗೋಧಿಯ ಕಾನೂನಿನ ರಕ್ಷಣೆಯನ್ನು ಅದರ ಮುಖಂಡನಾದ ಪೀಲ್ ಮಾಡುವನೆಂಬ ಭರವಸೆಯನ್ನು ಹೊಂದಿತ್ತು. ಆದರೆ ಪೀಲ್ ಈ ಭರವಸೆಯನ್ನು ಮುರಿದು, ದೇಶದ ಹಿತವು ಪಕ್ಷದ ಹಿತಕ್ಕಿಂತ ದೊಡ್ಡದೆಂದು ತೋರಿಸಿಕೊಟ್ಟುದಲ್ಲದೆ, ತನ್ನ ರಾಜಕೀಯ ಪತನವನ್ನೂ ಇದರಿಂದ ತಂದುಕೊಳ್ಳಲು ಹಿಂಜರಿಯಲಿಲ್ಲ.

ಲಾರ್ಡ್ ಲಿವರ್‌ಪೂಲನ ಸಂಪುಟದಲ್ಲಿ ೧೮೨೨ ರಲ್ಲಿ ಗೃಹಕಾರ್ಯದರ್ಶಿಯಾಗಿದ್ದ ಪೀಲ್ ಅಪರಾಧಿಗಳ ಕಾನೂನನ್ನು (Penal code)

ಸರಿಪಡಿಸಿದನು. ವೆಲ್ಲಿಂಗ್‌ಟನ್ ಮುಖ್ಯಮಂತ್ರಿಯಾಗಿದ್ದಾಗ ಕ್ಯಾಥಲಿಕ್ ವಿಮೋಚನಾ ಕಾನೂನನ್ನು ತರಲು ಅವನಿಗೆ ಸಹಾಯಕನಾದನು.

ಮುಖ್ಯ ಮಂತ್ರಿಯಾದಾಗ ಪೀಲ್ ಅನೇಕ ತೆರಿಗೆಗಳನ್ನು ಮತ್ತು ಸುಂಕಗಳನ್ನು ತೆಗೆದು ಹಾಕಿ 'ವ್ಯಾಪಾರಕ್ಕೆ ಉತ್ತೇಜನ ಕೊಟ್ಟನು. ದೇಶದೊಳಕ್ಕೆ ಆಮದಾದ ಪ್ರತಿಯೊಂದು ಪದಾರ್ಥವೂ ಸುಂಕ ತೆರುತ್ತಿತ್ತು. ೧೮೪೨ ರ ಆಯವ್ಯಯದ ಪಟ್ಟಿಯಲ್ಲಿ ಪೀಲ್ ಆಮದನ್ನು ೩ ಭಾಗ ಮಾಡಿದನು. ತಯಾರಿಸಿದ ಪದಾರ್ಥಗಳ ಮೇಲೆ (Manufactured goods) ಶೇ. ೨೦, ಪೂರ್ತಿ ತಯಾರಾಗದ ಪದಾರ್ಥಗಳ ಮೇಲೆ (Partly manufactured goods) ಶೇಕಡ ೧೨ ಮತ್ತು ಕಚ್ಚಾ ಪದಾರ್ಥಗಳ ಮೇಲೆ ಶೇಕಡ ೫ ರಂತೆ ಸುಂಕ ವಿಧಿಸಿದನು. ೧೮೪೫-೪೬ ರ ಆಯವ್ಯಯ ಪಟ್ಟಿಯಲ್ಲಿ ತಯಾರಿಸಿದ ಪದಾರ್ಥಗಳ ಮೇಲೆ ಶೇಕಡ ೧೦ ರಂತೆಯೂ ಮತ್ತು ಕಚ್ಚಾ ಪದಾರ್ಥಗಳು ಸುಂಕವಿಲ್ಲದಂತೆಯೂ ದೇಶಕ್ಕೆ ಬರಲು ಪೀಲ್ ಅವಕಾಶ ಕಲ್ಪಿಸಿದನು. ಒಟ್ಟಿನಲ್ಲಿ ಒಂದುಸಾವಿರ ಪದಾರ್ಥಗಳ ಮೇಲಿನ (೧೦೦೦) ಸುಂಕಗಳ ದರವನ್ನು ಕಡಮೆ ಮಾಡಿ ಆರುನೂರಕ್ಕಿಂತ ಜಾಸ್ತಿ ಪದಾರ್ಥಗಳ ಮೇಲಿನ ಸುಂಕವನ್ನು ಪೂರ್ತಿಯಾಗಿ ರದ್ದು ಮಾಡಿದನು. ಇದರಿಂದ ಪದಾರ್ಥಗಳ ಬೆಲೆ ಇಳಿದು ಕಾರ್ಮಿಕರ ಜೀವನದಮಟ್ಟ ಉತ್ತಮಗೊಂಡಿತು. ವ್ಯಾಪಾರವೂ ಉತ್ತಮಗೊಂಡಿತು. ಈ ಸುಂಕಗಳನ್ನು ವಸೂಲು ಮಾಡಲು ಸರ್ಕಾರ ನಿಯಮಿಸಿದ್ದ ಅಧಿಕಾರಿಗಳ ತಂಡದ ಆವಶ್ಯಕತೆ ನೀಗಿ ಸರ್ಕಾರದ ಖರ್ಚು ಉಳಿತಾಯವಾಯಿತು. ಕಳ್ಳ ಸಾಗಾಣಿಕೆಯೂ ನಿಂತಿತು. ಪೌಂಡಿಗೆ ಏಳು ಪೆನ್ನಿಯಂತೆ ಆದಾಯ ತೆರಿಗೆಯನ್ನು ವಿಧಿಸಿ ಪೀಲ್ ಆಯವ್ಯಯದ ಪಟ್ಟಿಯನ್ನು ಸರಿದೂಗಿಸಿದನು.

೧೮೪೪ ರಲ್ಲಿ ಪೀಲ್ ಬ್ಯಾಂಕಿನ ಕಾನೂನನ್ನು ತಂದು (Bank Charter Act) ನಾಣ್ಯಗಳ (Currency) ಪ್ರಶ್ನೆಯನ್ನು ಸರಿಪಡಿಸಿದನು. ಇಂಗ್ಲೆಂಡಿನ ಬ್ಯಾಂಕ್ ಹಣದ ನೋಟುಗಳನ್ನು ತಯಾರಿಸುವಾಗ ಅದಕ್ಕೆ ತಕ್ಕ ಒಂದು ಪ್ರಮಾಣದಲ್ಲಿ ಚಿನ್ನವನ್ನು ಮೀಸಲಾಗಿಡಬೇಕೆಂದು

ವಿಧಿಸಿದನು. ಇದರಿಂದ ಹಣದ ಉಬ್ಬರವನ್ನು ತಡೆಯಲು ಅನುಕೂಲ ವಾಯಿತು.

ಆದರೆ ಗೋಧಿಯ ಕಾನೂನು ಇಂಗ್ಲೆಂಡಿನ ಆರ್ಥಿಕ ಮುಗ್ಗಟ್ಟಿಗೆ ಕಾರಣವಾಗಿತ್ತು. ಈ ಕಾನೂನು ಪರದೇಶದಿಂದ ಇಂಗ್ಲೆಂಡಿಗೆ ಗೋಧಿಯು ಬರದಂತೆ ಮಾಡಿತ್ತು. ೧೮೩೯ ರಲ್ಲಿ ಕಾಬ್‌ಡೆನ್ ಮತ್ತು ಬ್ರೈಟ್ ಎಂಬುವರ ಮುಖಂಡತ್ವದಲ್ಲಿ ಈ ಕಾನೂನನ್ನು ರದ್ದು ಮಾಡಲು ಸಂಘವೊಂದು ಸ್ಥಾಪನೆಯಾಗಿತ್ತು. ಇವರಿಬ್ಬರೂ ದೇಶದಲ್ಲೆಲ್ಲಾ ಸಂಚರಿಸಿ ಭಾಷಣಗಳ ಮೂಲಕ, ಬರವಣಿಗೆಗಳ ಮೂಲಕ ಆಂದೋಲನವನ್ನು ಎಬ್ಬಿಸಿದರು. ಆದರೆ ಗೋಧಿಯ ಕಾನೂನನ್ನು ರದ್ದುಮಾಡಿದರೆ ಜಮೀನುದಾರರಿಗೆ ಬರುತ್ತಿದ್ದ ಲಾಭ ಕೈತಪ್ಪಿಹೋಗುತ್ತಿತ್ತು. ಈ ಮಧ್ಯೆ ೧೮೪೫ ರಲ್ಲಿ ಐರ್ಲೆಂಡಿನಲ್ಲಿ ಭೀಕರ ಕ್ಷಾಮ ಒದಗಿತು. ಅಲ್ಲಿನ ಜನ ಆಲೂಗೆಡ್ಡೆಯಿಂದ ಜೀವಿಸುತ್ತಿದ್ದರು. ಆ ವರ್ಷ ಆಲೂಗೆಡ್ಡೆಗೆ ರೋಗ ತಗುಲಿ ಅಲ್ಲಿ ಅನೇಕರು ಸತ್ತರು. ೧೮೪೬ ರಲ್ಲಿ ಪ್ರತಿ ವಾರವೂ ಸುಮಾರು ಮೂರು ಸಾವಿರ ಜನ 'ಕೆಲಸ ಗೃಹ' ಗಳಲ್ಲೇ ಸಾಯುತ್ತಿದ್ದರು. ಇಂಗ್ಲೆಂಡಿನಲ್ಲಿ ಮಳೆಯಿಂದ ಬೆಳೆ ನಾಶವಾಗಿತ್ತು. ಪೀಲ್ ಗೋಧಿಯ ಕಾನೂನನ್ನು ರದ್ದುಮಾಡಲು ಇಷ್ಟವುಳ್ಳವನಾಗಿದ್ದನು. ಅದು ತನ್ನ ಪಕ್ಷದ ಹಿತಕ್ಕೆ ವಿರುದ್ಧವಾಗಿತ್ತೆಂಬುದೂ ಅವನಿಗೆ ಗೊತ್ತಿತ್ತು. ಆದರೆ ಐರ್ಲೆಂಡಿನ ಕ್ಷಾಮ, ಗೋಧಿಯ ಕಾನೂನನ್ನು ರದ್ದುಮಾಡುವ ಅವನ ನಿಶ್ಚಯವನ್ನು ದೃಢಪಡಿಸಿತು. ಡಿಸ್ರೇಲಿಯ ಮುಖಂಡತ್ವದಲ್ಲಿ ಟೋರಿ ಪಕ್ಷದ ಒಳಗುಂಪು ಪೀಲ್ ಗೋಧಿಯ ಕಾನೂನನ್ನು ರದ್ದುಮಾಡಲು ತಂದ ಮಸೂದೆಯನ್ನು ಖಂಡಿಸಿತು. ತನ್ನ ವಿರೋಧ ಪಕ್ಷವಾದ ವಿಗ್ ಸದಸ್ಯರ ಬೆಂಬಲದಿಂದ ಪೀಲ್ ಗೋಧಿಯ ಕಾನೂನನ್ನು ೧೮೪೬ ರಲ್ಲಿ ರದ್ದುಮಾಡಿದನು. ಇದರಿಂದ ಪ್ರತಿ ವರ್ಷವೂ ೧೮೪೯ ರ ತನಕ ಗೋಧಿಯ ಸುಂಕ ಕ್ರಮೇಣ ಕಡಿಮೆಯಾಗಿ, ಕೊನೆಗೆ ಒಂದು ಕ್ವಾರ್ಟರಿಗೆ (ಅಂದರೆ ೨೮ ಪೌಂಡು ತೂಕ) ಒಂದು ಷಿಲಿಂಗ್ ತನಕ ಇಳಿಯಿತು. ಟೋರಿಗಳು ತಮ್ಮ ಮುಖಂಡನನ್ನು ಕ್ಷಮಿಸಲಿಲ್ಲ. ಈ ತಿಕ್ಕಾಟದ ಫಲವಾಗಿಯೂ ಮತ್ತು ಡಿಸ್ರೇಲಿಯ

(೧೮೦೪-೧೮೮೧) ಮಹತ್ವಾಕಾಂಕ್ಷೆಯಿಂದಲೂ ಟೋರಿ ಪಕ್ಷ ತಾತ್ಕಾಲಿಕವಾಗಿ ಒಡೆದುಹೋಯಿತು. ಪೀಲ್ ತನ್ನ ರಾಜೀನಾಮೆಯನ್ನು ಸಲ್ಲಿಸಿದನು. ಆದರೆ ೧೮೫೦ ರ ವರೆಗೂ ಅವನು ಪಾರ್ಲಿಮೆಂಟಿನ ಸದಸ್ಯನಾಗಿದ್ದನು.

ಪೀಲ್ ರಾಜಕೀಯದಿಂದ ನಿವೃತ್ತನಾದ ಮೇಲೆ ಇಪ್ಪತ್ತು ವರ್ಷಗಳಕಾಲ ಪಾಮರ್‌ಸ್ಟನ್ (೧೭೮೪–೧೮೬೫) ಇಂಗ್ಲೆಂಡಿನ ರಾಜಕೀಯ ಜೀವನದಲ್ಲಿ ಮುಖ್ಯವ್ಯಕ್ತಿಯಾಗಿದ್ದನು. ಅವನು ತನ್ನ ರಾಜಕೀಯ ಜೀವನವನ್ನು ಪ್ರಾರಂಭಮಾಡಿದಾಗ ಟೋರಿಯಾಗಿದ್ದನು. ಲಿವರ್‌ಪೂಲ್ ಮಂತ್ರಿ ಮಂಡಲದಲ್ಲಿ (೧೮೧೨–೨೭) ಯುದ್ಧದ ಕಾರ್ಯದರ್ಶಿಯಾಗಿದ್ದನು. ವೆಲ್ಲಿಂಗ್‌ಟನ್ ಪಾರ್ಲಿಮೆಂಟಿನ ಚುನಾವಣೆಯ ಸುಧಾರಣೆಯನ್ನು ವಿರೋಧಿಸಿದಾಗ ಪಾಮರ್‌ಸ್ಟನ್ ವಿಗ್ ಪಕ್ಷದ ಕಡೆ ಸೇರಿ ಗ್ರೇ ಮೆಲ್‌ಬೋರ್ನ್ ಮತ್ತು ರಸಲ್ ಮಂತ್ರಿ ಮಂಡಲಗಳಲ್ಲಿ (೧೮೩೦–೪೧) ವಿದೇಶಾಂಗ ಕಾರ್ಯದರ್ಶಿಯಾಗಿ ಕೆಲಸಮಾಡಿದನು. ಪಾಮರ್‌ಸ್ಟನ್ ಒಳಾಡಳಿತದಲ್ಲಿ ಸಂಪ್ರದಾಯವಾದಿ; ವಿದೇಶೀಯ ನೀತಿಯಲ್ಲಿ ಉದಾರಪಕ್ಷದ ಮನೋಭಾವನೆಯುಳ್ಳವನಾಗಿದ್ದನು ( A Conservative at home and a liberal abroad). ಒಂದು ದೃಷ್ಟಿಯಿಂದ ಇದು ಸರಿ ಎಂದು ಹೇಳಬಹುದು. ಏಕೆಂದರೆ ಕ್ಯಾಥಲಿಕ್ ವಿಮೋಚನಾ ಕಾನೂನು ಮತ್ತು ಪಾರ್ಲಿಮೆಂಟಿನ ಚುನಾವಣಾ ಸುಧಾರಣೆ ಇವುಗಳನ್ನು ಬಿಟ್ಟು ಮಿಕ್ಕಿತರ ಸುಧಾರಣೆಗಳಲ್ಲಿ ಪಾಮರ್‌ಸ್ಟನ್ನನಿಗೆ ಇಷ್ಟವಿರಲಿಲ್ಲ. ಆದರೆ ವಿದೇಶೀಯ ವ್ಯವಹಾರದಲ್ಲಿ ಕ್ಯಾನಿಂಗನಂತೆ ಪಾಮರ್‌ಸ್ಟನ್, ತಮ್ಮ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದ್ದ ರಾಷ್ಟ್ರಗಳಿಗೂ ಮತ್ತು ಪಾರ್ಲಿಮೆಂಟಿನಿಂದೊಡಗೂಡಿದ ಸರ್ಕಾರಗಳು ಸ್ಥಾಪಿತವಾಗುವುದಕ್ಕೂ ಬೇಕಾದ ಸಹಾನುಭೂತಿಯನ್ನು ಹೊಂದಿದ್ದಲ್ಲದೆ ಅವುಗಳಿಗೆ ಸಹಾಯ ನೀಡಲೂ ಸಿದ್ಧವಾಗಿದ್ದನು.

ಬೆಲ್ಜಿಯಂ : ವಿಯನ್ನಾ ಸಭೆ (Congress of Vienna) ಬೆಲ್ಜಿಯಂ ದೇಶವನ್ನು ಹಾಲೆಂಡಿನ ಆಳ್ವಿಕೆಗೆ ಒಪ್ಪಿಸಿತ್ತು. ೧೮೩೦ ರಲ್ಲಿ ಬೆಲ್ಜಿಯಂ ದಂಗೆ ಎದ್ದು ತನ್ನ ಸ್ವಾತಂತ್ರ್ಯವನ್ನು ಘೋಷಿಸಿತು.

ಹಾಲೆಂಡ್ ಯುದ್ಧಕ್ಕೆ ಸಿದ್ಧವಾಯಿತು. ಆದರೆ ಇಂಗ್ಲೆಂಡ್ ಮತ್ತು ಫ್ರಾನ್ಸ್ ಬೆಲ್ಜಿಯಂ ಕಡೆ ಸೇರಿ ಸಹಾಯ ಮಾಡಲು ಸಿದ್ಧವಾಗಿದ್ದುವು. ೧೮೩೯ ರಲ್ಲಿ ಬೆಲ್ಜಿಯಂ ತನ್ನ ಸ್ವಾತಂತ್ರ್ಯವನ್ನು ಹೊಂದಿ ತಾಟಸ್ಥ್ಯ ರಾಷ್ಟ್ರವೆಂದು (Neutral State) ಪಂಚಮಹಾರಾಷ್ಟ್ರಗಳಿಂದ (ಬ್ರಿಟನ್, ಫ್ರಾನ್ಸ್, ಆಸ್ಟ್ರಿಯ, ರಷ್ಯ ಮತ್ತು ಪ್ರಷ್ಯ) ಘೋಷಿಸಲ್ಪಟ್ಟಿತು.

ಪಾಮರ್ಸ್ಟನ್ ಕಾಲದ ಯೂರೋಪ್ ೧೮೧೫-೬೫

ಸ್ಪೇನ್ ಮತ್ತು ಪೋರ್ಚುಗಲ್ : ೧೮೩೩ ರಲ್ಲಿ ಸ್ಪೇನಿನ ರಾಜನ ಮರಣಾನಂತರ ಅವನ ಮಗಳಾದ ಇಸಬೆಲ ಮತ್ತು ಅವನ ಸಹೋದರ

ಡಾರ್ಕಾರ್ಲಾಸ್ ರಾಜ್ಯಕ್ಕಾಗಿ ಅಂತಃಕಲಹ ಹೂಡಿದರು. ೧೮೩೩ರಲ್ಲಿ ಪೋರ್ಚುಗಲ್ಲಿನಲ್ಲಿಯೂ ರಾಣಿಗೂ ಮತ್ತು ಅವಳ ಚಿಕ್ಕಪ್ಪನಿಗೂ ರಾಜ್ಯಕ್ಕಾಗಿ ಜಗಳವಾಗುತ್ತಿತ್ತು. ಪಾಮರ್‌ಸ್ಟನ್ ಇಸಬೆಲ ಮತ್ತು ಮೇರಿಯಾ ತಮ್ಮ ತಮ್ಮ ದೇಶಗಳಲ್ಲಿ ರಾಜ್ಯವನ್ನಾಳುವಂತೆ ಮಾಡಿದನು.

ಟರ್ಕಿ ಮತ್ತು ಈಜಿಪ್ಟ್ : ಬಲಹೀನವಾಗಿದ್ದ ಟರ್ಕಿ ಈಜಿಪ್ಟಿನ ಮಹಮುಟ್ ಆಲಿಯನ್ನು ಎದುರಿಸಲಾರದಾಗಿತ್ತು. ಸಮಯ ಕಾಯುತ್ತಿದ್ದ ರಷ್ಯಾ ೧೮೩೩ರಲ್ಲಿ ಟರ್ಕಿಯ ಜೊತೆಯಲ್ಲಿ ಅಂಕಿಯರ್ ಸ್ಕೆಲೆಸಿ (Unkiar Skelessi) ಕರಾರಿನ ಪ್ರಕಾರ ಪರಸ್ಪರ ಸ್ನೇಹವನ್ನು ಮಾಡಿಕೊಂಡಿದ್ದು ಇಂಗ್ಲೆಂಡಿನಲ್ಲಿ ಆಶ್ಚರ್ಯವನ್ನುಂಟುಮಾಡಿತು. ೧೮೪೦ರಲ್ಲಿ ಮಹಮುಟ್ ಅಲಿ ಟರ್ಕಿಯ ಮೇಲೆ ಪುನಃ ನುಗ್ಗಿದನು. ಫ್ರಾನ್ಸ್ ಮಹಮುಟ್ ಆಲಿ ಕಡೆ ಗುಟ್ಟಾಗಿ ಸೇರಿಕೊಂಡು ಸಿರಿಯಾದಲ್ಲಿ ತನ್ನ ಪ್ರಭಾವವನ್ನು ಹರಡಬೇಕೆಂದು ಪ್ರಯತ್ನಿಸಿತು. ಪಾಮರ್‌ಸ್ಟನ್ ಇದನ್ನು ತಿಳಿದು ರಷ್ಯ, ಆಸ್ಟ್ರಿಯ ಮೊದಲಾದ ರಾಷ್ಟ್ರಗಳ ಸಹಾಯದಿಂದ ಮಹಮುಟ್‌ಆಲಿ ಟರ್ಕಿಗೆ ತೊಂದರೆ ಕೊಡದಂತೆ ಮಾಡಿ, ಅದಕ್ಕಾಗಿ ಅವನಿಗೆ ಸಿರಿಯಾ ಸೇರಬೇಕೆಂದು ನಿರ್ಧರಿಸಿದುದರಿಂದ ಫ್ರಾನ್ಸ್ ಕೋಪಗೊಂಡಿತು. ಆದರೆ ಕೊನೆಗೆ ಅದು ಈ ಏರ್ಪಾಡಿಗೆ ಒಪ್ಪಿಕೊಳ್ಳಬೇಕಾಯಿತು. ಶಾಂತಿಯ ಕಾಲದಲ್ಲಿ ಡಾರ್‌ಡನಲ್ಸ್ ಯುದ್ಧದ ಹಡಗುಗಳಿಗೆ ನೆಲೆಯಾಗಕೂಡದೆಂಬ ಷರತ್ತನ್ನು ಟರ್ಕಿ ಒಪ್ಪಿಕೊಂಡಿತು.

ಚೈನದೊಡನೆ ಯುದ್ಧ (೧೮೪೦–೪೨) : ಚೈನವು ಸೋತು ನಾನ್‌ಕಿಂಗ್ ಕರಾರಿನಪ್ರಕಾರ ಯೂರೋಪಿಯನ್ ವರ್ತಕರಿಗೆ ವ್ಯಾಪಾರಕ್ಕೆ ಅಪ್ಪಣೆ ಕೊಟ್ಟಿತು. ೫ ರೇವು ಪಟ್ಟಣಗಳು ಈ ವ್ಯಾಪಾರಕ್ಕೆ ತೆರೆಯಲ್ಪಟ್ಟವು. ಹಾಂಕಾಂಗ್ ಬ್ರಿಟಿಷರಿಗೆ ಸಿಕ್ಕಿತು.

೧೮೪೮ ರಲ್ಲಿ ಯೂರೋಪಿನಲ್ಲಿ ನಿರಂಕುಶ ರಾಜರ ವಿರುದ್ಧ ಜನಗಳು ಕ್ರಾಂತಿಯನ್ನು ಎಬ್ಬಿಸಿದರಷ್ಟೆ. ಪಾಮರ್‌ಸ್ಟನ್ ಈ ರಾಷ್ಟ್ರಗಳಿಗೆ ಸಹಾಯವನ್ನು ಮಾಡಿದನು. ಹೀಗೆ ತಮ್ಮ ರಾಜ್ಯ ಕಳೆದುಕೊಂಡು ಇಂಗ್ಲೆಂಡಿಗೆ ಆಶ್ರಯಕ್ಕಾಗಿ ಬಂದ ರಾಜರಿಗೂ ಆಶ್ರಯವನ್ನು ಅವನು ಕೊಡಬೇಕಾಯಿತು.

ಪಾಮರ್‌ಸ್ಟನ್ ವಿದೇಶೀಯ ವ್ಯವಹಾರದಲ್ಲಿ ಇಂಗ್ಲೆಂಡಿನ ಪ್ರಾಮುಖ್ಯತೆಯನ್ನು ಎತ್ತಿ ಹಿಡಿಯುತ್ತಿದ್ದುದರಿಂದ ಅವನಿಗೆ ಜನಗಳ ಬೆಂಬಲ ವಿದ್ದಿತ್ತಾದರೂ, ಅವನು ಅಧಿಕಾರವನ್ನು ತ್ಯಜಿಸುವ ಸಂದರ್ಭಗಳು ಒದಗದೆ ಇರಲಿಲ್ಲ. ೧೮೫೦ರಲ್ಲಿ ಬ್ರಿಟಿಷ್ ಪ್ರಜೆಯಾದ ಜ್ಯೂ ಡಾನ್ ಪೆಸಿಫಿಕೊ ಎಂಬುವನ ಮನೆಗೆ ಅಥೆನ್ಸ್ ನಗರದ ಕೆಲವು ಪುಂಡರು ನುಗ್ಗಿ ಕೊಳ್ಳೆ ಹೊಡೆದರು. ಇದಕ್ಕೆ ಪ್ರತಿಕ್ರಿಯೆಯಾಗಿ ಗ್ರೀಕರ ಹಡಗುಗಳನ್ನು ಕೈವಶ ಮಾಡಿಕೊಳ್ಳಲು ಪಾಮರ್‌ಸ್ಟನ್ ಬ್ರಿಟಿಷ್ ಹಡಗು ಪಡೆಯನ್ನು ಕಳುಹಿಸಿದನು. ಫ್ರಾನ್ಸ್ ಮತ್ತು ರಷ್ಯಾ ಇದರಿಂದ ಕೋಪಗೊಂಡುವು.

೧೮೪೮ರ ಕ್ರಾಂತಿಯಲ್ಲಿ ಫ್ರಾನ್ಸಿನಲ್ಲಿ ರಾಜತ್ವವನ್ನುಕೊನೆಗಾಣಿಸಿ, ಗಣರಾಜ್ಯ ಸ್ಥಾಪಿಸಿ, ಅದರ ಅಧ್ಯಕ್ಷನಾದ ಲೂಯಿ ನೆಪೋಲಿಯನ್ ೧೮೫೧ರಲ್ಲಿ ತನ್ನ ಚಿಕ್ಕಪ್ಪ ಮೊದಲನೆಯ ನೆಪೋಲಿಯನ್ ಮಾಡಿದಂತೆ ತಾನೇ ಚಕ್ರವರ್ತಿಯಾದನು. ಇಂಗ್ಲೆಂಡ್ ಇದಕ್ಕೆ ಅಂಗೀಕಾರವನ್ನು ಇತ್ತಿರಲಿಲ್ಲ. ಆದರೆ ಪಾಮರ್‌ಸ್ಟನ್ ಲೂಯಿ ನೆಪೋಲಿಯನ್ನನಿಗೆ ಅಭಿನಂದನೆಗಳನ್ನು ಕಳುಹಿಸಿದನು. ಇಂಗ್ಲೆಂಡಿನಲ್ಲಿ ಇದು ಗೊತ್ತಾದ ತತ್‌ಕ್ಷಣವೇ ವಿಕ್ಟೋರಿಯಾ ರಾಣಿ ಮತ್ತು ಮುಖ್ಯಮಂತ್ರಿ ರಸಲ್ ಪಾಮರ್‌ಸ್ಟನ್ ರಾಜಿನಾಮೆಯನ್ನು ಕೊಡುವಂತೆ ಮಾಡಿದರು. ಪಾಮರ್‌ಸ್ಟನ್, ವಿಕ್ಟೋರಿಯಾ ರಾಣಿ ಮತ್ತು ಅವಳ ಗಂಡ ಆಲ್‌ಬರ್ಟ್ ಇವರುಗಳಿಗೆ ವಿದೇಶಾಂಗ ವ್ಯವಹಾರಗಳಿಗೆ ಸಂಬಂಧಪಟ್ಟ ಕಾಗದಗಳನ್ನು ತೋರಿಸುತ್ತಿರಲಿಲ್ಲ. ಅವರ ಸಲಹೆಗಳನ್ನಂತೂ ತೆಗೆದುಕೊಳ್ಳುತ್ತಲೂ ಇರಲಿಲ್ಲ.

ಅಧಿಕಾರದಿಂದ ವಜಾ ಮಾಡಲ್ಪಟ್ಟ ಪಾಮರ್‌ಸ್ಟನ್ ಮಂತ್ರಿಮಂಡಲವನ್ನೇ ಉರುಳಿಸಿದನು. ಈ ಬಿಕ್ಕಟ್ಟನ್ನು ಪರಿಹರಿಸಲು ಪೀಲ್ ಪಕ್ಷದ ಅಬರ್‌ಡೀನ್ ಎಂಬುವನು ಮುಖ್ಯ ಮಂತ್ರಿಯಾಗಿಯೂ, ಪಾಮರ್‌ಸ್ಟನ್ ಮತ್ತು ರಸಲ್ ಗೃಹಕಾರ್ಯದರ್ಶಿಯಾಗಿಯೂ ಮತ್ತು ವಿದೇಶಾಂಗ ಕಾರ್ಯದರ್ಶಿಯಾಗಿಯೂ ನಿಯಮಿಸಲ್ಪಟ್ಟರು. ಈ ಮಂತ್ರಿಮಂಡಲಕ್ಕೆ ಪೀಲನ ಮತ್ತೊಬ್ಬ ಶಿಷ್ಯನಾದ ಗ್ಲಾಡ್‌ಸ್ಟನ್ (೧೮೦೯–೧೮೯೮) ಆರ್ಥಿಕ ಸಚಿವ (Chancellor of the Exchequer) ನಾದನು. ಗ್ಲಾಡ್‌ಸ್ಟನ್ ಪೀಲ್ ಪ್ರಾರಂಭಿಸಿದ ಅನಿರ್ಬಂಧ ವ್ಯಾಪಾರದ ಪ್ರಗತಿಯನ್ನು

ಪೂರ್ಣಗೊಳಿಸಿದನು. ನೂರಕ್ಕಿಂತ ಹೆಚ್ಚು ಪದಾರ್ಥಗಳ ಮೇಲಿನ ಸುಂಕವನ್ನು ಕಡಮೆಮಾಡಿ ನೂರಕ್ಕಿಂತ ಹೆಚ್ಚು ಪದಾರ್ಥಗಳ ಮೇಲಿನ ಸುಂಕವನ್ನು ರದ್ದುಗೊಳಿಸಿದನು. ಆದಾಯವನ್ನು ಸರಿದೂಗಿಸಲು ಆದಾಯ ತೆರಿಗೆಯನ್ನು ಮುಂದುವರಿಸಿದನು. ೧೮೬೦ರ ವೇಳೆಗೆ ಆದಾಯ ತೆರಿಗೆಯನ್ನು ಪೂರ್ಣವಾಗಿ ರದ್ದುಮಾಡಲು ಸಾಧ್ಯವೆಂದು ತಿಳಿದುಕೊಂಡಿದ್ದ ಅವನ ನಂಬಿಕೆಯು ಕ್ರಿಮಿಯಾ ಯುದ್ಧದಿಂದ ಮಾಯವಾಯಿತು.

ಕ್ರಿಮಿಯಾ ಯುದ್ಧ: ಬಾಲ್ಕನ್ ಪರ್ಯಾಯ ದ್ವೀಪವು (ಸರ್ಬಿಯ) ರುಮೇನಿಯ, ಬಲ್ಗೇರಿಯ) ಟರ್ಕಿಯ ಆಡಳಿತಕ್ಕೆ ಒಳಪಟ್ಟಿತ್ತು. ಆದರೆ ಅಲ್ಲಿಯ ಕ್ರಿಶ್ಚಿಯನ್ ಪ್ರಜೆಗಳು ದಂಗೆಯೆದ್ದು ತಮ್ಮ ದೇಶದ ಸ್ವಾತಂತ್ರ್ಯವನ್ನು ಸ್ಥಾಪಿಸಿಕೊಳ್ಳಲು ಪ್ರಯತ್ನಪಡುತ್ತಿದ್ದರು. ಇಂಗ್ಲೆಂಡಿಗೆ ಈ ಪ್ರಯತ್ನಗಳಲ್ಲಿ ಸಹಾನುಭೂತಿಯಿದ್ದರೂ, ರಷ್ಯದ ಪ್ರಭಾವವು ಇದರಿಂದ ಈ ದೇಶಗಳಲ್ಲಿ ಹೆಚ್ಚಾಗುವದೆಂಬ ಸಂಶಯವಿತ್ತು. ಏಕೆಂದರೆ ರಷ್ಯವು ಈ ದೇಶಗಳ ಚರ್ಚಿನ (ಮತೀಯ) ಮುಖಂಡತ್ವವನ್ನು ಹೊಂದಿತ್ತು. (Head of Orthdox Church) ರಷ್ಯವು "ಯೂರೋಪಿನ ಖಾಯಿಲೆ ಮನಷ್ಯ"ನಾದ ಟರ್ಕಿಯ ರಾಜ್ಯವನ್ನು ಹಂಚಿಕೊಳ್ಳಲು ಹವಣಿಸಿತ್ತು. ಇಂಗ್ಲೆಂಡ್ ಈಜಿಪ್ಟ್ ಮತ್ತು ಕ್ರೀಟ್ ತೆಗೆದುಕೊಳ್ಳಬೇಕೆಂದೂ, ರಷ್ಯವು ಮೆಡಿಟರೇನಿಯನ್ ಸಮುದ್ರದ ಪ್ರದೇಶಗಳನ್ನು ಹೊಂದಬೇಕೆಂದೂ ರಷ್ಯದ ಚಕ್ರವರ್ತಿ ನಿಕೋಲಸ್ ಇಂಗ್ಲೆಂಡಿಗೆ ಮನವಿ ಮಾಡಿಕೊಂಡನು. ಆದರೆ ಮೆಡಿಟರೇನಿಯನ್ ಪ್ರದೇಶಕ್ಕೆ ಬರಲು ಅವಕಾಶ ಸಿಕ್ಕಿದರೆ ಬಾಲ್ಕನ್ ರಾಜಕೀಯದಲ್ಲಿ ರಷ್ಯದ ಕೈವಾಡ ಜಾಸ್ತಿಯಾಗುವುವೆಂಬ ಭಯದಿಂದ ಇಂಗ್ಲೆಂಡ್, ಟರ್ಕಿಯ ಕಡೆ ವಾಲಿತು. ಟರ್ಕಿಯಲ್ಲಿ ಇಂಗ್ಲೆಂಡಿನ ರಾಯಭಾರಿಯಾಗಿದ್ದ ಲಾರ್ಡ್ ಸ್ಟ್ರಾಟ್‌ಫರ್ಡ್‌ರೆಡ್‌ಕ್ಲಿಫ್ ಇಂಗ್ಲೆಂಡ್ ಟರ್ಕಿಯ ಪಕ್ಷವಹಿಸುವಂತೆ ಮಾಡಿದನು. ರಷ್ಯವು ಡ್ಯಾನೂಬ್ ನದಿ ಮುಖದಲ್ಲಿದ್ದ ಮತ್ತು ಟರ್ಕಿಗೆ ಸೇರಿದ್ದ ವೆಲಾಕಿಯ (Wallachia) ಮತ್ತು ಮಾಲ್ಡೇವಿಯ (Moldavia) ಪ್ರದೇಶಗಳನ್ನು ಆಕ್ರಮಿಸಿದ ಕಾರಣ ಯುದ್ಧವು ಪ್ರಾರಂಭವಾಯಿತು.

ಟರ್ಕಿ ಮತ್ತು ಇಂಗ್ಲೆಂಡಿನೊಂದಿಗೆ, ಫ್ರಾನ್ಸ್ ಸೇರಿಕೊಂಡಿತು. ಕ್ರಿಮಿಯನ್ ಯುದ್ಧದ ಚರಿತ್ರೆ ದೊಡ್ಡ ತಪ್ಪುಗಳ ಚರಿತ್ರೆ ಎಂಬ ಒಂದು ಹೇಳಿಕೆಯುಂಟು. ಆಲ್ಮ ಯುದ್ಧದಲ್ಲಿ ಇಂಗ್ಲೆಂಡ್ ಮತ್ತು ಫ್ರಾನ್ಸ್ ಜಯವನ್ನೇನೋ ಗಳಿಸಿತು. ಬಾಲಕ್ಲಾವ ಎಂಬಲ್ಲಿ ಮತ್ತೊಂದು ಕದನವು ನಡೆಯಿತು. ಇದೇ ಕದನದಲ್ಲಿ ಆರುನೂರು ಜನ ಇಂಗ್ಲಿಷ್ ಸೈನಿಕರ ತಂಡವೊಂದು ರಷ್ಯನರ ಫಿರಂಗಿ ಗುಂಡುಗಳನ್ನು ಎದುರಿಸಿ, ಕಾದಿ ಮಡಿದಿತು. ಇಂಕರ್‌ಮನ್ ಎಂಬಲ್ಲಿ ಮತ್ತೊಂದು ಭೀಕರ ಕದನವಾಗಿ, ಕೊನೆಯಲ್ಲಿ ರಷ್ಯನ್ನರು ಸೋತರು. ಆದರೆ ಗಾಯಗೊಂಡವರನ್ನು ಸಾಗಿಸಲು ಸರಿಯಾದ ವ್ಯವಸ್ಥೆ ಇಲ್ಲದೆ, ಅನೇಕ ಇಂಗ್ಲಿಷ್ ಸೈನಿಕರು ಸತ್ತರು. ಅವರನ್ನು ಸರಿಯಾಗಿ ನೋಡಿಕೊಳ್ಳಲು ಮತ್ತು ಔಷಧಿಗಳನ್ನು ಕೊಡಲು ಸರಿಯಾದ ವೈದ್ಯಶಾಲೆಯೂ ಇರಲಿಲ್ಲವೆಂದೇ ಹೇಳಬಹುದು. ಸೈನಿಕರಿಗೆ ಬೇಕಾದ ಸರಬರಾಜಿನಲ್ಲಿಯೂ ಇದೇ ತರಹ ಅವ್ಯವಸ್ಥೆ ತಲೆದೋರಿತ್ತು. ಟೈಮ್ಸ್ ಪತ್ರಿಕೆಯ ಸಮರ ವಿಭಾಗದ ವರದಿಗಾರ ವಿಲಿಯಂ ರಸಲ್ ಇದನ್ನೆಲ್ಲಾ ಜನಗಳಿಗೆ ತಿಳಿಯುವಂತೆ ೧೮೫೪ರಲ್ಲಿ ಹೊರಗೆಡವಿದನು. ಇದರ ಫಲವಾಗಿ ಆಬರ್‌ಡೀನ್ ಸರ್ಕಾರ ಉರುಳಿತು. ೧೮೫೫ ರಲ್ಲಿ ಪಾಮರ್‌ಸ್ಟನ್ ಮುಖ್ಯ ಮಂತ್ರಿಯಾಗಿ ಯುದ್ಧವನ್ನು ಮುಂದುವರಿಸಿದನು. ಫ್ಲಾರೆನ್ಸ್ ನೈಟಿಂಗೇಲ್ ಎಂಬ ಶ್ರೀಮಂತಿನಿಯು ರೋಗಿಗಳ ಶುಶ್ರೂಷೆಗಾಗಿ ಸ್ಕುಟಾರಿಯಲ್ಲಿದ್ದ ವೈದ್ಯಶಾಲೆಗೆ ಬಂದಾಗ ಅಲ್ಲಿ ಔಷಧಿಗಳಾಗಲಿ, ಗಾಯಗಳಿಗೆ ಕಟ್ಟಲು ಬೇಕಾದ ಪಟ್ಟಿಗಳಾಗಲಿ, ಸಾಬೂನಾಗಲಿ ಇಲ್ಲದೆ ಅದು ಅತಿ ಶೋಚನೀಯ ಅವಸ್ಥೆಯಲ್ಲಿತ್ತು. ಅವಳ ಅಸಾಧಾರಣ ಶಕ್ತಿ ಮತ್ತು ಸೌಮ್ಯತೆಯಿಂದ ರೋಗಿಗಳ ಸಾವಿನ ಸಂಖ್ಯೆ ಮೊದಲಿದ್ದುದಕ್ಕಿಂತ (ಅವಳು ಅಲ್ಲಿಗೆಬರುವುದಕ್ಕಿಂತ ಮುಂಚೆ) ಇಪ್ಪತ್ತರಲ್ಲಿ ಒಂದು ಭಾಗಕ್ಕೆ (೧/೨೦) ಇಳಿಯಿತು.

ಕ್ರಿಮಿಯಾ ಯುದ್ಧದ ನೆನಪು ಮರೆತು ಹೋಯಿತು. ಆದರೆ "ದೀಪದ ಮಹಿಳೆ" ಯಾದ ನೈಟಿಂಗೇಲ್ ಇಂಗ್ಲಿಷ್ ಚರಿತ್ರೆಯಲ್ಲಿ ತಾನು ರಚಿಸಿದ "ಚಿಕಿತ್ಸಕ ವರ್ಗ" ಅದರಲ್ಲಿ ಮಾಡಿದ ಸುಧಾರಣೆಗಳು, ತಾನು ಸಲ್ಲಿಸಿದ ಸ್ವಾರ್ಥವಿಲ್ಲದ ಸೇವೆ ಇವುಗಳಿಂದ ಗಣ್ಯ ಸ್ಥಾನವನ್ನು ಗಳಿಸಿದ್ದಾಳೆ.

೧೮೫೬ರಲ್ಲಿ ಪ್ಯಾರಿಸ್ ಕೌಲಿನಿಂದ ಯುದ್ಧವು ಮುಕ್ತಾಯವಾಯಿತು. ಟರ್ಕಿಯ ಚಕ್ರಾಧಿಪತ್ಯ ಉಳಿಯಿತು. ಟರ್ಕಿಯ ಸುಲ್ತಾನನು ಸುಧಾರಣೆಗಳನ್ನು ಮಾಡಲು ವಾಗ್ದಾನ ಮಾಡಿದ್ದರೂ, ಅವುಗಳನ್ನು ಕಾರ್ಯರೂಪಕ್ಕೆ ತರಲಿಲ್ಲ. ಸಾಲೀಸ್‌ಬರಿ ಹೇಳಿದಂತೆ ಇಂಗ್ಲೆಂಡ್ ಸರಿಯಾದ ಕುದುರೆಯ ಮೇಲೆ ತನ್ನ ಹಣವನ್ನು ಕಟ್ಟಲಿಲ್ಲ. ಕಪ್ಪುಸಮುದ್ರ ಯುದ್ಧದ ಹಡಗುಗಳಿಗೆ ತಾಟಸ್ಥ್ಯವೆಂದು ಘೋಷಿಸಲಾಯಿತು. ಆದರೆ ರಷ್ಯಾ ೧೮೭೧ ರಲ್ಲಿ ಈ ಷರತನ್ನು ಗದ್ದಲವಿಲ್ಲದೆ ಯೂರೋಪಿನ ದೃಷ್ಟಿ ಬೇರೆ ಕಡೆ ಇದ್ದಾಗ ತೊಡೆದುಹಾಕಿತು.

ಕ್ರಿಮಿಯಾ ಯುದ್ಧದ ಜಯದಿಂದ ಪಾಮರ್‌ಸ್ಟನ್ ತನ್ನ ಜೀವಮಾನದ ತನಕ ಪ್ರಧಾನ ಮಂತ್ರಿಯಾಗಿಯೇ ಉಳಿದನು. ಆದರೆ ೧೮೫೮-೫೯ ರಲ್ಲಿ ಪುನಃ ಅವನು ರಾಜೀನಾಮೆಯನ್ನು ಕೊಡಬೇಕಾಯಿತು. ೧೮೫೮ ರಲ್ಲಿ ಮೂರನೆ ನೆಪೋಲಿಯನ್ ಪ್ಯಾರಿಸ್ಸಿನ ಬೀದಿಯಲ್ಲಿ ಹೋಗುತ್ತಿದ್ದಾಗ ಆರ್‌ಸೀನಿ (Orsini) ಎಂಬ ಇಟಲಿ ದೇಶದವನೊಬ್ಬನು ಅವನ ಮೇಲೆ ಬಾಂಬನ್ನು ಎಸೆದನು. ಆ ಬಾಂಬನ್ನು ಲಂಡನ್ನಿನಲ್ಲಿ ತಯಾರಿಸಲಾಗಿತ್ತು. ಫ್ರೆಂಚ್ ಸರ್ಕಾರವು ಬ್ರಿಟಿಷ್ ಸರ್ಕಾರಕ್ಕೆ ಇಂತಹ ಪಿತೂರಿಗಳಿಗೆ ಅವಕಾಶ ಕೊಟ್ಟಿದ್ದಕ್ಕಾಗಿ ಅದನ್ನು ಖಂಡಿಸಿತು. ಪಾಮರ್‌ಸ್ಟನ್ ಸಹಜವಾಗಿ ಇಂತಹ ಪ್ರತಿಭಟನೆಯನ್ನು ಲೆಕ್ಕಿಸುತ್ತಿರಲಿಲ್ಲ. ಆದರೆ ಅವನಿಗೆ ಮೂರನೆ ನೆಪೋಲಿಯನ್ನನನ್ನು ಕಂಡರೆ ಸ್ವಲ್ಪ ಮೆಚ್ಚಿಕೆ. ಆದುದರಿಂದ ಅವನು ಕೊಲೆಗಾಗಿ ಪಿತೂರಿ ಮಾಡುವವರಿಗೆ ಜೀವಾವಧಿ ಶಿಕ್ಷೆ ವಿಧಿಸಬೇಕೆಂಬ ಕಾನೂನನ್ನು (Conspiracy to Murder Bill) ಕಾಮನ್ಸ್ ಸಭೆಯ ಮುಂದೆ ತಂದನು. ಆದರೆ ಇಂಗ್ಲಿಷರು, ಪಾಮರ್‌ಸ್ಟನ್ ಫ್ರೆಂಚರ ಪ್ರತಿಭಟನೆಗೆ ಕಟ್ಟುಬಿದ್ದು ಅವರನ್ನು ಸಂತೋಷಗೊಳಿಸಲು ಈ ಕಾನೂನನ್ನು ತಂದನೆಂದು, ಅದನ್ನು ಸೋಲಿಸಿದುದರಿಂದ ಪಾಮರ್‌ಸ್ಟನ್ ತನ್ನ ರಾಜೀನಾಮೆಯನ್ನು ಸಲ್ಲಿಸಿದನು.

ತ್ರಿಮೂರ್ತಿಗಳ ಮಂತ್ರಿತ್ವ (Triumvirate) : ಕೆಲವು ತಿಂಗಳ ನಂತರ ಮಹಾಚುನಾವಣೆ ನಡೆದು ಪಾಮರ್‌ಸ್ಟನ್, ಗ್ಲಾಡ್‌ಸ್ಟನ್ ಮತ್ತು ರಸಲ್ ಆರಿಸಿ ಬಂದರು. ೧೮೫೯-೬೫ ರ ತನಕ ಪಾಮರ್‌ಸ್ಟನ್ ಪ್ರಧಾನ

ಮಂತ್ರಿಯಾಗಿದ್ದನು. ಗರಿಬಾಲ್ಡಿಯು ಇಟಲಿಯ ಐಕ್ಯತೆಗಾಗಿ ಹೋರಾಡುತ್ತಿದ್ದಾಗ ಇಂಗ್ಲೆಂಡ್ ಅವನಿಗೆ ಸಹಾನುಭೂತಿಯನ್ನು ತೋರಿಸಿತು. ಗ್ಲಾಡ್‌ಸ್ಟೋನ್ ೧೮೬೦ ರಲ್ಲಿ ಕಾಗದದ ಮೇಲಿನ ಸುಂಕವನ್ನು ತೆಗೆದುಹಾಕಿದನು. ಈ "ಜ್ಞಾನದ ಮೇಲಿನ ತೆರಿಗೆ" (Tax on knowledge) ಅವನಿಗೆ ಹಿಡಿಸಲಿಲ್ಲ. ಅದೇ ವರ್ಷ ಅವನು ಫ್ರಾನ್ಸಿಗೆ ಅನಾಂತಕ ವ್ಯಾಪಾರದಲ್ಲಿ ತೀವ್ರ ಆಸಕ್ತಿಯಿದ್ದ (Free Trade) ಕಾಬ್‌ಡನ್ನನನ್ನು ಕಳುಹಿಸಿ ಒಂದು ವಾಣಿಜ್ಯ ಒಪ್ಪಂದವನ್ನು ಮಾಡಿಕೊಂಡನು. ಇದರಿಂದ ಇಂಗ್ಲೆಂಡಿಗೂ ಮತ್ತು ಫ್ರಾನ್ಸಿಗೂ ಇದ್ದ ಯುದ್ಧಭೀತಿ ತೊಲಗಿ ಇಂಗ್ಲಿಷ್ ಕಬ್ಬಿಣಕ್ಕೆ ಬದಲಾಗಿ ಫ್ರೆಂಚ್ ರೇಷ್ಮೆ ಬರುವಂತಾಯಿತು.

ಅಮೇರಿಕಾ ಸಂಯುಕ್ತ ಸಂಸ್ಥಾನದಲ್ಲಿ ಉತ್ತರದವರಿಗೂ ಮತ್ತು ದಕ್ಷಿಣದವರಿಗೂ ಅಂತಃಕಲಹ ಉಂಟಾಗಿ ದಕ್ಷಿಣದವರಿಗಾಗಿ ಇಂಗ್ಲೆಂಡಿನಲ್ಲಿ ಕಟ್ಟಲ್ಪಟ್ಟ "ಅಲಬಮ" ಎಂಬ ಹಡಗು ಉತ್ತರದವರ ವ್ಯಾಪಾರದ ಹಡಗುಗಳನ್ನು ನಾಶಮಾಡಿದ್ದುದರಿಂದ, ಗ್ಲಾಡ್‌ಸ್ಟೋನ್ ಅಮೇರಿಕದ ಸ್ನೇಹವನ್ನುಳಿಸಿಕೊಳ್ಳಲು ಮೂರು ಮಿಲಿಯನ್ನಿಗಿಂತ ಹೆಚ್ಚು ಹಣವನ್ನು ಪರಿಹಾರದ ರೂಪದಲ್ಲಿ ಕೊಡಬೇಕಾಯಿತು.

ಷೆಲ್‌ಸ್ವೇಗ್ ಮತ್ತು ಹಾಲ್‌ಸ್ಟೇನ್ ಪ್ರಶ್ನೆ: ಷೆಲ್‌ಸ್ವೇಗ್ ಮತ್ತು ಹಾಲ್‌ಸ್ಟೇನ್ ಎಂಬ ಎರಡು ಸಣ್ಣ ಪ್ರದೇಶಗಳಿಗಾಗಿ ಡೆನ್ಮಾರ್ಕ್ ಮತ್ತು ಪ್ರಷ್ಯಗಳಲ್ಲಿ ಜಗಳ ಪ್ರಾರಂಭವಾಯಿತು. ಸಣ್ಣ ದೇಶವಾದ ಡೆನ್ಮಾರ್ಕ್ ಪರವಾಗಿ ಸಹಾನುಭೂತಿಯನ್ನು ಹೊಂದಿದ್ದ ಪಾಮರ್‌ಸ್ಟನ್ ಕೊನೆಗೆ ಇದಕ್ಕಾಗಿ ನಡೆದ ಯುದ್ಧದಲ್ಲಿ ಸಹಾಯ ಮಾಡಲು ಸಾಧ್ಯವಾಗಲಿಲ್ಲ. ಏಕೆಂದರೆ ಇಂಗ್ಲೆಂಡ್, ಡೆನ್ಮಾರ್ಕಿನ ಪರವಾಗಿ ಯುದ್ಧಕ್ಕೆ ಹೋಗಲು ಸಮ್ಮತಿಸಲಿಲ್ಲ. ಈ ಪ್ರದೇಶಗಳು ಕೈಬಿಟ್ಟು ಹೋದುದಲ್ಲದೆ, ಡೆನ್ಮಾರ್ಕ್ ದಂಡವನ್ನೂ (War indemnity) ತೆರಬೇಕಾಯಿತು. ಬಿಸ್‌ಮಾರ್ಕ್, ಷೆಲ್‌ಸ್ವೇಗ್ ಕೀಲ್ ಕಾಲುವೆಯ ತಯಾರಿಕೆಯಲ್ಲಿ ಆವಶ್ಯಕವಾಗಿ ಬೇಕಾಗಿದ್ದುದರಿಂದ ಅದನ್ನು ಅವನು ಯುದ್ಧದ ಮೂಲಕ ಪಡೆದುಕೊಂಡನು.

ಪಾಮರ್‌ಸ್ಟನ್, ಇಂಗ್ಲೆಂಡಿನ ಪ್ರಭಾವವನ್ನು ಯೂರೋಪಿನ ರಾಜಕೀಯದಲ್ಲಿ ಹೆಚ್ಚಿಸುವ ದಿನಗಳು ಈ ವೇಳೆಗೆ ಕಳೆದುಹೋಗಿತ್ತು.

೧೮೬೫ ರಲ್ಲಿ ಪಾಮರ್‌ಸ್ಟನ್ ಕಾಲವಾದನು. ಆಗ ಅವನಿಗೆ ಎಂಭತ್ತು ವರ್ಷಗಳಿಗಿಂತ ಹೆಚ್ಚು ವಯಸ್ಸಾಗಿತ್ತು. ಅವನು ಪಾರ್ಲಿಮೆಂಟಿನಲ್ಲಿ ಅರವತ್ತು ವರ್ಷ, ಅಧಿಕಾರದಲ್ಲಿ ಐವತ್ತು ವರ್ಷ, ಪ್ರಧಾನ ಮಂತ್ರಿತ್ವದಲ್ಲಿ ಹತ್ತು ವರ್ಷ ಕಳೆದನು.

# ಬ್ರಿಟಿಷ್ ವಸಾಹತುಗಳ ಹೊಸ ಚಕ್ರಾಧಿಪತ್ಯ

## ೧೩೩೩-೧೮೬೭.

ಎಡ್ವರ್ಡ್‌ಗಿಬ್ಬನ್‌ವೇಕ್‌ಫೀಲ್ಡ್ (೧೭೯೬—೧೮೬೨) ಬ್ರಿಟಿಷ್ ವಸಾಹತುಗಳ ವಿಚಾರದಲ್ಲಿ ಒಂದು ಹೊಸ ಯೋಜನೆಯನ್ನು ತಯಾರಿಸಿದನು. ಇದರ ಪ್ರಕಾರ ವಲಸೆ ಹೋಗುವವರಿಗೆ ಬಿಟ್ಟಿ ಜಮೀನನ್ನು ಒದಗಿಸುವುದರಿಂದ ಅವರಿಗೆ ಅದನ್ನು ಅಭಿವೃದ್ಧಿಗೆ ತರಲು ಮನಸ್ಸಿಲ್ಲವೆಂದೂ ಮತ್ತು ಸರ್ಕಾರವು ಜಮೀನುಗಳನ್ನು ಮಾರುವುದರಿಂದ ಬಡವರಿಗೆ ವಲಸೆ ಹೋಗುವಾಗ ಹಣವನ್ನು ಒದಗಿಸಬಹುದೆಂದೂ ಸರ್ಕಾರಕ್ಕೆ ಸಲಹೆ ಮಾಡಿದನು.

ಆಸ್ಟ್ರೇಲಿಯ: ಮೊದಮೊದಲು ಆಸ್ಟ್ರೇಲಿಯವು ಅಪರಾಧಿಗಳನ್ನು (convicts) ಕಳುಹಿಸುವ ಕ್ಷೇತ್ರವಾಗಿತ್ತಷ್ಟೆ. ಸ್ವಲ್ಪಕಾಲದಲ್ಲೆ ಅಲ್ಲಿಗೆ ಇತರ ಬ್ರಿಟಿಷ್ ಜನರು ಹೋಗಲಾರಂಭಿಸಿದರು. ಸಿಡ್ನಿಯ ಹತ್ತಿರ ಕ್ಯಾಪ್ಟನ್ ಮೆಕಾರ್ಥರ್ ಎಂಬುವನು ಹುಲ್ಲುಗಾವಲು ಇದ್ದುದ್ದನ್ನು ನೋಡಿ ೧೭೯೭ ರಲ್ಲಿ ಮೆರಿನೊ ಕುರಿಗಳನ್ನು ತರಿಸಿ, ಯಾರ್ಕ್‌ಷೈರಿನ ಉಣ್ಣೆಯ ತಯಾರಿಕೆಗಾರರು ಇದರಲ್ಲಿ ತೀವ್ರ ಆಸಕ್ತಿ ಹೊಂದುವಂತೆ ಮಾಡಿದನು. ಖೈದಿಗಳಿಲ್ಲದ ಬೇರೆಒಂದು ವಸಾಹತನ್ನುಸ್ಥಾಪಿಸಲು ವೇಕ್‌ಫೀಲ್ಡ್ ೧೮೩೬ ರಲ್ಲಿ ದಕ್ಷಿಣ ಆಸ್ಟ್ರೇಲಿಯಾವನ್ನು ವಸಾಹತನ್ನಾಗಿ ಮಾಡಿದನು. ಅದರ ರಾಜಧಾನಿಗೆ ನಾಲ್ಕನೇ ವಿಲಿಯಮ್ಮನ ರಾಣಿ ಅಡಿಲೇಡ್ ಎಂಬುವಳ ಹೆಸರನ್ನು ಇಟ್ಟನು. ೧೮೫೧ ರಲ್ಲಿ ವಿಕ್ಟೋರಿಯಾ ಎಂಬ ಬೇರೆ ವಸಾಹತಾಯಿತು. ೧೮೫೯ ರಲ್ಲಿ ಕ್ವೀನ್ಸ್‌ಲ್ಯಾಂಡ್ ಸ್ಥಾಪಿತವಾಯಿತು. ೧೮೫೩ರ ವೇಳೆಗೆ ಖೈದಿಗಳನ್ನು ಕಳುಹಿಸುವ ಪದ್ಧತಿಯನ್ನು ಬ್ರಿಟಿಷ್ ಸರ್ಕಾರ ರದ್ದುಮಾಡಿದುದರಿಂದ ಆಸ್ಟ್ರೇಲಿಯದ ಅಭಿವೃದ್ಧಿ ಚೆನ್ನಾಗಿ ಸಾಗಿತು. ೧೮೫೧. ರಲ್ಲಿ ವಿಕ್ಟೋರಿಯಾದಲ್ಲಿ ಚಿನ್ನ ಸಿಕ್ಕುವುದು ಪತ್ತೆಯಾದ್ದರಿಂದ ಹೆಚ್ಚು ಸಂಖ್ಯೆಯಲ್ಲಿ ಜನ ಆಸ್ಟ್ರೇಲಿಯಕ್ಕೆ ವಲಸೆ ಬರಲು ಪ್ರಾರಂಭವಾಯಿತು. ೧೮೩೩ರಲ್ಲಿ ನ್ಯೂಸೌತ್‌ವೇಲ್ಸ್ ಅರವತ್ತುಸಾವಿರ (೬೦,೦೦೦) ಜನರಿಂದ ಕೂಡಿತ್ತು. ಅದರಲ್ಲಿ ಅರ್ಧ ಖೈದಿಗಳದೇ ಆಗಿತ್ತು. ೧೮೫೦ ರಲ್ಲಿ ಅದು ಅರವತ್ತೈದು

ಸಾವಿರಕ್ಕೇರಿತು. ಅದರಲ್ಲಿ ಖೈದಿಗಳ ಸಂಖ್ಯೆ ಶೇಕಡ ೧ಕ್ಕಿಂತ ಕಮ್ಮಿಯಾಗಿತ್ತು. ೧೮೫೦ ರಲ್ಲಿ ಕೆನಡಾದಂತೆ ಆಸ್ಟ್ರೇಲಿಯಾಕ್ಕೂ ಸ್ವತಂತ್ರ ಸರ್ಕಾರ (Self Government) ಕೊಡಲಾಯಿತು. ೧೯೦೦ ರಲ್ಲಿ ಸಂಯುಕ್ತ ಆಸ್ಟ್ರೇಲಿಯವು ಕ್ಯಾನ್‌ಬೆರ (Canberra) ವನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿತು.

ನ್ಯೂಜಿಲ್ಯಾಂಡ್ : ನ್ಯೂಜಿಲೆಂಡಿನ ಮೂಲನಿವಾಸಿಗಳಾದ ಮಯೋರಿಗಳು (Maoris) ಧೈರ್ಯಶಾಲಿಗಳಾದ ಯೋಧರು. ಆದರೆ ಅವರಿಗೂ ಮತ್ತು ಗಿಬ್ಬನ್‌ವೇಕ್‌ಫೀಲ್ಡ್ ಸ್ಥಾಪಿಸಿದ ನ್ಯೂಜಿಲೆಂಡ್ ಕಂಪೆನಿಗೂ ಜಗಳವಾಗಿ ೧೮೪೦ರಲ್ಲಿ ಮಯೋರಿಗಳು ವೈಟಂಗಿ (Waitangi) ಕರಾರಿನ ಪ್ರಕಾರ ವಿಕ್ಟೋರಿಯ ತಮ್ಮ ರಾಣಿಯೆಂದು ಒಪ್ಪಿಕೊಳ್ಳಬೇಕಾಯಿತು. ಕುರಿಯ ಪೋಷಣೆಗೆ ನ್ಯೂಜಿಲೆಂಡಿನ ಹವ ಉತ್ತಮವಾಗಿದ್ದುದರಿಂದ ನ್ಯೂಜಿಲೆಂಡ್ ಜನರನ್ನು ಹೆಚ್ಚುಹೆಚ್ಚಾಗಿ ಆಕರ್ಷಿಸಿತು. ೧೮೪೫ರಲ್ಲಿ ನ್ಯೂಜಿಲೆಂಡಿನ ಪ್ರಾಂತ್ಯಾಧಿಕಾರಿ (ಗೌರ್ನರ್) ಜಾರ್ಜ್‌ಗ್ರೇ ಮಯೋರಿಗಳು ಮತ್ತು ಬಿಳಿ ಜನರು ಒಟ್ಟಿಗೆ ವಾಸಿಸುವಂತೆ ಏರ್ಪಡಿಸಿದನು. ೧೮೫೨ರ ವೇಳೆಗೆ ಅಲ್ಲಿ ಸುಮಾರು ಮೂವತ್ತು ಸಾವಿರ (೩೦,೦೦೦) ಬಿಳಿ ಜನರು ನೆಲಸಿದ್ದರು. ವೆಲ್ಲಿಂಗ್‌ಟನ್ನಿನಲ್ಲಿ ಒಂದು ಕೇಂದ್ರ ವಿಧಾನಸಭೆ ಸ್ಥಾಪಿಸಲ್ಪಟ್ಟು ೧೮೭೨ರಲ್ಲಿ ಇಬ್ಬರು ಮಯೋರಿಗಳು ಮೇಲ್ಮನೆಯ (Upper House) ಸದಸ್ಯರಾದರು.

ದಕ್ಷಿಣ ಆಫ್ರಿಕ (ಬ್ರಿಟನ್ ಮತ್ತು ಬೋಯರ್) : ಇಂಡಿಯಾ ದೇಶಕ್ಕೆ ಸಮುದ್ರ ಮಾರ್ಗ ಕಂಡುಹಿಡಿಯಲು ಪೋರ್ಚುಗೀಸರು ಗುಡ್ ಹೋಪ್ ಕಂಡುಹಿಡಿದರಷ್ಟೆ. ಡಚ್ಚರು ಅಲ್ಲಿ ನೆಲಸಿದ್ದರು. ಅವರಿಗೆ ಅದು ಪೂರ್ವಾಚ್ಯ ದೇಶಗಳೊಡನೆ ವ್ಯಾಪಾರಮಾಡಲು ಮಧ್ಯಮಾರ್ಗದಲ್ಲಿತ್ತು. ನೆಪೋಲಿಯನ್ನನ ಕಾಲದಲ್ಲಿ ಅದು ಫ್ರೆಂಚರ ವಶಕ್ಕೆ ಬಂದಿತು. ಫ್ರೆಂಚರೊಡನೆ ಯುದ್ಧಮಾಡುತ್ತಿದ್ದ ಇಂಗ್ಲಿಷರು ಅದನ್ನು ತಾವು ವಶಮಾಡಿಕೊಂಡರು. ಯುದ್ಧಮುಗಿದು ೧೮೧೫ರಲ್ಲಿ ವಿಯನ್ನಾಸಮಿತಿಯು ಯೂರೋಪಿನ ಭೂಪಟವನ್ನು ಮಾರ್ಪಾಟು ಮಾಡುತ್ತಿದ್ದಾಗ ಇಂಗ್ಲೆಂಡ್ ಕೇಪ್ ವಸಾಹತನ್ನು ೬,೦೦೦,೦೦೦ ಪೌಂಡುಗಳಿಗೆ ಕೊಂಡುಕೊಂಡಿತು.

ಅಲ್ಲಿನ ನಿವಾಸಿಗಳಾದ ಬೋಯರ್ (Boer) ಜನರು ಅಲ್ಲಿನ ಮೂಲ ನಿವಾಸಿಗಳಾದ ಕಾಫಿರ್ (Kaffir) ಜನಾಂಗದೊಡನೆ ಹೋರಾಡುತ್ತಿದ್ದರು. ಆಗಿನ ವಸಾಹತುಗಳ ಕಾರ್ಯದರ್ಶಿ ಗ್ರೇನೆಲಗ್ (Grenelg) ಕಾಫಿರ್ ಜನಾಂಗದಿಂದ ಬೋಯರ್ ಜನಾಂಗವು ಕಿತ್ತುಕೊಂಡಿದ್ದ ಜಮೀನುಗಳನ್ನು ಪುನಃ ಅವರಿಗೆ ವಾಪಸ್ಸು ಕೊಡಿಸಿದ್ದುದರಿಂದ ಬೋಯರ್ ಜನಾಂಗವು ಕೇಪ್‌ವಸಾಹತನ್ನು ಬಿಟ್ಟು ಬೇರೆ ಸ್ಥಳಗಳಿಗೆ ಅಲ್ಲಿಂದ ಹೋಗಲು ಪ್ರಾರಂಭಿಸಿತು. ಇದಕ್ಕೆ 'ಗ್ರೇಟ್‌ಟ್ರೆಕ್' (Great Trek, ೧೮೩೬) ಎಂದು ಹೆಸರು. ಅವರು ತಮ್ಮ ತಮ್ಮ ಸಾಮಾನುಗಳನ್ನು ಎತ್ತಿನ ಗಾಡಿಗಳಲ್ಲಿ ಹೇರಿಕೊಂಡು ಹೊರಟು, ಕೆಲವರು ಆರೇಂಜ್ ನದಿ ಹತ್ತಿರವೂ ಮತ್ತೆ ಕೆಲವರು ವಾಲ್ (Vall) ನದಿ ಆಚೆಗೂ ಹೋಗಿ ನೆಲಸಿದರು. ಈ ಪ್ರದೇಶಗಳಾದ ನೆಟಾಲ್ ಮತ್ತು ಟ್ರಾನ್ಸ್‌ವಾಲ್‌ಗಳನ್ನು ಇಗ್ಲೆಂಡ್ ರಕ್ಷಣೆಯ ನೆಪದಲ್ಲಿ ೧೮೪೩ ಮತ್ತು ೧೮೪೭ರಲ್ಲಿ ತನ್ನ ವಶಮಾಡಿಕೊಂಡಿತ್ತು. ಆದರೆ ೧೮೫೨ರಲ್ಲಿ ಬೋಯರ್ ಜನಾಂಗವು ತನ್ನ ಸ್ವಾತಂತ್ರ್ಯವನ್ನು ಹೊಂದಿತು. ಕಿಂಬರ್ಲಿಯಲ್ಲಿ ೧೮೭೧ರಲ್ಲಿ ವಜ್ರವು ಸಿಕ್ಕಿದುದರಿಂದ ಕೇಪ್ ವಸಾಹತು ಅಭಿವೃದ್ಧಿಗೆ ಬರಲಾರಂಭಿಸಿತು. ಅಲ್ಲಿಗೆ ಅನೇಕ ಜನರು ಬರಲಾರಂಭಿಸಿದರು. ಆದರೆ ಬೋಯರ್ ಗಣರಾಜ್ಯಗಳು ಕ್ಷೀಣವೆಸೆಗೆ ಬರಲಾರಂಭಿಸಿದವು. ಅದೂ ಅಲ್ಲದೆ ಜುಲೂ ಜನಾಂಗದ ರಾಜನಾದ ಕೆಟವಾಯೊ (Cetewayo) ನಲವತ್ತು ಸಾವಿರ ಸೈನಿಕರೊಡನೆ ಟ್ರಾನ್ಸ್‌ವಾಲನ್ನು ಮುತ್ತಿಗೆ ಹಾಕಲು ಬೆದರಿಕೆ ಹಾಕಿದನು. ಈ ಅಪಾಯವನ್ನು ಬೋಯರ್ ಜನಾಂಗವು ತಪ್ಪಿಸಿಕೊಳ್ಳಲು ಅಸಾಧ್ಯವಾಗಿದ್ದುದರಿಂದ ಡಿಸ್ರೇಲಿ ೧೮೭೭ರಲ್ಲಿ ಟ್ರಾನ್ಸ್‌ವಾಲನ್ನು ಪುನಃ ತನ್ನ ಕೈವಶಮಾಡಿಕೊಂಡನು. ಉಲುಂದಿ ಎಂಬಲ್ಲಿ ಜುಲೂಗಳನ್ನು ಬ್ರಿಟಿಷರು ಸೋಲಿಸಿದರೂ, ಅವರ ಸೈನ್ಯಗಳಿಗೆ ಹೆಚ್ಚು ಸಾವುನೋವುಗಳಾಗಿದ್ದವು. ಜುಲೂಗಳೊಡನೆ ಯುದ್ಧ ಮುಗಿದರೂ ಬೋಯರ್ ಜನಾಂಗಕ್ಕೆ ಸ್ವಯಂ ಸರ್ಕಾರ ಸಿಗದೆ ಇದ್ದುದನ್ನು ಕಂಡು ಅವರು ಮಜುಬಹಿಲ್ (೧೮೮೧) ಎಂಬಲ್ಲಿ ಬ್ರಿಟಿಷ್ ಸೈನ್ಯಗಳ ಮೇಲೆ ಬಿದ್ದರು. ಗ್ಲಾಡ್‌ಸ್ಟನ್, ಬೋಯರ್ ಜನಾಂಗದ ಅಭಿಪ್ರಾಯಕ್ಕೆ ಮನ್ನಣೆ ಕೊಟ್ಟು ೧೮೮೪ರಲ್ಲಿ ಟ್ರಾನ್ಸ್

ವಾಲನ್ನು ಪುನಃ ಗಣರಾಜ್ಯವನ್ನಾಗಿ ಮಾಡಿದನು. ಆದರೆ ಅದು ಬೇರೆ ವಿದೇಶ ಜನಾಂಗದೊಡನೆ ಕರಾರು ಮಾಡಿಕೊಳ್ಳುವ ಹಕ್ಕನ್ನು ಮಾತ್ರ ಪಡೆದಿರಲಿಲ್ಲ.

ಸೆಸಿಲ್‌ರೋಡ್ಸ್(Cecil Rhodes, ೧೮೫೩–೧೯೦೨), ಬ್ರಿಟಿಷ್ ಚಕ್ರಾಧಿಪತ್ಯವನ್ನು ವಿಸ್ತರಿಸುವುದೇ ತನ್ನ ಜೀವನದ ಗುರಿಯೆಂದು ತಿಳಿದಿದ್ದನು. ಅವನು ವಜ್ರಗಳ ವ್ಯಾಪಾರದಲ್ಲಿ ಅಪಾರ ಹಣ ಸಂಪಾದಿಸಿದನು. ಕೆನಡಾದಲ್ಲಿ ಹೇಗೆ ಫ್ರೆಂಚರು ಮತ್ತು ಇಂಗ್ಲಿಷರು ಬ್ರಿಟಿಷರ ಆಡಳಿತವಲ್ಲಿದ್ದರೋ ಹಾಗೆ ದಕ್ಷಿಣ ಆಫ್ರಿಕದಲ್ಲಿ ಕೂಡಾ ಬ್ರಿಟಿಷರ ಆಡಳಿತದಲ್ಲಿ ಬೋಯರ್ ಮತ್ತು ಬ್ರಿಟಿಷರು ವಾಸಿಸಬೇಕೆಂದು ಅವನು ಆಶಿಸಿದ್ದನು. ತಾನು ವಜ್ರದ ವ್ಯಾಪಾರದಿಂದ ಗಳಿಸಿದ ಅಪಾರ ಹಣವನ್ನು ರೋಡಿಸಿಯಾ ಎಂಬ ವಸಾಹತನ್ನು ಅಭಿವೃದ್ಧಿ ಪಡಿಸಲು ರೋಡ್ಸ್ ವ್ಯಯಮಾಡಿದನು. ಆದರೆ ಡಚ್ಚರ ಗಣರಾಜ್ಯಗಳು ಬ್ರಿಟಿಷ್ ವಸಾಹತುಗಳೊಡನೆ ಸಹಕರಿಸುವುದಕ್ಕೆ ಇಷ್ಟವುಳ್ಳವಾಗಿರಲಿಲ್ಲ. ರೈಲ್ವೆ ಮತ್ತು ಅಂಚೆ ಇವುಗಳಲ್ಲಿಯೂ ಸಹಕಾರ ಏರ್ಪಡಲಿಲ್ಲ. ಈ ಮಧ್ಯೆ ೧೮೮೯ರಲ್ಲಿ ಟ್ರಾನ್ಸ್‌ವಾಲಿನ ಜೋಹಾನ್ಸ್‌ಬರ್ಗ್ ಎಂಬಲ್ಲಿ ಚಿನ್ನದ ಗಣಿ ಸಿಕ್ಕಿದುದರಿಂದ ಅನೇಕ ವಿದೇಶೀಯರು ಅಲ್ಲಿ ನೆಲಸಲು ಬರಲಾರಂಭಿಸಿದರು. ಬೋಯರ್ ಜನಸಂಖ್ಯೆಗಿಂತ ಈ ವಿದೇಶೀಯರ (Uitlanders) ಸಂಖ್ಯೆ ಹೆಚ್ಚಾಗುತ್ತಿದ್ದುದರಿಂದ ಕೊನೆಗೆ ಸರ್ಕಾರವೇ ಅವರ ಕೈಗೆ ಸಿಕ್ಕುವುದೆಂಬ ಭಯದಿಂದ, ಈ ವಿದೇಶೀಯರಿಗೆ ಮತದಾನದ ಹಕ್ಕಿಲ್ಲವೆಂಬ ಕಾನೂನನ್ನು ಬೋಯರ್ ಜನಾಂಗ ತಂದಿತು. ಆದರೆ ವಿದೇಶೀಯರು ಇಪ್ಪತ್ತರಲ್ಲಿ ಹತ್ತೊಂಭತ್ತು ಭಾಗ ತೆರಿಗೆಯನ್ನು (ಆದಾಯವು ೧೫೦,೦೦೦ ಪೌಂಡಿನಿಂದ ೩೦೦೦,೦೦೦ ಪೌಂಡಿಗೆ ಏರಿತ್ತು) ತೆರುತ್ತಿದ್ದುದರಿಂದ ಅವರು ಪೌರ ಹಕ್ಕುಗಳನ್ನು ತಮಗೆ ಕೊಡಬೇಕೆಂದು ಅಧ್ಯಕ್ಷ ಕ್ರೂಗರನಿಗೆ ಎಷ್ಟು ಮನವಿ ಮಾಡಿಕೊಂಡರೂ ಅವನು ಗಮನ ಕೊಡಲಿಲ್ಲ. ಆದುದರಿಂದ ಅವರು ಬೋಯರ್ ಸರ್ಕಾರವನ್ನು ಉರುಳಿಸಲು ಸಮಯ ಕಾಯುತ್ತಿದ್ದರು. ರೋಡ್ಸ್, ದಂಗೆಕಾರರಿಗೆ ಬೇಕಾದ ಮದ್ದು ಮತ್ತು ಗುಂಡುಗಳನ್ನು ಸರಬರಾಜು ಮಾಡಲು ಒಪ್ಪಿಕೊಂಡಿದುದಲ್ಲದೆ ಜೇಮ್ಸನ್ ಎಂಬುವನ

ಕೈಕೆಳಗೆ ೧೫೦೦ ಜನ ಸೈನಿಕರನ್ನೂ ಕಳುಹಿಸುವುದಾಗಿ ವಾಗ್ದಾನ ಮಾಡಿದ್ದನು. ಕೇಪ್ ವಸಾಹತ್ತಿನ ಮುಖ್ಯಮಂತ್ರಿಯಾಗಿದ್ದ ರೋಡ್ಸ್, ಈ ರೀತಿ ವರ್ತಿಸಿದ್ದು ಅನ್ಯಾಯವೇ ಸರಿ. ಅವನಿಗೂ ಇದು ತಿಳಿಯದೆ ಇರಲಿಲ್ಲ. ಅವನು ಈ ಏರ್ಪಾಡುಗಳನ್ನು ಕೊನೆಯ ನಿಮಿಷದಲ್ಲಿ ರದ್ದು ಮಾಡಿದ್ದೇನೋ ನಿಜ. ಆದರೆ ಜೇಮ್ಸನ್ ಆತುರವಾಗಿ ನುಗ್ಗಿ, ವಿದೇಶೀಯರ ಸಹಾಯವನ್ನೂ ತೆಗೆದುಕೊಳ್ಳದೆ, ಬೋಯರ್ ಸೈನಿಕರಿಂದ ತನ್ನ ಅನುಯಾಯಿಗಳೊಡನೆ ಸೆರೆಹಿಡಿಯಲ್ಪಟ್ಟನು. ಇದರಿಂದ ಬೋಯರ್ ಸರ್ಕಾರವು, ಬ್ರಿಟಿಷ್ ಸರ್ಕಾರಕ್ಕೆ ತನ್ನ ಮೇಲೆ ಕಣ್ಣಿದೆಯೆಂದು ತಿಳಿದು ಕೊಂಡು ತನ್ನ ಸೈನ್ಯದ ದಕ್ಷತೆಯನ್ನು ಫ್ರಾನ್ಸ್ ಮತ್ತು ಜರ್ಮನಿಯ ಸಹಾಯದಿಂದ ಹೆಚ್ಚಿಸಿಕೊಂಡಿತು. ೧೮೯೭ರಲ್ಲಿ ವಿದೇಶೀಯರು ತಮಗಾದ ಅನ್ಯಾಯವನ್ನು ಪರಿಶೀಲಿಸುವಂತೆ ಬ್ರಿಟಿಷ್ ಸರ್ಕಾರವನ್ನು ಕೇಳಿಕೊಂಡರು. ಚೇಂಬರ್‌ಲೆನ್ (Chamberlain) ಅವರ ಪಕ್ಷ ವಹಿಸಿ ೧೮೮೧ ರ ಕರಾರಿನ ಪ್ರಕಾರ ಬ್ರಿಟನ್ನಿನ ಸಾರ್ವಭೌಮತ್ವವನ್ನು ಕ್ರೂಗರ್ ಒಪ್ಪಿಕೊಳ್ಳಬೇಕೆಂದು ತಿಳಿಸಿದನು. ೧೮೯೯ರಲ್ಲಿ ಪುನಃ ಯುದ್ಧ ಪ್ರಾರಂಭವಾಯಿತು. ಈ ಎರಡು ಸಣ್ಣ ಬೋಯರ್ ಗಣರಾಜ್ಯಗಳೊಡನೆ (ಆರೆಂಜ್ ಫ್ರಿಸ್ಟೇಟ್ ಮತ್ತು ಟ್ರಾನ್ಸ್‌ವಾಲ್) ಯುದ್ಧವು ಬಹು ಬೇಗ ಮುಗಿದುಹೋಗುವುದೆಂಬ ನಂಬಿಕೆ ಸರ್ವೇಸಾಮಾನ್ಯವಾಗಿತ್ತು. ಅನೇಕ ಯೂರೋಪಿನ ರಾಷ್ಟ್ರಗಳು ಇದಕ್ಕಾಗಿ ಬ್ರಿಟನ್ನಿನ ಮೇಲೆ ಅಸಮಧಾನಗೊಂಡವು. ಜರ್ಮನಿಯ ಕೈಸರ್ ಜೇಮ್ಸನ್ನನ ದಾಳಿ ವಿಫಲವಾದಾಗ ಕ್ರೂಗರನಿಗೆ ಅಭಿನಂದನೆಯ ಟೆಲಿಗ್ರಾಂ ಕಳುಹಿಸಿದ್ದನು. ಆದರೆ ಬೋಯರ್ ಕಡೆ ಅನೇಕ ಅನುಕೂಲಗಳಿದ್ದವು. ಈ ಯುದ್ಧವು ಮೂರು ಹಂತಗಳಲ್ಲಿ ನಡೆಯಿತು. ೧೮೯೯–೧೯೦೦ರಲ್ಲಿ ಬುಲ್ಲರ್ ಸೋತನು. ನವಂಬರ್ ೧೯೦೦ರಲ್ಲಿ ಲಾರ್ಡ್ ರಾಬರ್ಟ್ಸ್ ಬೋಯರರನ್ನು ಸೋಲಿಸಿ, ಲೇಡಿಸ್ಮಿತ್ ಮುತ್ತಿಗೆಯನ್ನು ಬಿಡಿಸುವಂತೆ ಮಾಡಿದನು. ೧೯೦೦–೧೯೦೨ ರಲ್ಲಿ ಲಾರ್ಡ್ ಕಿಚನರ್ ಯುದ್ಧವನ್ನು ಕೊನೆಗಾಣಿಸಿದನು. ವೀರೀನಿಗಿಂಗ್ ಕರಾರಿನಿಂದ ಬೋಯರ್ ಜನಾಂಗ ತನ್ನ ಸ್ವಾತಂತ್ರ್ಯವನ್ನು ಕಳೆದುಕೊಂಡಿತು. ಆದರೆ ತನ್ನ ಆಶ್ರಯದಲ್ಲಿ ಅದಕ್ಕೆ ಸ್ವಯಂ ಸರ್ಕಾರವು ಕೊಡಲ್ಪಡುವುದೆಂಬ ಭರವಸೆ

ಯನ್ನು ಇಂಗ್ಲೆಂಡ್ ನೀಡಿತು. ಅದರಂತೆಯೆ ೧೯೦೬ರಲ್ಲಿ ಸ್ವಯಂ ಸರ್ಕಾರ (Self Government) ಸಿಕ್ಕಿತು. ೧೯೦೯ರಲ್ಲಿ ಎರಡು ಬಿಟಿಷ್ ವಸಾಹತುಗಳು ಮತ್ತು ಎರಡು ಬೋಯರ್ ಗಣರಾಜ್ಯಗಳೂ ಸೇರಿ (ಕೇಪ್, ನೆಟಾಲ್, ಆರೆಂಜ್ ರಿವರ್ ಸ್ಟೇಟ್ ಮತ್ತು ಟ್ರಾನ್ಸ್‌ವಾಲ್) ದಕ್ಷಿಣ ಆಫ್ರಿಕದ ಸಂಯುಕ್ತ ರಾಷ್ಟ್ರವಾಯಿತು. ಇಂಗ್ಲಿಷರ ವಿರುದ್ಧ ಖಡಾಖಡಿಯಾಗಿ ಯುದ್ಧಮಾಡಿದ ಬೋಯರ್ ಸೇನಾಧಿಪತಿ ಬೊತಾ ಮುಖ್ಯಮಂತ್ರಿಯಾದನು. ರೋಡ್ಸನ ಕನಸು ನನಸಾಯಿತು.

ಕೆನಡ : ೧೭೯೧ರಲ್ಲಿ ಕೆನಡ ಎರಡು ಪ್ರಾಂತ್ಯಗಳಾಗಿ (ಕೆಳಗಿನ ಕೆನಡ ಮತ್ತು ಮೇಲಿನ ಕೆನಡ) ವಿಭಾಗಿಸಲ್ಪಟ್ಟತಷ್ಟೆ. ಎರಡರಲ್ಲಿಯೂ ಚುನಾಯಿತ ಸಭೆ ಇದ್ದರೂ ಪ್ರಾಂತ್ಯಾಧಿಕಾರಿ ಇಂಗ್ಲೆಂಡಿನಿಂದಲೇ ಕಳುಹಿಸಲ್ಪಡುತ್ತಿದ್ದನು. ಚುನಾಯಿತ ಸಭೆಗೆ ಹಣಕಾಸಿನ ವಿಚಾರದಲ್ಲಿ ಯಾವ ಅಧಿಕಾರವೂ ಇರಲಿಲ್ಲ. ೧೮೩೭ರಲ್ಲಿ ಈ ಎರಡು ಭಾಗಗಳೂ ದಂಗೆ ಎದ್ದುವು. ದಂಗೆಯನ್ನು ಬ್ರಿಟಿಷ್ ಸರ್ಕಾರವು ಅಡಗಿಸಿ, ಲಾರ್ಡ್ ಡರ್‌ಹ್ಯಾಂ ಎಂಬುವನನ್ನು ವಿಚಾರ ಪರಿಶೀಲನೆಗಾಗಿ ಕಳುಹಿಸಿತು. ೧೮೩೯ರಲ್ಲಿ ಅವನು ಒಪ್ಪಿಸಿದ ವರದಿ ಇಂಗ್ಲಿಷ್ ರಾಜ್ಯಾಂಗದ ಚರಿತ್ರೆಯಲ್ಲಿ ಮುಖ್ಯವಾದ ಒಂದು ಹಂತವನ್ನು ತಂದಿತೆಂದು ಹೇಳಬಹುದು. ವಸಾಹತುಗಳಿಗೆ ಸ್ವಯಮಾಡಳಿತವನ್ನು ಕೊಡುಬೇಕೆಂಬ ತತ್ವವನ್ನು ಅದು ಒತ್ತಿ ಹೇಳಿತು. ಒಳಾಡಳಿತದಲ್ಲಿ ಚುನಾಯಿತ ಸಭೆಗೆ ಪೂರ್ಣ ಅಧಿಕಾರ ಕೊಡಬೇಕೆಂಬ ಅಂಶವನ್ನು ಲಾರ್ಡ್‌ಡರ್‌ಹ್ಯಾಂ ತನ್ನ ವರದಿಯಲ್ಲಿ ತಿಳಿಸಿದನು. ಕೆನಡವನ್ನು ಎರಡು ಭಾಗವಾಗಿ ಮಾಡಿದ್ದು ತಪ್ಪೆಂದು ಆ ವರದಿ ತಿಳಿಸಿತು. ಈ ಎರಡು ಭಾಗಗಳೂ ಪುನಃ ಒಟ್ಟುಗೂಡಬೇಕೆಂದೂ ಸಂಯುಕ್ತಾಂಗ (Federation) ಏರ್ಪಾಡಾಗಬೇಕೆಂದೂ ವರದಿ ಒತ್ತಿ ಹೇಳಿತು. ೧೮೬೭ರಲ್ಲಿ ಕೆನಡದ ಸಂಯುಕ್ತಾಂಗ ಸ್ಥಾಪಿತವಾಯಿತು. ಆಟ್ಟಾವ ಅದರ ರಾಜಧಾನಿಯಾಯಿತು ಮೇಲಿನ ಕೆನಡ ಆಂಟೇರಿಯೊವಾಗಿಯೂ, ಕೆಳಗಿನ ಕೆನಡ ಕ್ವಿಬೆಕ್ ಪ್ರಾಂತ್ಯವಾಗಿಯೂ, ನವಸ್ಕೋಷಿಯ, ನ್ಯೂಬ್ರನ್ಸ್‌ವಿಕ್ ಮೊದಲಾದುವುಗಳೊಡನೆ ಸಂಯುಕ್ತ (Federation) ವಾಯಿತು. ಮೂರು ವರ್ಷಗಳ ನಂತರ

ಹರ್ಡ್ಸಬೇ ಕಂಪನಿ ತನ್ನ ವಶದಲ್ಲಿದ್ದ ವಿಸ್ತಾರವಾದ ಜಮೀನುಗಳನ್ನು ಕೆನಡಾವಿಗೆ ಮಾರಿದುದರಿಂದ ಮ್ಯಾನಿಟೋಬ ಪ್ರಾಂತ್ಯವು ರಚಿತವಾಯಿತು. ೧೮೭೧ರಲ್ಲಿ ಸಂಯುಕ್ತಾಂಗವನ್ನು ಬ್ರಿಟಿಷ್ ಕೊಲಂಬಿಯ ಸೇರಿತು. ೧೯೦೫ರಲ್ಲಿ ಆಲ್ಬರ್ಟ ಮತ್ತು ಸಸ್ಕಚಿವನ್ ಸೇರಿದುವು. ಕೆನೆಡಿರ್ಯ ಪೆಸಿಫಿಕ್ ರೈಲು ಮಾರ್ಗ (೧೮೭೩–೮೫) ಈ ಪ್ರಾಂತ್ಯಗಳನ್ನೆಲ್ಲಾ ಒಟ್ಟುಗೂಡಿಸಿ ಕೆನಡದ ಅಭಿವೃದ್ಧಿಗೆ ಕಾರಣವಾಯಿತು.

# ವಿಕ್ಟೋರಿಯ :

## ಗ್ಲಾಡ್‌ಸ್ಟನ್ ಮತ್ತು ಡಿಸ್ರೇಲಿ

ಡಿಸ್ರೇಲಿ ೧೮೦೪ ರಲ್ಲಿ ಒಂದು ಜ್ಯೂ ಮನೆತನದಲ್ಲಿ ಹುಟ್ಟಿದನು. ವಾಲ್ಟೇರ್ ಬೋಧಿಸಿದ ತತ್ವಗಳಿಗೆ ಮಾರುಹೋಗಿದ್ದ ಇವನ ತಂದೆ ಬಹಳ ಜಾಗರೂಕತೆಯಿಂದ ಕೂಡಿದವನೆಂದು ಹೇಳಬಹುದು. ಏಕೆಂದರೆ ಅವನು ಪುಟ್ಟ ಡಿಸ್ರೇಲಿಯನ್ನು ಮುಂದೆ ಮತೀಯ ಕಾರಣಗಳಿಂದ ಅವನ ಅಭ್ಯುದಯವು ಕೆಡಬಾರದೆಂಬ ಉದ್ದೇಶ್ಯದಿಂದ ಕ್ರೈಸ್ತ ಚರ್ಚಿನ ದೀಕ್ಷೆಯನ್ನು (Baptised into Christian Church) ಕೊಡಿಸಿದ್ದನು. ಚಿಕ್ಕವನಾಗಿದ್ದ ಡಿಸ್ರೇಲಿಗೆ ಸರಿಯಾದ ಶಾಲೆಯಲ್ಲಾಗಲೀ, (Public School) ಕಾಲೇಜಿನಲ್ಲಾಗಲೀ ವಿದ್ಯಾಭ್ಯಾಸ ನೆರವೇರಲಿಲ್ಲ. ಅವನಿಗಿದ್ದ ಅನಾನುಕೂಲಗಳನ್ನು ಪರಿಗಣಿಸಿ ನೋಡಿದರೆ ಬೇರೆ ಯಾವನೊಬ್ಬನೂ ಅವನು ಏರಿದ ಮಟ್ಟಕ್ಕೆ ಏರದೆ ಕುಸಿದುಹೋಗುತ್ತಿದ್ದನೆಂದು ಹೇಳಬಹುದು. ಡಿಸ್ರೇಲಿಯು ಕೇವಲ ತನ್ನ ಶಕ್ತಿ, ಪ್ರತಿಭೆಗಳಿಂದ ಮೇಲಕ್ಕೇರಿದವನು.

ಡಿಸ್ರೇಲಿಯು ಮೊದಲು ರಾಜಕೀಯ ಕಥೆಗಳನ್ನು ಬರೆಯಲಾರಂಭಿಸಿದನು. "ವಿವಿಯನ್‌ಗ್ರೆ" ಮತ್ತು "ದಿ ಯಂಗ್ ಡ್ಯೂಕ್" ೧೮೨೭ ಮತ್ತು ೧೮೩೧ರಲ್ಲಿ ಹೊರಬಿದ್ದುವು. ಮೂರುಸಲ ಸ್ವತಂತ್ರ ಉಮೇದುವಾರನಾಗಿ ಪಾರ್ಲಿಮೆಂಟಿನ ಸದಸ್ಯನಾಗಲು ಪ್ರಯತ್ನಿಸಿ, ವಿಫಲನಾಗಿ, ಕೊನೆಗೆ ೧೮೩೭ರಲ್ಲಿ ಪೀಲ್ ಪಕ್ಷದ ಉಮೇದುವಾರನಾಗಿ (Conservative) ಜಯಗಳಿಸಿದನು. ೧೮೪೬ ರಲ್ಲಿ ಗೋಧಿಯ ಕಾನೂನನ್ನು ರದ್ದುಮಾಡಲು ಪೀಲ್ ಪ್ರಯತ್ನಿಸುತ್ತಿದ್ದಾಗ, ಪರದೇಶದ ಸರಕಿನ ಮೇಲೆ ಸುಂಕಹಾಕಿ, ಸ್ವದೇಶದ ಕೈಗಾರಿಕೆಗೆ ರಕ್ಷಣೆ ಕೊಡುವ ತಂಡದ (Protectionists) ಮುಖಂಡನಾಗಿದ್ದ ಡಿಸ್ರೇಲಿ, ಪೀಲ್ ರಾಜೀನಾಮೆಯನ್ನು ಕೊಡುವಂತೆ ಮಾಡಿದನು. ಮೂರು ವರ್ಷಗಳೊಳಗೆ ಅವನು ಪೀಲನ ವಿರುದ್ಧಪಕ್ಷದ ಮುಖಂಡನಾದನು. ಆದರೆ ಅವನು ಮುಖ್ಯಮಂತ್ರಿ ಪದವಿಗೆ ಬರಲು ಇನ್ನೂ ಇಪ್ಪತ್ತೈದು ವರ್ಷಗಳು ಕಾಯಬೇಕಾಯಿತು. ಟೋರಿ ಪಕ್ಷವು ಬಲಯುತವಾಗುವಂತೆ ಡಿಸ್ರೇಲಿ ಮಾಡಿದನು. ಅದು ಪಾರ್ಲಿಮೆಂಟಿನ

ಚುನಾವಣೆಯ ಸುಧಾರಣೆಯಲ್ಲಿ ಮತ್ತು ಕಾರ್ಮಿಕರ (workingmen) ಸ್ಥಿತಿಗತಿಗಳನ್ನು ಸರಿಪಡಿಸುವುದರಲ್ಲಿ ಆಸಕ್ತಿ ಹೊಂದುವಂತೆ ಡಿಸ್ರೇಲಿ ಮಾಡಿದನು. ಅಷ್ಟೇ ಅಲ್ಲದೆ ಟೋರಿ ಪಕ್ಷಕ್ಕೆ ಬ್ರಿಟಿಷ್ ಚಕ್ರಾಧಿಪತ್ಯದ ಏಳಿಗೆಯಲ್ಲಿ ಉತ್ಸಾಹ ಹುಟ್ಟುವಂತೆ ಮಾಡಿದನು.

೧೮೬೬ ರಲ್ಲಿ ರಸಲ್ ಮಂತ್ರಿಮಂಡಲದಲ್ಲಿದ್ದ ಗ್ಲಾಡ್‌ಸ್ಟನ್ ಪಾರ್ಲಿಮೆಂಟಿನ ಸದಸ್ಯತ್ವವನ್ನು ವಿಸ್ತರಿಸಬೇಕೆಂದು ಒಂದು ಕಾನೂನನ್ನು ತಂದನಷ್ಟೆ. ಆದರೆ ಡಿಸ್ರೇಲಿ ಕೆಲವು ವಿಗ್ ಪಕ್ಷದ ಸದಸ್ಯರೊಡನೆ ಸೇರಿ ಈ ಮಸೂದೆಯು ಬಿದ್ದು ಹೋಗವಂತೆ ಮಾಡಿದನು.

ರಸಲ್ ಇದರಿಂದ ತನ್ನ ಕೆಲಸಕ್ಕೆ ರಾಜೀನಾಮೆ ಕೊಟ್ಟನು. ಲಾರ್ಡ್ ಡರ್ಬಿ ಟೋರಿ ಸರ್ಕಾರವನ್ನು ಸ್ಥಾಪಿಸಿದನು. ಡಿಸ್ರೇಲಿ ಅದರಲ್ಲಿ ಆರ್ಥಿಕ ಸಚಿವನಾದನು. ಅವನು ೧೮೬೭ ರಲ್ಲಿ ಪಾರ್ಲಿಮೆಂಟಿನ ಚುನಾವಣೆಯಲ್ಲಿ ಸುಧಾರಣಾ ಕಾನೂನನ್ನು ತಂದ ವಿಷಯವನ್ನು ಹಿಂದೆಯೇ ಹೇಳಿದೆ. ತಾನು ತಂದ ಕಾನೂನಿನಿಂದ ಮತದಾನದ ಹಕ್ಕನ್ನು ಪಡೆದ ಕಾರ್ಮಿಕರು ತನಗೆ ಮತದಾನ ಮಾಡುವರೆಂದು ತಿಳಿದಿದ್ದ ಡಿಸ್ರೇಲಿ ೧೮೬೮ರ ಚುನಾವಣೆಯಲ್ಲಿ ಸೋತನು. ಡಿಸ್ರೇಲಿಯ ಆಜೀವ ವಿರೋಧಿಯಾದ ಗ್ಲಾಡ್‌ಸ್ಟನ್ ಅಧಿಕಾರಕ್ಕೆ ಬಂದು, ೧೮೭೪ ರ ತನಕ ಮುಖ್ಯಮಂತ್ರಿಯಾದನು.

**ಡಿಸ್ರೇಲಿಯ ಮುಖ್ಯ ಮಂತ್ರಿತ್ವ, ೧೮೭೪–೧೮೮೦ :** ಡಿಸ್ರೇಲಿಯ ಪಂಗಡವು ಇಪ್ಪತ್ತೆಂಟು ವರ್ಷಗಳ ಕಾಲ ವಿರೋಧಪಕ್ಷದಲ್ಲಿದ್ದು ೧೮೭೪ರಲ್ಲಿ ಅಧಿಕಾರಕ್ಕೆ ಬಂದಿತು. ಡಿಸ್ರೇಲಿಯ ಸರ್ಕಾರವು ಜನಸಾಮಾನ್ಯಕ್ಕೆ ಉಪಯುಕ್ತವಾದ ಅನೇಕ ಕಾನೂನುಗಳನ್ನು ತಂದುದರಿಂದ ಅದಕ್ಕೆ "ಟೋರಿ ಪ್ರಜಾಪ್ರಭುತ್ವ"ವೆಂದು ಡಿಸ್ರೇಲಿಯು ಹೇಳಿಕೊಂಡದ್ದರಲ್ಲಿ ಅಸಹಜತೆ ಏನೂ ಇಲ್ಲ. ಅವುಗಳಲ್ಲಿ ಈ ಕೆಳಗೆ ಕಂಡ ಕಾನೂನುಗಳು ಮುಖ್ಯವಾದುವು.

(೧) ಕೆಲಸಗಾರರ ವಸತಿಯ ಕಾನೂನು (Artisans' Dwelliing Act, ೧೮೭೫) : ಆದಷ್ಟು ಮಟ್ಟಿಗೆ ಗಲೀಜು ಗಲ್ಲಿಯ ವಸತಿಗಳನ್ನು ನಾಶಮಾಡಿ ಸರಿಯಾದ ವಸತಿಗಳನ್ನು ನಿರ್ಮಿಸಲು ಪೌರಸಮಿತಿ (Local bodies) ಮೊದಲಾದುವುಗಳಿಗೆ ಅಧಿಕಾರ ಸಿಕ್ಕಿತು.

ಹೀಗೆ ಕಟ್ಟಿಸಿದ ನವೀನ ವಸತಿಗಳನ್ನು ಸರಿಯಾದ ಬಾಡಿಗೆಗೆ ಕೆಲಸಗಾರರಿಗೆ ಕೊಡಬೇಕೆಂದು ಗೊತ್ತಾಯಿತು.

(೨) ವಾಣಿಜ್ಯ ಹಡಗುಗಳ ಕಾನೂನು (Merchant shipping Act, ೧೮೭೬) : ವ್ಯಾಪಾರದ ಸಾಮಾನುಗಳನ್ನು ಸಾಗಿಸುತ್ತಿದ್ದ ಅನೇಕ ಹಡಗುಗಳು ದುರಾಸೆಯಿಂದ ತಾವು ಹೊರುವುದಕ್ಕಿಂತ ಹೆಚ್ಚಾಗಿಯೇ ಸಾಮಾನುಗಳನ್ನು ಹೇರಿಕೊಂಡುಹೋಗಿ, ಕೆಲವು ವೇಳೆ ಸಮುದ್ರದ ಪಾಲಾಗುತ್ತಿದ್ದುವು. ಈ ಕಾನೂನು, ವಾಣಿಜ್ಯ ಸಮಿತಿಗೆ (Board of trade) ಸಮುದ್ರದ ಮೇಲೆ ಹೊರಡಲಿರುವ ಪ್ರತಿಯೊಂದು ವ್ಯಾಪಾರದ ಹಡಗನ್ನೂ ಪರೀಕ್ಷಿಸುವ ಅವಕಾಶವನ್ನು ಕಲ್ಪಿಸಿತು. ಹಡಗುಗಳಿಗೆ ಎಷ್ಟು ಸಾಮಾನುಗಳನ್ನು ತುಂಬಬಹುದೆಂಬುದನ್ನು ತಿಳಿಸಲು ಪ್ಲಿಮ್‌ಸೋಲ್ ಎಂಬುವನು ಒಂದು ಗುರುತನ್ನು ಹಡಗಿನ ಪಕ್ಕದಲ್ಲಿ ಹಾಕಿಸಲು ಏರ್ಪಾಡು ಮಾಡಿಸಿದನು. ಈ "ಪ್ಲಿಮ್ ಸೋಲ್" ಗುರುತು ಈಗಲೂ ವ್ಯಾಪಾರದ ಹಡಗುಗಳ ಮೇಲೆ ಇರುವುದನ್ನು ನಾವು ನೋಡಬಹುದು. ಒಟ್ಟಿನಲ್ಲಿ ಇಂತಹ ಹಡಗುಗಳಲ್ಲಿ ಸೇರಿಕೊಂಡು ಕೆಲಸಮಾಡುತ್ತಿದ್ದವರ ಸ್ಥಿತಿ ಉತ್ತಮಗೊಂಡಿತು.

(೩) ಮಿತ್ರ ಸಂಘಗಳ ಕಾನೂನು (Friendly Societies Act ೧೮೭೫) : ಮಿತ್ರ ಸಂಘಗಳು ಕೆಲಸಗಾರರಿಂದ ಅವರ ವೇತನದಲ್ಲಿ ಪ್ರತಿ ವಾರವೂ ಸ್ವಲ್ಪ ಚಂದಾ ಹಣವನ್ನು ಸ್ವೀಕರಿಸಿ (Subscription) ಕೆಲಸಗಾರರು ಖಾಯಿಲೆ ಬಿದ್ದಾಗ ಅವರಿಗೆ ಸಹಾಯಮಾಡುತ್ತಿತ್ತು. ಕೆಟ್ಟ ಆಡಳಿತ, ಅಪ್ರಮಾಣಿಕತೆ ಇವುಗಳಿಂದ ಅವು ಕ್ಷೀಣದೆಸೆಗಿಳಿದಿದ್ದುದಲ್ಲದೆ, ಕೆಲವು ದಿವಾಳಿಯಾಗಿಯೂ ಇದ್ದುವು (Bankrupt). ಇದನ್ನು ತಪ್ಪಿಸಲು ಡಿಸ್ರೇಲಿಯು ಅವುಗಳನ್ನು ಸರ್ಕಾರದ ಹತೋಟಿಗೆ ತೆಗೆದುಕೊಂಡು, ಮಿತವ್ಯಯಕ್ಕೆ ಉತ್ತೇಜನ ಕೊಟ್ಟನು.

(೪) ಒಡೆಯ ಮತ್ತು ಕೆಲಸಗಾರರ ಕಾನೂನು (Employers and Workmen Act, ೧೮೭೫) : ಔದ್ಯೋಗಿಕ ಸಂಘಗಳನ್ನು (Trade Unions) ಪಿತೂರಿಯ ನೆಪದಿಂದ (conspiracy) ಶಿಕ್ಷೆಗೊಳಗಾದಂತೆ ಈ ಕಾನೂನು ಕಾಪಾಡಿತು. ಕಾಲು ಶತಮಾನ ಈ

ಕಾನೂನು "ಔದ್ಯೋಗಿಕ ಸಂಘಗಳ ಮ್ಯಾಗ್ನಕಾರ್ಟ" ವಾಗಿತ್ತೆಂದು ಹೇಳಬಹುದು.

(೫) ಸಾರ್ವಜನಿಕರ ಆರೋಗ್ಯದ ಕಾನೂನು (Public Health Act, ೧೮೭೫) : ಸ್ಥಳೀಯ ಸಂಸ್ಥೆಗಳು ನೀರಿನ ವ್ಯವಸ್ಥೆಯನ್ನು ಸರಿಪಡಿಸುವುದರ ಮೂಲಕ ಅನೇಕ ಸಾಂಕ್ರಾಮಿಕ ರೋಗಗಳು ಬರದಂತೆ ತಡೆಗಟ್ಟಲು ಈ ಕಾನೂನು ಅವಕಾಶಮಾಡಿಕೊಟ್ಟಿತು. ಪ್ರತಿಯೊಂದು ಜಿಲ್ಲೆಗೂ ಒಬ್ಬ ಆರೋಗ್ಯಾಧಿಕಾರಿಯು (Medical Officer of Health) ನಿಯಮಿಸಲ್ಪಟ್ಟನು.

(೬) ಸಾರ್ವಜನಿಕ ಜಮೀನುಗಳ ಆಕ್ರಮಣದ ಕಾನೂನು (Enclosure of common Act, ೧೮೭೬) : ಈ ಕಾನೂನು ಜಮೀನುದಾರರು ಸಾರ್ವಜನಿಕ ಜಮೀನುಗಳನ್ನು ಆಕ್ರಮಿಸಿಕೊಳ್ಳದಂತೆ ಮಾಡಿತು. ಪೂರ್ವ ಲಂಡನ್ನಿನಲ್ಲಿ ಎಪ್ಪಿಂಗ್ ಕಾಡು (Epping forest) ಇದರಿಂದ ಮಕ್ಕಳ ಆಟದ ಮೈದಾನವಾಗಿ ಉಳಿಯಿತು.

ಅಲೆಗ್ಜಾಂಡರ್ ಮೆಕ್‌ಡೊನಾಲ್ಡ್ ಎಂಬ ಕಾರ್ಮಿಕ ಪಕ್ಷದ ಸದಸ್ಯನು (Labour Member of Parliament) ೧೮೭೮ ರಲ್ಲಿ ಹೇಳಿದಂತೆ. ಕನ್ಸರ್‌ವೇಟೀವ್ ಪಕ್ಷವು ಕಾರ್ಮಿಕರಿಗೆ (Working Man) ಐದು ವರ್ಷಗಳಲ್ಲಿ ಮಾಡಿದಷ್ಟು ಲಿಬರಲ್ ಪಕ್ಷವು ಐವತ್ತು ವರ್ಷಗಳಲ್ಲಿ ಸಾಧಿಸಲಿಲ್ಲ.

**ಡಿಸ್ರೇಲಿಯ ವಿದೇಶಾಂಗ ನೀತಿ**: ಇಂಗ್ಲೆಂಡಿನ ಪ್ರತಿಷ್ಠೆ ಮತ್ತು ಪರಾಕಾಷ್ಠತೆಗಳನ್ನು ಎತ್ತಿ ಹಿಡಿಯುವುದೇ ಡಿಸ್ರೇಲಿಯ ವಿದೇಶಾಂಗ ನೀತಿಯ ಗುರಿಯೆಂದು ಹೇಳಬಹುದು. ಬ್ರಿಟಿಷ್ ಸಾಮ್ರಾಜ್ಯವನ್ನು ಅಳಿಯದಂತೆ ರಕ್ಷಿಸುವುದರಲ್ಲಿ ಡಿಸ್ರೇಲಿ ನಿರತನಾಗಿದ್ದನು.

ಸೂಯಸ್ ಕಾಲುವೆ : ಡಿಸ್ರೇಲಿಯು ಇಂಡಿಯಾ ದೇಶವು ಬ್ರಿಟಿಷ್ ಸಾಮ್ರಾಜ್ಯದ ಅತ್ಯಂತ ಮುಖ್ಯವಾದ ಒಂದು ಭಾಗವೆಂದು ಪರಿಗಣಿಸಿ, ಸೂಯಸ್ ಕಾಲುವೆಯನ್ನು ಇದಕ್ಕಾಗಿ ಬ್ರಿಟನ್ನಿನ ಹತೋಟಿಯಲ್ಲಿ ಇಟ್ಟುಕೊಳ್ಳಬೇಕೆಂಬ ಆಶಯವನ್ನು ಹೊಂದಿದ್ದನು. ಈಜಿಪ್ಟಿನ ಸುಲ್ತಾನ್ ಇಸ್ಮೇಯಿಲ್ ದುಂದುಗಾರನಾಗಿದ್ದುದರಿಂದ ಯಾವಾಗಲೂ ಹಣದ

ಅಭಾವದಿಂದ ಪರಿತಪಿಸುತ್ತಿದ್ದನು. ೧೮೭೫ ರಲ್ಲಿ ಅವನು ಸೂಯಸ್ ಕಾಲುವೆಯ ಷೇರುಗಳನ್ನು ಬ್ರಿಟನ್ನಿಗೆ ಮಾರಲು ಸಿದ್ಧವಾಗಿದ್ದನು. ಡಿಸ್ರೇಲಿ ೧೭೬೬೦೨ ಷೇರುಗಳನ್ನು ನಲವತ್ತು ಲಕ್ಷ ಪೌಂಡಿಗೆ ಕೊಂಡು ಕೊಂಡನು.

ವಿದೇಶಾಂಗ ನೀತಿಯಲ್ಲಿ ಡಿಸ್ರೇಲಿ ಮತ್ತು ಅವನ ಪ್ರತಿಕಕ್ಷಿ ತೀರಾ ಭಿನ್ನಾಭಿಪ್ರಾಯಗಳನ್ನು ಹೊಂದಿದ್ದರು. ಗ್ಲಾಡ್‌ಸ್ಟನ್ ಐರ್ಲೆಂಡಿನ ಸಮಸ್ಯೆಯನ್ನು ಬಗೆ ಹರಿಸುವುದರಲ್ಲಿ ಆಸಕ್ತಿ ವಹಿಸಿದರೆ, ಡಿಸ್ರೇಲಿ ಇಂಡಿಯಾದಲ್ಲಿ ಆಸಕ್ತಿ ಹೊಂದಿದ್ದನು. ಗ್ಲಾಡ್‌ಸ್ಟನ್, ರಷ್ಯ ಮತ್ತು ಟರ್ಕಿಗಳ ವ್ಯವಹಾರದಲ್ಲಿ, ಟರ್ಕಿಯು ತನ್ನ ಚಕ್ರಾಧಿಪತ್ಯವನ್ನು ರದ್ದುಮಾಡಬೇಕೆಂಬ (Turkophobia) ಮನೋಭಾವವನ್ನು ಹೊಂದಿದ್ದನು. ಆದರೆ ಡಿಸ್ರೇಲಿಗೆ ರಷ್ಯದ ಪ್ರಭಾವವು ಯೂರೋಪಿನಲ್ಲಿ (Russophobia) ಹರಡದಂತೆ ಮಾಡಬೇಕೆಂಬ ಗುರಿ ಇತ್ತು. ರಷ್ಯನ್ನರು ಆಫ್‌ಘಾನಿಸ್ಥಾನದ ಮೂಲಕ ಇಂಡಿಯಾವನ್ನು ಆಕ್ರಮಿಸುವರೆಂಬ ಬಲವಾದ ಸಂಶಯವಿದ್ದುದರಿಂದ ಅವನು ಲಿಟ್ಟನ್ ಎಂಬುವನನ್ನು ಭಾರತದ ಗೌರ್ನರ್ ಜನರಲ್ಲಾಗಿ ಕಳುಹಿಸಿ, ಆಫ್‌ಘನ್ ಯುದ್ಧಕ್ಕೆ ಕಾರಣನಾದನು. ೧೮೭೭ ರಲ್ಲಿ ವಿಕ್ಟೋರಿಯಾ ಭಾರತದ ಚಕ್ರವರ್ತಿನಿ ಎಂದು ಪ್ರಕಟಪಡಿಸಿದನು.

ಬಾಲ್ಕನ್ ರಾಜ್ಯಗಳು : ೧೮೭೬ ರಲ್ಲಿ ಬಾಲ್ಕನ್ ಪ್ರಜೆಗಳು ಟರ್ಕಿಯ ದಬ್ಬಾಳಿಕೆಯ ವಿರುದ್ಧ ದಂಗೆಯೆದ್ದರು. ದಂಗೆಯೆದ್ದಿದ್ದ ರಾಜ್ಯಗಳನ್ನು ಟರ್ಕಿಯು ಅತಿ ಕ್ರೂರವಾಗಿ ಶಿಕ್ಷಿಸಿತು. ಬಲ್ಗೇರಿಯದ ಭೀಕರವಾದ ಕಗ್ಗೊಲೆ (Bulgarian atrocities) ಗಾಡ್‌ಸ್ಟನ್ನನ ಕೋಪವನ್ನು ಕೆರಳಿಸಿತು. ಅವನು ಟರ್ಕಿಯು ಯೂರೋಪಿನಿಂದಲೇ ತನ್ನ ಸಾಮಾನು ಸರಂಜಾಮುಗಳೊಡನೆ (Bag and Baggage) ತೊಲಗಬೇಕೆಂದು ವಾದಿಸಿದನು. ರಷ್ಯ, ಬಾಲ್ಕನ್ ಪ್ರದೇಶದ ಸ್ಲಾವ್ ಜನಾಂಗದ ಮುಖಂಡತ್ವವನ್ನು ಹೊಂದಿತ್ತಷ್ಟೆ. ಬ್ರಿಟನ್, ಆಸ್ಟ್ರಿಯ ಈ ಕಗ್ಗೊಲೆಯನ್ನು ಖಂಡಿಸಿ ಟರ್ಕಿಗೆ ಬುದ್ಧಿ ಕಲಿಸಬೇಕೆಂದು ರಷ್ಯ ಆಶಿಸಿತು. ಆದರೆ ಡಿಸ್ರೇಲಿ ಇದಕ್ಕೆ ಒಪ್ಪಲಿಲ್ಲ. ಆದುದರಿಂದ ೧೮೭೭ ರಲ್ಲಿ ರಷ್ಯ

ತನ್ನ ಸೈನ್ಯವನ್ನು ಟರ್ಕಿಯ ಮೇಲೆ ಯುದ್ಧಕ್ಕೆ ಕಳುಹಿಸಿತು. ಟರ್ಕಿಯು ಪ್ಲೆವನವನ್ನು ರಕ್ಷಿಸಲು ಧೈರ್ಯದಿಂದ ಯುದ್ಧಮಾಡಿದರೂ, ಕೊನೆಯಲ್ಲಿ ಸೋತು ರಷ್ಯದೊಡನೆ ಸಾನ್‌ಸ್ಟಿಫಾನೊ ಕರಾರನ್ನು (San Stephano) ಮಾಡಿಕೊಳ್ಳಬೇಕಾಯಿತು. ಬಾಲ್ಕನ್ ಪ್ರದೇಶದಲ್ಲಿ ಮುಖ್ಯವಾದ ಸರ್ಬೀಯ ಮತ್ತು ಬಲ್ಗೇರಿಯ ಸ್ವಾತಂತ್ರ್ಯವನ್ನು ಹೊಂದಬೇಕೆಂದು ಈ ಕರಾರಿನಿಂದ ಗೊತ್ತಾಯಿತು. ಆದರೆ ಆಗತಾನೆ ಬಿಕನ್ಸ್‌ಫೀಲ್ಡ್ ಎಂಬ ಪದವಿಗೇರಿದ್ದ (Earl of Beaconsfield) ಡಿಸ್ರೇಲಿ, ಕ್ರಿಮಿಯ ಯುದ್ಧವನ್ನು ಮುಕ್ತಾಯಗೊಳಿಸಿದ ಪ್ಯಾರಿಸ್ ಕರಾರಿನ ಪ್ರಕಾರ ಟರ್ಕಿಯ ಎಲ್ಲೆಯು (Boundary) ನಿಶ್ಚಯಿಸಲ್ಪಟ್ಟಿದ್ದುದರಿಂದ, ಅದರ ಬದಲಾವಣೆಯ ವಿಷಯದಲ್ಲಿ ಇತರ ಯೂರೋಪಿಯನ್ ರಾಷ್ಟ್ರಗಳ ಸಲಹೆ ಆವಶ್ಯಕವೆಂದು ರಷ್ಯಕ್ಕೆ ತಿಳಿಸಿದನು. ಬ್ರಿಟಿಷ್ ಸೈನ್ಯವು ಮತ್ತು ನೌಕೆಯು ಮೆಡಿಟರೇನಿಯನ್ ಕಡೆ ಹೊರಟಿದ್ದುದ್ದನ್ನು ರಷ್ಯ ನೋಡಿ ಸಂಧಾನಕ್ಕೆ ಒಪ್ಪಿಕೊಂಡಿತು. ಯುದ್ಧವು ತಪ್ಪಿ ೧೮೭೮ರಲ್ಲಿ ಬರ್ಲಿನ್ನಿನಲ್ಲಿ (Congress of Berlin) ಬಿಸ್‌ಮಾರ್ಕ್‌ನ ಅಧ್ಯಕ್ಷತೆಯಲ್ಲಿ ನಡೆದ ಸಮ್ಮೇಳನವು ಬಲ್ಗೇರಿಯದ ಅನೇಕ ಭಾಗ ಸ್ವಾತಂತ್ರ್ಯವನ್ನು ಕಳೆದುಕೊಂಡು, ಪುನಃ ಟರ್ಕಿಯ ಅಧೀನಕ್ಕೆ ಬರುವಂತೆ ಮಾಡಿದ್ದಲ್ಲದೆ ಮತ್ತೊಂದು ಬಾಲ್ಕನ್ ರಾಜ್ಯವಾದ ಬಾಸ್ನಿಯವು, ಆಸ್ಟ್ರಿಯದ ಹತೋಟಿಯಲ್ಲಿರಬೇಕೆಂದು ಗೊತ್ತುಮಾಡಿತು. ಇದರಿಂದ ಆಸ್ಟ್ರಿಯವು, ಬಾಲ್ಕನ್ ರಾಜ್ಯಗಳ ವಿಚಾರದಲ್ಲಿ ಕೈ ಹಾಕುವಂತಾಗಿ, ರಷ್ಯ ಮತ್ತು ಆಸ್ಟ್ರಿಯ ಬಾಲ್ಕನ್ ಪ್ರದೇಶದಲ್ಲಿ ಪೈಪೋಟಿ ಮಾಡಲು ಅವಕಾಶವಾಗಿ, ೧೯೧೪ರ ಯುದ್ಧದ ಕಾರಣಗಳಲ್ಲಿ ಒಂದಾಯಿತು. ಇಂಗ್ಲೆಂಡಿಗೆ ರಷ್ಯದ ಮೇಲೆ ದ್ವೇಷವಿದ್ದುದರಿಂದ, ಸಮ್ಮೇಳನದಿಂದ ಹಿಂತಿರುಗಿ, ಗೌರವದಿಂದ ಶಾಂತಿಯನ್ನು (Peace with honour) ರಕ್ಷಿಸಿ ಬಂದ ಡಿಸ್ರೇಲಿಗೆ ಅದು ಅಪೂರ್ವ ಸ್ವಾಗತವಿತ್ತಿತು. ವಿಕ್ಟೋರಿಯ ರಾಣಿಗೂ ಈ ನೀತಿಯು ಸಂತೋಷ ತಂದಿತು. ಇಂಗ್ಲೆಂಡಿಗೆ ಸೈಪ್ರಸ್ ಸಿಕ್ಕಿತು. ಇದೇ ನೀತಿಯ ಪರಿಣಾಮದಿಂದ ಒದಗಿದ ಆಫ್‌ಘನ್ ಯುದ್ಧವು ಫಲಕಾರಿಯಾದುದಲ್ಲವೆಂದು ಇಂಗ್ಲೆಂಡಿಗೆ ಆಮೇಲೆ ಗೊತ್ತಾಯಿತು.

ದಕ್ಷಿಣ ಆಫ್ರಿಕಾದಲ್ಲಿಯೂ ಪರಿಸ್ಥಿತಿ ಹದಗೆಟ್ಟು ಬೋಯರ್ ಯುದ್ಧ ಪ್ರಾಪ್ತಿಯಾಗಲು ಕಾರಣವಾಗಿತ್ತು ೧೮೭೭ರಲ್ಲಿ ಬೋಯರ್ ಗಣರಾಜ್ಯಗಳಾದ ಟ್ರಾನ್ಸ್‌ವಾಲ್ ಮತ್ತು ಆರೇಂಜ್ ಪ್ರೀಸ್ಟೇಟ್ ಇವುಗಳನ್ನು ಬ್ರಿಟಿಷ್ ಸರ್ಕಾರ ಜುಲೂಗಳ ಕೈಗೆ (Zulus) ಬೀಳದಂತೆ ಮಾಡಲು ತನ್ನ ವಶಕ್ಕೆ ತೆಗೆದುಕೊಂಡಿತ್ತು. ೧೮೭೯ರಲ್ಲಿ ಜುಲುಗಳೊಡನೆ ನಡೆದ ಯುದ್ಧದಲ್ಲಿ ಇಂಗ್ಲೆಂಡಿನ ಸೈನ್ಯವೊಂದು ಸೋತಿತ್ತು.

ರಾಜಕೀಯದಿಂದ ನಿವೃತ್ತಿ ಹೊಂದಬೇಕೆಂದಿದ್ದ ಗ್ಲಾಡ್‌ಸ್ಟನ್ ಕನ್ಸರ್‌ವೇಟಿವ್ ಕ್ಷೇತ್ರವಾದ ಮಿಡ್‌ಲೊಥಿಯನ್ನಿಂದ ಚುನಾವಣೆಗೆ ನಿಂತು, ಸರ್ಕಾರವು ಟರ್ಕಿ, ಅಫ್‌ಘಾನಿಸ್ಥಾನ ಮತ್ತು ಬೋಯರ್ ಜನಾಂಗದೊಡನೆ ಅನುಸರಿಸಿದ ನೀತಿಯನ್ನು ಉಜ್ವಲ ಭಾಷಣದಲ್ಲಿ ಖಂಡಿಸಿದನು. ೧೮೮೦ರ ಚುನಾವಣೆಯಲ್ಲಿ ಗ್ಲಾಡ್‌ಸ್ಟನ್ ಜಯಗಳಿಸಿದುದರಿಂದ ಲಿಬರಲ್ ಪಕ್ಷ ಪುನಃ ಅಧಿಕಾರಕ್ಕೆ ಬಂದಿತು. ಇದಾದ ಒಂದು ವರ್ಷದೊಳಗೆ, (೧೮೮೧) ಡಿಸ್ರೇಲಿ ಕಾಲವಾದನು.

**ಗ್ಲಾಡ್‌ಸ್ಟನ್ (೧೮೦೯–೧೮೯೮) :** ಡಿಸ್ರೇಲಿಯ ಪ್ರತಿಕಕ್ಷಿಯಾದ ಗ್ಲಾಡ್‌ಸ್ಟನ್ ಲಿವರ್‌ಪೂಲಿನ ಐಶ್ವರ್ಯವಂತ ವರ್ತಕನ ವಂಶದಲ್ಲಿ ಹುಟ್ಟಿದನು. ಅವನ ವಿದ್ಯಾಭ್ಯಾಸವು ಈಟನ್ ಮತ್ತು ಆಕ್ಸ್‌ಫರ್ಡ್‌ಗಳಲ್ಲಿ ಭರದಿಂದ ಸಾಗಿತು. ೧೮೩೨ ರಲ್ಲಿ ಅವನು ಟೋರಿ ಪಕ್ಷದ ಪರವಾಗಿ ಪಾರ್ಲಿಮೆಂಟಿನ ಸದಸ್ಯನಾದನು. ಸರ್ ರಾಬರ್ಟ್ ಪೀಲ್ ಗೋಧಿಯ ಕಾನೂನನ್ನು ರದ್ದು ಮಾಡಲು ಹೋರಾಡುತ್ತಿದ್ದಾಗ ಗ್ಲಾಡ್‌ಸ್ಟನ್ ತನ್ನ ನಾಯಕನಿಗೆ ಅಮೂಲ್ಯವಾದ ಬೆಂಬಲವನ್ನು ಕೊಟ್ಟನು. ಡಿಸ್ರೇಲಿಯ ತಂಡವು ಗೋಧಿಯ ಕಾನೂನನ್ನು ರದ್ದು ಮಾಡಿದುದಕ್ಕಾಗಿ ಖಂಡಿಸಿದಾಗ, ಪೀಲ್ ಅಧಿಕಾರವನ್ನು ತ್ಯಜಿಸಬೇಕಾಯಿತು. ಪೀಲ್ ಸರ್ಕಾರದಲ್ಲಿ ವಾಣಿಜ್ಯ ಸಮಿತಿಯ (Board of Trade) ಅಧ್ಯಕ್ಷನಾಗಿದ್ದ ಗ್ಲಾಡ್‌ಸ್ಟನ್ ಕೂಡಾ ಅಧಿಕಾರದಿಂದ ಹೊರಬೀಳಬೇಕಾಯಿತು.

ಗ್ಲಾಡ್‌ಸ್ಟನ್ ವಿಗ್‌ಪಕ್ಷವನ್ನು ಸೇರಿಕೊಂಡು ಮುಂದುವರಿದನು. ಅಬರ್‌ಡೀನ್ ಮಂತ್ರಿ ಸಂಪುಟದಲ್ಲಿ (೧೮೫೨–೫೫) ಮತ್ತು ತ್ರಿಮೂರ್ತಿ

ಗಳ ಮಂತ್ರಿ ಸಂಪುಟದಲ್ಲಿ (ಪಾಮರ್‌ಸ್ಟನ್, ಗ್ಲಾಡ್‌ಸ್ಟನ್ ಮತ್ತು ರಸಲ್) ಗ್ಲಾಡ್‌ಸ್ಟನ್ (೧೮೫೯–೬೫) ಆರ್ಥಿಕ ಸಚಿವನಾದನು (Chancellor of Exehequer).

ಗ್ಲಾಡ್‌ಸ್ಟನ್ ಸಾಧಿಸಿದ ಕೆಲಸಗಳನ್ನು ಮೂರು ಭಾಗಗಳನ್ನಾಗಿ ವಿಂಗಡಿಸಬಹುದು. (೧) ಹಣಕಾಸಿನ ವ್ಯವಸ್ಥೆ (Finance), (೨) ಸಾಮಾಜಿಕ ಮತ್ತು ಇತರ ಸುಧಾರಣೆಗಳು (Social Reform) ಮತ್ತು (೩) ವಿದೇಶಾಂಗ ನೀತಿ (Foreign Policy).

ಗ್ಲಾಡ್‌ಸ್ಟನ್ ಇಂಗ್ಲೆಂಡಿನ ಚರಿತ್ರೆಯಲ್ಲಿ ಅತ್ಯಂತ ದಕ್ಷನಾದ ಒಬ್ಬ ಹಣಕಾಸಿನ ಮಂತ್ರಿಯೆಂದು ಧಾರಾಳವಾಗಿ ಹೇಳಬಹುದು. ಅವನು ತಯಾರಿಸುತ್ತಿದ್ದ ಆಯವ್ಯಯದ ಪಟ್ಟಿ (Budget) ಅತ್ಯಂತ ಹೆಸರು ವಾಸಿಯಾದುದು. ಅವನ ಗುರಿ "ಶಾಂತಿ, ಮಿತವ್ಯಯ ಮತ್ತು ಸುಧಾರಣೆ" (Peace, Retrenchment and Reform) ಎಂಬ ಈ ಮೂರು ಪದಗಳಲ್ಲಿ ಅಡಕವಾಗಿತ್ತು. ಪೀಲ್ ಹಾಕಿಕೊಟ್ಟ ಮೇಲ್ಪಂಕ್ತಿಯನ್ನೇ ಅನುಸರಿಸಿ, ಗ್ಲಾಡ್‌ಸ್ಟನ್ ಅನಾಂತಕ ವ್ಯಾಪಾರಕ್ಕೆ ತೀವ್ರ ಉತ್ತೇಜನ ಕೊಟ್ಟನು. ಇದರ ಸಲುವಾಗಿ ೧೮೬೦ರಲ್ಲಿ ಕಾಗದದ ಮೇಲಿನ ಸುಂಕ (ಜ್ಞಾನದ ಸುಂಕ)ವನ್ನು ರದ್ದುಮಾಡಿ, ಅದೇ ವರ್ಷ ಫ್ರಾನ್ಸಿನೊಡನೆ ವಾಣಿಜ್ಯ ಒಪ್ಪಂದ ಮಾಡಿಕೊಂಡನೆಂದು ಹಿಂದೆಯೇ ತಿಳಿಸಿದೆ.

ಪಾರ್ಲಿಮೆಂಟಿನ ಚುನಾವಣೆಯ ಸುದಾರಣೆಯನ್ನು ೧೮೬೬ರಲ್ಲಿ ಗ್ಲಾಡ್‌ಸ್ಟನ್ ತರಲು ಪ್ರಯತ್ನ ಪಟ್ಟನಷ್ಟೆ. ಇದಕ್ಕೆ ವಿರೋಧವಾಗಿದ್ದ ವಿಗ್ ಪಕ್ಷದ ಒಂದು ಚಿಕ್ಕ ತಂಡದ ಮುಖಂಡ ರಾಬರ್ಟ್‌ಲೊ (Robert Lowe) ಡಿಸ್ರೇಲಿಯ ಜೊತೆಯಲ್ಲಿ ಸೇರಿಕೊಂಡು ಈ ಮಸೂದೆಯು ಬಿದ್ದುಹೋಗುವಂತೆ ಮಾಡಿದ್ದುದರಿಂದ ರಸಲ್ ಮಂತ್ರಿ ಮಂಡಲ ಅಧಿಕಾರ ತ್ಯಜಿಸಿತು.

**ಗ್ಲಾಡ್‌ಸ್ಟನ್ನನ ಮೊದಲನೆ ಮಂತ್ರಿತ್ವ, ೧೮೬೮–೧೮೭೪ :** ೧೮೬೭ರಲ್ಲಿ ಡಿಸ್ರೇಲಿಯು ಪಾರ್ಲಿಮೆಂಟಿನ ಚುನಾವಣೆಯ ಸುಧಾರಣಾ ಕಾನೂನನ್ನು ತಂದು ಪಟ್ಟಣಗಳ ಕಾರ್ಮಿಕರಿಗೆ (Working men

of towns) ಮತದಾನದ ಹಕ್ಕನ್ನು ಕೊಟ್ಟನಷ್ಟೆ. ಇವರು ೧೮೬೮ರಲ್ಲಿ ನಡೆದ ಮಹಾ ಚುನಾವಣೆಯಲ್ಲಿ ತನಗೂ ಮತ್ತು ತನ್ನ ಪಕ್ಷಕ್ಕೂ ಮತ ದಾನ ನೀಡಿ ಅಧಿಕಾರಕ್ಕೆ ತರುವರೆಂಬ ಆಸೆಯನ್ನು ಹೊಂದಿದ್ದನು. ಆದರೆ ಕಾರ್ಮಿಕರು ತಮಗೆ ಮತದಾನ ನೀಡಲು ಜಾರಿಗೆ ಬಂದ ಕಾನೂನನ್ನು ಗ್ಲಾಡ್‌ಸ್ಟನ್ ಮೊದಲು ಪಾರ್ಲಿಮೆಂಟಿನಲ್ಲಿ ಮಂಡಿಸಿದನೆಂಬುದನ್ನು ಮರೆಯು ಲಿಲ್ಲ. ಅವನು ೧೮೬೮ರಲ್ಲಿ ಮುಖ್ಯಮಂತ್ರಿಯ ಪದವಿಗೆ ಬಂದನು.

ಐರ್ಲೆಂಡಿನ ಸಮಸ್ಯೆಗಳು : ಫಿನಿಯನ್ ಚಳುವಳಿ ಐರ್ಲೆಂಡಿ ನಲ್ಲಿ ಮತ್ತು ಇಂಗ್ಲೆಂಡಿನಲ್ಲಿ ಅನೇಕ ಹಿಂಸಾತ್ಮಕ ಕೃತ್ಯಗಳನ್ನೆಸಗುವುದ ರಲ್ಲಿ ತೊಡಗಿತ್ತು. ಐರ್ಲೆಂಡಿನ ಸ್ಥಿತಿಯನ್ನು ಸುಧಾರಿಸುವುದಕ್ಕಾಗಿ ಕಂಕಣ ತೊಟ್ಟ ಬ್ರಿಟಿಷ್ ರಾಜಕಾರಿಣಿ ಗ್ಲಾಡ್‌ಸ್ಟನ್ ಪಾರ್ಲಿಮೆಂಟಿನಲ್ಲಿ ಐರ್ಲೆಂಡಿನ ಉನ್ನತಿಗಾಗಿ ಎರಡು ಮಸೂದೆಗಳನ್ನು ತಂದನು.

ಐರ್ಲೆಂಡಿನಲ್ಲಿದ್ದ ಪ್ರಾಟೆಸ್ಟೆಂಟ್ ಚರ್ಚ್ ಐರ್ಲೆಂಡಿನ ಹಣವನ್ನು ಅಪಾರವಾಗಿ ಶೇಖರಿಸಿತ್ತು. ಅದರ ದತ್ತಿಗಳಲ್ಲಿ ಕೆಲವು ಭಾಗಗಳನ್ನು ಕಿತ್ತುಕೊಂಡು ಐರ್ಲೆಂಡಿನಲ್ಲಿ ಬಡವರ ಪರಿಹಾರಕ್ಕಾಗಿಯೂ ಮತ್ತು ವಿದ್ಯಾಭ್ಯಾಸಕ್ಕೂ ಉಪಯೋಗವಾಗುವಂತೆ ಗ್ಲಾಡ್‌ಸ್ಟನ್ ಕಾನೂನನ್ನು ತಂದನು. ಇದರಿಂದ ಒಂದು ದೊಡ್ಡ ಸಮಸ್ಯೆಯು ಪರಿಹಾರವಾಯಿತು. ಐರ್ಲೆಂಡಿನ ಪ್ರಜೆಗಳಲ್ಲಿ ಹೆಚ್ಚು ಮಂದಿ ರೋಮನ್ ಕ್ಯಾಥಲಿಕರಾಗಿದ್ದರು. ಪ್ರಾಟೆಸ್ಟೆಂಟರ ಸಂಖ್ಯೆ ಅಲ್ಪ. ಆದರೂ ಪ್ರಾಟೆಸ್ಟೆಂಟ್ ಚರ್ಚ್ ಐರ್ಲೆಂಡಿನ ಹಣದ ಪೈಕಿ ಹೆಚ್ಚು ಭಾಗವನ್ನು ಹೊಂದಿತ್ತು.

ಮತೀಯ ಪ್ರಶ್ನೆಯ ಜೊತೆಗೆ ಐರ್ಲೆಂಡಿನಲ್ಲಿ ಮತ್ತೊಂದು ದೊಡ್ಡ ಪ್ರಶ್ನೆ ತೀವ್ರ ತೊಡಕನ್ನುಂಟುಮಾಡಿತ್ತು. ಅದು ಜಮೀನಿನ ಪ್ರಶ್ನೆ. ಕ್ರಾಮ್‌ವೆಲ್ಲನ ಕಾಲದಿಂದ ಐರ್ಲೆಂಡಿನ ಜಮೀನು ಕ್ಯಾಥಲಿಕರ ಕೈ ತಪ್ಪಿ ಇಂಗ್ಲಿಷ್ ಪ್ರಾಟೆಸ್ಟೆಂಟ್‌ರ ಕೈ ಸೇರಿತ್ತಷ್ಟೆ. ಈ ಜಮೀನುದಾರರು ಇಂಗ್ಲೆಂಡಿನಲ್ಲೆ ಇದ್ದುಕೊಂಡು (Absentee Land Lordism) ಅದರಿಂದ ಬಂದ ಉತ್ಪತ್ತಿಯನ್ನು ತೆಗೆದುಕೊಳ್ಳುತ್ತಿದ್ದರು. ಜಮೀನು ಗಳನ್ನು ಹಸನುಮಾಡಿ, ಹೆಚ್ಚು ಬೆಳೆಯನ್ನು ತೆಗೆದರೆ, ಜಮೀನುದಾರರು

ಗುತ್ತಿಗೆಯನ್ನು ಹೆಚ್ಚಿಸುತ್ತಿದ್ದರು, ಇಲ್ಲದಿದ್ದರೆ ಜಮೀನು ಅಭಿವೃದ್ಧಿಯಾದ ಕೂಡಲೆ ಅವನನ್ನು ಓಡಿಸುತ್ತಿದ್ದರು. ಅವನು ಜಮೀನನ್ನು ಉತ್ತಮಪಡಿಸಿದುದರ ಲಾಭ ಅವನಿಗೆ ಸಿಗುತ್ತಿರಲಿಲ್ಲ. ೧೮೭೦ ರಲ್ಲಿ ಐರ್ಲೆಂಡಿನ ಜಮೀನಿನ ಕಾನೂನನ್ನು ಗ್ಲಾಡ್‌ಸ್ಟನ್ ತಂದು ಜಮೀನು ಸಾಗುವಳಿ ಮಾಡುತ್ತಿದ್ದ ಐರ್ಲೆಂಡಿನ ರೈತರಿಗೆ ಸಹಾಯ ಮಾಡಲು ಪ್ರಯತ್ನಿಸಿದನು. ಆದರೆ ಜಮೀನುದಾರರು ಬಲವಾಗಿದ್ದುದರಿಂದ ಈ ಕಾನೂನು ಅಷ್ಟೇನೂ ಪ್ರಯೋಜನಕಾರಿಯಾಗಲಿಲ್ಲ. ಆದರೆ ಜಮೀನು ಸಾಗುವಳಿಯ ವಿಚಾರದಲ್ಲಿ ಕಾನೂನು ಅಗತ್ಯವೆಂಬುದನ್ನು ಇದು ತೋರಿಸಿಕೊಟ್ಟದ್ದುದರಿಂದ ಒಂದು ರೀತಿಯಲ್ಲಿ ಇದು ಮಹತ್ವಪೂರ್ಣವೆಂದು ಹೇಳಬಹುದು. ಹತ್ತು ವರ್ಷಗಳ ನಂತರ ಗ್ಲಾಡ್‌ಸ್ಟನ್ ಪುನಃ ಜಮೀನಿನ ಪ್ರಶ್ನೆಯನ್ನು ಪರಿಶೀಲಿಸಬೇಕಾಯಿತು.

೧೮೭೦ ರ ವಿದ್ಯಾಭ್ಯಾಸದ ಕಾನೂನು : ಇಂಗ್ಲೆಂಡ್ ವಿದ್ಯಾಭ್ಯಾಸದಲ್ಲಿ ಜರ್ಮನಿ ಮತ್ತು ಇತರ ಯೂರೋಪಿಯನ್ ರಾಷ್ಟ್ರಗಳಿಗಿಂತ ಹಿಂದೆ ಬಿದ್ದಿತು. ೧೮೬೭ ನೇ ಸುಧಾರಣಾ ಕಾನೂನು ಇಂಗ್ಲೆಂಡಿನಲ್ಲಿ ಕಾರ್ಮಿಕರಿಗೆ (Working Class) ಮತದಾನದ ಹಕ್ಕನ್ನು ಕೊಟ್ಟಿತ್ತಷ್ಟೆ. ಇದರಿಂದ ಅವರಿಗೆ ರಾಜಕೀಯದಲ್ಲಿ ಭಾಗವಹಿಸಲು ತಕ್ಕ ಶಕ್ತಿ ಬರಲು, ಅವರಿಗೂ ಮತ್ತು ಅವರ ಮಕ್ಕಳಿಗೂ ಸರಿಯಾದ ವಿದ್ಯಾಭ್ಯಾಸ ಸಿಗದಿದ್ದರೆ ದೇಶದಲ್ಲಿ ಅವನತಿ ತೋರಬಹುದೆಂಬ ಭೀತಿ ಅನೇಕರಲ್ಲಿ ಹುಟ್ಟಿತು. "ನಮ್ಮ ಒಡೆಯರನ್ನು (ಅಂದರೆ ೧೮೬೭ ರ ಕಾನೂನಿನಿಂದ ಮತದಾನ ಪಡೆದವರನ್ನು) ವಿದ್ಯಾವಂತರನ್ನಾಗಿ (Educate our Masters) ಮಾಡಬೇಕೆಂಬ" ರಾಬರ್ಟ್‌ಲೋವಿನ (Robert Lowe) ಸಂಕಲ್ಪ ಜನಗಳ ಮತ್ತು ಸರ್ಕಾರದ ಗಮನವನ್ನು ಸೆಳೆದಿತು. ಈ ಕಾನೂನು ಇಂಗ್ಲೆಂಡಿನ ಚರ್ಚು ನಡೆಸುತ್ತಿದ್ದ ಪಾಠಶಾಲೆಗಳಿಗೆ ಹಣ ಸಹಾಯವನ್ನು ನೀಡಿದುದಲ್ಲದೆ ಬೇರೆ ಹೊಸ ಪಾಠಶಾಲೆಗಳನ್ನು ಸ್ಥಾಪಿಸಿ, ಅಲ್ಲಲ್ಲಿನ ಸ್ಥಳೀಯ ಪ್ರದೇಶಗಳಲ್ಲಿ ಚುನಾಯಿಸಲ್ಪಟ್ಟ ಸಮಿತಿಗಳು ಇವುಗಳ ಮೇಲ್ವಿಚಾರಣೆಯನ್ನು ನೋಡಿಕೊಳ್ಳಬೇಕೆಂದು ವಿಧಿಸಿತು. ಆಯಾ ಸ್ಥಳೀಯಪ್ರದೇಶಗಳಿಂದ ಬಂದ ತೆರಿಗೆಯ ಹಣದಿಂದ (Local rates)

ಈ ಪಾಠಶಾಲೆಗಳ ವೆಚ್ಚವನ್ನು ಒದಗಿಸಲಾಯಿತು. ಈ ಕಾನೂನನ್ನು ರಗ್ಬಿಯ ಮುಖ್ಯ ಉಪಾಧ್ಯಾಯ (Head Master) ಡಾ|| ಆರ್‌ನಾಲ್ಡ್ ರವರ ಅಳಿಯ ಡಬ್ಲ್ಯು ಇ. ಫಾರ್‌ಸ್ಟರ್ ಎಂಬುವನು ರಚಿಸಿದನು. ೧೮೭೦-೧೮೯೦ ರ ವೇಳೆಗೆ ಪಾಠಶಾಲೆಗಳಿಗೆ ಹೋಗುವ ಮಕ್ಕಳ ಸರಾಸರಿ ಸಂಖ್ಯೆ ಒಂದೂಕಾಲು ಮಿಲಿಯನ್ನಿನಿಂದ ನಾಲ್ಕೂವರೆ ಮಿಲಿಯನ್ನಿಗೇರಿತು. ೧೮೮೦ ರಲ್ಲಿ ಕಡ್ಡಾಯ ಪ್ರಾಥಮಿಕ ಶಿಕ್ಷಣದ (Compulsory Primary Education) ಕಾನೂನು ಬಳಕೆಗೆ ಬಂದಿತು. ೧೮೯೧ ರಲ್ಲಿ ಅದು ಶುಲ್ಕರಹಿತವಾಗಿರಬೇಕೆಂದು (Free Primary Education) ವಿಧಾಯಕವಾಯಿತು.

೧೮೭೧ರಲ್ಲಿ ಗ್ಲಾಡ್‌ಸ್ಟನ್ ಮಂತ್ರಿಮಂಡಲವು ವಿಶ್ವವಿದ್ಯಾನಿಲಯದ ಅಧ್ಯಾಪಕರನ್ನು ಮತ್ತು ಸಂಶೋಧಕರನ್ನು (fellows) ನಿಯಮಿಸುವಾಗ ಮತೀಯ ಭಾವನೆ ಇರಕೂಡದೆಂದು ವಿಧಿಸಿತು.

ಸರ್ಕಾರದ ಉನ್ನತ ಉದ್ಯೋಗಗಳಿಗೆ(Civil Service) ಮಂತ್ರಿಮಂಡಲದ, ಮತ್ತು ಪಾರ್ಲಿಮೆಂಟಿನ ಸದಸ್ಯರೇ ಮೊದಲಾದ ಪ್ರಮುಖರ ಪ್ರಭಾವಕ್ಕೂ ಮತ್ತು ಕೃಪೆಗೂ ಪಾತ್ರರಾದವರನ್ನು ಮಾತ್ರ(Patronage) ಆರಿಸಲಾಗುತ್ತಿತ್ತು. ಕೆಲವು ಕುಟುಂಬಗಳು ಮಾತ್ರ ಈ ಅದೃಷ್ಟವನ್ನು ಪಡೆದಿದ್ದವು. ೧೮೫೩ರಲ್ಲಿ ಇಂಡಿಯನ್ ಸಿವಿಲ್ ಸರ್ವೀಸ್ (I.C.S.) ಸ್ಪರ್ಧೀಯ ಪರೀಕ್ಷೆಗಳ ಫಲಿತಾಂಶದ ಮೇಲೆ ನಿಶ್ಚಯಿಸಲ್ಪಡುತ್ತಿದ್ದರೂ, (Competitive Examination), ವೈಟ್‌ಹಾಲಿನ ಮುಖ್ಯ ಕಛೇರಿಗಳಲ್ಲಿ ಈ ತತ್ವಕ್ಕೆ ಅಷ್ಟೇನೂ ಪುರಸ್ಕಾರವಿರಲಿಲ್ಲ. ಈ ಹೊಸ ತತ್ವದ ಪ್ರತಿಷ್ಠಾಪಕ ಸರ್ ಚಾರ್ಲ್ಸ್ ಟ್ರೆವಿಲಿಯನ್ (೧೮೦೭-೧೮೮೬) ಎಂದು ಹೇಳಬಹುದು. ೧೮೫೫ ರಿಂದಾಚೆಗೆ ನಿಧಾನವಾಗಿ ಸಾರ್ವಜನಿಕ ಕಚೇರಿಯ ಕೆಲಸಗಳನ್ನು ಭರ್ತಿಮಾಡುವಾಗ ಈ ಹೊಸ ತತ್ವವನ್ನು ಆಚರಣೆಗೆ ತರಲಾಯಿತು. ಕೊನೆಗೆ ೧೮೭೦ರಲ್ಲಿ ಗ್ಲಾಡ್‌ಸ್ಟನ್ ಇಂಗ್ಲೆಂಡಿನಲ್ಲಿ ಸಿವಿಲ್ ಸರ್ವೀಸ್ ಕೆಲಸಗಳಿಗೆ ಸ್ಪರ್ಧೀಯ ಪರೀಕ್ಷೆಗಳಲ್ಲಿ ಉತ್ತೀರ್ಣರಾದವರೇ ಅರ್ಹರೆಂದು ಕಾನೂನಿನ ಮೂಲಕ ಪ್ರಕಟಿಸಿದನು. ಸಾಮಾಜಿಕ ಅಂತಸ್ತು ಅಥವಾ ಶ್ರೀಮಂತರ ಪ್ರಭಾವ ಇವುಗಳ ಬದಲು

ತರಪೇತು ಹೊಂದಿದ ಬುದ್ಧಿ ಶಕ್ತಿಯು ಉದ್ಯೋಗಗಳಿಸಲು ಯುವಕನ ರಹದಾರಿಯಾಯಿತು. ಇದರಿಂದ ವಿಶ್ವವಿದ್ಯಾನಿಲಯಗಳಲ್ಲಿಯೂ ಮತ್ತು ಸರ್ಕಾರದ ಕಛೇರಿಗಳಲ್ಲಿಯೂ ದಕ್ಷತೆಯು ಹೆಚ್ಚಿ ರಾಷ್ಟ್ರಕ್ಕೆ ದೊಡ್ಡ ಉಪಕಾರವಾಯಿತು.

ಸೈನಿಕ ಸುಧಾರಣೆ : ಮೇಲೆ ಹೇಳಿದ ತತ್ವವು ಸೈನಿಕ ವರ್ಗಗಳಿಗೂ ಅನ್ವಯಿಸಲು ಪ್ರಾರಂಭವಾದುದರಲ್ಲಿ ಅಚ್ಚರಿಯೇನೂ ಇಲ್ಲ. ಸೈನ್ಯದಲ್ಲಿ ಲೆಫ್ಟಿನೆಂಟ್ ಹುದ್ದೆ ಮತ್ತು ಅದಕ್ಕೆ ಮೇಲ್ಪಟ್ಟ ಹುದ್ದೆಗಳನ್ನು ಕೆಳಗಿನ ಅಧಿಕಾರಿ (Subordinate Officers) ಮೇಲಿನ ಅಧಿಕಾರಿಗಳಿಗೆ ಹಣಕೊಟ್ಟು ಕೊಂಡುಕೊಳ್ಳುವ ಮತ್ತು ಮಾರುವ ಪದ್ಧತಿ ಆಚರಯಲ್ಲಿತ್ತು. ಮೂರನೆ ವಿಲಿಯಂ ಇದನ್ನು ತಾತ್ಕಾಲಿಕವಾಗಿ ತಪ್ಪಿಸಿದ್ದರೂ. ಆನಿಯ ಕಾಲದಿಂದಾಚೆಗೆ ಪುನಃ ಈ ಪದ್ಧತಿಯ ಹಾವಳಿ ಪ್ರಾರಂಭವಾಯಿತು. ಬಡವನಾದ ಸೈನಿಕನಿಗೆ ಯುದ್ಧ ಒದಗದಿದ್ದರೆ ಬಡ್ತಿ ಸಿಕ್ಕುವುದೇ ಕಷ್ಟವಾಗುತ್ತಿತ್ತು. ಅಷ್ಟೇ ಅಲ್ಲದೆ ಅನೇಕ ವೇಳೆ ಹುದ್ದೆಯನ್ನು ಕೊಳ್ಳಲು ಹಣವನ್ನು ಸಾಲವಾಗಿ ತೆಗೆದುಕೊಳ್ಳಬೇಕಾಗುತ್ತಿತ್ತು. ಅಂತಹವರು ಯುದ್ಧದಲ್ಲಿ ಮಡಿದರಂತೂ ಅವರ ಕುಟುಂಬದ ಪರಿಸ್ಥಿತಿ ಅತ್ಯಂತ ಶೋಚನೀಯವಾಗುತ್ತಿದ್ದುದಲ್ಲದೆ, ಈ ಪದ್ಧತಿಯು ಯುದ್ಧದ ದಕ್ಷತೆಯನ್ನೂ ಕಡಮೆ ಮಾಡುತ್ತಿತ್ತು. ಯೋಗ್ಯತೆಗೆ ಪುರಸ್ಕಾರವಿಲ್ಲದಂತಾಗಿ ಅನೇಕರು ಮೇಲಿನ ಹಂತಗಳಿಗೆ ಹೋಗಲವಕಾಶವೇ ಇರಲಿಲ್ಲ.

ಗ್ಲಾಡ್‌ಸ್ಟನ್ ಮಂತ್ರಿ ಸಂಪುಟದಲ್ಲಿದ್ದ ಕಾರ್ಡ್‌ವೆಲ್ ಈ ಪದ್ಧತಿಯನ್ನು ತೊಡೆದುಹಾಕಿದನು. ಸೈನ್ಯದಲ್ಲಿದ್ದ ದ್ವಿಮುಖ ಆಡಳಿತವನ್ನೂ ಅವನು ರದ್ದುಮಾಡಿದನು. ಸೈನ್ಯಾಧಿಪತಿಯೊಂದು ಕಡೆ, ಮತ್ತೊಂದು ಕಡೆ ಯುದ್ಧ ಕಾರ್ಯದರ್ಶಿ ಸೈನ್ಯದ ಮೇಲಿನ ಹತೋಟಿಯನ್ನು ಹೊಂದಿದ್ದರು. ಇದರಿಂದ ಸೈನ್ಯದ ಆಡಳಿತದಲ್ಲಿ ಅನೇಕ ತೊಂದರೆಗಳು ಉದ್ಭವಿಸಿದುದರಿಂದ, ಜವಾಬ್ದಾರಿ ಪೂರ್ಣವಾಗಿ ಯುದ್ಧ ಕಾರ್ಯದರ್ಶಿಯದಾಗಿ ಇರಬೇಕೆಂದೂ, ಅವನ ಸಹಾಯಕ್ಕೆ ಒಂದು ಸೈನಿಕಸಮಿತಿ ಇರಬೇಕೆಂದೂ ಕಾರ್ಡ್‌ವೆಲ್ ವಿಧಿಸಿದನು.

ಬ್ರಿಟಿಷ್ ಸೈನ್ಯದಲ್ಲಿ ಇಪ್ಪತ್ತು ವರ್ಷಗಳ ಹಿಂದೆ ಸೇರಿದವರೂ ಕೂಡಾ ಇದ್ದುದರಿಂದ ಅದರಲ್ಲಿ ಹೆಚ್ಚು ಮಂದಿ ಸೈನಿಕ ವೃತ್ತಿಗೆ ಅರ್ಹರಾಗಿರಲಿಲ್ಲ. ಯುದ್ಧಕಾಲ ಬಂದಾಗ ಮೀಸಲಾದ (Reserve) ಪಡೆಯೇ ಇರಲಿಲ್ಲ. ಕಾರ್ಡ್‌ವೆಲ್, ಸೈನಿಕನ ಸೇವೆಯ ಅವಧಿ ಹನ್ನೆರಡುವರ್ಷ ಎಂದು ಗೊತ್ತು ಮಾಡಿ, ಅದರಲ್ಲಿ ಮೀಸಲು ಪಡೆಯಲ್ಲಿ ಕೆಲವು ಕಾಲ ಅವನು ಸೇವೆ ಸಲ್ಲಿಸ ಬೇಕೆಂದೂ ಗೊತ್ತುಮಾಡಿದನು.

ಔದ್ಯೋಗಿಕ ಸಂಘಗಳ ಕಾನೂನು (Trade Union Act. ೧೮೭೧): ಈ ಕಾನೂನು ಔದ್ಯೋಗಿಕ ಸಂಘಗಳಿಗೆ ರಕ್ಷಣೆಯನ್ನು ಕೊಟ್ಟಿತು. ಪ್ರತಿಯೊಂದು ಔದ್ಯೋಗಿಕ ಸಂಘವೂ ಇದರಿಂದ ದಾಖಲು ಮಾಡಿಸಕೊಳ್ಳಬೇಕಾಯಿತು. ಆದರೆ ಮುಷ್ಕರದ ಕಾಲದಲ್ಲಿ ಈ ಸಂಘಗಳಿಗಿದ್ದ ಅಧಿಕಾರವು ಮೊಟಕಾಯಿತು. ಅಂದರೆ ಮುಷ್ಕರಕಾರರು ಇತರ ಕೆಲಸಗಾರರನ್ನು ತಡೆಯುವುದು (ಪಿಕೆಟಿಂಗ್) ನ್ಯಾಯಬದ್ಧವಲ್ಲವೆಂದು ಈ ಕಾನೂನು ವಿಧಿಸಿತು. ಇದರಿಂದ ಕಾರ್ಮಿಕರಿಗೆ ಗ್ಲಾಡ್‌ಸ್ಟನ್ ಸರ್ಕಾರದ ಮೇಲೆ ಸಿಟ್ಟುಬಂದು ೧೮೭೪ ರ ಮಹಾಚುನಾವಣೆಯಲ್ಲಿ ಅವನ ಸರ್ಕಾರವನ್ನೇ ಉರುಳಿಸಿದರು. ಸಮಯ ಕಾಯುತ್ತಿದ್ದ ಡಿಸ್ರೇಲಿ ತಾನು ಅಧಿಕಾರಕ್ಕೆ ಬಂದ ಒಂದೆರಡು ವರ್ಷಗಳಲ್ಲಿ ಪಿಕೆಟಿಂಗ್ ಅಕ್ರಮವಲ್ಲವೆಂದು ಮಾಡಿದನು.

ಒಟ್ಟಿನಲ್ಲಿ ಗ್ಲಾಡ್‌ಸ್ಟನ್ನನ ಮೊದಲನೆ ಮಂತ್ರಿತ್ವದಲ್ಲಿಯೂ ಮತ್ತು ಅನಂತರದ ಕೆಲವು ವರ್ಷಗಳಲ್ಲಿಯೂ ಅನೇಕ ಅತ್ಯಂತ ಉಪಯುಕ್ತವಾದ ಕಾನೂನುಗಳು ಜಾರಿಗೆ ಬಂದುದ್ದರಿಂದ ಇದಕ್ಕೆ "ಎರಡನೆ ಮಹಾ ಸುಧಾರಣ ಯುಗ" ವೆಂದು ಹೇಳುವುದುಂಟು.

**ವಿದೇಶಾಂಗ ನೀತಿ**: ಈ ಮಧ್ಯೆ ಫ್ರಾನ್ಸ್ ಮತ್ತು ಜರ್ಮನಿ (Franco Prussian War, ೧೮೭೦) ರಣರಂಗಕ್ಕೆ ಪ್ರವೇಶ ಮಾಡಿದವು. ಬಿಸ್‌ಮಾರ್ಕ್ ಮತ್ತು ಮೂರನೆ ನೆಪೋಲಿಯನ್ ಪ್ರತಿಕಕ್ಷಿಗಳಾಗಿದ್ದರು. ಬಿಸ್‌ಮಾರ್ಕ್, ಆಲ್‌ಸೇಸ್ ಮತ್ತು ಲೋರೇನ್ ಪ್ರಾಂತ್ಯಗಳನ್ನು ಜರ್ಮನಿಗೆ ಗಳಿಸಲು ಕಾತುರನಾಗಿದ್ದನು. ಈ ಯುದ್ಧದಲ್ಲಿ

ಇಂಗ್ಲೆಂಡ್ ಸೇರಲು ಇಷ್ಟವುಳ್ಳದ್ದಾಗಿರಲಿಲ್ಲ. ಆದರೆ ಫ್ರಾನ್ಸ್ ಮತ್ತು ಜರ್ಮನಿ, ಬೆಲ್ಜಿಯಮ್ಮಿನ ತಾಟಸ್ಥ್ಯತೆಯನ್ನು ರಕ್ಷಿಸುವಂತೆ ಗ್ಲಾಡ್‌ಸ್ಟನ್ ಅವುಗಳಿಂದ ವಾಗ್ದಾನ ಪಡೆದನು.

ಅಲಬಾಮ ಪರಿಹಾರದಿಂದ (೧೮೭೨) ಇಂಗ್ಲೆಂಡಿಗೂ ಮತ್ತು ಅಮೆರಿಕಾವಿಗೂ ಒದಗಿದ್ದ ಮನಸ್ತಾಪವನ್ನು ತೊಡೆದುಹಾಕಿ, ಅವುಗಳ ಸ್ನೇಹವನ್ನು ಬಲಪಡಿಸಿದುದಲ್ಲದೆ, ಅಂತರ ರಾಷ್ಟ್ರೀಯ ನ್ಯಾಯತೀರ್ಪಿಗೆ ತಲೆಬಾಗುವ ಸಂಪ್ರದಾಯವನ್ನೂ ಗ್ಲಾಡ್‌ಸ್ಟನ್ ಸರ್ಕಾರ ಹಾಕಿಕೊಟ್ಟಿತು.

ಸಾಮಾನ್ಯವಾಗಿ ಒಂದು ಮಂತ್ರಿ ಮಂಡಲವು ಎಷ್ಟು ಹೆಚ್ಚು ಕೆಲಸ ಮಾಡುವುದೂ ಅಷ್ಟು ಮತಗಳನ್ನು (Votes) ಕಳೆದು ಕೊಳ್ಳುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಗ್ಲಾಡ್‌ಸ್ಟನ್ ಮಂತ್ರಿಮಂಡಲ (೧೮೬೮–೭೪) ಹೆಚ್ಚು ಯಶಸ್ವಿಯಾಗಿ ಕೆಲಸಮಾಡಿತು. ಡಿಸ್ರೇಲಿ ಅದು ಪ್ರತಿಯೊಂದು ಕಸಬಿನಲ್ಲಿಯೂ ತಲೆಹಾಕಿ ತೊಂದರೆಗೀಡು ಮಾಡಿದುದಲ್ಲದೆ ಪ್ರತಿಯೊಂದು ಬಾಬಿನಲ್ಲಿಯೂ ಚಿಂತೆ ತಲೆದೋರುವಂತೆ ಮಾಡಿತೆಂದು ಟೀಕಿಸಿ *ಗ್ಲಾಡ್ ಸ್ಟನ್ ಮತ್ತು ಅವನ ಅನುಯಾಯಿಗಳು "ಬರಿದಾದ ಜ್ವಾಲಾಮುಖಿ" ಗಳೆಂದು (Exlausted valcanoes) ಹೇಳಿದನು.

ಐರ್ಲೆಂಡಿನ ಪ್ರಾಟೆಸ್ಟೆಂಟ್ ಚರ್ಚಿನ ಅಪಾರವಾದ ಹಣವು ಬಡವರ ಸಹಾಯಕ್ಕೂ ಮತ್ತು ವಿಧ್ಯಾಭ್ಯಾಸಕ್ಕೂ ವಿನಿಯೋಗವಾಗುವಂತೆ ಮಾಡಿದ್ದು ಚರ್ಚಿನ ವರ್ಗಗಳಿಗೆ ಕೋಪವನ್ನು ತಂದಿತ್ತು. ಐರ್ಲೆಂಡಿನ ಜಮೀನಿನ ಕಾನೂನು ಇಂಗ್ಲೆಂಡಿನ ಜಮೀನುದಾರರ ತಾಳ್ಮೆಯನ್ನು ಕಳೆದಿತ್ತು. ಸೈನಿಕ ಸುಧಾರಣೆಗಳಿಂದ ಕೆಲವು ಸೈನಿಕ ಅಧಿಕಾರಿಗಳಿಗೆ ಅಸಮಾಧಾನ ಉಂಟಾಯಿತು. ವಿಧ್ಯಾಭ್ಯಾಸದ ಕಾನೂನು ಇಂಗ್ಲಿಷ್ ಚರ್ಚಿಗೆ ಸೇರಿದ ಪಾಠಶಾಲೆಗಳಿಗೆ ಹೆಚ್ಚು ಹಣ ಒದಗಿಸಿತೆಂದು ಪ್ಯೂರಿಟನ್ನರು (Dissenters) ಕುಪಿತರಾದರು. ಗುಟ್ಟಾಗಿ ಮತದಾನ ಮಾಡುವಂತೆ ಏರ್ಪಡಿಸಿದ ಕಾನೂನಿಂದ ಮತದಾನ ಮಾಡುವವರ

---

* They have harassed every profession and worried every interest-Disrael,

ಸ್ವಾತಂತ್ರ್ಯಕ್ಕೆ ಧಕ್ಕೆ ತಂದಿತೆಂದು ಕೆಲವರು ಅಸಂತುಷ್ಟರಾದರು. ೧೮೭೨ ರಲ್ಲಿ ಸಾರಾಯಿ ವ್ಯಾಪಾರದ ಅಪ್ಪಣೆಯ ಕಾನೂನು (Licensing Bill, ೧೮೭೨) ಸಾರಾಯಿ ಗೃಹಗಳ ಹತೋಟಿ, ಅವುಗಳು ತೆರದಿರುವ ಕಾಲ ಮೊದಲಾದ ವಿಷಯಗಳನ್ನು ಕ್ರಮಪಡಿಸಿದಾಗ ಸಾರಾಯಿ ವ್ಯಾಪಾರಗಾರರು ಸರ್ಕಾರವನ್ನು ಖಂಡಿಸಿದರು. ಮತ್ತೊಂದು ಕಡೆ, ಈ ಕಾನೂನು ತೀವ್ರ ದುರ್ಬಲವಾದುದ್ದೆಂದು ಮಧ್ಯಪಾನ ನಿರೋಧಕರು ಖೇದಗೊಂಡರು. ಗ್ಲಾಡ್‌ಸ್ಟನ್ ಮಂತ್ರಿತ್ವದ ವಿದೇಶಾಂಗ ನೀತಿ, ಪಾಮರ್‌ಸ್ಟನ್ ಇದ್ದಾಗ ಯೂರೋಪಿನಲ್ಲಿ ಇಂಗ್ಲೆಂಡಿಗಿದ್ದ ಗೌರವ, ಪ್ರತಿಷ್ಠೆ ಮತ್ತು ಮಹತ್ವಗಳನ್ನು ತೊಡೆದುಹಾಕಿತೆಂದು ಅನೇಕರು ಮಂತ್ರಿಮಂಡಲದ ಮೇಲೆ ಸಿಟ್ಟಾದರು. ಅಮೆರಿಕಾ ದೇಶಕ್ಕೆ ೩,೦೦೦,೦೦೦ ಪೌಂಡ್ ಪರಿಹಾರ ದ್ರವ್ಯ ಅಲಬಾಮಾ ವ್ಯವಹಾರದಲ್ಲಿ ಗ್ಲಾಡ್‌ಸ್ಟನ್ ಕೊಟ್ಟಿದ್ದು ತಪ್ಪೆಂದು ಕೆಲವರು ವಾದಿಸಿದರು. ಹಾಗಾಗದಿದ್ದರೆ ಯುದ್ಧವು ಒದಗಿ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಹಣ ಇಂಗ್ಲೆಂಡಿಗೆ ಖರ್ಚಾಗುತ್ತಿತ್ತೆಂದು ಅವರಿಗೆ ತಿಳಿಯಲಿಲ್ಲ.

ಎಲ್ಲಾ ಕಡೆಯಿಂದಲೂ ಹೀಗೆ ಮಂತ್ರಿಮಂಡಲವು ದೂರಿಗೆ ಸಿಕ್ಕಿತು. ಸಮಯ ಕಾಯುತ್ತಿದ್ದ ಡಿಸ್ರೇಲಿ ೧೮೭೪ ರ ಮಹಾ ಚುನಾವಣೆಯಲ್ಲಿ ಲಿಬರಲ್ ಪಕ್ಷವನ್ನು (Liberal Party) ಸೋಲಿಸಿ ತನ್ನ ಸರ್ಕಾರವನ್ನು ಸ್ಥಾಪಿಸಿದನು.

ಗ್ಲಾಡ್‌ಸ್ಟನ್ನನ ಎರಡನೆ ಮಂತ್ರಿತ್ವ : ("Ministry of all Troubles" ೧೮೮೦–೮೫): ಮೊದಲಿನಿಂದಲೂ ಗ್ಲಾಡ್‌ಸ್ಟನ್ನನ ಎರಡನೆ ಮಂತ್ರಿಮಂಡಲವು ಎಡರು ತೊಡರುಗಳಿಂದ ಕೂಡಿತ್ತು. ಮಂತ್ರಿಮಂಡಲದಲ್ಲಿದ್ದವರೂ ಒಂದೇ ಗುಂಪಿನವರಾಗಲಿ ಅಥವಾ ಒಂದೇ ಅಭಿಪ್ರಾಯದಿಂದ ಕೂಡಿದವರಾಗಲಿ ಆಗಿರಲಿಲ್ಲ. ಆದರೆ ಎಲ್ಲರೂ ಅವನನ್ನು ಜಿ. ಓ. ಎಂ. (Grand Old Man) ಎಂದು ಗೌರವಿಸುತ್ತಿದ್ದರು.

ಹಳ್ಳಿ ಪ್ರದೇಶಗಳ (Rural Districts) ನಿವಾಸಿಗಳಿಗೆ ಮತದಾನದ ಹಕ್ಕನ್ನು (Country Franchise Act, ೧೮೮೪) ೧೮೮೪ ರಲ್ಲಿ ಈ ಸರ್ಕಾರವು ನೀಡಿತೆಂದು ಹಿಂದೆಯೇ ತಿಳಿಸಿದೆ.

ಟ್ರಾನ್ಸ್‌ವಾಲ್ ಗಣರಾಜ್ಯದ ಸ್ವಾತಂತ್ರ್ಯವನ್ನು ಡಿಸ್ರೇಲಿ ಕಸಿದು ಕೊಂಡಿದ್ದನಷ್ಟೆ. ಅದನ್ನು ಗ್ಲಾಡ್‌ಸ್ಟನ್ ವಿರೋಧಿಸಿ ಚುನಾವಣೆಯ ಕಾಲದಲ್ಲಿ ಖಂಡಿಸಿದ್ದನು. ಆದರೆ ತಾನು ಮಂತ್ರಿಯಾದ ಮೇಲೆ ಅದಕ್ಕೆ ಅಷ್ಟು ಗಮನ ಕೊಡಲಿಲ್ಲ. ಬೋಯರ್ ಜನಾಂಗವು ಸ್ವಾತಂತ್ರ್ಯಕ್ಕಾಗಿ ಹೊಡೆದಾಡುವ ಗೋಜಿಗೆ ಹೋಗುವುದಿಲ್ಲವೆಂದು ಅವನಿಗೆ ಹೇಳಲಾಗಿತ್ತು. ಆದರೆ, ಬೋಯರ್ ಜನಾಂಗ ಬ್ರಿಟಿಷ್ ಸೈನ್ಯದಮೇಲೆ ಬಿದ್ದು ಮಜುಬ ಹಿಲ್ (Majuba hill) ಕದನದಲ್ಲಿ ಸೋಲಿಸಿತು. ಬ್ರಿಟಿಷ್ ಸರ್ಕಾರವು ಟ್ರಾನ್ಸ್‌ವಾಲ್ ಸ್ವಾತಂತ್ರ್ಯವನ್ನು ಕಸಿದುಕೊಳ್ಳುವುದು ತನ್ನ ಘನತೆಗೆ ಸರಿಯಲ್ಲವೆಂದು ಗ್ಲಾಡ್‌ಸ್ಟನ್ ಮನಗಂಡಿದ್ದನು. ಆದರೆ, ಇದಕ್ಕಾಗಿ ಸೋತು ಅವಮಾನಪಟ್ಟರೂ ಸರಿಯಲ್ಲವೆಂಬುದೂ ವಿದಿತವಾಗಿ, ಮಂತ್ರಿ ಸಂಪುಟದಲ್ಲೆ ಈ ವಿಷಯದಲ್ಲಿ ಒಮ್ಮತವಿಲ್ಲದೆ ಕೊನೆಗೆ ಗ್ಲಾಡ್‌ಸ್ಟನ್ ಟ್ರಾನ್ಸ್‌ವಾಲಿಗೆ, ಪ್ರಿಟೋರಿಯ ಕರಾರಿನ ಪ್ರಕಾರ (Convention of Pretoria, ೧೮೮೧) ಸ್ವಾತಂತ್ರ್ಯವನ್ನು ಕೊಟ್ಟು, ಅದು ಬೇರೆ ಯಾವ ಯೂರೋಪಿಯನ್ ಜನಾಂಗದೊಡನೆ ವಿದೇಶಾಂಗ ವ್ಯವಹಾರ ಮಾಡುವಾಗ ಇಂಗ್ಲೆಂಡಿನ ಆಧೀನಕ್ಕೆ ಒಳಪಟ್ಟಿರಬೇಕೆಂದು ಕರಾರು ಮಾಡಿಕೊಂಡನು. ಈ ಧೋರಣೆಯಿಂದ ಗ್ಲಾಡ್‌ಸ್ಟನ್ ಇಂಗ್ಲೆಂಡಿನ ಗೌರವಕ್ಕೆ ಧಕ್ಕೆ ತಂದನೆಂದು ಅನೇಕರು ಅವನನ್ನು ಖಂಡಿಸಿದರು.

ಐರ್ಲೆಂಡಿನ ಸಮಸ್ಯೆ : ಐರ್ಲೆಂಡಿನ ಸಮಸ್ಯೆಗಳು ಗ್ಲಾಡ್‌ಸ್ಟನ್ನನ ಜೀವಮಾನದಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿದ್ದುವು. ಐರ್ಲೆಂಡಿನ ೧೮೭೦ ರ ಜಮೀನಿನ ಕಾನೂನು ವಿಫಲವಾಗಿತ್ತು. ೧೮೭೯–೮೦ ರಲ್ಲಿ ಮತ್ತೊಂದು ಆಲೂಗೆಡ್ಡೆಯ ಕ್ಷಾಮ ಸಂಭವಿಸಿ ಐರ್ಲೆಂಡಿನ ಜನ ತಲ್ಲಣಿಸಿ ಹೋಯಿತು. ಅನೇಕ ಕುಟುಂಬಗಳಿಗೆ ಗುತ್ತಿಗೆ ಹಣ ಕೊಡಲು ಸಾಧ್ಯ ವಾಗದೆ ಅವು ಜಮೀನುದಾರರಿಂದ ಹೊರದೂಡಲ್ಪಟ್ಟಿದ್ದುವು. ಮೈಕೇಲ್ ಡೆವಿಟ್ ಎಂಬುವನು ಜಮೀನಿನ ಸಂಘವನ್ನು ಪೈಪೋಟಿಯಿಂದ ಗುತ್ತಿಗೆ ಹಣವನ್ನು ಹೆಚ್ಚಿಸದಂತೆ ಮಾಡಲು ಸ್ಥಾಪಿಸಿದನು. ಆದರೆ ಐರ್ಲೆಂಡಿನ ಜನತೆಯ ಮುಖ್ಯ ನಾಯಕನಾಗಿದ್ದವನು ಪಾರ್‌ನೆಲ್. ಪ್ರಾಟೆಸ್ಟೆಂಟ್ ಜಮೀನುದಾರನಾಗಿದ್ದ ಚಾರ್ಲ್ಸ್ ಸ್ಟಿವರ್ಟ್ ಪಾರ್‌ನೆಲ್ ಅರವತ್ತು ಸದಸ್ಯ

ರಿಂದ ಕೂಡಿದ 'ಸ್ವಾತಂತ್ರ್ಯ ಆಳ್ವಿಕೆ' (Home Rule) ಪಕ್ಷದ ನಾಯಕನಾಗಿ, ಕಾಮನ್ಸ್ ಸಭೆಯಲ್ಲಿ ಸದಸ್ಯರ ಗಮನವನ್ನು ಐರ್ಲೆಂಡಿನ ಕಡೆ ಸೆಳೆಯಲು ಯಾವ ಪ್ರಶ್ನೆ ಚರ್ಚೆಗೆ ಬಂದರೂ, ಉದ್ದುದ್ದವಾದ ಭಾಷಣಗಳನ್ನು ಮಾಡುತ್ತಾ ಯಾವ ಕೆಲಸವೂ ಅಲ್ಲಿ ಜರುಗದಂತೆ ಮಾಡಲು ಉಪಕ್ರಮಿಸಿದನು. ಅವನು 'ಫಿನಿಯನ್' ಚಳುವಳಿ ಕಾರರು ಮಾಡುತ್ತಿದ್ದ ಹಿಂಸಾತ್ಮಕ ಕೃತ್ಯಗಳನ್ನು ಒಪ್ಪಲಿಲ್ಲ. 'ನೀವು ನಿಮ್ಮ ಜಮೀನುದಾರರಿಂದ ಓಡಿಸಲ್ಪಟ್ಟು ಅದೇ ಜಮೀನಿಗೆ ಮತ್ತೊಬ್ಬ ಗುತ್ತಿಗೆ ದಾರನು ಬಂದರೆ ಏನು ಮಾಡುವಿರಿ" ಎಂದು ಭಾಷಣ ಮಾಡುತ್ತಾ ಪಾರ್ನೆಲ್ ಕೇಳಿದನು. ಅವನ ಭಾಷಣ ಕೇಳುತ್ತಿದ್ದವನ ಪೈಕಿ ಒಬ್ಬನು "ನಾವು ಅವನನ್ನು ಕೊಲ್ಲುತ್ತೇವೆ. ಗುಂಡಿನಿಂದ ಸುಟ್ಟು ಬಿಡುತ್ತೇವೆ" ಎಂದು ಆವೇಶದಿಂದ ಕೂಗಿಕೊಂಡನು. ಪಾರ್ನೆಲ್ ಭಾಷಣ ಮುಂದು ವರಿಸುತ್ತಾ ಹೇಳಿದನು. "ನೀವು ಅವನನ್ನು ಬೀದಿಯಲ್ಲಿ ತೋರಿಸಿ; ರಸ್ತೆಯಲ್ಲಿ ಸಂಧಿಸಿದರೆ ತೋರಿಸಿ; ಅಂಗಡಿಯಲ್ಲಿ ಸಿಕ್ಕಾಗ ತೋರಿಸಿ; ಸಂತೆಯಲ್ಲಿ, ಮಾರ್ಕೆಟ್ಟಿನಲ್ಲಿ, ಚರ್ಚಿನಲ್ಲಿ ಅವನ ಕಡೆ ಬೆಟ್ಟು ತೋರಿಸಿ; ಅವನನ್ನು ಕುಷ್ಟರೋಗಿಯನ್ನು ದೂರದಲ್ಲಿಡುವಂತೆ ಇಡಿರಿ; ಅವನು ಮಾಡಿದ ತಪ್ಪಿಗೆ ತಿರಸ್ಕಾರವನ್ನು ತೋರಿಸಿ." ಈ ಪುಟ್ಟ ಭಾಷಣದಿಂದ ಪಾರ್ನಲ್ ಎಂತಹ ಮನುಷ್ಯನೆಂದು ನಮಗೆ ಅರಿವಾಗುವುದು. ಫಿನಿಯನ್ ಚಳುವಳಿಕಾರರಂತೆ ಅವನು ಕ್ರೂರತನ, ಹಿಂಸೆ ಇವುಗಳನ್ನು ಉಪ ಯೋಗಿಸಿ ತನ್ನ ಕೆಲಸ ಸಾಧಿಸುವನಾಗಿರಲಿಲ್ಲ. ಅವನು ಹೇಳಿದಂತೆ ಜನ ನಡೆದರು. ಅವನ ಸಂದೇಶವನ್ನು ಜನತೆ 'ಕ್ಯಾಪ್ಟನ್ ಬಾಯ್‌ಕಾಟ್' ಎಂಬುವನ ಮೇಲೆ ಮೊದಲು ಪ್ರಯೋಗಿಸಿದುದರಿಂದ 'ಬಾಯ್‌ಕಾಟ್' ಎಂಬ ಹೊಸ ಪದವು ಇಂಗ್ಲಿಷ್ ಭಾಷೆಗೆ ಬಂದಿತು.

ಐರ್ಲೆಂಡಿನ ಪರಿಸ್ಥಿತಿಯನ್ನು ಸುಧಾರಿಸಲು ಗ್ಲಾಡ್‌ಸ್ಟನ್ ತನ್ನ ಎರ ಡನೆಯ ಜಮೀನಿನ ಕಾನೂನನ್ನು ೧೮೮೧ ರಲ್ಲಿ ತಂದನು. ಅದರಲ್ಲಿ ಮೂರು ಮುಖ್ಯ ಅಂಶಗಳಿದ್ದವು (The three F's): (೧) ದುಬಾರಿಯಿಲ್ಲದ ಗುತ್ತಿಗೆ (Fair rent), (೨) ಸ್ಥಾನಭದ್ರತೆ (Fixity of Tenure), (೩) ತಾನು ದುಡಿದು ಜಮೀನುಗಳನ್ನು ಉತ್ತಮಗೊ

ಳಿಸಿದ್ದರೆ ಮತ್ತು ಇತರ ಅಚ್ಚುಕಟ್ಟುಗಳನ್ನು ಮಾಡಿದ್ದರೆ, ಅವುಗಳನ್ನು ಬೇರೆಯವರಿಗೆ ಮಾರುವ ಹಕ್ಕು (Free Sale of his interest in the holding). ಗುತ್ತಿಗೆ ದುಬಾರಿಯೇ ಅಥವಾ ಸರಿಯೇ ಎಂದು ತೀರ್ಮಾನಿಸಲು ಸ್ವತಂತ್ರವಾದ ನ್ಯಾಯಾಲಯಗಳು (Tribunals) ಸ್ಥಾಪಿತವಾದುವು. ಎಲ್ಲಿಯವರೆಗೆ ಗುತ್ತಿಗೆ ಸರಿಯಾಗಿ ಪಾವತಿಯಾಗುತ್ತಿತ್ತೊ, ಅಲ್ಲಿಯವರೆಗೆ ಸ್ಥಾನ ಭದ್ರತೆಯ ಹಕ್ಕು ಗುತ್ತಿಗೆದಾರನಿಗೆ ಸಿಕ್ಕಿತು. ಈ ಕಾನೂನು ಐರ್ಲೆಂಡಿಗಾಗಲಿ ಅಥವಾ ಪಾರ್ನೆಲ್‌ಗಾಗಲಿ ಸಂತೋಷವನ್ನು ತರಲಿಲ್ಲ. ಅವನು ಐರ್ಲೆಂಡಿಗೆ ಸ್ವಯಂಮಾಡಳಿತ ಸಿಕ್ಕಬೇಕೆಂಬ ಆಶಯದಿಂದ ಕೂಡಿದ್ದನು. ಜಮೀನಿನ ಕಾನೂನಿನ ಜೊತೆಯಲ್ಲೇ ಅಚರಣೆಗೆ ಬಂದಿದ್ದ ಬಲಾತ್ಕಾರದ ಕಾನೂನಿನ* ಪ್ರಕಾರ ಪಾರ್ನೆಲ್ಲನನ್ನು ಜೈಲಿನಲ್ಲಿಡಲಾಯಿತು. ಆದರೆ ಪರಿಸ್ಥಿತಿ ಅದರಿಂದ ಇನ್ನೂ ಹದಗೆಟ್ಟಿತು. ಅವನ ಪ್ರಭಾವದಿಂದ ಹಿಂಸೆ, ಕೊಲೆ ಕಮ್ಮಿಯಾಗಿತ್ತು. ಅವನು ಜೈಲಿಗೆ ಹೋದಮೇಲೆ ಐರ್ಲೆಂಡಿನಲ್ಲಿ ಹೆಚ್ಚು ಸಂಖ್ಯೆಯಲ್ಲಿ ಅಪರಾಧಗಳು ಪ್ರಾರಂಭವಾದುವು. ಇದನ್ನು ತಪ್ಪಿಸಲು ಗ್ಲಾಡ್‌ಸ್ಟನ್ ಪಾರ್ನೆಲ್ಲನನ್ನು ಜೈಲಿನಿಂದ ಬಿಡುಗಡೆ ಮಾಡಿದನು. ಈ ಸಂಧಾನವನ್ನು ಒಪ್ಪದಿದ್ದ ಪ್ರಯುಕ್ತ ಐರ್ಲೆಂಡಿನ ಮುಖ್ಯ ಕಾರ್ಯದರ್ಶಿ ಫಾರ್‌ಸ್ಟರ್ ತನ್ನ ರಾಜೀನಾಮೆ ಕೊಟ್ಟನು. ಮುಖ್ಯ ಕಾರ್ಯದರ್ಶಿಯಾದ ಫ್ರೆಡರಿಕ್ ಕ್ಯಾವೆಂಡಿಷ್ ಮತ್ತು ಅವನ ಸಹಾಯಕ ಬರ್ಕ್ ಇವರಿಬ್ಬರನ್ನೂ ಫೋನಿಕ್ಸ್ ತೋಟದಲ್ಲಿ (Phoenix Park) ಕೆಲವು ಪುಂಡರು ಕೊಲೆ ಮಾಡಿದರು. ಪಾರ್ನೆಲ್ ಮತ್ತು ಐರ್ಲೆಂಡಿಗೆ, ಈ ಕೊಲೆ ತೀವ್ರ ಸಂತಾಪ ತಂದಿತು. ಐರ್ಲೆಂಡಿನಲ್ಲಿ ಮತ್ತೊಂದು ಬಲಾತ್ಕಾರದ ಕಾನೂನು (ಮೊದಲನೆಯದಕ್ಕಿಂತಲೂ ಸ್ವಲ್ಪ ಕಠಿಣವಾದದ್ದು) ಜಾರಿಗೆ ಬರಬೇಕಾಯಿತು.

**ಈಜಿಪ್ಟ್:** ಗ್ಲಾಡ್‌ಸ್ಟನ್ ಮಂತ್ರಿಮಂಡಲಕ್ಕೆ ಈಜಿಪ್ಟಿನಿಂದ ಮತ್ತೊಂದು ತೊಂದರೆಯು ಒದಗಿತು. ದುಂದುವೆಚ್ಚದಲ್ಲಿ ನಿರತನಾಗಿದ್ದ ಈಜಿಪ್ಟಿನ ಸುಲ್ತಾನ ಇಸ್ಮೇಲ್, ಸೂಯಜ್ ಕಾಲುವೆಯ ಕಂಪನಿಯ

---

* ಈ ಕಾನೂನು ದಂಡಾಧಿಕಾರಿಗೆ (Magistrate) ವಿಚಾರಣೆಗೆ ಗುರಿಮಾಡದೆ ಯಾರನ್ನಾದರೂ ಸೆರೆಮನೆಗೆ ಕಳುಹಿಸುವ ಅಧಿಕಾರವನ್ನು ಕೊಟ್ಟಿತ್ತು.

ಷೇರುಗಳನ್ನು ಕೂಡಾ ಮಾರಾಟ ಮಾಡಿದ್ದನೆಂದು ಹಿಂದೆ ಹೇಳಿತ್ತಷ್ಟೆ. ಅವನಿಗೆ ಹೇರಳವಾಗಿ ಸಾಲಕೊಟ್ಟಿದ್ದ ಇಂಗ್ಲಿಷ್ ಮತ್ತು ಫ್ರೆಂಚ್ ಲೇವಾ ದೇವಿಗಾರರು ತಮ್ಮ ಹಣವನ್ನೆಲ್ಲಾ ಕಳೆದುಕೊಳ್ಳುವ ಸ್ಥಿತಿಗೆ ಬಂದಿದ್ದರು. ಆದರೆ ಫ್ರಾನ್ಸ್ ಮತ್ತು ಇಂಗ್ಲೆಂಡ್ ಅವರ ಪರವಾಗಿ ಈಜಿಪ್ಟಿನ ವಿಚಾರ ದಲ್ಲಿ ಕೈಹಾಕಿ ದ್ವಿಮುಖ ಹತೋಟಿಯನ್ನು ಸ್ಥಾಪಿಸಿದ್ದುವು. ಗ್ಲಾಡ್‌ಸ್ಟನ್ ತಾನು ಮಂತ್ರಿಯಾಗುವುದಕ್ಕೆ ಮುಂಚೆ ಇದನ್ನು ಮಿಡ್‌ಲೋಥಿಯನ್ ಭಾಷಣದಲ್ಲಿ ಖಂಡಿಸಿದ್ದರೂ ಸುಮ್ಮನೆ ತಾಟಸ್ಥ್ಯವಾಗಿರಲು ಸಾಧ್ಯವಾಗ ಲಿಲ್ಲ. ಅರಬಿ ಪಾಷನೆಂಬುವನು ಈಜಿಪ್ಟಿನ ಹಣವನ್ನು ನುಂಗುತ್ತಿದ್ದ ಈ ವಿದೇಶೀಯರ ಮೇಲೆ ಬಿದ್ದು ಐವತ್ತು ಜನ ಯೂರೋಪಿಯನ್ನರನ್ನು ಕೊಲೆಮಾಡಿದನು. ದಂಗೆಯೆದ್ದಿದ್ದ ಅರಬಿ ಪಾಷನನ್ನು ಶಿಕ್ಷಿಸಿ, ಸೂಯಸ್ ಕಾಲುವೆಯ ರಕ್ಷಣೆಯನ್ನು ಮಾಡಲು ಗ್ಲಾಡ್‌ಸ್ಟನ್ ಸರ್ಕಾರ ಸರ್ ಗಾರ್ ನೆಟ್ ವೂಲ್‌ಸ್ಲಿ ಎಂಬುವನ ಕೈಕೆಳಗೆ ಒಂದು ಸೈನ್ಯವನ್ನು ಈಜಿಪ್ಟಿಗೆ ಕಳುಹಿಸಿತು. ಟೆಲ್ ಎಲ್ ಕೆಬಿರ್ ಎಂಬಲ್ಲಿ ಇಂಗ್ಲಿಷ್ ಸೈನ್ಯ ಅರಬ್ಬಿ ಯನ್ನು ಸೋಲಿಸಿತು. ಸರ್ ಎವರ್ಲಿನ್ ಬಾರಿಂಗ್ (ಸ್ವಲ್ಪ ಕಾಲವಾದ ಮೇಲೆ ಲಾರ್ಡ್ ಕ್ರೋಮರ್) ಎಂಬುವನನ್ನು ಇಸ್ಮೇಲ್ ಮಗನಾದ ಹೊಸ ಸುಲ್ತಾನನಿಗೆ ಹಣಕಾಸಿನ ವಿಚಾರದಲ್ಲಿ ಸಲಹೆಗಾರನನ್ನಾಗಿ ಇಂಗ್ಲಿಷ್ ಸರ್ಕಾರ ನಿಯಮಿಸಿತು. ಕ್ರೋಮರ್ ಈಜಿಪ್ಟಿನ ಅಭಿವೃದ್ಧಿಗೆ ಶ್ರಮಿಸಿ ದನು. ನೀರಾವರಿ ಕಾಲುವೆಗಳನ್ನೆಲ್ಲಾ ಸರಿಪಡಿಸಿ, ಆರ್ಥಿಕ ಪರಿಸ್ಥಿತಿ ಸುಧಾರಿಸುವಂತೆ ಮಾಡಿದನು. ರೈತನ ಕಷ್ಟಗಳನ್ನು ನಿವಾರಿಸಿ ಆವನ ಹಿತ ಸಾಧಿಸಿದನು.

ಈ ಮಧ್ಯೆ ಮತ್ತೊಂದು ಹದಗೆಟ್ಟ ಪರಿಸ್ಥಿತಿ ಸೂಡಾನಿನಲ್ಲಿ ಪ್ರಾರಂಭ ವಾಗಿತ್ತು. ಸುಲ್ತಾನನಾದ ಇಸ್ಮೇಲ್ ಸೂಡಾನನ್ನು ತನ್ನ ಕೈವಶ ಮಾಡಿ ಕೊಳ್ಳಲು ಪ್ರಯತ್ನಿಸಿದ್ದನು. ಆಗ್ಗೆ ಅವನಿಗೆ ಗಾರ್ಡನ್ ಎಂಬ ಇಂಗ್ಲಿಷ್ ಸೈನ್ಯಾಧಿಪತಿ ಈ ಉದ್ಯಮದಲ್ಲಿ ಸಹಾಯ ಮಾಡಿದ್ದನು. ೧೮೮೩ ರಲ್ಲಿ ಸೂಡಾನಿನಲ್ಲಿ ಒಬ್ಬ ದಂಗೆಕಾರನು ತಾನೇ 'ಮಹದಿ' ಎಂದು ಹೇಳಿಕೊಂಡು ಮತೀಯ ಯುದ್ಧವನ್ನು ಪ್ರಾರಂಭಿಸಿದನು. ಅವನನ್ನು ಅಡಗಿಸಲು ೧೮೮೩ ರಲ್ಲಿ ಈಜಿಪ್ಟ್ ಕಳುಹಿಸಿದ ಸೈನ್ಯವು ಅದರ ಸೈನ್ಯಾಧಿಪತಿಯಾದ

ಹಿಕ್ಸ್ ಎಂಬುವನೊಡನೆ ನಾಶವಾಗಿತ್ತು. ಉಳಿದ ಸೈನ್ಯವನ್ನು ಸೂಡಾನಿನಿಂದ ಹಿಂದಕ್ಕೆ ಕರೆತರುವ ಉದ್ದೇಶ್ಯವಾಗಿ ಇಂಗ್ಲಿಷ್ ಸರ್ಕಾರವು ಗಾರ್ಡನ್‌ನನ್ನು ಖಾರ್‌ಟೋಮ್‌ಗೆ ಕಳುಹಿಸಿತು. ಈಜಿಪ್ಟಿನ ಶಾಂತಿಗೆ ಮತ್ತು ಅಭಿವೃದ್ಧಿಗೆ ಸೂಡಾನಿನ ನೇರುವಿಕೆಯು ಅತ್ಯಂತ ಮುಖ್ಯವೆಂದು ಗೊತ್ತಾಗಿದ್ದರೂ, ಈಜಿಪ್ಟ್ ಮೊದಲು ತನ್ನ ಶಕ್ತಿಯನ್ನು ಹೆಚ್ಚಿಸಿಕೊಳ್ಳಬೇಕೆಂಬ ಕ್ರೋಮರನ ಸಲಹೆಯನ್ನು ಒಪ್ಪಿ, ಬ್ರಿಟಿಷ್ ಸರ್ಕಾರ ಸೂಡಾನಿನಲ್ಲಿದ್ದ ಉಳಿದ ಸೈನ್ಯವನ್ನು ಹೊರಕ್ಕೆ ತರುವ ಕೆಲಸವನ್ನು ಗಾರ್ಡನ್ನನಿಗೆ ವಹಿಸಿತು. ತನಗೆ ಕೊಟ್ಟ ಆಜ್ಞೆಯನ್ನು ಪಾಲಿಸತಕ್ಕ ಮನೋಭಾವವು ಗಾರ್ಡನ್ನನಿಗೆ ಇರಲಿಲ್ಲ. ಸರ್ಕಾರವು ತನ್ನ ನೀತಿಯನ್ನೇ ಬದಲಾಯಿಸಿ, ಸೂಡಾನನ್ನು ಗೆಲ್ಲಲು ಸಹಾಯ ಮಾಡುವುದೆಂಬ ನಂಬಿಕೆಯಿಂದ, ಗಾರ್ಡನ್ ಮಹದಿಯನ್ನು ಸೋಲಿಸಲು ಹೆಚ್ಚು ಸೈನ್ಯ ಬೇಕೆಂದು ಕೇಳಿದನು. ಗ್ಲಾಡ್‌ಸ್ಟನ್ ಇದಕ್ಕೆ ಸಿದ್ಧವಿರಲಿಲ್ಲ. ಕೊನೆಗೆ ವುಲ್‌ಸ್ಲಿಯ ಕೈಕೆಳಗೆ ಸಹಾಯಕ ಸೈನ್ಯವೊಂದು ೧೮೮೫ ರಲ್ಲಿ ಖಾರ್‌ಟೂಮಿಗೆ ಹೊರಟಿತು. ಅದು ತಲಪುವ ಎರಡುದಿನ ಮುಂಚೆಯೇ ಮಹದೀ ಕಡೆಯವರು ಈಜಿಪ್ಟ್ ಮತ್ತು ಬ್ರಿಟಿಷ್ ಸೈನ್ಯವನ್ನು ಸುತ್ತುಗಟ್ಟಿ ಗಾರ್ಡನ್ನನನ್ನು ಕೊಂದಿದ್ದರು.

ಗಾರ್ಡನ್ನನ ಕೊಲೆ ಇಂಗ್ಲೆಂಡಿನಲ್ಲಿ ಬಹಳ ಕಳವಳವನ್ನು ತಂದಿತು. ಅನೇಕರು ಗ್ಲಾಡ್‌ಸ್ಟನ್, ಗಾರ್ಡನ್ನನ ಕೊಲೆಗೆ ಕಾರಣನೆಂದು ಅವನನ್ನು ಖಂಡಿಸಿದರು. ವಿಕ್ಟೋರಿಯಾ ರಾಣಿಯೂ ಇವೇ ಗುಂಪಿಗೆ ಸೇರಿದ್ದವಳೆಂದರೆ ತಪ್ಪಲ್ಲ. ಅವಳಿಗೂ ಮತ್ತು ಗ್ಲಾಡ್‌ಸ್ಟನ್ನನಿಗೂ ಸೌಹಾರ್ದತೆ ಇರಲಿಲ್ಲ. ಮಜುಬ, ಐರ್ಲೆಂಡ್ ಮತ್ತು ಖಾರ್‌ಟೂಮ್‌ಗಳಲ್ಲಿ ಗ್ಲಾಡ್‌ಸ್ಟನ್ ಸರ್ಕಾರ ದುರ್ಬಲತೆಯನ್ನು ತೋರಿತೆಂದು ಜನತೆ ಕೋಪಗೊಂಡಿತು. ಆದರೆ ಆ ತಪ್ಪುಗಳಿಗೆ ಗ್ಲಾಡ್‌ಸ್ಟನ್ ಸರ್ಕಾರ ಹೊಣೆಯಲ್ಲ. ಬೇರೆ ಯಾವ ಸರ್ಕಾರವಾಗಿದ್ದರೂ ಇದೇ ಸನ್ನಿವೇಶವನ್ನು ಎದುರಿಸಬೇಕಾಗುತ್ತಿತ್ತು. ೧೮೮೫ ರಲ್ಲಿ ಗ್ಲಾಡ್‌ಸ್ಟನ್ ತನ್ನ ರಾಜಿನಾಮೆ ಸಲ್ಲಿಸಿದನು.

ಗ್ಲಾಡ್‌ಸ್ಟನ್ ೧೮೮೬ ರಲ್ಲಿ ಮೂರನೆ ಸಲ ಮುಖ್ಯ ಮಂತ್ರಿಯಾಗಿ ಐರ್ಲೆಂಡಿನ ಪ್ರಶ್ನೆಯನ್ನು ಬಗೆಹರಿಸಲು ಅದಕ್ಕೆ "ಸ್ವಯಮಾಡಳಿತ" (Home Rule) ವನ್ನು ಕೊಡಬೇಕೆಂಬ ಉದ್ದೇಶ್ಯದಿಂದ ಸ್ವಯ

ಸ್ವಾಧಿಕಾರದ ಮುಸೂದೆಯನ್ನು ಕಾಮನ್ಸ್ ಸಭೆಯಲ್ಲಿ ಮಂಡಿಸಿದನು. ಸೈನ್ಯ, ಹಡಗುಪಡೆ, ವಿದೇಶಾಂಗ ನೀತಿ ಇವೇ ಮೊದಲಾದುವುಗಳನ್ನು ಬಿಟ್ಟು ಉಳಿದ ವಿಚಾರಗಳಲ್ಲಿ ಐರ್ಲೆಂಡ್ ತನ್ನದೇ ಆದ ವಿಧಾಯಕ ಸಭೆಯ ಮೂಲಕ ಸ್ವತಂತ್ರವಾಗಿ ಆಡಳಿತ ನಡೆಸಲು ಈ ಮುಸೂದೆಯಲ್ಲಿ ಸೂಚಿಸಲಾಗಿತ್ತು. ಆದರೆ ಈ ಪ್ರಶ್ನೆ ಲಿಬರಲ್ ಪಕ್ಷದಲ್ಲಿ ಒಡಕನ್ನು ತಂದಿತು. ಮುಸೂದೆಯ ಮೇಲೆ ಮತದಾನ ನಡೆದಾಗ ಲಿಬರಲ್ ಪಕ್ಷದ ತೊಂಭತ್ತು ಮೂರು ಸದಸ್ಯರು ವಿರುದ್ಧವಾಗಿ ಮತದಾನ ಮಾಡಿದರು (೩೪೩ ವಿರುದ್ಧವಾಗಿ, ೩೧೩ ಪರವಾಗಿ). ಆ ಗುಂಪಿನಲ್ಲಿ ಗ್ಲಾಡ್‌ಸ್ಟನ್ನನ ಸ್ನೇಹಿತರಾದ ಚೇಂಬರ್‌ಲೇನ್ ಮತ್ತು ಜಾರ್ಜ್ ಬ್ರೈಟ್ ಕೂಡ ಸೇರಿ ಕೊಂಡಿದ್ದರು. ಗ್ಲಾಡ್‌ಸ್ಟನ್ ಇದರಿಂದ ಹಿಂಜರಿಯಲಿಲ್ಲ. ಅವನು ಈ ಪ್ರಶ್ನೆಯನ್ನು ಇಡೀ ದೇಶವೇ ತೀರ್ಮಾನಿಸಬೇಕೆಂದು ಹೊಸ ಪಾರ್ಲಿ ಮೆಂಟನ್ನು ಸೇರಿಸಿದನು. ಹೊಸ ಪಾರ್ಲಿಮೆಂಟಿನಲ್ಲಿ ಐರ್ಲೆಂಡ್ ಮತ್ತು ಇಂಗ್ಲೆಂಡುಗಳ ಐಕ್ಯತೆಯನ್ನು (Union) ರಕ್ಷಿಸಲು ಆಶಿಸಿದ್ದ ಲಿಬರಲ್ ಪಕ್ಷದ ಸದಸ್ಯರ ಬೆಂಬಲದಿಂದ (Liberal Unionists) ಕನ್‌ಸರ್ ವೇಟಿವ್ (ಸಾಂಪ್ರದಾಯಿಕ) ಪಕ್ಷವು ಜಯಗಳಿಸಿ, ಸ್ಯಾಲಿಸ್‌ಬರಿಯ ಮುಖಂಡತ್ವದಲ್ಲಿ ೧೮೮೬ ರಿಂದ ೧೮೯೨ ರ ವರೆಗೆ ಆಡಳಿತ ನಡೆಸಿತು.

ಗ್ಲಾಡ್‌ಸ್ಟನ್ನನ ನಾಲ್ಕನೆ ಮಂತ್ರಿತ್ವ, ೧೮೯೨–೯೪ : ತನ್ನ ೮೩ನೇ ವರ್ಷದಲ್ಲಿ ನಾಲ್ಕನೆ ಸಲ ಗ್ಲಾಡ್‌ಸ್ಟನ್ ಮುಖ್ಯ ಮಂತ್ರಿಯಾದಾಗ, ಎರಡನೆ ಬಾರಿ ಐರ್ಲೆಂಡಿಗೆ ಸ್ವಯಮಾಧಿಕಾರ ಕೊಡುವ ಮುಸೂದೆ ಯನ್ನು ಅವನು ಕಾಮನ್ಸ್ ಸಭೆಯ ಮುಂದೆ ತಂದನು. ಅವನ ರಾಜ ಕೀಯ ಜೀವನದಲ್ಲಿ ಇದೊಂದು ಮುಖ್ಯ ಘಟನೆ ಎಂದು ಅವನಿಗೆ ಮನ ವರಿಕೆಯಾಗಿತ್ತು. ಐರ್ಲೆಂಡಿಗೆ ಸ್ವಯಮಾಧಿಕಾರ ಕೊಡುವ ಪ್ರಶ್ನೆಯಿಂದ ಲಿಬರಲ್ ಪಕ್ಷವು ಒಡೆದುಹೋಗಿತ್ತು. ಸ್ವಯಂ ಅಧಿಕಾರ ಕ್ಯಾಥಲಿಕ್ ಜನಸಂಖ್ಯೆ ಹೆಚ್ಚಾಗಿದ್ದ ಐರ್ಲೆಂಡಿಗೆ ಸಿಕ್ಕಿದರೆ ಅಲ್‌ಸ್ಟರ್ ಪ್ರಾಟೆಸ್ಟೆಂಟರ ಭವಿಷ್ಯಕ್ಕೆ ಧಕ್ಕೆ ಒದಗುವುದೆಂಬ ಸಂಶಯ ಅನೇಕರಿಗೆ ಇದ್ದುದರಿಂದ ಲಿಬರಲ್ ಪಕ್ಷ ಒಡೆದು ಹೋಯಿತು. ೧೮೯೩ ರಲ್ಲಿ ಮಂಡಿಸಲ್ಪಟ್ಟ ಸ್ವಯಮಾಡಳಿತದ ಮುಸೂದೆಯಿಂದ ಐರ್ಲೆಂಡಿಗೆ ತನ್ನದೇ ಆದ ಪಾರ್ಲಿ

ಮೆಂಟಲ್ಲದೆ ತನ್ನ ಪ್ರತಿನಿಧಿಗಳು ಇಂಗ್ಲಿಷ್ ಪಾರ್ಲಿಮೆಂಟಿನಲ್ಲೂ ಇರಲು ಅವಕಾಶ ಕಲ್ಪಿಸಲಾಗಿತ್ತು. ಮೊದಲಿನ ಸ್ವಯಮಾಡಳಿತದ ಮಸೂದೆಯಲ್ಲಿ ಈ ಅಂಶವಿರಲಿಲ್ಲ. ಕಾಮನ್ಸ್ ಸಭೆಯಲ್ಲಿ ೩೪ ಓಟುಗಳಿಂದ ಮಸೂದೆಯು ಅಂಗೀಕರಿಸಲ್ಪಟ್ಟರೂ, ಲಾರ್ಡ್ಸ್ ಸಭೆ ಅದನ್ನು ತಳ್ಳಿಹಾಕಿತು. ಮಾರನೆ ವರ್ಷ ಗ್ಲಾಡ್‌ಸ್ಟನ್ ತನ್ನ ರಾಜಕೀಯ ಜೀವನದಿಂದ ವಿಶ್ರಾಂತಿ ಪಡೆದನು. ಇದಾದ ನಾಲ್ಕುವರ್ಷಗಳಲ್ಲಿ ಅವನು ಕಾಲವಾದನು.

ಇಂಗ್ಲೆಂಡಿನ ಚರಿತ್ರೆಯಲ್ಲಿ ಗ್ಲಾಡ್‌ಸ್ಟನ್ ಒಬ್ಬ ಉದಾತ್ತನಾದ ವ್ಯಕ್ತಿ. ಅವನು ಇಂಗ್ಲೆಂಡ್ ಉದಾತ್ತ ಧ್ಯೇಯಗಳನ್ನು ಪರಿಪಾಲಿಸುವಂತೆ ದುಡಿದನು. ಇಂಗ್ಲೆಂಡ್ ಪ್ರಜಾಪ್ರಭುತ್ವವಾಗಿ ಮಾರ್ಪಾಟಾಗಲು ಗ್ಲಾಡ್‌ಸ್ಟನ್ ತನ್ನ ಕಾಣಿಕೆಯನ್ನು ಸಲ್ಲಿಸಿದನು.

ಈ ಮಧ್ಯೆ ಐರ್ಲೆಂಡಿನ ಕಿರೀಟರಹಿತ ರಾಜನಾಗಿದ್ದ (Uncrowned King of Ireland) ಪಾರ್‌ನೆಲ್ಲನ ರಾಜಕೀಯ ಪತನವುಂಟಾಯಿತು. ಅವನ ಪ್ರಭಾವವು, ಇಂಗ್ಲಿಷ್ ಮಂತ್ರಿಮಂಡಲಗಳ ರಚನೆಗೆ ಬೇಕಾದ ಓಟುಗಳ ಮೇಲೆ ಅತ್ಯಂತ ಹೆಚ್ಚಾಗಿತ್ತು. ಓ. ಷಿ. ಎಂಬ ಮಹಿಳೆಯ ದಾಂಪತ್ಯ ವಿಚ್ಛೇದನದ ಮೊಕದ್ದಮೆಯಲ್ಲಿ ಪಾರ್‌ನೆಲ್ ಸಿಲುಕಿಕೊಂಡು ತನ್ನ ಪಂಗಡದ ನಾಯಕತ್ವವನ್ನು ಕಳೆದುಕೊಂಡನು. ೧೮೯೧ ರಲ್ಲಿ ಅವನು ಕಾಲವಾದನು. ಪಾರ್‌ನೆಲ್ಲನ ಪತನದಿಂದ ಐರ್ಲೆಂಡಿನ ಭವಿಷ್ಯಕ್ಕೆ ಕತ್ತಲು ಕವಿಯಿತು.

ಗ್ಲಾಡ್‌ಸ್ಟನ್ನನ ಮಂತ್ರಿಮಂಡಲವು ೧೮೯೪ ರಲ್ಲಿ ಆಯವ್ಯಯ ಪಟ್ಟಿ ತಯಾರಿಸುವುದರಲ್ಲಿ ಒಂದು ಹೊಸ ಪ್ರಯೋಗವನ್ನು ಮಾಡಿತು. ಶ್ರೀಮಂತರ ಆಸ್ತಿ ತಂದೆಯ ನಂತರ ಮಗನ ಕೈ ಸೇರುವಾಗ ಸರ್ಕಾರಕ್ಕೆ ತೆರುವ ತೆರಿಗೆಯನ್ನು (Death duties) ಆಯವ್ಯಯ ಪಟ್ಟಿಯಲ್ಲಿ ಆರ್ಥಿಕ ಮಂತ್ರಿ ಸರ್ ವಿಲಿಯಂ ಹಾರ್ ಕೋರ್ಟ್ ಸೇರಿಸಿದನು.

**ವಿಕ್ಟೋರಿಯ : ಲಾರ್ಡ್ ಸ್ಯಾಲಿಸ್‌ಬರಿ ಸರ್ಕಾರ, ೧೮೮೬–೯೨, ೧೮೯೫–೧೯೦೨ :** ಕನ್ಸರ್‌ವೇಟಿವ್ ಪಕ್ಷದ ಲಾರ್ಡ್ ಸ್ಯಾಲಿಸ್‌ಬರಿ ತನ್ನ ಸರ್ಕಾರವನ್ನು ೩ ನೆ ಸಲ ರಚಿಸುವಾಗ ಲಿಬರಲ್ ಪಕ್ಷದ 'ಯೂನಿಯನಿಸ್ಟ' (ಗ್ಲಾಡ್‌ಸ್ಟನ್ ಐರ್ಲೆಂಡಿಗೆ ಸ್ವಯಮಾಡಳಿತವನ್ನು

ಕೊಡುವುದಕ್ಕಾಗಿ ಮಂಡಿಸಿದ ಮಸೂದೆಯನ್ನು ವಿರೋಧಿಸಿದ ಲಿಬರಲ್ ಪಕ್ಷದವರು) ಪಂಗಡ ಸ್ಯಾಲಿಸ್‌ಬರಿ ಸರ್ಕಾರದಲ್ಲಿ ಅಧಿಕಾರ ಸ್ವೀಕರಿಸಿತು ಈ ಪಂಗಡದ ನಾಯಕ ಚೇಂಬರ್‌ಲೇನ್ ಸ್ಯಾಲಿಸ್‌ಬರಿ ಮಂತ್ರಿಮಂಡಲದ ಮುಖಂಡ ವ್ಯಕ್ತಿಯಾದನು. ಇವನು ವಸಾಹತುಗಳ ಖಾತೆಯ ಕಾರ್ಯದರ್ಶಿಯಾಗಿ, ಡಿಸ್ರೇಲಿಯಂತೆ ಬ್ರಿಟಿಷ್ ಸಾಮ್ರಾಜ್ಯದ ಬೆಳವಣಿಗೆಯಲ್ಲಿ ಅಪಾರ ಆಸಕ್ತಿಯನ್ನು ಹೊಂದಿದ್ದನು. ಇವನು ತನ್ನ ಸಾರ್ವಜನಿಕ ಜೀವನವನ್ನು ಮೊಟ್ಟ ಮೊದಲು ಪ್ರಾರಂಭಿಸಿದುದು ಬರ್ಮಿಂಗ್‌ಹ್ಯಾಂನಲ್ಲಿ. ಅಲ್ಲಿ ಅವನು ಪೌರಸಭೆಯ ಅಧ್ಯಕ್ಷನಾಗಿದ್ದನು. ಗ್ಲಾಡ್‌ಸ್ಟನ್ ತನ್ನ ಎರಡನೆಯ ಮಂತ್ರಿತ್ವವನ್ನು ರಚಿಸಿದಾಗ, ಚೆಂಬರ್‌ಲೇನ್ ಪಾರ್ಲಿಮೆಂಟಿನ ೧೮೮೪ ರ ಚುನಾವಣೆಯ ಸುಧಾರಣಾ ಕಾನೂನನ್ನು ಜಾರಿಗೆ ತಂದನು. ಅವನ ರಾಜಕೀಯ ಜೀವನದಲ್ಲಿ ೩ ಹಂತಗಳನ್ನು ನಾವು ಕಾಣಬಹುದು: (೧) ಕಾರ್ಮಿಕ ವರ್ಗದ ಪುರೋಭಿವೃದ್ಧಿಗೆ ಬೇಕಾದ ಕಾನೂನುಗಳನ್ನು ತರಲು ಆಸಕ್ತಿ (Radicalism), (೨) ಬ್ರಿಟಿಷ್ ಸಾಮ್ರಾಜ್ಯದ ಏಳಿಗೆಯಲ್ಲಿ ಆಸಕ್ತಿ(Imperialsm), (೩) ಇಂಗ್ಲೆಂಡಿನ ಮತ್ತು ಸಾಮ್ರಾಜ್ಯದ ವ್ಯಾಪಾರ ವಸ್ತುಗಳ ಮೇಲೆ, ಇತರ ದೇಶಗಳ ವ್ಯಾಪಾರ ವಸ್ತುಗಳಮೇಲೆ ಹಾಕತಕ್ಕ ಸುಂಕಕ್ಕಿಂತ ಕಡಿಮೆ ಹಾಕುವುದರ ಮೂಲಕ (Preferential Tariff) ರಕ್ಷಣೆ (Protection) ಒದಗಿಸುವುದರಲ್ಲಿ ಆಸಕ್ತಿ.

ಅನಾತಂಕ ವ್ಯಾಪಾರದಿಂದ ಇಂಗ್ಲೆಂಡಿನ ಏಳಿಗೆಯನ್ನು ಸಾಧಿಸಲು ಅನುಕೂಲವೆಂದು ಭಾವಿಸಿದ್ದ ಕೆಲವು ಮಂತ್ರಿಗಳು ಬಾಲ್‌ಫರ್ ಸಂಪುಟದಲ್ಲಿದ್ದುದರಿಂದ (೧೯೦೨–೧೯೦೫) ಜೊಸೆಫ್ ಚೆಂಬರ್‌ಲೇನನೊಡನೆ ವಿದೇಶಿ ವ್ಯಾಪಾರ ಪದಾರ್ಥಗಳ ಮೇಲೆ ಹೆಚ್ಚು ಸುಂಕ ಹಾಕಿ, ಬ್ರಿಟಿಷ್ ವಸ್ತುಗಳಿಗೆ ರಕ್ಷಣೆ (Protecteor) ಕೊಡುವ ವಿಚಾರದಲ್ಲಿ ಜಗಳ ಪ್ರಾರಂಭಮಾಡಿದರು. ಇದರಿಂದ ಕನ್ಸರ್‌ವೆಟಿವ್ ಪಕ್ಷ ಒಡೆದು ಹೋಯಿತು. ಐರ್ಲೆಂಡಿಗೆ ಸ್ವಯಮಾಡಳಿತ ಕೊಡಲು ಗ್ಲಾಡ್‌ಸ್ಟನ್ ೧೮೮೬ ರಲ್ಲಿ ಪಾರ್ಲಿಮೆಂಟಿನಲ್ಲಿ ಮಸೂದೆಯನ್ನು ತಂದಾಗ ಚೆಂಬರ್‌ಲೇನ್ ಅದನ್ನು ವಿರೋಧಿಸಿ ಲಿಬರಲ್ ಪಕ್ಷವು ಒಡೆದುಹೋಗುವಂತೆ ಮಾಡಿ

ವ್ವನ್ನು ಮರೆಯಬಾರದು. ೧೯೦೩ ರಲ್ಲಿ ಅವನು ರಾಜೀನಾಮೆಕೊಟ್ಟು ಬಾಲ್‌ಫರ್ ಸರ್ಕಾರದಿಂದ ಹೊರಬಿದ್ದನು.

ಈಜಿಪ್ಟ್ : ಈಜಿಪ್ಟಿನಲ್ಲಿ ಕ್ರೋಮರ್ ಮತ್ತು ಲಾರ್ಡ್ ಕಿಚನರ್ ಬಲವಾದ ಸೈನ್ಯವನ್ನು ತಯಾರಿಸಿದುದಲ್ಲದೆ, ಸೂಡಾನನ್ನು ಜಯಿಸಲು ರೈಲುಮಾರ್ಗವನ್ನು ನಿರ್ಮಿಸಿದರು. ೧೮೯೮ ರಲ್ಲಿ ಮಹದಿಯ ಸೈನ್ಯವನ್ನು ಕಿಚನರ್, ಆಮ್‌ಡರ್‌ಮನ್ (Omdurman) ಎಂಬಲ್ಲಿ ಸೋಲಿಸಿ ನಾಶಮಾಡಿದನು. ಸೂಡಾನಿನಲ್ಲಿ ಇಂಗ್ಲೆಂಡ್ ಮತ್ತು ಈಜಿಪ್ಟ್ ತಮ್ಮ ಅಧಿಕಾರವನ್ನು ಸ್ಥಾಪಿಸಿ, ಸರ್ ಫ್ರಾನ್ಸಿಸಿನ್ ವಿನ್‌ಗೇಟ್ ಎಂಬುವನನ್ನು ಮುಖ್ಯಾಧಿಕಾರಿಯನ್ನಾಗಿ ನಿಯಮಿಸಿದುವು.

ದಕ್ಷಿಣ ಆಫ್ರಿಕಾದಲ್ಲಿ ಸೆಸಿಲ್ ರೋಡ್ಸ್ (Cecil Rhodes) ಹೊಂದಿದ್ದ ಮಹತ್ವಾಕಾಂಕ್ಷೆ ಮತ್ತು ಜೇಮ್ಸನ್ (Jameson) ಆಕ್ರಮಣದ (೧೮೯೫) ಫಲವಾಗಿ ಬೋಯರೊಡನೆ ಯುದ್ಧ ಪ್ರಾರಂಭವಾಯಿತೆಂದು ಹಿಂದೆಯೇ ಹೇಳಿತಷ್ಟೆ. ಸ್ಯಾಲಿಸ್‌ಬರಿ ಸರ್ಕಾರ ಯುದ್ಧದಲ್ಲಿ ಜಯಗಳಿಸಿ ೧೯೦೨ ರಲ್ಲಿ ಬೋಯರ್ ಸರ್ಕಾರದೊಡನೆ ಒಪ್ಪಂದ ಮಾಡಿಕೊಂಡಿತು. ಯುದ್ಧಕಾಲದಲ್ಲಿ ಸಂಭವಿಸಿದ ನಷ್ಟಕ್ಕಾಗಿ ಇಂಗ್ಲೆಂಡ್ ೩೦ ಲಕ್ಷ ಪೌಂಡು ಕೊಟ್ಟಿತು. ಕರಾರಿನಲ್ಲಿ ವಾಗ್ದಾನ ಮಾಡಿದ್ದಂತೆ ೧೯೦೬ ರಲ್ಲಿ ಬೋಯರ್ ಜನಾಂಗ ಸ್ವಯಮಾಡಳಿತವನ್ನು ಪಡೆಯಿತು.

ಆಫ್ರಿಕದ ಹಂಚಿಕೆ (Partition of Africa) : ಇದರ ಚರಿತ್ರೆಯನ್ನು ಮೂರು ಹಂತಗಳಲ್ಲಿ ನಾವು ನೋಡಬಹುದು. ಆಫ್ರಿಕದ ಮೆಡಿಟರೇನಿಯನ್ ತೀರಪ್ರದೇಶ ಪುರಾತನ ಕಾಲದಿಂದಲೂ ಗೊತ್ತಾಗಿತ್ತು. ಈಜಿಪ್ಟಿನ ಮತ್ತು ಕಾರ್ಥೇಜಿನ ನಾಗರಿಕತೆಗಳು ಇಲ್ಲಿ ಬಲವಾಗಿ ಬೇರೂರಿದ್ದುವು. ಉತ್ತರ ಆಫ್ರಿಕವು ಮೊದಲು ರೋಮನ್ ಚಕ್ರಾಧಿಪತ್ಯಕ್ಕೂ, ನಂತರ ತುರ್ಕಿ ಚಕ್ರಾಧಿಪತ್ಯಕ್ಕೂ ಸೇರಿತ್ತು.

ಎರಡನೆ ಹಂತವು, ೧೫ ನೇ ಶತಮಾನದಲ್ಲಿ ಪೋರ್ಚುಗೀಸರು ಪೂರ್ವದೇಶಗಳೊಡನೆ ವ್ಯಾಪಾರ ಮಾಡಲು ಹೊಸ ಸಮುದ್ರಮಾರ್ಗವನ್ನು ಹುಡುಕುವ ಪ್ರಯತ್ನದೊಡನೆ ಪ್ರಾರಂಭವಾಯಿತು. ಕೇಪ್ ಮಾರ್ಗ

ಕಂಡುಹಿಡಿಯಲ್ಪಟ್ಟಿತು. ಪಶ್ಚಿಮ ಆಫ್ರಿಕಾದಲ್ಲಿ ಗುಲಾಮರ ಮಾರಾಟ ಕ್ಕಾಗಿ ಇಂಗ್ಲಿಷರು, ಡಚ್ಚರು, ಫ್ರೆಂಚರು, ಪೋರ್ಚುಗೀಸರು ಕೆಲವು ಸ್ಥಳ ಗಳನ್ನು ಸ್ಥಾಪಿಸಿಕೊಂಡರು.

ಮೂರನೆ ಹಂತ ೧೯ ನೇ ಶತಮಾನದಲ್ಲಿ :ಪ್ರಾರಂಭವಾಯಿತು. ಅನೇಕರು ಆಫ್ರಿಕದ ಒಳಭಾಗವನ್ನು ಹೊಕ್ಕು ಹೊಸ ಹೊಸ ಪ್ರದೇಶ ಗಳನ್ನು ಕಂಡುಹಿಡಿದು, ಅವುಗಳನ್ನು ಆಕ್ರಮಿಸಕೊಳ್ಳಲಾರಂಭಿಸಿದರು. ಇವರುಗಳಲ್ಲಿ ಡೇವಿಡ್‌ಲಿವಿಂಗ್‌ಸ್ಟನ್ (೧೮೧೩—೭೩) ಪ್ರಖ್ಯಾತನು. ಆಫ್ರಿಕಾದ ಹಂಚಿಕೆಯಲ್ಲಿ ಆರು ಯೂರೋಪಿಯನ್ ರಾಷ್ಟ್ರಗಳು ಮುಖ್ಯ ಪಾತ್ರ ವಹಿಸಿದುವು. ಬೆಲ್ಜಿಯಂ ರಾಜನಾದ ಎರಡನೆ ಲಿಯೋಪೋಲ್ಡ್. ಕಾಂಗೂ ಪ್ರದೇಶವನ್ನು ಆಕ್ರಮಿಸಿ, ೧೮೭೯ರಲ್ಲಿ ಕಾಂಗೂ ಸ್ವತಂತ್ರ ರಾಜ್ಯ ವನ್ನು ಸ್ಥಾಪಿಸಿದನು. ಫ್ರೆಂಚರು ಮತ್ತು ಇಂಗ್ಲಿಷರು ತಮ್ಮ ವಸಾಹತು ಗಳನ್ನು ಸ್ಥಾಪಿಸಿದರು. ಬಿಸ್‌ಮಾರ್ಕ್ ಜರ್ಮನಿಯ ವಸಾಹತುಗಳನ್ನು ೧೮೮೪ ರಲ್ಲಿ ಪ್ರಾರಂಭಿಸಿದನು. ೧೮೮೬ ರಲ್ಲಿ ಜಾಂಜಿಬಾರಿನ ಸುಲ್ತಾನ ನಿಂದ ಜರ್ಮನಿ ಟಾಂಗನ್ನೀಕವನ್ನು ಕಿತ್ತುಕೊಂಡಿತು. ವಸಾಹತುಗಳಿ ಗಾಗಿ ಆಫ್ರಿಕಾದಲ್ಲಿ ಯೂರೋಪಿಯನ್ ರಾಷ್ಟ್ರಗಳಿಗೆ ಒದಗಿದ ತಿಕ್ಕಾಟ ವನ್ನು ೧೮೮೪ರಲ್ಲಿ ಬರ್ಲಿನ್ ನಗರದಲ್ಲಿ ಯೂರೋಪಿಯನ್ ರಾಷ್ಟ್ರಗಳ ಸಭೆ ಯೊಂದು ಸೇರಿ ಪರಿಹರಿಸಿತು. ಗ್ಲಾಡ್‌ಸ್ಟನ್ ಆಫ್ರಿಕಾದ ಹಂಚಿಕೆಯಲ್ಲಿ (Scramble for Africa) ಆಸಕ್ತಿಯುಳ್ಳವನಾಗಿರಲಿಲ್ಲ. ಆದರೆ ಸ್ಯಾಲಿಸ್‌ಬರಿ ಸರ್ಕಾರವು ಇದರಲ್ಲಿ ಬಹಳ ಆಸಕ್ತಿ ಹೊಂದಿತ್ತಾದ್ದರಿಂದ ಕೆನ್ಯ (Kenya), ಉಗಂಡ (೧೮೮೫-೯೦) ಮೊದಲಾದುವುಗಳನ್ನು ಪಡೆದುಕೊಂಡಿತು. ಚೇಂಬರ್‌ಲೇನ್ ಆಫ್ರಿಕದ ಹಂಚಿಕೆಯಲ್ಲಿ ಇಂಗ್ಲೆಂಡ್ ಮುಖ್ಯಪಾತ್ರ ವಹಿಸುವಂತೆ ಮಾಡಿದನು.

ಈಜಿಪ್ಟನ್ನು ಬ್ರಿಟಿಷರ ವಶಕ್ಕೆ ಬಿಟ್ಟು ತಾವು ನಿರ್ಗಮಿಸಿದ್ದು ತಪ್ಪಾಯಿತೆಂದು ಫ್ರೆಂಚರಿಗೆ ಗೊತ್ತಾಗಿತ್ತು. ಸಹರಾದಿಂದ ಕೆಂಪು ಸಮುದ್ರದವರೆಗೆ ತಮ್ಮ ಪ್ರಭಾವವನ್ನು ಹರಡಬೇಕೆಂಬ ಅಭಿಪ್ರಾಯ ದಿಂದ ಅವರು ಮಾರ್‌ಚಾಂಡ್ ಎಂಬುವನನ್ನು ನೈಲ್‌ನದಿ ಮುಖದಲ್ಲಿದ್ದ ಫಾಷೋಡವನ್ನು (Fashoda) ಆಕ್ರಮಿಸಲು ೧೮೯೮ ರಲ್ಲಿ ಕಳುಹಿಸಿ

ದರು. ಸ್ವಲ್ಪಕಾಲ ಇದಕ್ಕಾಗಿ ಈ ಎರಡು ದೇಶಗಳ ನಡುವೆ ಯುದ್ಧವಾಗುವ ಅಂಜಿಕೆ ಒದಗಿತ್ತು. ಆದರೆ ನೈಲ್ ನದಿಯ ಮೇಲಿನ ಭಾಗ ಬೇರೆ ರಾಷ್ಟ್ರದ ಕೈವಶದಲ್ಲಿದ್ದರೆ ಈಜಿಪ್ಟಿನ ಅಭಿವೃದ್ಧಿಗೆ ಧಕ್ಕೆ ಬರುವುವೆಂದು ವಾದಿಸಿ, ಕಿಚನರ್ ಮಾರ್‌ಚಾಂಡ್ ಹಿಂದಿರುಗುವಂತೆ ಮಾಡಿದನು.

# ಏಳನೆ ಎಡ್ವರ್ಡ್. ೧೯೦೧—೧೯೧೦.

೧೯೦೧ ರಲ್ಲಿ ವಿಕ್ಟೋರಿಯಾ ರಾಣಿ ಕಾಲವಾಗಿ ಏಳನೇ ಎಡ್ವರ್ಡ್ ಪಟ್ಟಕ್ಕೆ ಬಂದನು. ೧೯೦೨ ರಲ್ಲಿ ಸ್ಯಾಲಿಸ್‌ಬರಿ ರಾಜಕೀಯದಿಂದ ನಿವೃತ್ತಿ ಹೊಂದಿದನು. ಅವನ ನಂತರ ಬಾಲ್‌ಫರ್ (Balfour) ಮಂತ್ರಿ ಮಂತ್ರಿಮಂಡಲ (೧೯೦೨–೧೯೦೫) ಅಧಿಕಾರದಲ್ಲಿತ್ತು. ಆದರೆ ಇಂಗ್ಲೆಂಡಿನಲ್ಲಿ ಈ ವೇಳೆಗೆ ಸಮಾಜ ಸ್ವಾಮ್ಯವಾದ (Socialism) ಪ್ರಾಮುಖ್ಯತೆಗೆ ಬರುತ್ತಿತ್ತು. ರಾಬರ್ಟ್ ಓವೆನ (೧೭೭೧–೧೮೫೮) ಇಂಗ್ಲೆಂಡಿನ ಮೊಟ್ಟ ಮೊದಲಿನ ಸಮತಾವಾದಿ ಎಂದು ಹೇಳಬಹುದು. ಅವನು ಈ ತತ್ವವನ್ನು ತನ್ನ ಕಾರ್ಖಾನೆಯಲ್ಲಿ ಮೊಟ್ಟ ಮೊದಲು ಆಚರಣೆಗೆ ತಂದನು. ಅವನ ಕಾರ್ಖಾನೆಗೆ ಸೇರಿದ ಪಾಠಶಾಲೆಗಳನ್ನು ನೋಡಲು ಯೂರೋಪಿನಿಂದ ಅನೇಕ ಪ್ರೇಕ್ಷಕರು ಬರುತ್ತಿದ್ದರು. ಕಾರ್ಲ್ ಮಾರ್ಕ್ಸ್ ೧೮೬೭ ರಲ್ಲಿ ತನ್ನ ಪುಸ್ತಕವನ್ನು (Das Kapital) ಪ್ರಕಟಿಸಿದನು. ೧೮೮೩ ರಲ್ಲಿ 'ಫೇಬಿಯನ್' ಸಂಘ ಸ್ಥಾಪನೆಯಾಗಿ, ಅರ್ಥಶಾಸ್ತ್ರ ವಿಶಾರದನಾದ ವೆಬ್ (Mr. and Mrs. Sidney webb) ಮತ್ತು ಆತನ ಪತ್ನಿ, ಮತ್ತು ಸುಪ್ರಸಿದ್ಧ ನಾಟಕಕಾರ ಬರ್ನಾಡ್ ಷಾ ಮೊದಲಾದವರ ಸಹಾಯದಿಂದ, ಸಮತಾವಾದವನ್ನು ಅದು ಜನಗಳಲ್ಲಿ ಪ್ರಚುರಪಡಿಸಿತು. ಸಮತಾವಾದವು ಔದ್ಯೋಗಿಕ ಸಂಘಗಳನ್ನು ಆಕರ್ಷಿಸಿತು. ೧೮೯೩ ರಲ್ಲಿ ಸ್ವಾತಂತ್ರ್ಯ ಕಾರ್ಮಿಕ ಪಕ್ಷ (Independent Labour Party) ಕೇರ್ ಹಾರ್ಡೀ ಎಂಬುವನಿಂದ ಸ್ಥಾಪಿಸಲ್ಪಟ್ಟಿತು. ಅವನು ಬ್ರಿಟಿಷ್ ರಾಜಕೀಯದಲ್ಲಿ ಸಮತಾವಾದಕ್ಕೆ ಸ್ಥಾನ ಸಿಗುವಂತೆ ಮಾಡಿದನು. ೧೮೯೩ ರಲ್ಲಿ ಅವನು ಪಾರ್ಲಿಮೆಂಟಿನ ಸದಸ್ಯನಾದನು. ೧೮೯೯ ರಲ್ಲಿ ಔದ್ಯೋಗಿಕ ಸಂಘಗಳ ಸಭೆ (Trade Union Congress) ಸ್ವಾತಂತ್ರ್ಯ ಕಾರ್ಮಿಕ ಪಕ್ಷದೊಡನೆ (I. L. P.) ಸೇರಿಕೊಳ್ಳಲು ನಿಶ್ಚೈಸಿತು. ಕಾರ್ಮಿಕರ ಸ್ಥಿತಿಗತಿಗಳನ್ನು ಸರಿಪಡಿಸಲು ರಾಜಕೀಯವನ್ನು ಪ್ರವೇಶಿಸಬೇಕೆಂಬ ಮಸೂದೆಯನ್ನು ಅದು ಅನುಮೋದಿಸಿತು. ಹೀಗೆ ೧೯೦೦ ರಲ್ಲಿ ಕಾರ್ಮಿಕ ಪಕ್ಷ ಹುಟ್ಟಿತು (Labour Party).

ಕೇರ್ ಹಾರ್ಡಿ ಅದರ ನಾಯಕ; ಜೇಮ್ಸ್ ರಾಂಸೆ ಮ್ಯಾಕ್ ಡೋನಾಲ್ಡ್ ಮತ್ತು ಫಿಲಿಪ್ ಸ್ನೊಡ್ಡೆ ಅದರ ಇತರ ಪ್ರಮುಖ ವ್ಯಕ್ತಿಗಳು. ೧೯೦೦ ರ ಪಾರ್ಲಿಮೆಂಟಿನಲ್ಲಿ ಕಾರ್ಮಿಕ ಪಕ್ಷದ ಸದಸ್ಯರು (Labour Members of Parliment) ಮೂರು–ನಾಲ್ಕು ಜನ ಮಾತ್ರವಿದ್ದರು. ಕ್ರಮೇಣ ಅವರ ಸಂಖ್ಯೆಯು ಜಾಸ್ತಿಯಾಗಿ, ೧೯೦೬ ರಲ್ಲಿ ೪೦ ಕ್ಕೇರಿತು. ಇವರು ಲಿಬರಲ್ ಪಕ್ಷದ ಕ್ಯಾಂಬೆಲ್—ಬ್ಯಾನರ್‌ಮನ್ ಕಡೆ ಸೇರಿಕೊಂಡರು. ಕ್ಯಾಂಬೆಲ್—ಬ್ಯಾನರ್‌ಮನ್ Campbell—Banner man) ಸರ್ಕಾರದಲ್ಲಿ ಅನೇಕ ಪ್ರತಿಭಾವಂತ ವ್ಯಕ್ತಿಗಳಿದ್ದರು. ಸರ್ ಎಡ್ವರ್ಡ್ ಗ್ರೆ ವಿದೇಶಾಂಗ ಕಾರ್ಯದರ್ಶಿ, ಆರ್. ಬಿ. ಹಾಲ್ಡೇನ್ ಯುದ್ಧ ಕಾರ್ಯದರ್ಶಿ, ಆಸ್‌ಕ್ವಿತ್ ಆರ್ಥಿಕ ಮಂತ್ರಿ (Chancellor of the Exchequer) ಗಳಾಗಿದ್ದರು. ಆದರೆ ಕಾರ್ಮಿಕ ಪಕ್ಷದ ಜಾನ್ ಬರ್ನ್ಸ್ ಎಂಬುವನಿಗೆ (John Burns) ವಾಣಿಜ್ಯ ಸಮಿತಿಯ (Board of Trade) ಅಧ್ಯಕ್ಷ ಪದವಿ ಸಿಕ್ಕಿದುದರಿಂದ ಲಿಬರಲ್ ಮತ್ತು ಕಾರ್ಮಿಕ ಪಕ್ಷಗಳು ಪರಸ್ಪರ ಸ್ನೇಹದಿಂದ ಕೂಡಿದ್ದುವೆಂದು ಹೇಳಬಹುದು.

ಈ ಸರ್ಕಾರವು ಅನೇಕ ಸುಧಾರಣೆಗಳನ್ನು ತಂದುದರಿಂದ ಈ ಕಾಲಕ್ಕೆ (೧೯೦೬–೧೯೦೮—ಕಾಂಬೆಲ್ ಬ್ಯಾನರ್‌ಮನ್ ಮಂತ್ರಿತ್ವ, ಆಸ್‌ಕ್ವಿತ್ ಮಂತ್ರಿತ್ವ—೧೯೦೮–೧೫) ಮೂರನೇ ಸುಧಾರಣಾ ಯುಗವೆಂದು ಹೇಳಬಹುದು. ಈ ಸುಧಾರಣೆಗಳಲ್ಲಿ ಅತಿ ಮುಖ್ಯವಾದ ಕೆಲವನ್ನು ಇಲ್ಲಿ ಕಾಣಿಸಲಾಗಿದೆ.

(೧) ಕಾರ್ಮಿಕರ ಪರಿಹಾರದ ಕಾನೂನು, ೧೯೦೬ : (The workmen's compensation Act, ೧೯೦೬) ತಮ್ಮ ಕಾರ್ಖಾನೆಯಲ್ಲಿ ಕೆಲಸ ಮಾಡುತ್ತಿದ್ದಾಗ ಅಕಸ್ಮಾತ್ ಅಪಾಯಕ್ಕೆ ಒಳಗಾದ ಕಾರ್ಮಿಕರಿಗೆ ಮಾಲೀಕರು ಪರಿಹಾರ ನೀಡಬೇಕೆಂದು ಗೊತ್ತು ಮಾಡಿತು.

(೨) ಔದ್ಯೋಗಿಕ ಸಂಘಗಳ ಕಾನೂನು, ೧೯೦೬ : ಔದ್ಯೋಗಿಕ ಸಂಘಗಳ ಚರಿತ್ರೆಯಲ್ಲಿ ಟಾಫ್‌ವೇಲ್ ತೀರ್ಮಾನ (೧೯೦೧) ಅತಿ ಮಹತ್ತರವಾದುದು. ೧೮೭೧ರಲ್ಲಿ ಗ್ಲಾಡ್‌ಸ್ಟನ್ ಮಂತ್ರಿತ್ವ ಔದ್ಯೋಗಿಕ ಸಂಘ

ಗಳಿಗೆ ಕೊಟ್ಟಿದ್ದ ಹಕ್ಕನ್ನು ನ್ಯಾಯಾಧಿಪತಿಗಳು ಟಾಫ್‌ವೇಲ್ ತೀರ್ಮಾನದಲ್ಲಿ ತಳ್ಳಿಹಾಕಿದ್ದರು. ಟಾಫ್‌ವೇಲ್ ರೈಲ್ವೆ ಕಂಪನಿಯ ಕೆಲಸಗಾರರು ಮುಷ್ಕರ ಕಾಲದಲ್ಲಿ ನ್ಯಾಯಬದ್ಧವಲ್ಲದ ವರ್ತನೆಯನ್ನು ಪ್ರದರ್ಶನ ಮಾಡಿದ್ದೇನೊ ನಿಜ. ಆದರೆ, ಆ ನಡತೆಗೆ ಕಾರಣರಾದ ವ್ಯಕ್ತಿಗಳನ್ನು ಶಿಕ್ಷಿಸುವ ಬದಲು ರೈಲ್ವೆ ಕಂಪನಿಯು ರೈಲ್ವೆ ನೌಕರರ ಸಂಘದ ಮೇಲೆ ವ್ಯವಹಾರ ಹೂಡಿತು. ಲಾರ್ಡ್ಸ್ ಸಭೆಯ ನ್ಯಾಯಾಧೀಶರು, ಮುಷ್ಕರದಿಂದ ರೈಲ್ವೆ ಕಂಪನಿಗೆ ಸಂಭವಿಸಿದ ನಷ್ಟಕ್ಕಾಗಿ ರೈಲ್ವೆ ನೌಕರರ ಸಂಘವು ೨೩,೦೦೦ ಪೌಂಡು ದಂಡ ತೆರಬೇಕೆಂದು ತೀರ್ಮಾನಿಸಿದರು. ಇಂತಹ ಪ್ರಸಂಗಗಳು ಒದಗಿದರೆ ಔದ್ಯೋಗಿಕ ಸಂಘಗಳ ಹಣವೆಲ್ಲಾ ವ್ಯರ್ಥವಾಗುವ ಸ್ಥಿತಿ ಒದಗಿತು. ಇದರಿಂದ ಪಾರಾಗಲು ಕಾರ್ಮಿಕ ಪಕ್ಷವು, ಕ್ಯಾಂಬೆಲ್-ಬ್ಯಾನರ್ಮನ್ ಸರ್ಕಾರವು ಔದ್ಯೋಗಿಕ ಸಂಘಗಳ ಹಣಕ್ಕೆ ನ್ಯಾಯಬದ್ಧವಾದ ರಕ್ಷಣೆಯನ್ನು (Legal protection) ಕಾನೂನಿನ ಮೂಲಕ ೧೯೦೬ ರಲ್ಲಿ ತಂದಿತು.

(೩) ಪಾಠಶಾಲೆಗೆ ಬರುವ ಮಕ್ಕಳಿಗೆ ಮಧ್ಯಾಹ್ನ ಆಹಾರವನ್ನು ಒದಗಿಸುವ ಕಾನೂನು ೧೯೦೬ ರಲ್ಲಿ ಜಾರಿಗೆ ಬಂದಿತು.

(೪) ಪ್ರಾಥಮಿಕ ಶಿಕ್ಷಣ ಶಾಲೆಗಳ ಮಕ್ಕಳ ಆರೋಗ್ಯವನ್ನು ಪರೀಕ್ಷೆ ಮಾಡುವ ಕಾನೂನು ೧೯೦೭ ರಲ್ಲಿ ಬಳಕೆಗೆ ಬಂದಿತು.

(೫) ವೃದ್ಧಾಪ್ಯ ವೇತನದ ಕಾನೂನು, ೧೯೦೮ (Old Age Pension Act, ೧೯೦೮) : ಎಪ್ಪತ್ತು ವರ್ಷದ ವೃದ್ಧರಿಗೆ ವಾರಕ್ಕೆ ಐದು ಷಿಲಿಂಗ್ ವೇತನ ಸಿಕ್ಕುವಂತೆ ಈ ಕಾನೂನು ಗೊತ್ತುಮಾಡಿತು. ವೃದ್ಧ ದಂಪತಿಗಳಿಗೆ ಏಳೂವರೆ ಷಿಲಿಂಗ್ ಸಿಗುತ್ತಿತ್ತು.

(೬) ಬೆವರಿನ ಕೈಗಾರಿಕೆಯ ಕಾನೂನು, ೧೯೦೯ (Sweated Industries Act, ೧೯೦೯) : ಔದ್ಯೋಗಿಕ ಸಂಘಗಳ ಪ್ರಭಾವಕ್ಕೆ ಸಿಲುಕದ ಕೆಲವು ಉದ್ಯೋಗಗಳಲ್ಲಿ ಸರಿಯಾದ ವ್ಯವಸ್ಥೆ ಮತ್ತು ಸರಿಯಾದ ಕೂಲಿ ದೊರಕುವಂತೆ ಈ ಕಾನೂನು ವಿಧಿಸಿತು.

(೭) ಅಂಗಡಿಗಳಲ್ಲಿ ಕೆಲಸ ಮಾಡುವ ಕಾಲದ ಕಾನೂನು ೧೯೧೧ (Shop hours Act, ೧೯೧೧), ಅಂಗಡಿಯ ಕೆಲಸಗಾರರು (Shop Assistants) ಕೆಲಸಮಾಡುವ ಕಾಲವನ್ನು (Hours of work) ಈ ಕಾನೂನು ಗೊತ್ತುಮಾಡಿತು.

(೮) ರಾಷ್ಟ್ರೀಯ ವಿಮಾ ಕಾನೂನು, ೧೯೧೧ (National Insurance Act, ೧೯೧೧) ಈ ಕಾನೂನನ್ನು ಲಾಯಿಡ್‌ಜಾರ್ಜ್ (£ Loyd George) ಜಾರಿಗೆ ತಂದನು. ವರ್ಷಕ್ಕೆ ೧೬೦ ಪೌಂಡುಗಳಿಗಿಂತ ಕಡಮೆ ವರಮಾನವುಳ್ಳ ಕಾರ್ಮಿಕರು ಖಾಯಿಲೆಗಾಗಿ ವಿಮೆ ಮಾಡಬೇಕೆಂದು ಕಾನೂನು ವಿಧಿಸಿತು. ವಿಮೆಯ ನಿಧಿಗೆ ಕಾರ್ಮಿಕರು ವಾರಕ್ಕೆ ಕೆಲವು ಪೆನ್ನಿಗಳನ್ನೂ, ಮಾಲೀಕರು ಮತ್ತು ಸರ್ಕಾರ ಚಂದಾ ರೂಪದಲ್ಲಿ ಸ್ವಲ್ಪ ಹಣವನ್ನೂ ಕೊಡಬೇಕಾಯಿತು. ಕೆಲಸ ಕಳೆದುಕೊಂಡ ಕಾರ್ಮಿಕರಿಗೆ ವಾರಕ್ಕೆ ಏಳು ಷಿಲಿಂಗ್ ಈ ನಿಧಿಯಿಂದ ಕೊಡಬೇಕೆಂದು ಗೊತ್ತಾಯಿತು. ಮೊದಮೊದಲು ಈ ಕಾನೂನು ಎಂಟು ಉದ್ಯೋಗಗಳಿಗೆ ಅನ್ವಯಿಸಲ್ಪಟ್ಟಿತಾದರೂ, ಕಾಲಕ್ರಮೇಣ ಎಲ್ಲಾ ಉದ್ಯೋಗಗಳಿಗೂ ಇದರಿಂದ ಉಪಕಾರವಾಯಿತು.

ಆರೋಗ್ಯದ ವಿಚಾರದಲ್ಲಿಯೂ ಈ ಕಾನೂನು ಮುಖ್ಯವಾದುದು. ಕಾರ್ಮಿಕರು ವೈದ್ಯರ ಪಟ್ಟಿ (Panel) ಯಲ್ಲಿ ತಮ್ಮ ಹೆಸರನ್ನು ಸೇರಿಸುವುದರ ಮೂಲಕ ಉಚಿತ ವೈದ್ಯಸಹಾಯ ಹೊಂದಲು ಅವಕಾಶ ಕಲ್ಪಿಸಲಾಯಿತು.

(೯) ೧೯೧೧ ನೆ ಪಾರ್ಲಿಮೆಂಟಿನ ಕಾನೂನಿನಿಂದ ಲಾರ್ಡ್ಸ್ ಸಭೆಯ ಅನಂಗೀಕಾರದ ಅಧಿಕಾರ (Power of veto) ಮುಕ್ತಾಯವಾದುದಲ್ಲದೆ, ಪಾರ್ಲಿಮೆಂಟಿನ ಸದಸ್ಯರಿಗೆ ವರ್ಷಕ್ಕೆ ೪೦೦ ಪೌಂಡು ವೇತನ ಸಿಕ್ಕುವಂತಾಯಿತು.

ಲಾರ್ಡ್ಸ್ ಸಭೆ ಮತ್ತು ಕಾಮನ್ಸ್‌ಸಭೆಗಳಿಗೆ ತಿಕ್ಕಾಟ : ಲಾಯಿಡ್ ಜಾರ್ಜ್ ೧೯೦೯ರ ಆಯವ್ಯಯದ ಪಟ್ಟಿಯನ್ನುಮುಂಡಿಸಿದಾಗ ಈ ಎರಡು ಸಭೆಗಳಿಗೂ ತಿಕ್ಕಾಟವು ಪ್ರಾರಂಭವಾಯಿತು. ಲಾಯಿಡ್ ಜಾರ್ಜ್

'ಜನಗಳ ಆಯವ್ಯಯದ' ಪಟ್ಟಿಯಲ್ಲಿ ಹೊಸ ಸುಧಾರಣೆಗಳಿಂದ ಒದಗಿದ ಖರ್ಚುಗಳಿಗೆ ಹಣವನ್ನು ಒದಗಿಸಲು ೩೦೦೦ ಪೌಂಡುಗಳಿಗಿಂತ ಹೆಚ್ಚಿನ ವರಮಾನವುಳ್ಳವರು ಪೌಂಡಿಗೆ ಒಂದು ಷಿಲ್ಲಿಂಗ್ ಎರಡುಪೆನ್ನಿ ತೆರಿಗೆ ಕೊಡಬೇಕೆಂದು ನಿರ್ಧರಿಸಿದನು. ೫೦೦೦ ಪೌಂಡುಗಳಿಗಿಂತ ಹೆಚ್ಚು ವರಮಾನ ಹೊಂದಿದ್ದವರು ಪೌಂಡಿಗೆ ಆರು ಪೆನ್ನಿಯಂತೆ "ವಿಶೇಷತೆರಿಗೆ'' (Super Tax) ಯನ್ನೂ ಕೊಡುವಂತೆ ವಿಧಿಸಿದನು. ಇದಕ್ಕೆ ವಿಪರೀತ ಪ್ರತಿಭಟನೆಯಾಯಿತು. ಸಾಮಾನ್ಯವಾಗಿ ಹಣಕಾಸಿನ ಮಸೂದೆ ಲಾರ್ಡ್ಸ್ ಸಭೆಯ ಮುಂದೆ ಮಂಡಿಸಲ್ಪಡುತ್ತಿರಲಿಲ್ಲವಾದರೂ ೧೯೦೯ರ ಆಯವ್ಯಯದ ಪಟ್ಟಿಯಲ್ಲಿ ನೆಮ್ಮದಿಯಾಗಿದ್ದವರ ಮೇಲೆ ಮತ್ತು ಶ್ರೀಮಂತರ ಮೇಲೆ ಹೆಚ್ಚು ತೆರಿಗೆಯ ಹೊರೆಯನ್ನು ಹಾಕಿದ್ದರಿಂದ ಅದು ಲಾರ್ಡ್ಸ್ ಸಭೆಯ ಮುಂದೆ ಹೋಗಿ ತಿರಸ್ಕರಿಸಲ್ಪಟ್ಟಿತು. ಆಸ್ಕ್ವಿತ್ ಪಾರ್ಲಿಮೆಂಟನ್ನು ರದ್ದುಗೊಳಿಸಿ, ೧೯೧೦ರಲ್ಲಿ ಜನಗಳ ಅಭಿಪ್ರಾಯವನ್ನು ತಿಳಿಯಲು ಮಹಾಚುನಾವಣೆಯನ್ನು ಏರ್ಪಡಿಸಿದನು. ೧೨೦ ಅಧಿಕ ಸಂಖ್ಯೆಯಿಂದ ಆಸ್ಕ್ವಿತ್ ಪಕ್ಷ ಪುನಃ ಗೆದ್ದಿತು. ಪುನಃ ಅದು ಲಾರ್ಡ್ಸ್ ಸಭೆ ಮುಂದೆ ಬಂದಾಗ ಅವರು ಅದನ್ನು ಒಪ್ಪಿಕೊಳ್ಳಬೇಕಾಯಿತು.

ಆದರೆ ಇದರಿಂದ ಸರ್ಕಾರಕ್ಕೆ ತೃಪ್ತಿಯಾಗಲಿಲ್ಲ. ಕನ್ಸರ್ವೇಟಿವ್ ಪಕ್ಷದವರಿಂದ ತುಂಬಿದ್ದ ಲಾರ್ಡ್ಸ್ ಸಭೆ, ಕಾಮನ್ಸ್ ಸಭೆಯಲ್ಲಿ ಸದಸ್ಯರಿಂದ ಚೆನ್ನಾಗಿ ಚರ್ಚಿಸಲ್ಪಟ್ಟು, ಸ್ವೀಕೃತವಾದ ಮಸೂದೆಗಳನ್ನು ತಿರಸ್ಕರಿಸುವುದು ಅಪ್ರಗತಿದಾಯಕವೆಂದು ಆಸ್ಕ್ವಿತ್ ಸರ್ಕಾರ ಯೋಚಿಸಿ, ಲಾರ್ಡ್ಸ್ ಸಭೆಯ ಅಧಿಕಾರವನ್ನೇ ಮೊಟಕು ಮಾಡುವ ಕಾನೂನನ್ನು ತಂದಿತು. ಕಾನೂನು ತರುವ ಮುನ್ನ ಆಸ್ಕ್ವಿತ್ ಜನಾಭಿಪ್ರಾಯ ತಿಳಿಯಲು ಮತ್ತೊಂದು ಚುನಾವಣೆಯನ್ನು ಏರ್ಪಡಿಸಬೇಕಾಯಿತು. ಲಾರ್ಡ್ಸ್ ಸಭೆ, ಕೆಲವು ತಿದ್ದುಪಡಿಗಳನ್ನು ತರಲು ಪ್ರಯತ್ನಿಸಿ ವಿಫಲ ಹೊಂದಿತು, ೧೮೩೨ರಲ್ಲಿ ಪಾರ್ಲಿಮೆಂಟಿನ ಸುಧಾರಣಾ ಕಾನೂನನ್ನು ಜಾರಿಗೆ ತರುವ ಮುನ್ನ ಒದಗಿದ್ದ ಬಿಕ್ಕಟ್ಟನ್ನು ಪರಿಹರಿಸಲು ರಾಜನು ಹೊಸದಾಗಿ ಕೆಲವರನ್ನು ಶ್ರೀಮಂತರ ಪದವಿಗೇರಿಸ (Creation of Lords) ಬೇಕೆಂಬ

ಸಲಹೆಯ ಉಪಯುಕ್ತತೆಯು ೧೯೧೧ರಲ್ಲಿಯೂ ಒದಗಿತು. ಕೊನೆಗೆ ಲಾರ್ಡ್ಸ್ ಸಭೆ, ೧೯೧೧ರ ಪಾರ್ಲಿಮೆಂಟಿನ ಕಾನೂನಿಗೆ ತನ್ನ ಒಪ್ಪಿಗೆಯನ್ನು ಕೊಟ್ಟಿತು. ಇದರಿಂದ ಒಂದು ಮಸೂದೆಯು ಕಾಮನ್ಸ್ ಸಭೆಯಲ್ಲಿ ಮೂರು ಸಲ ಚರ್ಚಿಸಲ್ಪಟ್ಟು ಅದರಿಂದ ಸ್ವೀಕರಿಸಲ್ಪಟ್ಟರೆ ಅದು ಲಾರ್ಡ್ಸ್ ಸಭೆಯ ಒಪ್ಪಿಗೆಯನ್ನು ಪಡೆಯದಿದ್ದರೂ ಕಾನೂನಾಗಿ ಪರಿಗಣಿಸಲ್ಪಡಲು ಅವಕಾಶವಾಯಿತು.

ಐರ್ಲೆಂಡಿನ ಸಮಸ್ಯೆ: ೧೯೦೩ರಲ್ಲಿ ಬಾಲ್ಫರ್ ಸರ್ಕಾರ ಐರ್ಲೆಂಡಿನ ರೈತರು ಜಮೀನು ಕೊಳ್ಳಲು ಒಂದು ಕಾನೂನನ್ನು ತಂದಿತು. ಐರ್ಲೆಂಡಿನ ಜಮೀನುಗಳು ಪ್ರಾಟೆಸ್ಟೆಂಟ್ ಜಮೀನುದಾರರ ಕೈಸೇರಿತ್ತೆಂದು ಹಿಂದೆಯೇ ಹೇಳಿದೆ. ಈ ಕಾನೂನಿನ ಪ್ರಕಾರ ಜಮೀನು ಕೊಳ್ಳಲು ಹಣವನ್ನು ಸರ್ಕಾರ ಸಾಲದ ರೂಪದಲ್ಲಿ ಕೊಡಲು ರೈತರಿಗೆ ಅವಕಾಶ ಮಾಡಿಕೊಟ್ಟಿತು. ಇದರಿಂದ ಐರ್ಲೆಂಡಿನ ಜಮೀನಿನ ಒಡೆತನದಲ್ಲಿ (Ownership) ಪರಿವರ್ತನೆಯಾಗಿ, ಒಂದು ದೊಡ್ಡ ಸಮಸ್ಯೆಯನ್ನು ಪರಿಹರಿಸಿದಂತಾಯಿತು.

೧೯೧೨ ರಲ್ಲಿ ಆಸ್ಕ್ವಿತ್ ಮೂರನೆ ಸ್ವಯಮಾಡಳಿತದ ಮಸೂದೆಯನ್ನು ತಂದಾಗ ಅದು ಕಾನೂನಾಗುವುದಕ್ಕೆ ಪ್ರತಿಬಂಧಕವಾಗಿದ್ದ ಲಾರ್ಡ್ಸ್ ಸಭೆಯ ಅಧಿಕಾರ ೧೯೧೧ ನೆ ಪಾರ್ಲಿಮೆಂಟಿನ ಕಾನೂನಿನಿಂದ ಕಳೆದುಹೋಗಿತ್ತು. ಆದರೆ ಅದಕ್ಕೆ ಮತ್ತೊಂದು ಪ್ರಬಲವಾದ ಅಡಚಣೆ ಒದಗಿತು. ಉತ್ತರ ಐರ್ಲೆಂಡಿನ ಅಲ್‌ಸ್ಟರ್ ಪ್ರಾಟೆಸ್ಟೆಂಟರು ಐರ್ಲೆಂಡಿಗೆ ಸ್ವಯಮಾಡಳಿತ (Home Rule) ಸಿಕ್ಕಿದರೆ ತಾವು ರೋಮನ್ ಕ್ಯಾಥಲಿಕ್ ಆಳ್ವಿಕೆಗೆ ಒಳಗಾಗಬೇಕಾದ ಪರಿಸ್ಥಿತಿ ಒದಗುವುದೆಂದು ಹೆದರಿ, ತಮಗೆ ಬೇರೆ ಸರ್ಕಾರ ರಚಿಸಿಕೊಳ್ಳುವ ಅವಕಾಶವನ್ನು ಕಲ್ಪಿಸಿಕೊಡುವುದಲ್ಲದೆ, ತಮ್ಮ ಪ್ರತಿನಿಧಿಗಳು ಕಾಮನ್ಸ್ ಸಭೆಯಲ್ಲೂ ಇರುವಂತೆ ಮಾಡಬೇಕೆಂದು ಇಂಗ್ಲೆಂಡನ್ನು ಕೇಳಿಕೊಂಡರು. ಐರ್ಲೆಂಡಿಗೆ ಸ್ವಯಮಾಡಳಿತಗಳಿಸಲು ಶ್ರಮಿಸುತ್ತಿದ್ದ ರೆಡ್‌ಮಂಡ್ ಒಂದು ಕಡೆ, ಮತ್ತು ಅಲ್‌ಸ್ಟರ್ ಪ್ರದೇಶಕ್ಕೆ, ಕ್ಯಾಥಲಿಕ್ ಐರ್ಲೆಂಡನ್ನು ಬಿಟ್ಟು

ಸ್ವಾತಂತ್ರ್ಯ ಪಡೆಯಲು ಕಂಕಣ ತೊಟ್ಟಿದ್ದ ಕಾರ್ಸನ್ ಮತ್ತೊಂದು ಕಡೆ, ಇಂಗ್ಲೆಂಡಿಗೆ ೧೯೧೪ರ ಯುದ್ಧದಲ್ಲಿ ಸಹಾಯ ಮಾಡಲು ಸಿದ್ಧರಾಗಿದ್ದರು. ಆದರೆ ಐರ್ಲೆಂಡಿನಲ್ಲಿ ರೆಡ್ಮಂಡನ ಪ್ರಾಮುಖ್ಯತೆ ಕಡಿಮೆಯಾಗುತಿತ್ತು. ಅಲ್ಲಿ ಒಂದು ಹೊಸ ಪಕ್ಷವು, ಕ್ರಾಂತಿಯಿಂದ ಐರ್ಲೆಂಡಿನ ಸ್ವಾತಂತ್ರ್ಯವನ್ನು ಸಾಧಿಸಲು ಸ್ಥಾಪಿತವಾಗಿತ್ತು. ಸಿನ್‌ಫೀನ್ ಈ ಚಳವಳಿಯ ಮುಖಂಡ ೧೯೧೬ ರಲ್ಲಿ ಈ ಪಕ್ಷವು ಜರ್ಮನ್ ಸಹಾಯುವನ್ನು ಹೊಂದಲು ಪ್ರಯತ್ನಿಸಿ ವಿಫಲಹೊಂದಿತು. ಅವರಲ್ಲಿ ಅನೇಕರನ್ನು ಗಲ್ಲಿಗೇರಿಸಲಾಯಿತು. ಆದರೂ ಸಿನ್‌ಫೀನ್ ಪಕ್ಷ ತಗ್ಗಲಿಲ್ಲ. ೧೯೧೮ ರ ಚುನಾವಣೆಯಲ್ಲಿ ೭೩ ಸಿನ್‌ಫೀನ್ ಪಕ್ಷದ (ಗಣರಾಜ್ಯಪಕ್ಷ) ಉಮೇದುವಾರರು ಚುನಾಯಿಸಲ್ಪಟ್ಟರು. ರಾಷ್ಟ್ರೀಯ ಪಕ್ಷದವರು ಆರು ಜನ ಮಾತ್ರ ಚುನಾಯಿತರಾದರು.

ಲಾಯಿಡ್‌ಜಾರ್ಜನ ಸರ್ಕಾರ ಆಲ್‌ಸ್ಟರ್ ಮತ್ತು ಐರ್ಲೆಂಡುಗಳಿಗೆ ತಲಾ ಒಂದೊಂದು ಪಾರ್ಲಿಮೆಂಟ್ ಇರುವಂತೆ ಸ್ವಯಮಾಡಳಿತದ ಕಾನೂನನ್ನು ತಂದಿತು. ಅಲ್‌ಸ್ಟರ್ ಇದನ್ನು ಒಪ್ಪಿಕೊಂಡರೂ, ದಕ್ಷಿಣ ಐರ್ಲೆಂಡ್ ಇದನ್ನು ನಿರಾಕರಿಸಿತು. ಕೊನೆಗೆ ೧೯೨೧ರಲ್ಲಿ ಲಾಯಿಡ್ ಜಾರ್ಜ್ ಐರ್ಲೆಂಡಿಗೆ, ಕೆನಡ, ಆಸ್ಟ್ರೇಲಿಯಗಳಂತೆ ಸ್ವಾತಂತ್ರ್ಯವನ್ನು ಕೊಟ್ಟನು. ಆದರೆ ಐರ್ಲೆಂಡ್ ಬ್ರಿಟಿಷ್ ಚಕ್ರಾಧಿಪತ್ಯದಲ್ಲಿ ಉಳಿಯಲು ಒಪ್ಪಿಕೊಂಡಿತು (Dominion Status). ಆದರೆ ಗಣರಾಜ್ಯ ಪಕ್ಷದಲ್ಲೇ ವಿಪರೀತಕ್ಕೆ ಹೋಗುವ ಉಪತಂಡವೊಂದು (Extreme Republicans) ಡಿವೇಲರನ ಮುಖಂಡತ್ವದಲ್ಲಿ ಇದನ್ನು ನಿರಾಕರಿಸಿತು. ಈ ಎರಡು ಉಪಪಂಗಡಗಳಿಗೂ ಹೋರಾಟವು ಪ್ರಾರಂಭವಾಯಿತು. ಕೊನೆಗೆ ಮಿತಗಾಮಿಗಳ (Moderates) ಕೈ ಮೇಲಾಗಿ ಐರ್ಲೆಂಡ್ ಬ್ರಿಟಿಷ್ ಸಾಮ್ರಾಜ್ಯದಲ್ಲಿ ಸ್ವತಂತ್ರ ರಾಷ್ಟ್ರವಾಗಿ (Free State with in the Dominion), ೧೯೨೩ರ ವೇಳೆಗೆ ಉಳಿಯಿತು.

## ಐದನೆ ಜಾರ್ಜ್ (೧೮೧೦—೧೯೩೬)

### ೧೯೧೪-೧೮ ರ ಯೂರೋಪಿನ ಮಹಾ ಯುದ್ಧ:

**ಯೂರೋಪಿನಲ್ಲಿ ಎರಡು ಯುದ್ಧದ ಗುಂಪು:** (Europe into two war Camps) ಒಂದನೆ ವಿಲಿಯಂ ಕೈಕೆಳಗೆ (೧೮೭೧–೮೮) ಬಿಸ್ಮಾರ್ಕ್ ಜರ್ಮನಿಯನ್ನು ಪ್ರಬಲವಾದ ರಾಷ್ಟ್ರವನ್ನಾಗಿ ಮಾಡಿದ್ದನಷ್ಟೆ. ೧೮೭೧ ರಲ್ಲಿ ಸೋತು ಹೋದ ಫ್ರಾನ್ಸ್ ಪುನಃ ಚೇತರಿಸಿ ಕೊಳ್ಳದಂತೆ ಮಾಡುವುದೇ ಅವನ ಗುರಿಯಾಗಿತ್ತು. ೧೮೭೯ ರಲ್ಲಿ ಜರ್ಮನಿ ಮತ್ತು ಆಸ್ಟ್ರೀಯ ಗುಟ್ಟಾಗಿ ಒಂದು ದ್ವಂದ್ವ ಒಪ್ಪಂದವನ್ನು (Dual Alliance) ಮಾಡಿಕೊಂಡವು. (ಅದು ಪ್ರಕಟಿತವಾದ್ದು, ೧೮೮೮) ೧೮೮೨ ರಲ್ಲಿ ಇಟಲಿಯು ಇವುಗಳ ಗುಂಪಿಗೆ ಸೇರಿ ತ್ರಿರಾಷ್ಟ್ರಗಳ ಒಪ್ಪಂದ (Triple Alliance) ಮಾಡಿಕೊಂಡಿತು. ಈ ಪ್ರಬಲ ಗುಂಪಿನ ಮುಂದೆ ಫ್ರಾನ್ಸ್ ನಿಲ್ಲಲು ಅಸಾಧ್ಯವಾಗಿದ್ದರೂ ಬಿಸ್ಮಾರ್ಕನಿಗೆ ತೃಪ್ತಿ ಯಾಗಲಿಲ್ಲ. ಅವನು ರಷ್ಯದೊಡನೆ ಮಿತ್ರತ್ವವನ್ನು ಸಾಧಿಸಲು ಪ್ರಯತ್ನಿಸಿದನು. ಆದರೆ ಇದು ಅಸಾಧ್ಯವಾಗಿತ್ತು. ಏಕೆಂದರೆ, ರಷ್ಯ ಮತ್ತು ಆಸ್ಟ್ರಿಯ ಬಾಲ್ಕನ್ ರಾಜಕೀಯದಲ್ಲಿ ಪ್ರತಿಕಕ್ಷಿ (Rivals) ಗಳಾಗಿದ್ದುವು. ಅವುಗಳಿಗೆ ಮಿತ್ರತ್ವವನ್ನು ತರುವುದು ಚತುರನಾದ ಬಿಸ್ಮಾರ್ಕನಿಗೂ ಆಗಲಿಲ್ಲ. ಇದರಿಂದ ಕೊನೆಗೆ ರಷ್ಯ ಫ್ರಾನ್ಸಿನ ಕಡೆಗೇ ಸೇರಿಕೊಂಡಿತು.

ಕೈಸರ್ ಎರಡನೆ ವಿಲಿಯಂ (೧೮೮೮–೧೯೧೮) ಚಕ್ರವರ್ತಿಯಾದ ಮೇಲೆ ಬಿಸ್ಮಾರ್ಕ್‌ನನ್ನು ಅಧಿಕಾರದಿಂದ ತೆಗೆದುಹಾಕಿದನು. ಆಗ್ಗೆ ಜರ್ಮನಿಯಲ್ಲಿ ಆಗುತ್ತಿದ್ದ 'ಯುದ್ಧವು ಅನಿವಾರ್ಯ' ಎಂಬ ತತ್ವಕ್ಕೆ ಅವನು ಉತ್ತೇಜನಕಾರಿಯಾಗಿದ್ದನು. ಈ ಮಧ್ಯೆ ತುರ್ಕಿಯು ಜರ್ಮನಿಯ ಸಹಾಯವನ್ನೂ ಮತ್ತು ಮಿತ್ರತ್ವವನ್ನೂ ಹೊಂದಿತು. ಅದರ ಸಹಾಯಕ್ಕೆ ಜರ್ಮನ್ ತಜ್ಞರು ಮತ್ತು ಸೈನಿಕರು ನೆರವಾದರು. ಜರ್ಮನಿ, ಆಸ್ಟ್ರಿಯ, ಬಾಲ್ಕನ್ ಪ್ರದೇಶ ಮತ್ತು ತುರ್ಕಿಯನ್ನು ಸೇರಿಸುವ ರೈಲು ಮಾರ್ಗ—ಬರ್ಲಿನ್ ಬಾಗದಾದ್ ರೈಲ್ವೆ—ಏಷ್ಯದ ತುರ್ಕಿಯಲ್ಲಿ ಪ್ರಾರಂಭವಾದಾಗ ಯೂರೋಪಿನಲ್ಲಿ ಕಳವಳವುಂಟಾಯಿತು. ಫ್ರಾನ್ಸ್, ಸ್ನೇಹಿತರಿ

ಗಾಗಿ ಕಾತರಪಡಲಾರಂಭಿಸಿತು. ೧೮೯೩ ರಲ್ಲಿ ರಷ್ಯ ಮತ್ತು ಫ್ರಾನ್ಸ್ ಸ್ನೇಹದ ಒಪ್ಪಂದ ಮಾಡಿಕೊಂಡವು. ಹೀಗೆ ಯೂರೋಪ್ ಯುದ್ಧಕ್ಕಾಗಿ ಎರಡು ಭಾಗವಾಗಿತ್ತು : ತ್ರಿರಾಷ್ಟ್ರಗಳೊಂದು ಕಡೆ, (ಜರ್ಮನಿ, ಆಸ್ಟ್ರಿಯ, ಇಟಲಿ) ಮತ್ತೊಂದು ಕಡೆ ಫ್ರಾನ್ಸ್ ಮತ್ತು ರಷ್ಯ. ೧೯೦೪ ರಲ್ಲಿ ಫ್ರಾನ್ಸ್ ಮತ್ತು ಇಂಗ್ಲೆಂಡ್ ಮಿತ್ರತ್ವದ ಕರಾರನ್ನು ಮಾಡಿಕೊಂಡವು (Entente Cordiale). ಈ ಒಪ್ಪಂದ ಯುದ್ಧಕಾಲದಲ್ಲ ಪರಸ್ಪರ ಸಹಾಯಕ ಕರಾರಾಗಿ ಪರಿವರ್ತನೆಯಾದದ್ದು ೧೯೧೨ ರಲ್ಲಿ. ೧೯೦೭ ರಲ್ಲಿ ಫ್ರಾನ್ಸಿನ ಪ್ರಭಾವದಿಂದ ಇಂಗ್ಲೆಂಡ್ ಮತ್ತು ರಷ್ಯ ಒಪ್ಪಂದಕ್ಕೆ ಬಂದವು. ಹೀಗೆ ಯೂರೋಪಿನಲ್ಲಿ ಎರಡು ತ್ರಿರಾಷ್ಟ್ರಗಳ ಗುಂಪುಗಳಾದವು (Triple Alliance Versus Triple Entente). ಇಂಗ್ಲೆಂಡ್ ಫ್ರಾನ್ಸಿನ ಕಡೆ ಸೇರಲು ಪ್ರಬಲವಾದ ಕಾರಣ ಜರ್ಮನಿಯು ತನ್ನ ನೌಕಾಪಡೆಯನ್ನು ಹೆಚ್ಚಿಸಿಕೊಂಡದ್ದೆಂದು ಹೇಳಬಹುದು. ಕೈಸರ್, ಇಂಗ್ಲೆಂಡ್, ಫ್ರಾನ್ಸ್ ಮತ್ತು ರಷ್ಯ ಒಂದು ಗುಂಪಾದುದನ್ನು ಕೇಳಿ ಅವು ಜರ್ಮನಿಯನ್ನು ಸುತ್ತುಗಟ್ಟಲು (Encirclement) ಸಿದ್ಧವಾಗುತ್ತಿದೆಯೆಂದು ನಂಬಿದನು.

೧೮೮೭ ರಿಂದ ಜರ್ಮನಿಯು ಬಾಲ್ಟಿಕ್ ಸಮುದ್ರ ಮತ್ತು ಉತ್ತರ ಸಮುದ್ರವನ್ನು ಸೇರಿಸಲು ಕೀಲ್ ಕಾಲುವೆಯ ನಿರ್ಮಾಣದಲ್ಲಿ ತೊಡಗಿತ್ತು. ೧೯೦೦ ರಲ್ಲಿ ವಾನ್ ಟಿರ್‌ಪಿಟ್ಸ್ (Von Tirpitz) ಯುದ್ಧನೌಕೆಗಳನ್ನು ನಿರ್ಮಿಸಲು ಒಂದು ಕಾನೂನನ್ನು ತಂದನು. ಇಂಗ್ಲೆಂಡಿನಲ್ಲಿಯೂ ಯುದ್ಧ ಹಡಗುಗಳ ನಿರ್ಮಾಣವಾಗುತ್ತಿತ್ತು. ನೌಕಾಧಿಪತಿ ಫಿಷರ್ (Fisher) 'ಡ್ರೆಡ್ ನಾಟ್' (Dread nought) ಎಂಬ ವೇಗವಾಗಿ ಹೋಗುವ ಯುದ್ಧದ ಹಡಗನ್ನು ಕಂಡುಹಿಡಿದು, ಅಂತಹ ಕೆಲವು ಹಡಗುಗಳನ್ನು ಕಟ್ಟಿದ್ದನು. ೧೯೦೯ ರ ವೇಳೆಗೆ ಎಂಟು ಅಂತಹ ಹಡಗುಗಳು ಸಿದ್ಧವಾಗಿದ್ದುವು. ಮುಂದಿನ ಎರಡು ವರ್ಷಗಳಲ್ಲಿ ತಲಾ ಐದು ಅಂತಹ ಹಡಗುಗಳನ್ನು ಕಟ್ಟಲು ತೀರ್ಮಾನವಾಗಿತ್ತು. ಹಾಲ್ಡೇನ್, ಬ್ರಿಟಿಷ್ ಸೈನ್ಯದಲ್ಲಿ ಅನೇಕ ಸುಧಾರಣೆಗಳನ್ನು ಮಾಡಿ, ಸೈನ್ಯವು ದಕ್ಷತೆಯಿಂದ ಯುದ್ಧಕ್ಕೆ ಸಿದ್ಧವಾಗುವಂತೆ ಎಚ್ಚರಿಕೆ ತೆಗೆದುಕೊಂಡಿದ್ದನು.

ಜರ್ಮನಿಯು ೧೯೧೩ರಲ್ಲಿ ೫೦,೦೦೦,೦೦೦ ಪೌಂಡು ವಿಶೇಷತೆರಿಗೆಯಿಂದ ತನ್ನ ಸೈನ್ಯವನ್ನು ಸುಸಜ್ಜಿತವಾಗುವಂತೆ ಮಾಡಲು ತೊಡಗಿತ್ತು. ೧೯೨೦ ರ ವೇಳೆಗೆ ಜರ್ಮನಿ ೬೦ ಯುದ್ಧದ ಕಾವಲು ಹಡಗುಗಳನ್ನೂ (Cruiser), ೪೧ ಸಾಮಾನ್ಯ ಯುದ್ಧ ನೌಕೆಗಳನ್ನೂ ಕಟ್ಟಲು ಏರ್ಪಡಿಸಿಕೊಂಡಿತ್ತು. ಲಾಯಿಡ್ ಜಾರ್ಜ್ ಎರಡು ದೇಶಗಳೂ ಈ ಹಡಗು ಕಟ್ಟುವ ಓಟವನ್ನು ನಿಲ್ಲಿಸಬೇಕೆಂದು (Naval holiday) ಪ್ರಯತ್ನಿಸಿ, ವಿಫಲನಾದನು.

ಮೊದಲನೆ ಮಹಾಯುದ್ಧಕ್ಕೆ ಕಾರಣಗಳನ್ನು ಹುಡುಕಲು ಹೊರಟರೆ, ಬೇರೆ ಒಂದು ಪುಸ್ತಕವನ್ನೇ ಬರೆಯಬೇಕಾಗುವುದು. ಆದರೆ, ಒಟ್ಟಿನಲ್ಲಿ ಮೂರು ಮುಖ್ಯ ಕಾರಣಗಳನ್ನು ಇಲ್ಲಿ ಸೂಚಿಸಬಹುದು :

(೧) ಮೇಲೆ ಹೇಳಿದಂತೆ ಜರ್ಮನಿ ಮತ್ತು ಇಂಗ್ಲೆಂಡ್ ವಸಾಹತು ಮತ್ತು ಸಾಮ್ರಾಜ್ಯ ಕಟ್ಟಲು ಎದುರಾಳಿಗಳಾಗಿದ್ದುವು.

(೨) ಫ್ರಾನ್ಸ್ ಮತ್ತು ಜರ್ಮನಿಗಳಿಗೆ ಮನಸ್ತಾಪ : ೧೮೭೧ರಲ್ಲಿ ಫ್ರಾನ್ಸ್, ಜರ್ಮನಿಯೊಡನೆ ಸೋತು, ಆಲ್‌ಸೇಸ್ ಮತ್ತು ಲೊರೇನ್ ಪ್ರಾಂತ್ಯಗಳನ್ನು ಜರ್ಮನಿಗೆ ಒಪ್ಪಿಸಿದ್ದುದನ್ನು ಮರೆತಿರಲಿಲ್ಲ.

(೩) ಬಾಲ್ಕನ್ ರಾಜಕೀಯದಲ್ಲಿ ಆಸ್ಟ್ರಿಯ ಮತ್ತು ರಷ್ಯಗಳ ಪರಸ್ಪರ ಪೈಪೋಟಿ.

ಟರ್ಕಿಗೂ, ರಷ್ಯಕ್ಕೂ ಯಾವಾಗಲೂ ಮನಸ್ತಾಪವಿದ್ದುದರಿಂದ ರಷ್ಯವು ಫ್ರಾನ್ಸಿನೊಡನೆ ಮಿತ್ರತ್ವ ಬೆಳೆಸಿದುದನ್ನು ನೋಡಿ ಟರ್ಕಿ ಜರ್ಮನಿ ಕಡೆ ಸೇರಿತು.

ಬಾಲ್ಕನ್ ಪ್ರದೇಶದ ರಾಜಕೀಯ ಯಾವಾಗಲೂ ಹೊಗೆಯಾಡುತ್ತಲೇ ಇತ್ತು. ಅಲ್ಲಿ ಬಾಸ್ನಿಯ, ಆಸ್ಟ್ರಿಯದ ಕೈವಶದಲ್ಲಿದ್ದುದು ಸರ್ಬಿಯವಿಗೆ ಸಹಿಸಲಾಗಲಿಲ್ಲ. ಅದರ ಆಸೆ ಸ್ಲಾವ್ ಜನಾಂಗವೆಲ್ಲಾ ಒಟ್ಟುಗೂಡಬೇಕೆಂಬುದೇ ಆಗಿತ್ತು. ೧೯೧೪ ನೇ ಜೂನ್ ೨೮ ರಲ್ಲಿ ಆಸ್ಟ್ರಿಯದ ರಾಜಕುಮಾರ (Arch Duke) ಫರ್ಡಿನಾಂಡ್ ಬಾಸ್ನಿಯದ ರಾಜಧಾನಿಯಾದ ಸೆರಜೆವೊ (Serajevo) ಎಂಬಲ್ಲಿ ಕೊಲ್ಲಲ್ಪಟ್ಟನು. ಸರ್ಬಿಯ

ಇದಕ್ಕೆ ಕಾರಣವೆಂದು, ಒಂದು ತಿಂಗಳನಂತರ ಆಸ್ಟ್ರಿಯ ಅದರ ಮೇಲೆ ಯುದ್ಧ ಘೋಷಣೆಯನ್ನು ಮಾಡಿ, ಅದರ ರಾಜಧಾನಿಯಾದ ಬೆಲ್‌ಗ್ರೇಡನ್ನು ಮುತ್ತಿತು. ರಷ್ಯ ತನ್ನ ಸೈನ್ಯವನ್ನು ೧೯೧೪ ನೇ ಜುಲೈ ೨೯-೩೦ ನೇ ತಾರೀಖಿನಲ್ಲಿ ಶೇಖರಿಸಿತು (Mobilised). ೩೧ ನೇ ತಾರೀಕು ರಷ್ಯ ಇದನ್ನು ನಿಲ್ಲಿಸಬೇಕೆಂದು ಜರ್ಮನಿ ಕೇಳಿತು. ಆಗಸ್ಟ್ ೧ ನೇ ತಾರೀಕು ಜರ್ಮನಿ ತನ್ನ ಸೈನ್ಯವನ್ನು ಶೇಖರಿಸಲಾರಂಭಿಸಿ, ರಷ್ಯದಮೇಲೆ ಯುದ್ಧಕ್ಕೆ ಹೊರಟಿತು. ಫ್ರಾನ್ಸ್ ರಷ್ಯದ ಕಡೆ ಸೇರಿಕೊಂಡಿತು. ಇಂಗ್ಲೆಂಡ್ ಯುದ್ಧಕ್ಕೆ ಸೇರುವ ತೀರ್ಮಾನವು ಇನ್ನೂ ಖಚಿತವಾಗಿರಲಿಲ್ಲ. ಫ್ರಾನ್ಸಿನ ಮೇಲೆ ನೇರವಾಗಿ ನುಗ್ಗಲು ಜರ್ಮನಿಯು ಬೆಲ್ಜಿಯಮ್ಮಿನ ಮೇಲೆ ಹಾದುಹೋಗಬೇಕಾಗಿತ್ತು. ಆದರೆ ಬೆಲ್ಜಿಯಮ್ಮಿನ ತಾಟಸ್ಥ್ಯತೆಯನ್ನು ಉಲ್ಲಂಘಿಸಕೂಡದೆಂದು ಇಂಗ್ಲೆಂಡ್ ಕಟ್ಟಕಡೆಯ ಎಚ್ಚರಿಕೆಯನ್ನು ಜರ್ಮನಿಗೆ ಕೊಟ್ಟಿತು. ಈ ಎಚ್ಚರಿಕೆಯ ಅವಧಿ ಆಗಸ್ಟ್ ೪ ನೆ ಮಧ್ಯ ರಾತ್ರಿಗೆ ಮುಗಿದುಹೋಯಿತು.

೧೯೧೪ ರಿಂದ ೧೯೧೮ ರ ವರೆಗೆ ಭೀಕರವಾದ ಕದನಗಳು ಮಾನ್ಸ್, ಜಟ್ಲೆಂಡ್, ಗ್ಯಾಲಿಪ್ಲೋಲಿ ಮೊದಲಾದಕಡೆ ನಡೆದು ಜರ್ಮನಿಯ ಬಲವು ಕುಗ್ಗಿಹೋಗಿತ್ತು. ಐದು ಅಮೆರಿಕದ ಹಡಗುಗಳನ್ನು ಜರ್ಮನಿಯ ಸಬ್‌ಮೆರೀನುಗಳು ಮುಳುಗಿಸಿದುದರಿಂದ ಅಮೆರಿಕವು ಯುದ್ಧರಂಗವನ್ನು ೧೯೧೭ ರಲ್ಲಿ ಪ್ರವೇಶಿಸಿತು. ಜರ್ಮನಿಯಲ್ಲಿ ಜನಗಳು ಯುದ್ಧದಿಂದ ಬೇಸತ್ತು ಕ್ರಾಂತಿಯನ್ನೆಬ್ಬಿಸಿದರು. ಕೈಸರ್ ಹಾಲೆಂಡಿಗೆ ಓಡಿಹೋದನು. ಆಗ ತಾನೇ ಜರ್ಮನಿಯಲ್ಲಿ ಸ್ಥಾಪಸಲ್ಪಟ್ಟದ್ದ ಗಣರಾಜ್ಯವು ೧೯೧೮ ನೇ ನವಂಬರ್ ೧೧ ನೇ ತಾರೀಖು ತಾತ್ಕಾಲಿಕ ಶಾಂತಿಗಾಗಿ ಬೇಡಿತು.

ಜೂನ್ ೧೯೧೯ ರಲ್ಲಿ ವರ್‌ಸೇಲ್ಸ್ ಕರಾರಿನ ಪ್ರಕಾರ ಯೂರೋಪಿನ ಭೂಪಟ ನಿರ್ಮಾಣದಲ್ಲಿ ಅನೇಕ ಬದಲಾವಣೆಗಳಾದುವು. ಕೇವಲ ಜಯಗಳಿಸಿದ ರಾಷ್ಟ್ರಗಳೇ ಈ ಕರಾರನ್ನು ತಯಾರಿಸಿದುದರಿಂದ ಹಿಟ್ಲರ್ ಅದಕ್ಕೆ ಸಂಬಂಧಪಟ್ಟ ಷರತ್ತುಗಳನ್ನು ತೊಡೆದುಹಾಕಿದನು. ಈ ಷರತ್ತುಗಳು ಅಷ್ಟು ಕಠಿಣವಾಗಿಲ್ಲದಿದ್ದರೆ ಎರಡನೇ ಮಹಾಯುದ್ಧ ಸಂಭವಿಸುವುದು ಅಷ್ಟು ಸುಲಭವಾಗುತ್ತಿರಲಿಲ್ಲವೆಂದು ಹೇಳಬಹುದು. ಕರಾರಿನ

ಷರತ್ತುಗಳನ್ನು ತಯಾರಿಸುವುದರಲ್ಲಿ ಫ್ರಾನ್ಸಿನ ಕ್ಲಾಮ್ಯಾನ್ಸು ಮುಖಂಡನಾಗಿದ್ದನು. ಇಂಗ್ಲೆಂಡಿನ ಲಾಯಿಡ್ ಜಾರ್ಜ್, ಅಮೆರಿಕದ ಅಧ್ಯಕ್ಷ ವಿಲ್ಸನ್ ಇತರ ಸದಸ್ಯರಾಗಿದ್ದರು. ಕ್ಲಾಮ್ಯಾನ್ಸುವಿಗೆ ೧೮೭೧ ರಲ್ಲಿ ಫ್ರಾನ್ಸಿಗೆ ಒದಗಿದ ನಷ್ಟಗಳನ್ನೆಲ್ಲಾ ಸರಿಪಡಿಸಿಕೊಳ್ಳುವುದಲ್ಲದೆ, ಆದರ ಶಾಶ್ವತ ರಕ್ಷಣೆಗೆ ಬೇಕಾದ ಎಲ್ಲಾ ಷರತ್ತುಗಳನ್ನೂ ಜರ್ಮನಿಯ ಮೇಲೆ ಹೊರಿಸಬೇಕೆಂಬುದೇ ಗುರಿ. ಆದರೆ ವಿಲ್ಸನ್ ಕೆಲವು ಉದಾತ್ತ ಧ್ಯೇಯಗಳನ್ನು ತನ್ನ "ಹದಿನಾಲ್ಕು ಅಂಶಗಳಲ್ಲಿ" ಸೇರಿಸಿದ್ದನು. ಆದರೆ, ಅಲ್ಲಿ ಸೇರಿದ್ದ ಇತರ ರಾಜಕಾರಿಣಿಗಳು ಅವುಗಳು ಬಳಕೆಗೆ ಬರಲು ಕಾತುರರಾಗಿರಲಿಲ್ಲ.

ಶಾಂತಿ ಸಭೆಯ ಮುಂದೆ ನಾಲ್ಕು ಪ್ರಶ್ನೆಗಳು ಬಂದುವು :

(೧) ದೇಶಗಳ ಪುನರ್ ವ್ಯವಸ್ಥೆ (Territorial Settlement),

(೨) ರಕ್ಷಣೆ ಮತ್ತು ನಿಶ್ಶಸ್ತ್ರೀಕರಣ (Security and Disarmament),

(೩) ಯುದ್ಧವನ್ನು ನಿಲ್ಲಿಸಲು ರಾಷ್ಟ್ರಗಳ ಸಂಘ (League of Nations).

(೪) ಯುದ್ಧದ ಖರ್ಚು ಮತ್ತು ಪರಿಹಾರ (Reparations).

ದೇಶಗಳ ಪುನರ್ವ್ಯವಸ್ಥೆ : ರಾಷ್ಟ್ರಗಳ ಪುನರ್ವ್ಯವಸ್ಥೆ ಮಾಡುವಾಗ ವಿಲ್ಸನ್ ಹೇಳಿದಂತೆ ಅವುಗಳ ಭವಿಷ್ಯವನ್ನು ಅವೇ ನಿಷ್ಕರ್ಷಿಸಿಕೊಳ್ಳುವ ಹಕ್ಕನ್ನು (Right of self-deter mination) ನೀಡಲಾಯಿತು. ಆಲ್ ಸೇಸ್ ಮತ್ತು ಲೊರ್ರೆ ಹೆಚ್ಚಾಗಿ ಫ್ರೆಂಚರಿಂದ ಕೂಡಿತ್ತೆಂದು, ಅವನ್ನು ಫ್ರಾನ್ಸಿಗೆ ಹಿಂತಿರುಗಿಸಲಾಯಿತು. ಅದೇ ರೀತಿ ಜರ್ಮನಿಗೆ ಸೇರಿದ್ದ ಪಶ್ಚಿಮ ಪ್ರಷ್ಯವನ್ನು ಪೋಲೆಂಡ್ ಗಣರಾಜ್ಯಕ್ಕೆ ಕೊಡಲಾಯಿತು. ಆದರೆ ಈ ತತ್ವವನ್ನು ಒಂದೇ ಸಮನಾಗಿ ಅನ್ವಯಿಸಲಿಲ್ಲ. ಹೆಚ್ಚು ಜರ್ಮನ್ ಜನಾಂಗವಿದ್ದ ಡ್ಯಾನ್‌ಜಿಗ್ (Danzig) ಜರ್ಮನಿಗೆ ಸೇರಲಿಲ್ಲ.

ಆಸ್ಟ್ರಿಯ ಹಂಗೆರಿ ಚಕ್ರಾಧಿಪತ್ಯವು ಅಳಿದುಹೋಯಿತು. ಅದರ ಸ್ಥಾನದಲ್ಲಿ ಅನೇಕ ಸಣ್ಣ ಗಣರಾಜ್ಯಗಳು ಸ್ಥಾಪಿಸಲ್ಪಟ್ಟುವು : ಹಂಗೆರಿ,


ಯೂರೋಪ
೧೯೧೯
ಬ್ರಿಟಿಷ್ ದ್ವೀಪಗಳು
ಇಂಗ್ಲೆಂಡ್
ಉತ್ತರ ಸಮುದ್ರ
ಇಂಗ್ಲಿಷ್ ಕಡಲ್ಗಾಲುವೆ
ಡೆನ್ಮಾರ್ಕ್
ಬಾಲ್ಟಿಕ್ ಸಮುದ್ರ
ಮಾಸ್ಕೋ
ಉಕ್ರೇನ್
ಪೋಲೆಂಡ್
ಜೆಕೊಸ್ಲೋವೇಕಿಯ
ಕಪ್ಪು ಸಮುದ್ರ
ಬಲ್ಗೇರಿಯ
ಗ್ರೀಸ್
ಸಿಸಿಲಿ
ಸೈಪ್ರಸ್
ಮ್ಯಾಡ್ರಿಡ್

ಆಸ್ಟ್ರಿಯ, ಜಕೋಸ್ಲವೇಕಿಯ, ಪೋಲೆಂಡ್ ಮತ್ತು ಯುಗೋಸ್ಲಾವಿಯ.

ಟರ್ಕಿಯ ಚಕ್ರಾಧಿಪತ್ಯವೂ ಮುಕ್ತಾಯವಾಯಿತು. ಸಿರಿಯ ಮತ್ತು ಪ್ಯಾಲೇಸ್‌ಟೈನ್ ಬೇರೆ ಬೇರೆ ಸ್ವತಂತ್ರ ರಾಷ್ಟ್ರಗಳಾದುವು. ಆದರೆ ಅವುಗಳು "ರಾಷ್ಟ್ರಗಳ ಸಂಘದ" ಆದೇಶದ ಪ್ರಕಾರ ಫ್ರಾನ್ಸ್ ಮತ್ತು ಇಂಗ್ಲೆಂಡಿನ ರಕ್ಷಣೆಗೆ (Mandated) ಒಪ್ಪಿಸಲ್ಪಟ್ಟುವು. ಇರಾಕ್ ಹೊಸ ರಾಜ್ಯವಾಯಿತು.

ಜರ್ಮನಿ ಮತ್ತು ರಷ್ಯಗಳ ಮಧ್ಯೆ ಬಾಲ್ಟಿಕ್ ಸಮುದ್ರದ ಪಕ್ಕದಲ್ಲಿ ಫಿನ್‌ಲ್ಯಾಂಡ್, ಎಸ್ತೋನಿಯ, ಲಟ್ವಿಯ ಮತ್ತು ಲಿಥೂನಿಯ ಎಂಬ ಸಣ್ಣ ಸಣ್ಣ ಗಣರಾಜ್ಯಗಳು ನಿರ್ಮಿಸಲ್ಪಟ್ಟುವು.

ಜರ್ಮನಿಯ ವಸಾಹತುಗಳೆಲ್ಲಾ ಆದರ ಕೈಬಿಟ್ಟು ಹೋದುವು. ಅವುಗಳನ್ನು "ರಾಷ್ಟ್ರಗಳ ಸಂಘ" ಇಂಗ್ಲೆಂಡ್, ಫ್ರಾನ್ಸ್ ಮತ್ತು ಇತರ ದೇಶಗಳ ಆಳ್ವಿಕೆಗೆ ಒಳಪಡಿಸಿತು. ಈ ದೇಶಗಳು ತಮ್ಮ ಆಳ್ವಿಕೆಯ ವಿಚಾರವಾಗಿ "ರಾಷ್ಟ್ರಗಳ ಸಂಘಕ್ಕೆ" ವರದಿ ಸಲ್ಲಿಸಬೇಕಾಗಿತ್ತು. ಈ ಪದ್ಧತಿಗೆ 'ಮ್ಯಾಂಡೇಟ್' (Mandate) ಎಂದು ಹೆಸರು. ಹಿಂದುಳಿದ ಈ ವಸಾಹತುಗಳನ್ನು ಏಳಿಗೆಗೆ ತರಬೇಕೆಂಬ "ರಾಷ್ಟ್ರಗಳ ಸಂಘದ" ಉದ್ದೇಶ್ಯ ಹೆಚ್ಚು ಫಲಕಾರಿಯಾಗಲಿಲ್ಲ.

ಜರ್ಮನಿಗೆ ಸೇರಿದ್ದ ಪೂರ್ವ ಆಫ್ರಿಕ ಇಂಗ್ಲೆಂಡಿಗೆ ವಹಿಸಲ್ಪಟ್ಟಿತು. ಜರ್ಮನಿಯ ದಕ್ಷಿಣ ಆಫ್ರಿಕದ ವಸಾಹತನ್ನು ದಕ್ಷಿಣ ಆಫ್ರಿಕದ ಸರ್ಕಾರ ತನ್ನ ವಶಕ್ಕೆ ತೆಗೆದುಕೊಂಡಿತು.

ವಸಾಹತುಗಳಲ್ಲದೆ, ಜರ್ಮನಿ ಆಲ್‌ಸೆಸ್ ಮತ್ತು ಲೋರೇನ್ ಪ್ರದೇಶಗಳನ್ನು ಫ್ರಾನ್ಸಿಗೆ ಬಿಟ್ಟುಕೊಟ್ಟಿತು. ಕಲ್ಲಿದ್ದಲು ಪ್ರದೇಶವಾದ ಸಾರ್ ಹದಿನೈದು ವರ್ಷಗಳ ಕಾಲ ಆದರ ಕೈಬಿಟ್ಟು ಹೋಯಿತು. ಸೈಲಿಷಿಯದ ಕಲ್ಲಿದ್ದಲಿನ ಪ್ರದೇಶ ಪೋಲೆಂಡಿಗೆ ಸೇರಿಹೋಯಿತು ೮೦ ಲಕ್ಷ ಜರ್ಮನರು ಬೇರೆಬೇರೆ ರಾಷ್ಟ್ರಗಳಲ್ಲಿ ಹಂಚಿಹೋದುದಲ್ಲದೆ, ೨೫ ಸಾವಿರ ಚದುರ ಮೈಲಿ ಪ್ರದೇಶ ಆದರ ಕೈಬಿಟ್ಟಿತು. ಇಷ್ಟೇ ಅಲ್ಲದೆ ತಾನೆ ಯುದ್ಧಕ್ಕೆ ಕಾರಣವೆಂದು ಜರ್ಮನಿಯು ಒಪ್ಪಿಕೊಳ್ಳಬೇಕಾಯಿತು. ಇದಕ್ಕಾಗಿ ಅಪಾರ

ವಾದ ದಂಡವನ್ನು ಕೊಡಲು ಅದು ಒಪ್ಪಬೇಕಾಯಿತು. ಗೆದ್ದ ರಾಷ್ಟ್ರಗಳು ೧೧,೦೦೦,೦೦೦,೦೦೦, ಪೌಂಡಿನ ಪಟ್ಟಿಯನ್ನು ಅದರ ಮುಂದಿಟ್ಟವು. ಜರ್ಮನಿಯು ತನ್ನ ಸೈನ್ಯ ಮತ್ತು ನೌಕಾಬಲವನ್ನು ತ್ಯಜಿಸಬೇಕಾಯಿತು. ಜರ್ಮನಿಗೆ ವರ್‌ಸೇಲ್ಸ್ ಕರಾರಿನಿಂದ ಹೀಗೆ ಅನ್ಯಾಯವಾಯಿತು. ಯುದ್ಧಾನಂತರ ಶಾಂತಿ ಸ್ಥಾಪಿಸಲು ಪ್ಯಾರಿಸ್ ನಗರದಲ್ಲಿ ಸೇರಿದ್ದ ರಾಷ್ಟ್ರಗಳ ಸಭೆಗೆ ಪ್ರತಿನಿಧಿಗಳನ್ನು ಕಳುಹಿಸುವ ಅವಕಾಶ ಅದಕ್ಕೆ ಸಿಕ್ಕಿರಲಿಲ್ಲ. ಆದುದರಿಂದ ವರ್‌ಸೇಲ್ಸ್ ಕರಾರು ಉದ್ದೇಶಿಸಿದಂತೆ ಯುದ್ಧಗಳನ್ನು ಮುಕ್ತಾಯ ಮಾಡುವುದರ ಬದಲು ಮತ್ತೊಂದು ಯುದ್ಧವು ಒದಗುವಂತೆ ಮಾಡಿತು.

ರಾಷ್ಟ್ರಗಳ ಸಂಘ:–ಮುಂದೆ ಯುದ್ಧವಾಗದಂತೆ ನೋಡಿಕೊಳ್ಳಲು ಜಿನೀವಾದಲ್ಲಿ ರಾಷ್ಟ್ರಗಳ ಸಂಘವು ಸ್ಥಾಪಿಸಲ್ಪಟ್ಟಿತು. ಅಂತರ ರಾಷ್ಟ್ರೀಯ ಶಾಂತಿ ಮತ್ತು ರಕ್ಷಣೆ (International Peace and Security) ಇದರ ಮುಖ್ಯ ಗುರಿಗಳಾಗಿದ್ದವು. ಸದಸ್ಯ ರಾಷ್ಟ್ರಗಳು ಆಕ್ರಮಣದ ತಪ್ಪಿಗೆ ಗುರಿಯಾಗಿದ್ದರೆ ಅವುಗಳನ್ನು ಆರ್ಥಿಕ ದಿಗ್ಬಂಧನೆಗಳಿಗೆ ಒಳಗುಮಾಡುವ ಶಕ್ತಿ ರಾಷ್ಟ್ರಗಳ ಸಂಘಕ್ಕೆ ಕೊಡಲ್ಪಟ್ಟಿತ್ತು. (Covenant of the League of Nations). ಹತ್ತು ವರ್ಷಗಳಿಗೊಮ್ಮೆ ನಿಶ್ಶಸ್ತ್ರೀಕರಣದ (Reduction of armaments) ಯೋಜನೆ ಮತ್ತು ಮೇಲ್ವಿಚಾರಣೆ ಮೊದಲಾದವುಗಳನ್ನು ನೋಡಿಕೊಳ್ಳುವ ಅಧಿಕಾರವನ್ನು ಈ ರಾಷ್ಟ್ರಗಳ ಸಂಘವು ಹೊಂದಿತ್ತು.

ರಾಷ್ಟ್ರಗಳ ಸಂಘದಲ್ಲಿ ಈ ಕೆಳಗೆ ಕಂಡ ಸಂಸ್ಥೆಗಳಿದ್ದುವು :

(೧) ಸಭೆ (Assembly) : ವರ್ಷಕ್ಕೊಮ್ಮೆ ಜಿನೀವಾದಲ್ಲಿ ಸುಮಾರು ಐವತ್ತು ಸದಸ್ಯರುಗಳಿಂದ ಕೂಡಿದ ಈ ಸಭೆ ಸೇರುತ್ತಿತ್ತು.

(೨) ಸಮಿತಿ (Council) : ಸಮಿತಿಯಲ್ಲಿ ಕೆಲವು ದೊಡ್ಡ ರಾಷ್ಟ್ರಗಳು ಖಾಯಂ ಸದಸ್ಯತ್ವವನ್ನು ಹೊಂದಿದ್ದವು. ಇದೇ ರಾಷ್ಟ್ರಗಳ ಸಭೆಯ ಕಾರ್ಯಕಾರಿ ಸಮಿತಿಯಾಗಿತ್ತು.

(೩) ಅಂತರರಾಷ್ಟ್ರೀಯ ಕಾರ್ಮಿಕ ಸಂಸ್ಥೆ (I. L. O.): ಪ್ರಪಂಚದ ಕಾರ್ಮಿಕ ವರ್ಗದ ಸ್ಥಿತಿಗತಿಗಳನ್ನು ಸುಧಾರಿಸುವುದೇ ಇದರ ಮುಖ್ಯ ಉದ್ದೇಶವಾಗಿತ್ತೆನ್ನಬಹುದು.

(೪) ಹೇಗ್‌ನಲ್ಲಿದ್ದ ಅಂತರರಾಷ್ಟ್ರೀಯ ಖಾಯಂ ನ್ಯಾಯಾಲಯ (Permanent court of International Justice at Hague).

(೫) ರಾಷ್ಟ್ರೀಯ ಸಂಘದ ಕಚೇರಿ.

ರಾಷ್ಟ್ರಗಳ ಸಂಘಕ್ಕೆ ಪ್ರಬಲರಾಷ್ಟ್ರಗಳಾಗಿದ್ದ ಅಮೆರಿಕದ ಸಂಯುಕ್ತ ಸಂಸ್ಥಾನ ಮತ್ತು ರಷ್ಯ ಸದಸ್ಯತ್ವವನ್ನು ಹೊಂದದೆ ಹೋದುದು, ಅದು ಯಶಸ್ವಿಯಾಗಲು ಕಾರಣವಾಗಲಿಲ್ಲವೆಂದು ಹೇಳಬಹುದು. ಅಷ್ಟೇ ಅಲ್ಲದೆ ಆಕ್ರಮಣಕಾರಿ ರಾಷ್ಟ್ರಗಳನ್ನು ಶಿಕ್ಷಿಸುವ ಸಾಮರ್ಥ್ಯ ರಾಷ್ಟ್ರೀಯ ಸಂಘಕ್ಕೆ ಇರಲಿಲ್ಲ.

# ಶುದ್ಧಾಶುದ್ಧ ಸೂಚಿಕೆ



| ಪುಟ | ಅಶುದ್ಧ | ಶುದ್ಧ |
|---|---|---|
| ೨ | Oulus Platius | Aulus Plautius. |
| ೧೨ | Eudal System | Feudal System. |
| ,, | Fenants–in–Chief | Tenants–in–Chief |
| ,, | Velliens | Villeins |
| ೨೦ | Ranwolf Flembard | Ranulf Flembard. |
| ೨೩ | ಒಂದನೆ ವಿಲಿಯಂ ಮಗಳಾದ | ಒಂದನೆ ವಿಲಿಯಂಮಿನ ಮಗಳಾದ |
| ೨೭ | ಹೆನ್ರಿಯ ಕಾಲದಿಂದಾಚಿಗೆ | ಹೆನ್ರಿಯ ಕಾಲದಿಂದಾಚೆಗೆ, |
| ೨೮ | Kings Court | King's Court |
| ೨೯ | ಪಾಡಿಸ್ಟೈನಿನಲ್ಲಿ | ಪ್ಯಾಲೆಸ್ಟೈನಿನಲ್ಲಿ |
| ೩೦ | ಮಾಗ್ನಿಕಾರ್ಟ | ಮ್ಯಾಗ್ನಕಾರ್ಟ |
| ,, | ಒತ್ತಿ ಒತ್ತಿ ತೋರಿಸಿತು | ಒತ್ತಿ ಎತ್ತಿ ತೋರಿಸಿತು |
| ,, | ಮಾಗ್ನಿಕಾರ್ಟ | ಮಾಗ್ನಕಾರ್ಟ |
| ,, | ಯಶಸ್ವಿಯಾದ ಆಡಳಿತ ಕ್ರಮವನ್ನು ಸ್ಥಾಪಿಸಿದವರು | ಯಶಸ್ವಿಯಾದ ಆಡಳಿತ ಕ್ರಮವನ್ನು ಸ್ಥಾಪಿಸಿದವರದು. |
| ,, | ಮಾಗ್ನಕಾರ್ಟವು ಪ್ರಭುತ್ವದ | ಮಾಗ್ನಕಾರ್ಟವುಪ್ರಜಾಪ್ರಭುತ್ವದ |
| ೩೧ | ಸರ್ ಎಡ್ವರ್ಡ್ ಕೋರ್ | ಸರ್ಎಡ್ವರ್ಡ್ಕೋಕ್ |
| ,, | Customs of the land | Custom of the land |
| ೩೨ | ೧೨೦೮ | ೧೨೦೫ |
| ೩೩ | ರಿಚರ್ಡ್ ಮಾರ್ಸಲ್ | ರಿಚರ್ಡ್ ಮಾರ್ಷಲ್ |
| ,, | Richered Marshall | Richard Marshall |
| ೩೩ | ೧೨೬೧ | ೧೨೬೪ |
| ,, | ಹೆನ್ರಿ ಮತ್ತು ಅವನ ಮಗ ಎಡ್ವರ್ಡ್ ಸೈಮಂಡಿ ಮಾಂಟ್ ಪರ್ಡ್ ಎಂಬುವನಿಗೆ | ಹೆನ್ರಿ ಮತ್ತು ಅವನ ಮಗ ಎಡ್ವರ್ಡ್, ಸೈಮನ್ ಡಿಮಾಂಟ್ ಪರ್ಢ್ ಎಂಬುವನಿಗೆ |

| | | |
|---|---|---|
| ೩೫ | ೨ನೆ ವಿನ್‌ಚೆಸ್ಟರ್ ಶಾಸನ | ೨ನೆ ವೆಸ್ಟ್‌ಮಿನಿಸ್ಟರ್‌ಶಾಸನ |
| ,, | ವಿಟೆಃ | ವಿಟೆಃ |
| ೩೬ | ವೊಟ್ಟಮೊದಲಿನ ಹೆಜ್ಜೆ | ಮೊಟ್ಟಮೊದಲಿನ ಹೆಜ್ಜೆ |
| ,, | ಕ್ಯೂರಿಯಾರಿಜಿಸ್‌ಅಥವಾ ಮಹಾ ಸಮಿತಿ (Great councl) | ಕ್ಯೂರಿಯಾ ರಿಜಿಸ್ ಅಥವಾ ಮಹಾ ಸಮಿತಿ ಎರಡನೆ ಹೆಜ್ಜೆ. |
| ,, | Sir John Elliot | Sir John Eliot |
| ೩೮ | ಅವುಗಳ ಮಧ್ಯೆ ಪಾರ್ಲಿಮೆಂಟಿನ ಪ್ರಾಮುಖ್ಯತೆಯು | ಅವುಗಳ ಮಧ್ಯೆ ಪಾರ್ಲಿಮೆಂಟಿನ ಪ್ರಾಮುಖ್ಯತೆಯೂ |
| ೩೯ | Margeret | Margaret |
| ೩೦ | ೧೨೯೦ ರಲ್ಲಿ | ೧೨೯೨ ರಲ್ಲಿ |
| ೪೨ | Robert Stuvert | Robert Stuart |
| ೪೩ | ಫ್ರಾನ್ಸಿಸ್‌ಕನ್‌ಸನರು | ಫ್ರಾನ್ಸಿಸ್‌ಕನ್ನರು |
| ೪೬ | Holidon Hill | Halidon Hill |
| ೪೮ | Bretigne | Bretigny |
| ೫೦ | Reims | Rheims |
| ೫೫ | Lords appelant | Lords appellant |
| ,, | ಖಂಡಿಸುವ ಸಲುವಾಗಿ ಒಂದಾಗಿದ್ದರು | ಖಂಡಿಸುವ ಸಲುವಾಗಿ ಒಂದಾಗಿತ್ತು |
| ೫೮ | ದುಃಖಮಯದ್ದಾದರೆ | ದುಃಖಮಯವಾದದ್ದಾದರೆ |
| ,, | ವೈಕ್ಲಿಫ್ ೧೩೨೮–೧೩೮೪ | ವೈಕ್ಲಿಫ್; ೧೩೨೦–೧೩೮೪ |
| ೬೩ | ವಹೆಸಿಕೊಂಡರು | ವಹಿಸಿಕೊಂಡರು |
| ೯೯ | ಸ್ಪೈನಿನ | ಸ್ಪೇನಿನ |
| ,, | Cortez | Cortes |
| ೧೦೩ | ಮನ್ನಣೆಯನೀಯದೆ | ಮನ್ನಣೆಯನ್ನೀಯದೆ |
| ೧೦೯ | ೧೫೫೩ ರಲ್ಲಿ | ೧೫೩೩ ರಲ್ಲಿ |
| ೧೧೪ | ಅರ್ಲೆ ಆಫ್ ಅಂಗಸ್ | ಅರ್ಲ್ ಆಫ್ ಅಂಗಸ್ |
| ೧೨೮ | 'ಎಕ್ಲೀಸಿಯಾಕ್ಟಿಕಲ್ ಪಾಲಿಟಿ. | 'ಎಕ್ಲೀಸಿಯಾಸ್ಟಿಕಲ್ ಪಾಲಿಟಿ. |
| ೧೪೦ | Sir Jhon Eliot | Sir JohnEliot |
| ೧೪೪ | ಹ್ಯಾಂಪ್ಡನ್ ಕೊಡಲು ನಿರಾಕರಿಸಿದನು | ....ಕೊಡಲು ನಿರಾಕರಿಸಿದನು |

| | | |
|---|---|---|
| ೧೫೨ | Civil war, ೧೬೪೨–೪೫ | Civil war, ೧೬೪೨–೪೬ |
| ೧೫೮ | ೧೬೫೮ | ೧೬೫೦ |
| ೧೬೭ | ಅದಕ್ಕೆ ನ್ಯೂಯಾರ್ಕ್ ಎಂಬ ಹೆಸರನ್ನಿಟ್ಟರು | ಅದಕ್ಕೆ ನ್ಯೂಯಾರ್ಕ್ ಎಂಬ ಹೆಸರನ್ನಿಟ್ಟಿತು. |
| ೧೮೩ | Tripple alliance | Triple alliance |
| ೧೮೪ | Partition treaty, ೧೬೧೮ | Partition treety, ೧೬೯೮ |
| ೧೮೫ | ಇಂಗ್ಲೆಂಡಿಗೆ ವ್ಯಾಪಾರವಾದ ಹಕ್ಕಿಲ್ಲವೆಂದು | ಇಂಗ್ಲೆಂಡಿಗೆ ವ್ಯಾಪಾರದ ಹಕ್ಕಿಲ್ಲವೆಂದು |
| ೧೮೯ | ಗುಲಾಮರನ್ನು ಮಾರುವ ಹಕ್ಕು ಗೊತ್ತಾಯಿತು | ಗುಲಾಮರನ್ನು ಮಾರುವ ಹಕ್ಕು ಇರಬೇಕೆಂದೂ ಗೊತ್ತಾಯಿತು. |
| ೧೯೦ | ಸ್ಕಾಟ್ಲೆಂಡ್ ಮತ್ತು ಇಂಗ್ಲೆಂಡ್ ಪಾರ್ಲಿಮೆಂಟು | ಸ್ಕಾಟ್ಲೆಂಡ್ ಮತ್ತು ಇಂಗ್ಲೆಂಡಿನ ಪಾರ್ಲಿಮೆಂಟು |
| ೨೦೬ | ಜಾರ್ಜಿಯ ೧೭೩೩ ರಲ್ಲಿ | ಜಾರ್ಜಿಯ ೧೭೩೨ರಲ್ಲಿ |
| ೨೧೪ | ಅಮೆರಿಕದ ಸ್ವಾತಂತ್ರ್ಯಕ್ಕಾಗಿ ಯುದ್ಧ, ೧೭೬೫–೭೫ | ಅಮೆರಿಕದ ಸ್ವಾತಂತ್ರ್ಯಕ್ಕಾಗಿ ಯುದ್ಧ, ೧೭೬೫–೮೩ |
| ೨೧೬ | ಬನ್‌ಕರ್‌ಹಿಲ್, ೧೭೫೫ | ಬನ್‌ಕರ್‌ಹಿಲ್, ೧೭೭೫ |
| ೨೨೫ | Hogarth, ೧೬೯೭–೧೭೫೪ | Hogarth, ೧೬೯೭–೧೭೬೪ |
| ೨೨೮ | ೧೭೨೪ ರಲ್ಲಿ ೧೬ ನೆ ಲೂಯಿ ಪಟ್ಟಕ್ಕೆ ಬಂದನು. | ೧೭೭೪ ರಲ್ಲಿ ೧೬ ನೆ ಲೂಯಿ ಪಟ್ಟಕ್ಕೆ ಬಂದನು. |
| ೨೩೧ | ಯುದ್ಧವನ್ನು ಮುಂದುವರೆಸಿ | ಯುದ್ಧವನ್ನು ಮುಂದುವರಿಸಿ |
| ೨೪೦ | ಎಲ್ಬಾ ದ್ವೀಪಕ್ಕೆ ಮಾರ್ಚಿ ೧೮೧೪ ರಲ್ಲಿ ಬಂದುವು | ಎಲ್ಬಾ ದ್ವೀಪಕ್ಕೆ ಮಾರ್ಚಿ ೧೮೧೪ ರಲ್ಲಿ ಕಳುಹಿಸಿದವು |
| ೨೪೬ | Dardy | Darby |
| ೨೪೯ | ಕುಟುಂಬದಲ್ಲಿ ಜಾಸ್ತಿಯಾದಂತೆ ಯೂ ತಮಗೆ | ಕುಟುಂಬದಲ್ಲಿ ಜಾಸ್ತಿಯಾದಂತೆಯೂ ಕಾರ್ಮಿಕರಿಗೆ |
| ೨೫೦ | ದಂಡಾಧಿಕಾರಿಗಳಿಗಲ್ಲದೆ | ದಂಡಾಧಿಕಾರಿಗಳಲ್ಲದೆ |

| | | |
|---|---|---|
| ೨೫೨ | ಆಯುಧಗಳನ್ನು, ಜನಗಳನ್ನು | ಆಯುಧಗಳನ್ನು, ಜನಗಳು |
| ೨೫೭ | ಸರ್ ರಾಬರ್ಟ್ ಪೀಲ್ ಎಂಬುವನ ಮಗ | ಸರ್ ರಾಬರ್ಟ್ ಪೀಲ್ ಎಂಬುವನ ಮಗ. |
| ೨೫೮ | James Mackintosh. ೧೭೬೮–೧೮೩೨ | James Mackintosh. ೧೭೬೫–೧೮೩೨ |
| ೨೬೫ | ಲಾರ್ಡ್ ಗ್ರೆ ೧೯೩೧ ರಲ್ಲಿ | ಲಾರ್ಡ್ ಗ್ರೆ ೧೮೩೧ ರಲ್ಲಿ |
| ೨೯೦ | ಬ್ರಿಟಿಷ್ ವಸಾಹತುಗಳ ಹೊಸ ಚಕ್ರಾಧಿಪತ್ಯ ೧೩೩೩–೬೭ | ೧೮೩೩–೧೮೬೭ |
| ೨೯೧ | ಅದು ಅರುವತ್ತೈದುಸಾವಿರ ಕ್ಕೇರಿತು | ಅದು ೨೬೫,೦೦೦ ಕ್ಕೇರಿತು |
| ೨೯೫ | ಸ್ವಯಮಾಡಳಿತ ಕೊಡು ಬೇಕೆಂಬ | ಸ್ವಯಮಾಡಳಿತ ಕೊಡಬೇಕೆಂಬ |
| ೩೦೯ | ಮಾಡಿಸಕೊಳ್ಳಬೇಕಾಯಿತು | ಮಾಡಿಸಿಕೊಳ್ಳಬೇಕಾಯಿತು. |
| ೩೧೦ | Exlausted Valca-noes | Exhausted Valcanoes |
| ೩೧೧ | Country Franchise Act, ೧೮೮೪ | County Eranchise Act, ೧೮೮೪ |
| ೩೧೫ | ದಂಗೆಯೆದ್ದಿದ | ದಂಗೆಯೆದ್ದಿದ್ದ |
| ೩೨೧ | ೧೮೮೬ ರಲ್ಲಿ ಜಾಂಜಿಬಾರಿನ | ೧೮೮೫ ರಲ್ಲಿ ಜಾಂಜಿಬಾರಿನ |
| ೩೨೩ | ಬಾಲ್ಫರ್ ಮಂತ್ರಿ ಮಂತ್ರಿ ಮಂಡಲ | ಬಾಲ್ಫರ್ ಮಂತ್ರಿಮಂಡಲ |
| ೩೨೭ | ತಿದ್ದುಪಡಿಗಳನ್ನು ತರಲು ಪ್ರಯ್ನತಿಸಿ ವಿಫಲಹೊಂದಿತು, | ....ಪ್ರಯತ್ನಿಸಿ ವಿಫಲ ಹೊಂದಿತು. |
| ೩೨೯ | ಇಂಗ್ಲೆಂಡಿಗೆ ೧೯೪ ರ ಯುದ್ಧ ದಲ್ಲಿ ಸಹಾಯ ಮಾಡಲು | ಇಂಗ್ಲೆಂಡಿಗೆ ೧೯೧೪ ರ ಯುದ್ಧದಲ್ಲಿ |
| ” | ಸಿನ್‌ಫೀನ್ ಈ ಚಳವಳಿಯ ಮುಖಂಡ | ಸಿನ್‌ಫಿ-ನ್ ಈ ಚಳುವಳಿಯ ಮುಖಂಡ. |
| ೩೩೦ | ೫ನೆ ಜಾರ್ಜ್ ೧೮೧೦–೧೯೩೬ | ಐದನೆ ಜಾರ್ಜ್. ೧೯೧೦–೩೬ |